# ಶ್ರೀಸ್ಕಾಂದಮಹಾಪುರಾಣಂ

ಶ್ರೀ

**ಆವಂತ್ಯಖಂಡ**

೨

ಚತುರಶೀತಿಲಿಂಗಮಾಹಾತ್ಮ್ಯ

(ಪೂರ್ವಭಾಗ)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೫

## ಆವಂತ್ಯಖಂಡ

೨

ಚತುರಶೀತಿಲಿಂಗಮಾಹಾತ್ಮ್ಯ

(ಪೂರ್ವಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೯

# ಅರಿಕೆ

ಈ ಸಂಪುಟದಲ್ಲಿ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯ ಖಂಡದ ಎರಡನೆಯ 'ಚತುರಶೀತಿಲಿಂಗಮಾಹಾತ್ಮ್ಯ'ದಲ್ಲಿ ನಲವತ್ತೆರಡು ಅಧ್ಯಾಯಗಳವರೆಗಣ ಗ್ರಂಥವು ಪೂರ್ವಭಾಗವಾಗಿ ಮುಗಿದಿರುತ್ತದೆ. ಈ ಆವಂತ್ಯ ಖಂಡದಲ್ಲಿ ಅವಂತೀದೇಶದಲ್ಲಿರುವ ಸುಪ್ರಸಿದ್ಧಗಳಾದ ಶಿವವಿಷ್ಣ್ವಾದಿ ದೇವತಾ ಕ್ಷೇತ್ರಗಳನ್ನೂ, ಪುಣ್ಯತೀರ್ಥಗಳನ್ನೂ ವರ್ಣಿಸಿರುತ್ತಾರೆ.

ಅವಂತೀಕ್ಷೇತ್ರಕ್ಕೆ 'ಮಹಾಕಾಲವನ'ವೆಂಬ ಮತ್ತೊಂದು ಹೆಸರೂ ಉಂಟು. ಮಹಾಕಾಲವನದಲ್ಲಿಯೇ 'ಮಹಾಕಾಲೇಶ್ವರಲಿಂಗ'ವು ವಿರಾಜಿಸುತ್ತಿರುವುದು. ಕಾಲಿದಾಸಾದಿ ಮಹಾಕವಿಗಳೆಲ್ಲರೂ ಈ ಕ್ಷೇತ್ರವನ್ನು ತಮ್ಮ ಕಾವ್ಯಗಳಲ್ಲಿ ಬಹುವಾಗಿ ವರ್ಣಿಸಿರುತ್ತಾರೆ. ಮಹಾಕಾಲೇಶ್ವರ ದೇವಾಲಯವನ್ನೊಳಕೊಂಡು ಶೋಭಿಸುತ್ತಿರುವ ಅವಂತಿಯ ಉಜ್ಜಯಿನೀನಗರವು ಚಾರಿತ್ರಕವಾಗಿಯೂ ಪ್ರಸಿದ್ಧವಾದುದೇ ಆಗಿರುವುದು. ಪೂರ್ವದಲ್ಲಿ ಇಲ್ಲಿ ಅನೇಕ ವಿಶ್ವವಿದ್ಯಾನಿಲಯಗಳಿದ್ದುವೆಂದು ಸಂಶೋಧನೆಗಳಿಂದ ತಿಳಿದುಬಂದಿದೆ. ಭಾರತ ಸಂಸ್ಕೃತಿಯ ಸಂರಕ್ಷಣೆಯಸಲುವಾಗಿ ಮಹಾಮಹಾ ಮೇಧಾವಿಗಳು ಹಗಲಿರುಳೂ ಶ್ರಮವಹಿಸಿ ದುಡಿದ ದುಡಿಮೆಯ ಸತ್ಫಲಸಂಕೇತಗಳು ಇಂದಿಗೂ ಈ ದೇಶದಲ್ಲಿ ಚಿರಸ್ಥಾಯಿಯಾಗಿ ಕಂಗೊಳಿಸುತ್ತಿವೆ. ಇಂಥ ಸುಂದರ ಪ್ರಾಂತ್ಯವಾದ ಅವಂತಿಯನ್ನು ಕುರಿತ ಈ ಖಂಡವು ತನ್ನೊಂದು ಐತಿಹಾಸಿಕ, ಸಾಮಾಜಿಕ ಮತ್ತು ನೈತಿಕ ಕಥಾನುಕಥನಗುಣದಿಂದಲೂ, ದೇವ ದೇವಿಯರ ಭಕ್ತಿಪಾರಮ್ಯಸಂಕಥನ ವೈಭವದಿಂದಲೂ, ಹರಿಹರಕ್ಷೇತ್ರಗಳ ಮಾಹಾತ್ಮ್ಯ ನಿರೂಪಣ ವೈಖರಿಯಿಂದಲೂ ಓದುಗರಿಗೆ ಹೃದಯಹಾರಿಯಾಗಿ ಪರಿಣಮಿಸದಿರದು.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯೆಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥಾಽವಂತ್ಯಖಂಡೇ ದ್ವಿತೀಯಂ

### ಚತುರಶೀತಿಲಿಂಗಮಾಹಾತ್ಮ್ಯಂ ಪ್ರಾರಭ್ಯತೇ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರಮಾಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥ ಪ್ರಥಮೋಽಧ್ಯಾಯಃ

**ಅಗಸ್ತ್ಯೇಶ್ವರಮಾಹಾತ್ಮ್ಯವರ್ಣನಂ**

**ಉಮೋವಾಚ :—**

**ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾಶ್ಚ ಸರಿತಸ್ತಥಾ ।**
**ಕಥ್ಯಂತಾಂ ತಾನಿ ಯತ್ನೇನ ಶ್ರಾದ್ಧಂ ಯೇಷು ಪ್ರದೀಯತೇ ॥ ೧ ॥**

**ಈಶ್ವರ ಉವಾಚ :—**

**ಅಸ್ತಿ ಲೋಕೇಷು ವಿಖ್ಯಾತಾ ಗಂಗಾ ತ್ರಿಪಥಗಾಮಿನೀ ।**
**ಸೇವಿತಾ ದೇವಗಂಧರ್ವೈರ್ಮುನಿಭಿಶ್ಚ ನಿಷೇವಿತಾ ॥ ೨ ॥**

---

### ಕನ್ನಡದ ಅನುವಾದ

**ಅಗಸ್ತ್ಯೇಶ್ವರಮಾಹಾತ್ಮ್ಯವರ್ಣನ**

೧. ಪಾರ್ವತಿಯು ಕೇಳುತ್ತಾಳೆ:—ಸ್ವಾಮಿಯೆ! ಈ ಭೂಮಂಡಲದಲ್ಲಿ ಯಾವ ತೀರ್ಥಗಳೂ, ಪುಣ್ಯನದಿಗಳೂ ಇರುವುವೆಂಬುದನ್ನೂ ಎಲ್ಲಿ ಪಿತೃಶ್ರಾದ್ಧಗಳನ್ನು ಮಾಡಬೇಕೆಂಬುದನ್ನೂ ಸಮಗ್ರವಾಗಿ ನನಗೆ ತಿಳಿಸು.

೨. ಈಶ್ವರನು ಹೇಳುತ್ತಾನೆ:—ಎಲೌ ಪ್ರಿಯಳೆ! ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದು ತ್ರಿಪಥಗೆಯೆನಿಸಿದ ಗಂಗಾನದಿಯಿರುವುದು. ಇದು ದೇವತೆಗಳಿಂದಲೂ, ಗಂಧರ್ವರಿಂದಲೂ ಸೇವಿತವಾಗಿರುವುದಲ್ಲದೆ ಮಹಾಮುನಿಗಳಿಗೂ ಸಂಸೇವ್ಯವಾಗಿರುವುದು.

**ತಪನಸ್ಯ ಸುತಾ ದೇವೀ ಯಮುನಾ ಲೋಕಪಾವನೀ ।**
**ಪಿತ್ರೂಣಾಂ ವಲ್ಲಭಾ ದೇವೀ ಮಹಾಪಾತಕಹಾರಿಣೀ ॥ ೩ ॥**
**ಚಂದ್ರಭಾಗಾ ವಿತಸ್ತಾ ಚ ನರ್ಮದಾಽಮರಕಂಟಕೇ ।**
**ಕುರುಕ್ಷೇತ್ರಂ ಗಯಾ ದೇವಿ ಪ್ರಭಾಸಂ ನೈಮಿಷಂ ತಥಾ ॥ ೪ ॥**
**ಕೇದಾರಂ ಪುಷ್ಕರಂ ಚೈವ ತಥಾ ಕಾಯಾಽವರೋಹಣಂ ।**
**ತಥಾ ಪುಣ್ಯತಮಂ ದೇವಿ ಮಹಾಕಾಲವನಂ ಶುಭಂ ॥ ೫ ॥**
**ಯತ್ರಾಸ್ತೇ ಶ್ರೀ ಮಹಾಕಾಲಃ ಪಾಪೇಂಧನಹುತಾಶನಃ ।**
**ಕ್ಷೇತ್ರಂ ಯೋಜನಪರ್ಯಂತಂ ಬ್ರಹ್ಮಹತ್ಯಾವಿನಾಶನಂ ॥ ೬ ॥**
**ಭುಕ್ತಿದಂ ಮುಕ್ತಿದಂ ಕ್ಷೇತ್ರಂ ಕಲಿಕಲ್ಮಷನಾಶನಂ ।**
**ಪ್ರಲಯೇಽಪ್ಯಕ್ಷಯಂ ದೇವಿ ದುಷ್ಪ್ರಾಪ್ಯಂ ತ್ರಿದಶೈರಪಿ ॥ ೭ ॥**
ಉಮೋವಾಚ :—
**ಪ್ರಭಾವಃ ಕಥ್ಯತಾಂ ದೇವ ಕ್ಷೇತ್ರಸ್ಯಾಽಸ್ಯ ಮಹೇಶ್ವರ ॥ ೮ ॥**

---

೩. ಅಲ್ಲದೆ ಸೂರ್ಯಸಂಭವೆಯೂ, ಲೋಕವನ್ನು ಪಾವನಗೊಳಿಸುವವಳೂ ಆದ ಯಮುನಾನದಿಯಿರುವುದು. ದೇವಿ! ಇದು ಪಿತೃಗಳಿಗೆ ಪರಮಪ್ರಿಯವೂ ಮಹಾಪಾತಕಗಳನ್ನು ಕಳೆಯುವುದೂ ಆಗಿರುವುದು.

೪. ಹಾಗೆಯೇ ಚಂದ್ರಭಾಗಾ, ವಿತಸ್ತಾ ನದಿಗಳೂ, ಅಮರಕಂಟಕ ಕ್ಷೇತ್ರದಲ್ಲಿ ನರ್ಮದೆಯೂ ಇರುವುವು. ಕುರುಕ್ಷೇತ್ರ, ಗಯಾ, ಪ್ರಭಾಸ ಮತ್ತು ನೈಮಿಷಾರಣ್ಯಗಳೆಂಬ ಪಾವನ ಕ್ಷೇತ್ರಗಳಿರುವುವು.

೫. ಕೇದಾರ, ಪುಷ್ಕರ ಮತ್ತು ಕಾಯಾವರೋಹಣಕ್ಷೇತ್ರಗಳಿರುವುವು. ಅಲ್ಲದೆ ಪರಮಪುಣ್ಯತಮವೂ ಪವಿತ್ರವೂ ಆದ ಮಹಾಕಾಳವನವೆಂಬ ಕ್ಷೇತ್ರವೂ ಉಂಟು.

೬. ಪಾಪಗಳೆಂಬ ಕಾಷ್ಠರಾಶಿಗೆ ಬೆಂಕಿಯಂತಿರುವ ಶ್ರೀ ಮಹಾಕಾಲೇಶ್ವರನೇ ಇಲ್ಲಿ ನೆಲಸಿರುವನು. ಒಂದು ಯೋಜನದ ವಿಸ್ತಾರವುಳ್ಳ ಈ ಕ್ಷೇತ್ರವು ಬ್ರಹ್ಮಹತ್ಯೆಯನ್ನೂ ಸಹ ಹೋಗಲಾಡಿಸುವುದು.

೭. ಈ ಕ್ಷೇತ್ರವು ಐಹಿಕ ಭೋಗಗಳನ್ನೂ ಮೋಕ್ಷವನ್ನೂ ಕೊಡುವುದಲ್ಲದೆ ಕಲಿದೋಷಗಳನ್ನು ನಿರ್ಮೂಲಗೊಳಿಸುವುದು. ಎಲೌ ಪ್ರಿಯಳೆ! ಈ ಕ್ಷೇತ್ರವು ಪ್ರಳಯದಲ್ಲಿಯೂ ನಾಶವನ್ನು ಹೊಂದುವುದಿಲ್ಲ. ಇದು ದೇವತೆಗಳಿಗೂ ದುರ್ಲಭವಾದುದು.

೮. ಉಮೆಯು ಹೇಳುತ್ತಾಳೆ:—ದೇವದೇವ! ಈ ಮಹಾಕ್ಷೇತ್ರದ ಪ್ರಭಾವವನ್ನು ನನಗೆ ಹೇಳು.

ಯಾನಿ ತೀರ್ಥಾನಿ ವಂದ್ಯಾನಿ ಯಾನಿ ಲಿಂಗಾನಿ ಸಂತಿ ವೈ ।
ತಾನ್ಯಹಂ ಶ್ರೋತುಮಿಚ್ಛಾಮಿ ಪರಂ ಕೌತೂಹಲಂ ಹಿ ಮೇ ॥ ೯ ॥

ಈಶ್ವರ ಉವಾಚ :—

ಶೃಣು ದೇವಿ ಪ್ರಯತ್ನೇನ ಪ್ರಭಾವಂ ಪಾಪನಾಶನಂ ।
ಕ್ಷೇತ್ರಮಾದ್ಯಂ ಮಹಾದೇವಿ ಮಮಾಽತೀವ ಪ್ರಿಯಂ ಸದಾ ॥ ೧೦ ॥
ಯತ್ರಾಽಸ್ತಿ ಚ ಮಹಾಪುಣ್ಯಾ ಸರ್ವಪಾಪಹರಾ ಪರಾ ।
ತಥಾ ಗಂಧವತೀ ಪುಣ್ಯಾ ದಿವ್ಯಾ ನವನದೀ ಪ್ರಿಯಾ ॥ ೧೧ ॥
ನೀಲಗಂಗಾ ಚತುರ್ಥೀ ತು ಶ್ರೇಷ್ಠಾ ನದ್ಯಃ ಪ್ರಕೀರ್ತಿತಾಃ ।
ಆಸಾಂ ತು ಸಂಗಮೇ ಸ್ನಾತ್ವಾ ಶ್ರಾದ್ಧಂ ಯಃ ಕುರುತೇ ನರಃ ॥ ೧೨ ॥
ಗಂಗಾಯಾಸ್ತ್ರಿಗುಣಂ ದೇವಿ ಚತುರ್ವರ್ಗಫಲಪ್ರದಂ ।
ಕ್ಷೇತ್ರಂ ಯೋಜನಪರ್ಯಂತಮವಂತ್ಯಾ ವಿದ್ಧಿ ಸುವ್ರತೇ ॥ ೧೩ ॥
ಸಿದ್ಧಲಿಂಗಾನಿ ತಿಷ್ಠಂತಿ ಭುಕ್ತಿಮುಕ್ತಿಕರಾಣಿ ಚ ।
ಈಶ್ವರಾಶ್ಚತುರಾಽಶೀತಿಸ್ತಥಾಽಷ್ಟೌ ಸಂತಿ ಭೈರವಾಃ ॥ ೧೪ ॥

---

೯. ಇಲ್ಲಿ ಯಾವ ತೀರ್ಥಗಳು ಸೇವಾರ್ಹಗಳಾಗಿರುವುವೊ ಮತ್ತು ಯಾವ ಲಿಂಗಗಳಿರುವುವೋ, ಅವುಗಳ ವಿಷಯವನ್ನು ಕೇಳಲಿಚ್ಛಿಸುವೆನು. ಈ ವಿಷಯದಲ್ಲಿ ನನಗೆ ಅತ್ಯಂತ ಕುತೂಹಲವಿರುವುದು.

೧೦. ಈಶ್ವರನು ಹೇಳುತ್ತಾನೆ:—ಎಲೌ ದೇವಿಯೆ! ಈ ಕ್ಷೇತ್ರ ಮಾಹಾತ್ಮ್ಯವು ಪ್ರಯತ್ನದಿಂದ ಕೇಳಿದವರ ಪಾಪಗಳನ್ನು ದೂರಗೊಳಿಸುವುದು. ಇದೇ ನನಗೆ ಬಹುಪ್ರಮುಖವೂ ಅತ್ಯಂತಪ್ರಿಯವೂ ಆದ ಕ್ಷೇತ್ರವಾಗಿರುವುದು.

೧೧. ಇಲ್ಲಿಯೇ ಸರ್ವಪಾಪಗಳನ್ನು ಕಳೆಯುವ ಮಹಾನದಿಯೂ, ಗಂಧವತೀನದಿಯೂ, ದಿವ್ಯವಾದ ನವನದಿಯೂ ಇರುವುವು.

೧೨. ನಾಲ್ಕನೆಯದೇ ನೀಲಗಂಗೆಯು. ಈ ನಾಲ್ಕು ನದಿಗಳೂ ಪರಮಶ್ರೇಷ್ಠಗಳೆಂದು ಕರೆಯಲ್ಪಡುವುವು. ಇವುಗಳ ಸಂಗಮದಲ್ಲಿ ಪ್ರತಿಯೊಬ್ಬ ಮಾನವನೂ ಸ್ನಾನವನ್ನು ಮಾಡಿ ಪಿತೃಗಳಿಗೆ ಶ್ರಾದ್ಧಗಳನ್ನು ನೆರವೇರಿಸಬೇಕು.

೧೩. ಧರ್ಮಾರ್ಥಕಾಮಮೋಕ್ಷಗಳನ್ನು ಕೊಡುವುದರಲ್ಲಿ ಈ ಸಂಗಮವು ಗಂಗೆಗೂ ಮೂರುಪಾಲು ಮಿಗಿಲೆನಿಸಿರುವುದು. ಸುವ್ರತೆಯೆ! ಅವಂತಿಯ ಈ ಕ್ಷೇತ್ರವು ಒಂದು ಯೋಜನ ಪರ್ಯಂತವಿಸ್ತಾರವಾಗಿರುವುದು.

೧೪. ಇಲ್ಲಿ ಭೋಗಮೋಕ್ಷಗಳೆರಡನ್ನೂ ಕೊಡುವ ಸಿದ್ಧಲಿಂಗಗಳನೇಕಗಳಿರುವುವು. ಎಂಬತ್ತನಾಲ್ಕು ಮುಖ್ಯ ಮಾಹೇಶ್ವರಲಿಂಗಗಳೂ, ಎಂಟು ಮಂದಿ ಭೈರವರೂ ಇಲ್ಲಿ ನೆಲಸಿರುವರು.

ಏಕಾದಶ ತಥಾ ರುದ್ರಾ ಆದಿತ್ಯಾ ದ್ವಾದಶ ಸ್ಮೃತಾಃ ।
ಷಡ್ವೈ ವಿನಾಯಕಾಶ್ಚಾತ್ರ ಚತುರ್ವಿಂಶತಿ ಮಾತರಃ ॥ ೧೫ ॥
ಯದಾಽಹಂ ಗತವಾಂಸ್ತತ್ರ ಮಹಾಕಾಲವನೇ ಶುಭೇ ।
ಬ್ರಹ್ಮವಿಷ್ಣ್ವಾದಯಃ ಸರ್ವೇ ತತ್ರಾಽಽಜಗ್ಮುರ್ಮುದಾನ್ವಿತಾಃ ॥ ೧೬ ॥
ಏಭಿರ್ವ್ಯಾಪ್ತಂ ಕ್ಷೇತ್ರಮಿದಂ ದೇವಿ ಯೋಜನಮಾಯತಂ ।
ದಶಸ್ಥಾನಗತೋ ವಿಷ್ಣುಃ ಸರ್ವಪಾಪಪ್ರಣಾಶನಃ ॥ ೧೭ ॥
ಏತನ್ನಾಮಾನಿ ಯೋಽಧೀತೇ ಪ್ರಭಾತೇ ಭಕ್ತಿತಃ ಪುಮಾನ್ ।
ವಿಮುಕ್ತಃ ಸರ್ವಪಾಪೈಸ್ತು ರುದ್ರಲೋಕಂ ಸ ಗಚ್ಛತಿ ॥ ೧೮ ॥

ಉಮೋವಾಚ :—

ಚತುರಾಽಶೀತಿಲಿಂಗಾನಿ ತ್ವಯೋಕ್ತಾನೀಹ ಯಾನಿ ತು ।
ತಾನಿ ವಿಸ್ತರತೋ ಬ್ರೂಹಿ ಸರ್ವಪಾಪಹರಾಣಿ ತು ॥ ೧೯ ॥

ಹರ ಉವಾಚ:—

ಶೃಣು ದೇವಿ ಪ್ರವಕ್ಷ್ಯಾಮಿ ತೇಷಾಂ ನಾಮಾನಿ ಯಾನಿ ಚ ।
ಖ್ಯಾತಂ ಪೃಥಿವ್ಯಾಂ ಪ್ರಥಮಮಗಸ್ತ್ಯೇಶ್ವರಮುತ್ತಮಂ ।
ಯಸ್ಯ ದರ್ಶನಮಾತ್ರೇಣ ಕೃತಕೃತ್ಯೋ ನರೋ ಭವೇತ್ ॥ ೨೦ ॥

---

೧೫. ಹನ್ನೊಂದು ಮಂದಿ ರುದ್ರರೂ, ಹನ್ನೆರಡು ಮಂದಿ ಆದಿತ್ಯರೂ, ಆರು ಮಂದಿ ವಿನಾಯಕರೂ, ಇಪ್ಪತ್ತನಾಲ್ಕು ಮಂದಿ ಮಾತೆಯರೂ ಸಹ ಇಲ್ಲಿ ನೆಲಸಿರುವರು.

೧೬. ಶುಭಸ್ಥಳವಾದ ಮಹಾಕಾಲವನಕ್ಕೆ ನಾನು ಹೊರಟು ಬಂದಾಗಲೇ ಬ್ರಹ್ಮವಿಷ್ಣುಗಳೇ ಮುಂತಾದ ಸಕಲ ದೇವತೆಗಳೂ ಸಂತೋಷದಿಂದ ಅಲ್ಲಿಯೇ ಬಂದು ನಿಂತರು.

೧೭. ದೇವಿಯೆ! ಯೋಜನಪರ್ಯಂತ ವಿಸ್ತೃತವಾದ ಈ ಕ್ಷೇತ್ರವೆಲ್ಲವೂ ಈ ದೇವತೆಗಳಿಂದಲೇ ತುಂಬಿಹೋಗಿರುವುದು. ಸಕಲ ಪಾತಕಗಳನ್ನೂ ನಾಶ ಮಾಡುವ ಮಹಾವಿಷ್ಣುವು ಇಲ್ಲಿಯ ಹತ್ತು ಸ್ಥಳಗಳಲ್ಲಿ ಮೂರ್ತೀಭವಿಸಿರುವನು.

೧೮. ಪ್ರಾತಃಕಾಲದಲ್ಲಿ ಭಕ್ತಿಯಿಂದ ಈ ದಶಮೂರ್ತಿಗಳ ಹೆಸರುಗಳನ್ನು ಯಾವ ಮನುಷ್ಯನು ಸ್ಮರಿಸುವನೊ, ಅವನು ಸಕಲ ಪಾಪಗಳಿಂದ ಮುಕ್ತನಾಗಿ ರುದ್ರಲೋಕಕ್ಕೆ ತೆರಳುವನು.

೧೯. ಉಮೆಯು ಕೇಳುತ್ತಾಳೆ:—ಇಲ್ಲಿರುವ ಎಂಬತ್ತನಾಲ್ಕು ಮಹಾ ಲಿಂಗಗಳು ಸರ್ವಪಾಪಹರಗಳೆಂದು ನೀನು ಹಿಂದೆ ತಿಳಿಸಿದೆಯಲ್ಲವೆ. ಅವುಗಳ ವಿಷಯವನ್ನೆಲ್ಲ ಪುನಃ ವಿಸ್ತಾರವಾಗಿ ಹೇಳುವವನಾಗು.

೨೦. ಮಹೇಶ್ವರನು ಹೇಳುತ್ತಾನೆ:—ಎಲೌ ದೇವಿಯೆ! ಅವುಗಳ ಹೆಸರು ಗಳಾವುವೆಂಬುದನ್ನು ಹೇಳುವೆನು, ಕೇಳು. ಮೊದಲನೆಯದೇ ಸಕಲಭೂಮಂಡಲ

ಉಮೋವಾಚ :—

ಅಗಸ್ತ್ಯೇಶ್ವರ ನಾಮೇಹ ಕಥಂ ಲಬ್ಧಮನೇನ ವೈ ।
ಕಸ್ಮಿನ್ ಸ್ಥಾನೇ ಕಥಂ ಜಾತಂ ವಿಸ್ತರಾದ್ವಕ್ತುಮರ್ಹಸಿ ॥ ೨೧ ॥

ಹರ ಉವಾಚ :—

ಶೃಣು ದೇವಿ ಮಹಾಭಾಗೇ ಕಥಾಮುಸ್ಯ ಪುರಾತನೀಂ ।
ಸರ್ವಪಾಪಪ್ರಶಮನೀಂ ಸಮೀಹಿತಫಲಪ್ರದಾಂ ॥ ೨೨ ॥
ಪುರಾಽಸುರೈರ್ಜಿತಾ ದೇವಾ ನಿರುತ್ಸಾಹಾಶ್ಚ ತೇ ತತಃ ।
ಭಾಗಾಶ್ಚೈಷಾಂ ಹೃತಾಃ ಸರ್ವೇ ನಿರಾಶಾಃ ಪಿತರಃ ಕೃತಾಃ ।
ಭ್ರಷ್ಟೈಶ್ವರ್ಯಾಸ್ತದಾ ದೇವಿ ಚೇರುರ್ದೇವಾ ಮಹೀತಲೇ ॥ ೨೩ ॥
ತತಃ ಕದಾಚಿತ್ತೇ ದೀನಾ ದೀಪ್ತಮಾದಿತ್ಯವರ್ಚಸಂ ।
ದದೃಶುಸ್ತೇಜಸಾ ಯುಕ್ತಮಗಸ್ತ್ಯಂ ವಿಪುಲವ್ರತಂ ॥ ೨೪ ॥
ಅಭಿವಾದ್ಯ ತತೋ ದೇವಾ ದೃಷ್ಟ್ವಾ ತಂ ತೇಜಸಾ ವೃತಂ ।
ಇದಮೂಚುರ್ಮಹಾತ್ಮಾನಮಗಸ್ತ್ಯಂ ಲೋಕವಿಶ್ರುತಂ ॥ ೨೫ ॥

---

ದಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವ ಉತ್ತಮವಾದ ಅಗಸ್ತ್ಯೇಶ್ವರ ಮಹಾಲಿಂಗವು. ಇದರ ದರ್ಶನಮಾತ್ರದಿಂದಲೇ ಮನುಜನು ಕೃತಾರ್ಥನಾಗುವನು.

೨೧. ಉಮೆಯು ಕೇಳುತ್ತಾಳೆ:—ಅಗಸ್ತ್ಯೇಶ್ವರನೆಂಬ ಹೆಸರು ಈ ಮಹಾಲಿಂಗಕ್ಕೆ ಬರಲು ಕಾರಣವೇನು? ಇದು ಯಾವ ಸ್ಥಾನದಲ್ಲಿ ಯಾವಾಗ ಉದ್ಭವವಾಯಿತೆಂಬುದನ್ನು ವಿಸ್ತಾರವಾಗಿ ತಿಳಿಸು.

೨೨. ಈಶ್ವರನು ಹೇಳುತ್ತಾನೆ:—ದೇವಿ! ನೀನು ಮಹಾಭಾಗ್ಯಶಾಲಿಯು! ಪುರಾತನವೂ, ಸರ್ವಪಾಪಪ್ರಣಾಶಕವೂ, ಸಕಲಾಭೀಷ್ಟದಾಯಕವೂ ಆದ ಈ ಮಹಾಕಥೆಯನ್ನು ಕೇಳು.

೨೩. ಹಿಂದೆ ದೇವತೆಗಳು ರಾಕ್ಷಸರಿಗೆ ಪರಾಜಿತರಾಗಿ ದೀನಮಾನಸರೂ ಉತ್ಸಾಹಹೀನರೂ ಆದರು. ಇವರ ಹವಿರ್ಭಾಗಗಳೆಲ್ಲವನ್ನೂ ರಾಕ್ಷಸರೇ ಅಪಹರಿಸಿದರು. ಪಿತೃದೇವತೆಗಳೂ ಆಹಾರವಿಲ್ಲದವರಾದರು. ಇಂತು ದೇವತೆಗಳು ತಮ್ಮ ಐಶ್ವರ್ಯವನ್ನು ಕಳೆದುಕೊಂಡು ಭೂಮಿಯಲ್ಲಿ ಸಂಚರಿಸುತ್ತಿದ್ದರು.

೨೪. ಹೀಗೆ ದೀನರಾಗಿ ಸಂಚರಿಸುತ್ತ ಒಮ್ಮೆ ಸೂರ್ಯಸಮಾನವಾದ ವರ್ಚಸ್ಸುಳ್ಳವನೂ ಮಹಿಮಾವಂತನೂ, ಮಹಾವ್ರತವನ್ನು ಕೈಕೊಂಡವನೂ ಆದ ಅಗಸ್ತ್ಯಮಹಾಮುನಿಯನ್ನು ಯಾದೃಚ್ಛಿಕವಾಗಿ ಕಂಡರು.

೨೫. ದೇವತೆಗಳು ತೇಜಸ್ಸಿನಿಂದ ಪರಿವೃತನಾದ ಆ ಮುನಿಗೆ ಅಭಿವಾದನವನ್ನು ಮಾಡಿ ಅಗಸ್ತ್ಯನೆಂದು ತ್ರಿಲೋಕವಿಖ್ಯಾತನಾದ ಆತನಲ್ಲಿ ಇಂತೆಂದು ಅರಿಕೆಮಾಡಿದರು.

ದಾನವೈರ್ನಿರ್ಜಿತಾ ಯುದ್ಧೇ ಸರ್ವೇ ಸ್ವರ್ಗಾಚ್ಚ ಪಾತಿತಾಃ ।
ತತಸ್ತ್ವಂ ನೋ ಭಯಾತ್ತೀವ್ರಾತ್ತ್ರಾಯಸ್ವ ಮುನಿಪುಂಗವ ॥ ೨೬ ॥
ಇತ್ಯುಕ್ತಃ ಸ ತದಾ ದೇವೈರಗಸ್ತ್ಯಃ ಕುಪಿತೋಽಭವತ್ ।
ಪ್ರಜಜ್ವಾಲ ಚ ತೇಜಸ್ವೀ ಕಾಲಾಽಗ್ನಿರಿವ ಸಂಕ್ಷಯೇ ॥ ೨೭ ॥
ತದಾ ದೀಪ್ತಾಂಶುಜಾಲೇನ ನಿರ್ದಗ್ಧಾ ದಾನವಾಸ್ತಥಾ ।
ಅಂತರಿಕ್ಷಾನ್ಮಹಾದೇವಿ ಪತಿತಾಶ್ಚ ಸಹಸ್ರಶಃ ॥ ೨೮ ॥
ದಹ್ಯಮಾನಾಸ್ತತೋ ದೈತ್ಯಾಸ್ತಸ್ಯಾಽಗಸ್ತ್ಯಸ್ಯ ತೇಜಸಾ ।
ಋಷೇಶ್ಚ ದಾನವಾಃ ಸರ್ವೇ ಪಾತಾಲಂ ವವ್ರಜುರ್ಭಯಾತ್ ॥ ೨೯ ॥
ತತೋಽಗಸ್ತ್ಯೋ ಮಹಾತ್ಮಾ ವೈ ತಾನ್ಹತ್ವಾ ಶೋಕಮೂರ್ಛಿತಃ ।
ಬಭೂವಾಽತಿಶಯಂ ಚಾಽಸೌ ಚಿಂತಯೋದ್ವಿಗ್ನಮಾನಸಃ ॥ ೩೦ ॥
ಕೃತಂ ಘೋರಂ ಮಹತ್ಪಾಪಂ ಹತಾ ಯದ್ದಾನವಾ ಮಯಾ ।
ಅಹಿಂಸಾ ಪರಮೋ ಧರ್ಮೋ ಮುನುನಾ ಕಥ್ಯತೇ ಯತಃ ॥ ೩೧ ॥

---

೨೬. "ನಾವೆಲ್ಲರೂ ಯುದ್ಧದಲ್ಲಿ ದಾನವರಿಂದ ಸೋಲಿಸಲ್ಪಟ್ಟು ಸ್ವರ್ಗದಿಂದ ಚ್ಯುತರಾಗಿರುವೆವು. ಎಲೈ ಮುನಿಪುಂಗವನೆ! ಆದುದರಿಂದ ನೀನೇ ನಮ್ಮನ್ನು ಈ ಮಹಾಭಯದಿಂದ ಕಾಪಾಡಬೇಕು."

೨೭. ಇಂತೆಂದುದನ್ನು ಕೇಳಿ ಅಗಸ್ತ್ಯನು ದೇವತೆಗಳ ಸಲುವಾಗಿ ಆ ದುಷ್ಟ ದಾನವರ ವಿಷಯದಲ್ಲಿ ಬಹಳವಾಗಿ ಕೋಪಗೊಂಡನು. ಆಗ ತೇಜಸ್ಸಂಪನ್ನನಾದ ಆತನು ಪ್ರಳಯಕಾಲದ ಸಂವರ್ತಾಗ್ನಿಯಂತೆ ಉರಿಯುತ್ತಿದ್ದನು.

೨೮. ದೇವಿಯೆ! ಆತನ ತಪಸ್ಸಿನ ಜ್ವಾಲೆಗಳಿಂದ ರಾಕ್ಷಸರೆಲ್ಲರೂ ಸುಟ್ಟು ಭಸ್ಮವಾಗತೊಡಗಿದರು. ಸಾವಿರಗಟ್ಟಲೆಯಾಗಿ ಅವರೆಲ್ಲರೂ ಸ್ವರ್ಗದಿಂದ ಕೆಳಗೆ ಬೀಳಲುಪಕ್ರಮಿಸಿದರು.

೨೯. ಅಗಸ್ತ್ಯಮಹರ್ಷಿಯ ಆ ತೇಜಸ್ಸಿನಿಂದ ಬೇಗುದಿಗೊಂಡ ರಾಕ್ಷಸರು ಭೂಮಿಯಲ್ಲಿಯೂ ನಿಲ್ಲಲಾರದೆ ಭಯಗೊಂಡು ಎಲ್ಲರೂ ಪಾತಾಳಲೋಕದಲ್ಲಿ ವಾಸಮಾಡತೊಡಗಿದರು.

೩೦. ಇಂತು ಅವರನ್ನು ನಿಗ್ರಹಿಸಿ ಮಹಾತ್ಮನಾದ ಅಗಸ್ತ್ಯನು ಬಹಳವಾಗಿ ಪಶ್ಚಾತ್ತಾಪಪಟ್ಟನಲ್ಲದೆ ಅತಿಶಯಿತವಾದ ಚಿಂತೆಯಿಂದೊಡಗೂಡಿದ ಮನಸ್ಸುಳ್ಳವನಾದನು.

೩೧. "ಈ ದಾನವರು ನನ್ನಿಂದ ಹತರಾದರಲ್ಲವೆ! ನಾನು ಮಹಾಘೋರವಾದ ಪಾಪವನ್ನು ಮಾಡಿರುವೆನು! ಮನುವು ಅಹಿಂಸೆಯೇ ಸರ್ವೋತ್ತಮವಾದ ಧರ್ಮವೆಂದು ಹೇಳಿರುವನು.

ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಶುದ್ಧ್ಯೇಯ ಚಾಽಪ್ಯಹಂ ।
ಏವಂ ಚಿಂತಯತಸ್ತಸ್ಯ ಸಮಾಗಚ್ಛತ್ಪಿತಾಮಹಃ ॥ ೩೨ ॥
ಪ್ರೋವಾಚ ಸ ಮುನಿಂ ತತ್ರ ಕಸ್ಮಾತ್ತ್ವಂ ಶೋಕವಿಹ್ವಲಃ ।
ಲಕ್ಷ್ಯಸೇ ಮುನಿಶಾರ್ದೂಲ ಕಾರಣಂ ಕಥ್ಯತಾಂ ತ್ವರಂ ॥ ೩೩ ॥
ಸ ಬ್ರಹ್ಮಾಣಂ ನಮಸ್ಕೃತ್ಯ ಕಥಯಾಮಾಸ ಪೃಚ್ಛತಃ ।
ದೇವದೇವ ಜಗನ್ನಾಥ ದಾಹೋಽಂತರ್ಮಾನಸಂ ಮಮ ॥ ೩೪ ॥
ಬ್ರಹ್ಮಹತ್ಯಾ ಸಮಾಯಾತಾ ಯನ್ಮಯಾ ದಾನವಾ ಹತಾಃ ।
ಮಮೋಪಾಯಂ ಸಮಾಚಕ್ಷ್ವ ಪ್ರಸಾದಾತ್ಸುರಸತ್ತಮ ॥ ೩೫ ॥
ಬಹುಕಾಲಾರ್ಜಿತಂ ದೇವ ಗತಂ ಮೇ ಸಂಕ್ಷಯಂ ತಪಃ ।
ಪ್ರೋವಾಚೇದಂ ಸುರಶ್ರೇಷ್ಠಃ ಶೃಣು ತ್ವಂ ಯತ್ನತಃ ಪರಂ ॥ ೩೬ ॥
ಉಪಾಯಂ ಸರ್ವಪಾಪಸ್ಯ ಕ್ಷಯೋ ಯೇನ ಭವೇದ್ಧ್ರುವಂ ।
ಮಹಾಕಾಲವನೇ ದಿವ್ಯೇ ಯಕ್ಷಗಂಧರ್ವಸೇವಿತೇ ॥ ೩೭ ॥

---

೩೨. ಈಗ ನಾನೇನು ಮಾಡಲಿ? ಎಲ್ಲಿಗೆ ಹೋಗಲಿ? ನಾನು ಪುನಃ ಪರಿಶುದ್ಧನಾಗುವ ಬಗೆಯಾವುದು?'' ಇಂತೆಂದು ಯೋಚಿಸುತ್ತಿರಲು ಬ್ರಹ್ಮದೇವನು ಆತನಿದ್ದೆಡೆಗೆ ಬಂದನು.

೩೩. ಆ ಮುನಿಯನ್ನು ಕುರಿತು ಆ ಕಮಲಾಸನನು ಇಂತೆಂದನು. ''ನೀನೇಕೆ ಹೀಗೆ ಶೋಕದಿಂದ ಪರಿತಪಿಸುತ್ತಿರುವೆ? ಮುನಿಪುಂಗವ! ಹೀಗಿರಲು ಕಾರಣವನ್ನು ತಡೆಮಾಡದೆ ಹೇಳು.''

೩೪. ಆಗ ಅಗಸ್ತ್ಯನೂ ಆ ಚತುರ್ಮುಖನನ್ನು ನಮಸ್ಕರಿಸಿ ಪ್ರಶ್ನೆಮಾಡುತ್ತಿರುವ ಆತನಿಗೆ ಹೀಗೆ ಹೇಳತೊಡಗಿದನು. ದೇವದೇವ! ಲೋಕನಾಥ! ನನ್ನ ಮನಸ್ಸಿನಲ್ಲಿ ಈಗೊಂದು ದೊಡ್ಡ ಉರಿಯುಂಟಾಗಿರುವುದು.

೩೫. ನಾನು ಅನೇಕ ದಾನವರನ್ನು ಕೊಂದಿರುವುದರಿಂದ ನನಗೆ ಬ್ರಹ್ಮಹತ್ಯೆಯ ಪಾತಕವು ಸಂಭವಿಸಿರುವುದು. ಎಲೈ ದೇವಶಿಖಾಮಣಿಯೆ! ನನ್ನಲ್ಲಿ ಕೃಪೆಮಾಡಿ ಇದನ್ನು ಕಳೆಯುವ ಉಪಾಯವೊಂದನ್ನು ತಿಳಿಸು.

೩೬. ಬಹಳಕಾಲದಿಂದ ಸಂಪಾದಿಸಿದ ನನ್ನ ತಪಸ್ಸೆಲ್ಲವೂ ಈ ಕೆಲಸದಲ್ಲಿ ನಷ್ಟವಾಗಿ ಹೋಯಿತು.'' ಇದನ್ನು ಕೇಳಿ ಬ್ರಹ್ಮದೇವನು ಇಂತೆಂದನು. ನಾನು ಹೇಳುವುದನ್ನು ಸಮಾಧಾನದಿಂದ ಕೇಳು.

೩೭. ನಿನ್ನ ಸಕಲ ಪಾತಕಗಳೂ ನಾಶವಾಗುವಂತಹ ಪರಮೋಪಾಯವೊಂದಿರುವುದು, ನಿಜವು. ದಿವ್ಯವಾದ ಮಹಾಕಾಲವನವೆಂಬ ಕ್ಷೇತ್ರವು ಯಕ್ಷರಿಂದಲೂ ಗಂಧರ್ವರಿಂದಲೂ ಸೇವಿತವಾಗಿರುವುದು.

ಉತ್ತರೇ ವಟಯಕ್ಷಿಣ್ಯಾ ಯತ್ತಲ್ಲಿಂಗಮನುತ್ತಮಂ ।
ಪಿಶಾಚಸ್ಯಾಽಪಿ ತೀರ್ಥಸ್ಯ ಭಾಗೇ ದಕ್ಷಿಣತಃ ಸ್ಥಿತಂ । ॥ ೩೮ ॥
ತಂ ಸಮಾರಾಧ್ಯತಃ ಸರ್ವಂ ಪಾಪಂ ನಾಶಮವಾಪ್ನುಯಾತ್
ಆರಾಧಯ ಶುಭಂ ಲಿಂಗಂ ಸರ್ವಪಾಪಪ್ರಣಾಶನಂ । ॥ ೩೯ ॥
ಬಾಢಂ ಪ್ರೋವಾಚ ಧರ್ಮಾತ್ಮಾ ಮಹಾಕಾಲವನಂ ಯಯೌ
ತಸ್ಮಿನ್ ಸ ಲಿಂಗೇ ದೇವೇಶಿ ಸಮಾರಾಧನತತ್ಪರಃ । ॥ ೪೦ ॥
ಬಭೂವಾಽಹರ್ನಿಶಂ ಭಕ್ತ್ಯಾ ತದ್ಧ್ಯಾನೈಕರತೋ ಮುನಿಃ
ಅಹಂ ತುಷ್ಟಸ್ತದಾ ದೇವಿ ಮುನೇಸ್ತಸ್ಯ ಮಹಾತ್ಮನಃ ॥ ೪೧ ॥
ಪ್ರೋಕ್ತಂ ಮಯಾ ಮಹಾಭಾಗ ಮುನೇ ಶೃಣು ಸಮಾಹಿತಃ ।
ವರಂ ವರಯ ವಿಪ್ರೇಂದ್ರ ಯತ್ತೇ ಮನಸಿ ವರ್ತತೇ ॥ ೪೨ ॥
ತುಷ್ಟೋಽಹಮನಯಾ ಭಕ್ತ್ಯಾ ತಪಸಾ ದುಷ್ಕರೇಣ ತು ।
ಲಿಂಗಸ್ಯಾಽಸ್ಯ ಪ್ರಭಾವೇಣ ಜಾತಸ್ತ್ವಂ ನಿರ್ಮಲೋಽಧುನಾ ॥ ೪೩ ॥
ಪ್ರಣಷ್ಟಾ ಬ್ರಹ್ಮಹತ್ಯಾ ತೇ ದಾನವೋತ್ಥಾ ಮುನೀಶ್ವರ ।
ಮದೀಯಂ ವಚನಂ ಶ್ರುತ್ವಾ ತೇನೋಕ್ತಂ ವರವರ್ಣಿನಿ ॥ ೪೪ ॥

---

೩೮–೩೯. ಅಲ್ಲಿ ವಟಯಕ್ಷಿಣೀದೇವಿಗೆ ಉತ್ತರದಲ್ಲಿ ಸರ್ವೋತ್ಕೃಷ್ಟವಾದ ಲಿಂಗವೊಂದಿರುವುದು. ಅದು ಪಿಶಾಚಮೋಚನತೀರ್ಥಕ್ಕೆ ದಕ್ಷಿಣದಿಕ್ಕಿನಲ್ಲಿ ಪ್ರತಿಷ್ಠಿತವಾಗಿರುವುದು. ಅದನ್ನು ಪೂಜಿಸಿ ಸೇವಿಸುವುದರಿಂದ ನಿನ್ನ ಸಮಸ್ತ ಪಾತಕಗಳೂ ನಾಶವಾಗುವುವು. ಆದುದರಿಂದ ಸರ್ವಪಾಪಪರಿಹಾರಕವಾದ ಈ ಮಹಾಲಿಂಗವನ್ನು ನೀನು ಆರಾಧಿಸು.''

೪೦. ಧರ್ಮಾತ್ಮನಾದ ಅಗಸ್ತ್ಯನು ಹಾಗೆಯೇ ಆಗಲೆಂದು ಹೇಳಿ ಮಹಾ ಕಾಲವನಕ್ಕೆ ಬಂದು ಸೇರಿದನು. ದೇವೇಶ್ವರಿಯೆ! ಆತನು ಆ ಲಿಂಗದ ಆರಾಧನೆ ಯಲ್ಲಿಯೇ ತತ್ಪರನಾಗಿದ್ದನು.

೪೧. ಆ ಮುನಿವರ್ಯನು ಹಗಲುರಾತ್ರಿಗಳನ್ನೆಣಿಸದೆ ಶಿವಲಿಂಗದ ಧ್ಯಾನ ದಲ್ಲಿಯೇ ನಿರತನಾಗಿದ್ದನು. ಪ್ರಿಯಳೆ! ಮಹಾತ್ಮನಾದ ಆ ಮುನಿಯ ತಪಸ್ಸಿನಿಂದ ನಾನು ಸಂತುಷ್ಟನಾದೆನು.

೪೨. ಮತ್ತು ಇಂತೆಂದನು. ಮಹಾಭಾಗನೆ, ಮುನಿವರ್ಯನೆ! ಸಮಾ ಧಾನಚಿತ್ತದಿಂದ ಕೇಳು. ಓ ದ್ವಿಜೋತ್ತಮ! ನಿನ್ನ ಮನಸ್ಸಿಗೆ ಬೇಕಾಗಿರುವ ವರವನ್ನು ನನ್ನಿಂದ ಅಪೇಕ್ಷಿಸು.

೪೩. ನಿನ್ನ ಭಕ್ತಿಯಿಂದಲೂ ಅತ್ಯಂತ ದುಸ್ಸಾಧ್ಯವಾದ ತಪಸ್ಸಿನಿಂದಲೂ ನಾನು ಸಂತೋಷಗೊಂಡಿರುವೆನು. ಈ ಮಹಾಲಿಂಗದ ಪ್ರಭಾವದಿಂದ ಈಗ ನೀನು ಪರಿಶುದ್ಧನಾಗಿರುವೆ.

೪೪. ಮುನೀಶ್ವರನೆ! ದೇವತೆಗಳ ಕಾರ್ಯಕ್ಕಾಗಿ ದಾನವರನ್ನು ನಿಗ್ರಹಿಸಿ

ಯದಿ ದೇವಪ್ರಸನ್ನಸ್ತ್ವಂ ಶರಣಾಗತವತ್ಸಲಃ ।
ತ್ವದಂಘ್ರಿಯುಗಲೇ ಭೂಯಾನ್ಮನು ಭಕ್ತಿರ್ಮಹೇಶ್ವರ ।
ತಪಸ್ಯಥ ತಥಾ ಧರ್ಮೇ ನ ಮೇ ವಿಘ್ನೋ ಭವೇದಿತಿ ॥ ೪೫ ॥
ತಸ್ಯ ತದ್ವಚನಂ ಶ್ರುತ್ವಾ ಕುಂಭಯೋನೇರ್ಮಹಾತ್ಮನಃ ।
ಮಯಾ ಪ್ರೋಕ್ತಂ ವಿಶಾಲಾಕ್ಷಿ ಮುನೇ ಏವಂ ಭವಿಷ್ಯತಿ ॥ ೪೬ ॥
ಯಸ್ತ್ವಯಾ ಪೂಜಿತೋ ದೇವೋ ಬ್ರಹ್ಮಹತ್ಯಾವಿನಾಶನಃ ।
ತ್ವನ್ನಾಮ್ನಾ ತ್ರಿಷು ಲೋಕೇಷು ಸೋಽಯಂ ಖ್ಯಾತೋ ಭವಿಷ್ಯತಿ ।
ಅಗಸ್ತ್ಯೇಶ್ವರದೇವೋಽಪಿ ವಿಖ್ಯಾತೋ ಭುವನತ್ರಯೇ ॥ ೪೭ ॥
ಏವಮುಕ್ತೋ ಮಯಾ ದೇವಿ ಸವಿಪ್ರಸ್ತತ್ರ ಸಂಸ್ಥಿತಃ ।
ಕೃಪಯಾ ತಸ್ಯ ಲಿಂಗಸ್ಯ ಪಂಚಮುದ್ರಾವಿಭೂಷಿತಃ ॥ ೪೮ ॥
ಯೇ ನರಾಸ್ತನ್ಮಹಾಲಿಂಗಂ ನಿರೀಕ್ಷ್ಯಿಷ್ಯಂತಿ ಭಕ್ತಿತಃ ।
ಸರ್ವಪಾಪವಿನಿರ್ಮುಕ್ತಾಃ ಸರ್ವಕಾಮ್ಯೈರಲಂಕೃತಾಃ ॥ ೪೯ ॥

---

ದುದರಿಂದ ನಿನಗೆ ಬಂದಿದ್ದ ಬ್ರಹ್ಮಹತ್ಯೆಯು ಕಳೆದುಹೋಯಿತು.” ಎಲೌ ಪಾರ್ವತಿಯೆ! ನನ್ನ ಮಾತುಗಳನ್ನು ಕೇಳಿ ಆತನಿಂತೆಂದನು.

೪೫. “ದೇವನೆ, ಓ ಮಹೇಶ್ವರನೆ! ಭಕ್ತವತ್ಸಲನಾದ ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ ನನಗೆ ನಿನ್ನ ಪಾದಪದ್ಮಗಳಲ್ಲಿ ಅನನ್ಯವಾದ ಭಕ್ತಿಯುಂಟಾಗುವಂತೆ ಅನುಗ್ರಹವನ್ನು ಮಾಡು. ನನ್ನ ತಪಸ್ಸಿಗೂ ಧರ್ಮಾಚರಣೆಗೂ ಈ ದೈತ್ಯನಿಗ್ರಹದಿಂದ ವಿಘ್ನವುಂಟಾಗದಂತೆ ಮಾಡು.”

೪೬. ವಿಶಾಲಾಕ್ಷಿಯೆ! ಮಹಾತ್ಮನಾದ ಆ ಕುಂಭಸಂಭವನಾಡಿದ ಮಾತುಗಳನ್ನು ಕೇಳಿ ನಾನು ಹೇಳಿದೆನು. “ಮುನಿವರ್ಯನೆ! ನಿನ್ನ ಅಭಿಲಾಷೆಯಂತೆಯೇ ಎಲ್ಲವೂ ನಡೆಯುವುದು.

೪೭. ನಿನ್ನಿಂದ ಪೂಜೆಗೊಂಡ ಈ ಮಹೇಶ್ವರನು ಬ್ರಹ್ಮಹತ್ಯೆಯನ್ನೂ ನಾಶ ಮಾಡುವ ಮಹಿಮೆಯುಳ್ಳವನು. ಇವನು ನಿನ್ನ ಹೆಸರಿನಿಂದಲೇ ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾಗುವನು. ಅಗಸ್ತ್ಯೇಶ್ವರನೆಂದೇ ಈ ಮಹಾದೇವನು ತ್ರಿಲೋಕಗಳಲ್ಲಿ ಖ್ಯಾತಿಯನ್ನು ಪಡೆದಿರುವನು.”

೪೮. ದೇವಿಯೆ! ಇಂತೆಂದು ನಾನು ಹೇಳಲು ಆ ಬ್ರಾಹ್ಮಣನು ಅಲ್ಲಿಯೇ ನೆಲಸಿದನು. ಆತನಲ್ಲಿಯ ಕೃಪೆಯಿಂದ ನಾನು ಆ ಲಿಂಗವನ್ನು ಪಂಚಮುದ್ರೆಗಳನ್ನು ಹಾಕಿ ಅಲಂಕರಿಸಿದೆನು.

೪೯. ಯಾವ ನರರು ಭಕ್ತಿಯಿಂದ ಆ ಮಹಾಲಿಂಗವನ್ನು ನೋಡುವರೊ, ಅವರು ತಮ್ಮ ಸಮಸ್ತ ಪಾತಕಗಳನ್ನೂ ಕಳೆದುಕೊಂಡು ಸರ್ವಾಭೀಷ್ಟಗಳನ್ನು ಪಡೆದು ಸುಖಿಸುವರು.

ಭವಿಷ್ಯಂತಿ ಮಹಾತ್ಮಾನಃ ಪುತ್ರೈಶ್ವರ್ಯಸಮನ್ವಿತಾಃ ।
ಅಂತಕಾಲೇ ಚ ಮಾಂ ಯಾಂತಿ ವಿಮಾನೈಃ ಸರ್ವಕಾಮದೈಃ
ಸ್ತುತಾ ಗಂಧರ್ವಮುಖ್ಯೈಶ್ಚ ರುದ್ರಲೋಕೇ ಚ ಶಾಶ್ವತೇ । ॥ ೫೦ ॥
ಯೇಽರ್ಚಯಂತಿ ಸದಾ ದೇವಮಗಸ್ತ್ಯೇಶ್ವರಸಂಜ್ಞಕಂ ।
ಕೃತಪುಣ್ಯಾ ನರಾ ಮರ್ತ್ಯಾಸ್ತೇ ಯಾಂತಿ ಪರಮಂ ಪದಂ ॥ ೫೧ ॥
ಸಂಸ್ಮೃತೇ ದೇವದೇವೇಶೇ ನರಾಣಾಂ ಕೋಟಿಜನ್ಮಜಂ ॥ ೫೨ ॥
ಅಶುಭಂ ಕ್ಷಯಮಾಪ್ನೋತಿ ಕಸ್ತಂ ನ ಪ್ರಣಮೇಚ್ಛಿವಂ ॥ ೫೩ ॥
ಯಃ ಪ್ರಣಮ್ಯ ನರೋ ಭಕ್ತ್ಯಾ ದೇವಂ ತಂ ಚ ನಿಷೇವತೇ ।
ಮುಚ್ಯತೇ ಬ್ರಹ್ಮಹತ್ಯಾದಿಪಾತಕೈರ್ನರಕಪ್ರದೈಃ ॥ ೫೪ ॥
ರಾಜಸೂಯಶತೇನೈವ ಯತ್ಪುಣ್ಯಂ ಚ ಭವಿಷ್ಯತಿ ।
ತತ್ಪುಣ್ಯಮಧಿಕಂ ದೇವಿ ದರ್ಶನಾಚ್ಚ ಭವಿಷ್ಯತಿ ॥ ೫೫ ॥
ಕಿಂ ತೀರ್ಥೈರ್ವಿವಿಧೈಃ ಸ್ನಾನೈಃ ಕಿಂ ದಾನೈರ್ವಿವಿಧೈಃ ಕೃತೈಃ ।
ತೇ ಪ್ರಾಪ್ಸ್ಯಂತಿ ಫಲಂ ಸರ್ವೇ ಮತ್ಪ್ರಸಾದಾನ್ನ ಸಂಶಯಃ ॥ ೫೬ ॥

---

೫೦. ಮತ್ತು ಮಹಾತ್ಮರೂ, ಪುತ್ರಪೌತ್ರಸಂಪನ್ನರೂ, ಐಶ್ವರ್ಯವಂತರೂ ಆಗಿ ಬಾಳಿ ಕೊನೆಯಲ್ಲಿ ಸಕಲ ಕಾಮಪ್ರದಗಳಾದ ವಿಮಾನಗಳಲ್ಲಿ ಕುಳಿತು ನನ್ನ ಬಳಿಗೆ ಬರುವರು. ಶಾಶ್ವತವಾಗಿ ರುದ್ರಲೋಕದಲ್ಲಿ ವಾಸಮಾಡುತ್ತ ಗಂಧರ್ವಮುಖ್ಯರ ಸ್ತೋತ್ರಗಳನ್ನೂ ಕೇಳುತ್ತಿರುವರು.

೫೧. ಅಗಸ್ತ್ಯೇಶ್ವರನೆಂಬ ಹೆಸರುಳ್ಳ ಈ ಮಹೇಶ್ವರ ಲಿಂಗವನ್ನು ಯಾರು ಪೂಜಿಸುವರೊ, ಅವರು ಮಹಾ ಪುಣ್ಯವಂತರು. ಅವರಿಗೆ ಉತ್ತಮ ಸದ್ಗತಿಯು ದೊರಕುವುದು.

೫೨–೫೩. ದೇವದೇವೇಶ್ವರನಾದ ಈ ಅಗಸ್ತ್ಯೇಶ್ವರನನ್ನು ಸ್ಮರಿಸುವ ಮಾತ್ರದಿಂದ ಕೋಟಿ ಜನ್ಮಗಳಲ್ಲಿ ಮಾಡಿದ ಪಾತಕಗಳೂ ವಿಲಯವನ್ನು ಹೊಂದುವುವೆಂದ ಮೇಲೆ ಆ ಲಿಂಗಕ್ಕೆ ಯಾರು ತಾನೆ ನಮಸ್ಕರಿಸುವುದಿಲ್ಲ?

೫೪. ಯಾವ ಮನುಷ್ಯನು ಭಕ್ತಿಯಿಂದ ನಮಸ್ಕರಿಸಿ ಈ ದೇವನನ್ನು ಸೇವಿಸುತ್ತಿರುವನೊ, ಅವನು ನರಕಪ್ರದಗಳಾದ ಮಹಾ ಪಾತಕಗಳೆನಿಸಿದ ಬ್ರಹ್ಮಹತ್ಯಾದಿಗಳಿಂದಲೂ ಮುಕ್ತನಾಗುವನು.

೫೫. ಒಂದು ನೂರು ರಾಜಸೂಯಯಾಗಗಳನ್ನು ಮಾಡುವುದರಿಂದ ಯಾವ ಪುಣ್ಯವು ಲಭಿಸುವುದೊ, ಅಷ್ಟೇ ಅಥವ ಅದಕ್ಕೂ ಹೆಚ್ಚಿನದಾದ ಪುಣ್ಯವು ಈ ದೇವದೇವನ ದರ್ಶನದಿಂದ ಲಭಿಸುವುದು.

೫೬. ವಿವಿಧ ತೀರ್ಥಗಳಲ್ಲಿ ಸ್ನಾನಮಾಡುವುದರಿಂದೇನು? ಅನೇಕ ವಿಧಗಳಾದ ದಾನಗಳನ್ನು ಮಾಡುವುದರಿಂದೇನು? ಅವರೆಲ್ಲರೂ ನನ್ನ ಅನುಗ್ರಹದಿಂದಲೇ ಫಲಗಳನ್ನು ಪಡೆಯುವರು. ಇದರಲ್ಲಿ ಸಂದೇಹವಿಲ್ಲ.

ಅಷ್ಟಮ್ಯಾಂ ಚ ಚತುರ್ದಶ್ಯಾಂ ದಿನೇ ಸೋಮಸ್ಯ ಶಕ್ತಿತಃ ।
ಯಃ ಕರಿಷ್ಯತಿ ಲಿಂಗಸ್ಯ ಪೂಜಾಂ ಭಕ್ತಿಸಮನ್ವಿತಃ ।
ಕುಲಾನಾಂ ತಾರಯತ್ಯೇವ ಮಾತೃಕಂ ಪಿತೃಕಂ ಶತಂ ॥ ೫೭ ॥
ಯೇ ಚ ಪಶ್ಯಂತಿ ಪುರುಷಾ ಭಾವಹೀನಾಃ ಪ್ರಸಂಗತಃ ।
ನ ತೇ ಪಶ್ಯಂತಿ ಸಂಸಾರೇ ನರಕಂ ವೈ ಕದಾಚನ ॥ ೫೮ ॥
ಏತತ್ತೇ ಕಥಿತಂ ದೇವಿ ಲಿಂಗಮಾಹಾತ್ಮ್ಯಮುತ್ತಮಂ ।
ಪ್ರಥಮಂ ಕಥಿತಂ ಲೋಕೇ ದ್ವಿತೀಯಂ ಶೃಣು ಯತ್ನತಃ ॥ ೫೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಅಗಸ್ತ್ಯೇಶ್ವರಮಾಹಾತ್ಮ್ಯವರ್ಣನಂ" ನಾಮ ಪ್ರಥಮೋಽಧ್ಯಾಯಃ

---

೫೭. ಅಷ್ಟಮಿ ಅಥವ ಚತುರ್ದಶೀ ತಿಥಿಗಳು ಸೋಮವಾರದೊಡನಿರಲು ಭಕ್ತನಾದ ಯಾವನು ಶಕ್ತಿಗನುಸಾರವಾಗಿ ಈ ಅಗಸ್ತ್ಯೇಶ್ವರಲಿಂಗದ ಪೂಜೆಯನ್ನು ಮಾಡುವನೊ, ಅವನು ತನ್ನ ತಾಯಿತಂದೆಯರ ಉಭಯಕುಲಗಳಲ್ಲಿಯ ಒಂದುನೂರು ತಲೆಗಳವರೆಗೂ ಎಲ್ಲರನ್ನೂ ಉದ್ಧರಿಸುವನು.

೫೮. ಯಾರು ಭಕ್ತಿಹೀನರಾಗಿದ್ದರೂ ಪ್ರಸಂಗವಶದಿಂದಲಾದರೂ ಅಗಸ್ತ್ಯೇಶ್ವರನ ದರ್ಶನವನ್ನು ಮಾಡುವರೊ, ಅವರೂ ಈ ಸಂಸಾರದಲ್ಲಿ ದುಃಖ ದಾರಿದ್ರ್ಯಗಳನ್ನು ಎಂದಿಗೂ ಕಾಣುವುದಿಲ್ಲ.

೫೯. ಎಲೌ ದೇವಿಯೆ! ಇಂತು ಈ ಮಹಾಶಿವಲಿಂಗದ ಮಾಹಾತ್ಮ್ಯವನ್ನು ನಿನಗೆ ತಿಳಿಸಿರುವೆನು. ಎಂಬತ್ತನಾಲ್ಕು ಮಹಾಲಿಂಗಗಳಲ್ಲಿ ಇದೇ ಮೊದಲನೆಯದೆಂದು ಲೋಕಪ್ರಸಿದ್ಧಿಯಿರುವುದು. ಇನ್ನು ಎರಡನೆಯ ಲಿಂಗದ ಚರಿತ್ರೆಯನ್ನು ಸಾವಧಾನದಿಂದ ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಅಗಸ್ತ್ಯೇಶ್ವರಮಾಹಾತ್ಮ್ಯವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ಗುಹೇಶ್ವರಮಾಹಾತ್ಮ್ಯವರ್ಣನಂ

ಶ್ರೀ ರುದ್ರ ಉವಾಚ:—

ಶೃಣು ಗುಹೇಶ್ವರಂ ಲಿಂಗಂ ದ್ವಿತೀಯಂ ಪಾಪನಾಶನಂ ।
ಯಸ್ಯ ದರ್ಶನಮಾತ್ರೇಣ ಜಾಯತೇ ಸಿದ್ಧಿರುತ್ತಮಾ ॥ ೧ ॥
ಪುರಾ ರಾಥಂತರೇ ಕಲ್ಪೇ ದೇವದಾರುವನೇ ಶುಭೇ ।
ಋಷಿರ್ಮಂಕಣಕೋ ನಾಮ ವೇದವೇದಾಂಗಪಾರಗಃ ।
ಯೋಗಾಭ್ಯಾಸರತೋ ನಿತ್ಯಂ ಶಾಂತಿದಾಂತಿಸಮಾಸ್ಥಿತಿಃ ॥ ೨ ॥
ಸಿದ್ಧಿಕಾಮಸ್ತಪಸ್ತೇಪೇ ಕಥಂ ಸಿದ್ಧೋ ಭವಾಮ್ಯಹಂ ।
ರಕ್ತಮಾಂಸವಿಕಾರೋಽಯಂ ಕಥಂ ಯಾಸ್ಯತಿ ಸಂಕ್ಷಯಂ ॥ ೩ ॥
ಇತಿ ಸಂಚಿಂತ್ಯ ಹೃದಯೇ ಪ್ರಾರಬ್ಧಂ ತಪ ಉತ್ತಮಂ ।
ಬಹೂನ್ಯಬ್ದಸಹಸ್ರಾಣಿ ತಸ್ಯಾತೀತಾನಿ ಪಾರ್ವತಿ ॥ ೪ ॥

---

### ಕನ್ನಡದ ಅನುವಾದ

#### ಗುಹೇಶ್ವರಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ:—ಇನ್ನು ಎರಡನೆಯದೂ ಸಕಲ ಕಲ್ಮಷ ನಾಶಕವೂ ಆದ ಗುಹೇಶ್ವರಲಿಂಗವನ್ನು ಕುರಿತು ಹೇಳುವೆನು, ಕೇಳು. ಈ ಮಹಾ ಶಿವಲಿಂಗದ ದರ್ಶನಮಾತ್ರದಿಂದಲೇ ಸರ್ವೋತ್ತಮವಾದ ಸಿದ್ಧಿಯು ಪ್ರಾಪ್ತವಾಗುವುದು.

೨. ಹಿಂದೆ ರಥಂತರಕಲ್ಪದಲ್ಲಿ ಪವಿತ್ರವಾದ ದೇವದಾರುವನವಿದ್ದಲ್ಲಿ ಮಂಕಣಕನೆಂಬ ಹೆಸರಿನ ಮಹರ್ಷಿಯೊಬ್ಬನಿದ್ದನು. ಆತನು ವೇದವೇದಾಂಗ ನಿಷ್ಣಾತನೂ, ಸತತವೂ ಯೋಗಾಭ್ಯಾಸನಿರತನೂ, ಶಮ ದಮ ಸಮಾಧಿ ಸಂಪನ್ನನೂ ಆಗಿದ್ದನು.

೩. "ನಾನು ಹೇಗೆ ಸಿದ್ಧನಾದೇನು? ರಕ್ತಮಾಂಸಮಯವಾದ ಈ ದೇಹವೆಂದಿಗೆ ನಷ್ಟವಾಗುವುದು?" ಎಂದೇ ಯೋಚಿಸುತ್ತ ಸಿದ್ಧಿಕಾಮನಾಗಿ ಉಗ್ರವಾದ ತಪಸ್ಸನ್ನಾಚರಿಸಿದನು.

೪. ಈ ಯೋಚನೆಯನ್ನೇ ಮನಸ್ಸಿನಲ್ಲಿಟ್ಟುಕೊಂಡು ಆತನು ಉತ್ತಮವಾದ ತಪಶ್ಚರಣೆಯನ್ನಾರಂಭಿಸಿದನು. ಪಾರ್ವತಿಯೆ! ಹೀಗೆ ತಪಸ್ಸಿನಲ್ಲಿಯೇ ಅನೇಕ ಸಾವಿರ ವರ್ಷಗಳು ಕಳೆದುಹೋದುವು.

ಕಸ್ಮಿಂಶ್ಚಿದಥ ಕಾಲೇ ತು ವಿದ್ಧಸ್ಯ ಪರ್ವತಾತ್ಮಜೇ ।
ಕರಾಚ್ಛಾಕರಸೋ ಜಾತಃ ಕುಶಾಗ್ರೇಣ ತದೈವ ಹಿ ॥ ೫ ॥
ಸ ಚ ದೃಷ್ಟ್ವಾ ತದಾಶ್ಚರ್ಯಂ ವಿಸ್ಮಯಂ ಪರಮಂ ಗತಃ ।
ಮೇನೇ ಸಿದ್ಧಿಂ ಪರಾಂ ಪ್ರಾಪ್ತಾಂ ಸಗರ್ವೋ ವಾಕ್ಯಮಬ್ರವೀತ್ ॥ ೬ ॥
ಅಹೋ ತಪಃಪ್ರಭಾವೋಽಯಂ ಪ್ರಾಪ್ತಾ ಸಿದ್ಧಿರ್ಮಯಾಽದ್ಯ ವೈ ।
ಮತ್ತುಲ್ಯೋ ನಾಽಸ್ತಿ ವೈ ವಿಪ್ರೋ ಯೇನ ಸಿದ್ಧಿಃ ಸಮಾಗತಾ ॥ ೭ ॥
ಶರೀರಂ ಕುತ್ಸಿತಂ ಚೇದಂ ಮಲಮೂತ್ರೇಣ ಸಂಯುತಂ ।
ಮಜ್ಜಸ್ನಾಯುವಸಾಪೃಕ್ತಮಾಂಸಶೋಣಿತಪೂರಿತಂ ।
ಹರ್ಷೇಣ ಮಹತಾ ಯುಕ್ತಃ ಸ ನನರ್ತ ದ್ವಿಜಸ್ತಥಾ ॥ ೮ ॥
ಏತಸ್ಮಿನ್ನೃತ್ಯತಿ ವಿಪ್ರೇ ಜಗತ್ಸ್ಥಾವರಜಂಗಮಂ ।
ಅನೃತ್ಯದ್ರಾಗಸಂಯುಕ್ತಂ ಪ್ರಭಾವಾತ್ತಸ್ಯ ವೈ ಮುನೇಃ ॥ ೯ ॥
ನ ಸ್ವಾಧ್ಯಾಯೋ ವಷಟ್ಕಾರಃ ಕರ್ಮಕಾಂಡೋ ನ ಚ ಕ್ವಚಿತ್ ॥ ೧೦ ॥

---

೫. ಎಲೌ ಪರ್ವತರಾಜಕುಮರಿಯೆ! ಒಂದಾನೊಂದು ದಿನ ಆತನು ಕೈಯಿಂದ ಒಂದು ಎಲೆಯನ್ನೆಸೆಯಲು ಅದು ಆಕ್ಷಣವೇ ಕುಶಾಗ್ರವಾಗಿ ಪರಿಣಮಿಸಿತು.

೬. ಈ ಆಶ್ಚರ್ಯವನ್ನು ಕಂಡು ಆ ಮುನಿಯು ಅತ್ಯಂತ ವಿಸ್ಮಯವನ್ನು ತಾಳಿದನು. ಸರ್ವೋತ್ತಮವಾದ ಸಿದ್ಧಿಯು ತನಗೆ ಲಭ್ಯವಾಯಿತೆಂದು ತಿಳಿದು ಗರ್ವದಿಂದ ಈ ಮಾತನ್ನಾಡಿದನು.

೭. "ಆಹಾ! ನನ್ನ ತಪಸ್ಸಿನ ಪ್ರಭಾವವನ್ನೇನೆಂದು ಹೇಳಲಿ! ಅನುಪಮವಾದ ಸಿದ್ಧಿಯು ಇಂದು ನನಗೆ ಲಭಿಸಿತು. ಇಂತಹ ಸಿದ್ಧಿಯನ್ನು ಪಡೆದ ನನಗೆ ಸಮಾನನಾದ ಮತ್ತೊಬ್ಬ ಬ್ರಾಹ್ಮಣನೇ ಇಲ್ಲವು.

೮. ಈ ಶರೀರದ ನಿಜವನ್ನು ತಿಳಿದೆನು. ಇದು ನಿಂದಿತವಾಗಿ ಮಲಮೂತ್ರಗಳಿಂದ ಕೂಡಿರುವುದು. ಮಜ್ಜಾ, ಸ್ನಾಯು, ವಸಾ, ಮಾಂಸ, ರಕ್ತಗಳಿಂದ ತುಂಬಿರುವುದು." ಇತೆಂದು ಆ ಬ್ರಾಹ್ಮಣೋತ್ತಮನು ಅತ್ಯಾನಂದಭರಿತನಾಗಿ ಕುಣಿಯಲಾರಂಭಿಸಿದನು.

೯. ಈತನು ನರ್ತನಮಾಡಲು ಈತನ ಮಹಿಮೆಗೆ ಸಿಲುಕಿ ಚರಾಚರಾತ್ಮಕವಾದ ಬ್ರಹ್ಮಾಂಡವೆಲ್ಲವೂ ಅನುರಾಗದಿಂದ ಕೂಡಿದುದಾಗಿ ಬ್ರಾಹ್ಮಣನೊಡನೆ ತಾನೂ ಕುಣಿಯತೊಡಗಿತು.

೧೦. ಎಲ್ಲಿಯೂ ವೇದಾಧ್ಯಯನವಾಗಲಿ, ಯಜ್ಞಯಾಗಾದಿಗಳಾಗಲಿ, ಕರ್ಮಗಳಾಗಲಿ ನಡೆಯಲಿಲ್ಲ.

ಏತಸ್ಮಿನ್ನಂತರೇ ದೇವಾ ಬ್ರಹ್ಮವಿಷ್ಣುಪುರಸ್ಸರಾಃ ।
ಮಾಮೂಚುರ್ವಿಸ್ಮಿತಾಃ ಸರ್ವೇ ನಾಥ ನೃತ್ಯಂ ತದಾ ಕರು ॥ ೧೧ ॥
ಋಷೌ ಮಂಕಣಕೇ ದೇವಿ ನೃತ್ಯತಿ ನೃತ್ಯತಿ ಸರ್ವತಃ ।
ಸದೇವಾಸುರಮಾನುಷ್ಯಂ ಸರ್ವಂ ಲೋಕತ್ರಯಂ ವಿಭೋ ॥ ೧೨ ॥
ಚಲಿತಾಃ ಪರ್ವತಾಃ ಸ್ಥಾನಾತ್ಕ್ಷುಭಿತಾ ಮೇಘಪಂಕ್ತಯಃ ।
ಶಿಖರಾಣಿ ವಿಶೀರ್ಯಂತೇ ಧರಣೀ ಪೀಡಿತಾ ಭೃಶಂ ॥ ೧೩ ॥
ಸ್ರೋತೋಮಾತ್ರಾ ಮಹಾನದ್ಯೋ ಗ್ರಹಾ ಉನ್ಮಾರ್ಗತಃ ಸ್ಥಿತಾಃ ॥೧೪॥
ತ್ರೈಲೋಕ್ಯಂ ವ್ಯಾಕುಲೀಭೂತಂ ಯಾವನ್ನಾಯಾತಿ ಸಂಕ್ಷಯಂ ।
ತಾವನ್ನಿವಾರಯಸ್ವೈನಂ ನಾಽನ್ಯಃ ಶಕ್ತೋ ವಿನಾ ತ್ವಯಾ ॥ ೧೫ ॥
ತೇಷಾಂ ತದ್ವಚನಂ ಶ್ರುತ್ವಾ ತ್ರಿದಶಾನಾಂ ಯಶಸ್ವಿನಿ ।
ಪ್ರತಿಜ್ಞಾತಂ ಮಯಾಽತ್ಯರ್ಥಂ ಗತ್ವಾ ತಸ್ಯ ಸಮೀಪತಃ ॥ ೧೬ ॥
ದ್ವಿಜರೂಪಂ ಸಮಾಸ್ಥಾಯ ಮಯಾ ಪೃಷ್ಟೋ ದ್ವಿಜೋತ್ತಮಃ ।
ಕಿಮರ್ಥಂ ನೃತ್ಯಸಿ ಬ್ರಹ್ಮನ್ ಕಸ್ಮಾತ್ತೇ ಹರ್ಷ ಆಗತಃ ॥ ೧೭ ॥

---

೧೧. ಇಷ್ಟರಲ್ಲಿಯೇ ಬ್ರಹ್ಮವಿಷ್ಣುಗಳೇ ಮುಂತಾದ ದೇವತೆಗಳೆಲ್ಲರೂ ವಿಸ್ಮಯಾವಿಷ್ಟರಾಗಿ ನನ್ನಲ್ಲಿಗೆ ಬಂದು ಇಂತೆಂದರು. "ಎಲೈ ಲೋಕೇಶ್ವರನೆ! ನೀನೂ ಈಗ ನೃತ್ಯವಿಲಾಸವನ್ನು ಮೆರೆಯಬೇಕು.

೧೨. ಮಹಾದೇವ! ಮಂಕಣಕನೆಂಬ ಮಹರ್ಷಿಯು ನರ್ತನಮಾಡುತ್ತಿರಲು ದೇವ, ದಾನವ, ಮನುಷ್ಯರಿಂದೊಡಗೂಡಿದ ಮೂರು ಲೋಕಗಳೆಲ್ಲವೂ ನೃತ್ಯವನ್ನು ಮಾಡುತ್ತಿರುವುವು.

೧೩. ಪರ್ವತಗಳು ತಮ್ಮ ಸ್ಥಾನಗಳಿಂದ ಕದಲಿರುವುವು. ಮೇಘಮಾಲೆಗಳೆಲ್ಲ ಅಲ್ಲಕಲ್ಲೋಲದೆಶೆಗೆ ಸಿಕ್ಕಿರುವುವು. ಪರ್ವತಶಿಖರಗಳು ಒಡೆದು ಬೀಳುತ್ತಿರುವುವು. ಭೂಮಿಯು ಬಹುವಾಗಿ ಪೀಡೆಗೊಳಗಾಗಿರುವುದು.

೧೪. ಮಹಾನದಿಗಳೂ ಒರತೆಗಳಾಗಿರುವುವು. ಗ್ರಹಗಳೆಲ್ಲವೂ ವಿಪರೀತ ಸಂಚಾರಗಳಲ್ಲಿ ತೊಡಗಿರುವುವು.

೧೫. ಇಂತು ಮಹಾ ವ್ಯಾಕುಲಕ್ಕೊಳಗಾಗಿರುವ ಬ್ರಹ್ಮಾಂಡವು ನಾಶವಾಗುವುದರೊಳಗಾಗಿಯೇ ನೀನು ಈ ಮುನಿಯ ನರ್ತನವನ್ನು ನಿವಾರಿಸಬೇಕು. ಇದಕ್ಕೆ ನೀನಲ್ಲದೆ ಬೇರೊಬ್ಬ ಶಕ್ತನಿಲ್ಲ."

೧೬. ಭಾಮಿನಿಯೆ! ತ್ರಿದಶೋತ್ತಮರ ಈ ಮಾತನ್ನು ಕೇಳಿ ನಾನು ಅವರಿಗೆ ಅಭಯವನ್ನಿತ್ತು ಕಳುಹಿಸಿ ಪ್ರತಿಜ್ಞೆಯಂತೆ ಆತನ ಬಳಿಗೆ ಹೊರಟೆನು.

೧೭. ನಾನೂ ಬ್ರಾಹ್ಮಣ ವೇಷದಿಂದಲೇ ಆತನನ್ನು ಕಂಡು ಪ್ರಶ್ನೆಮಾಡಲು ಉಪಕ್ರಮಿಸಿದೆನು. "ಅಯ್ಯಾ ಬ್ರಾಹ್ಮಣೋತ್ತಮನೆ! ನೀನೇತಕ್ಕೆ ಕುಣಿಯುತ್ತಿರುವೆ! ಯಾವುದರಿಂದ ನಿನಗಿಷ್ಟು ಆನಂದವುಂಟಾಯಿತು?

ವಿರುದ್ಧಮೃಷಿಧರ್ಮಾಣಾಂ ಕಾಮರಾಗೇಣ ನರ್ತನಂ ।
ಗೀತಂ ಚ ನರ್ತನಂ ಚೈವ ಯುವತೀಜನವಲ್ಲಭಂ ॥ ೧೮ ॥
ಬ್ರಾಹ್ಮಣಸ್ಯ ತಪೋಭ್ರಂಶಃ ಸದಾಚಾರಸ್ಯ ಸತ್ತಮ ।
ಇತಿ ಮತ್ವಾ ದ್ವಿಜಶ್ರೇಷ್ಠ ಕಿಮರ್ಥಂ ನೃತ್ಯಸೇ ಭೃಶಂ ॥ ೧೯ ॥

ಋಷಿರುವಾಚ :—

ಕಿಂ ನ ಪಶ್ಯಸಿ ಭೋ ಬ್ರಹ್ಮನ್ ಕರಾಚ್ಛಾಕರಸಂ ಚ್ಯುತಂ ।
ಅತ ಏವ ಹಿ ಮೇ ನೃತ್ಯಂ ಸಿದ್ಧೋಽಹಂ ನಾಽತ್ರ ಸಂಶಯಃ ॥ ೨೦ ॥
ತಸ್ಯ ತದ್ವಚನಂ ಶ್ರುತ್ವಾ ಹಾಸೋಽತೀವ ಮಯಾ ಕೃತಃ ।
ಅಂಗುಷ್ಠಸ್ತಾಡಿತಃ ಸ್ವೀಯೋಽಂಗುಲ್ಯಗ್ರೇಣ ಚ ಪಾರ್ವತಿ ॥ ೨೧ ॥
ತತೋ ವಿನಿರ್ಗತಂ ಭಸ್ಮ ತತ್ಕ್ಷಣಾದ್ಧಿಮಪಾಂಡುರಂ ।
ಹಾಸೇನೋಕ್ತೋ ವಿಶಾಲಾಕ್ಷಿ ಸಗರ್ವೋ ಬ್ರಾಹ್ಮಣೋ ಮಯಾ ॥ ೨೨ ॥
ಪಶ್ಯ ಮೇಽಂಗುಷ್ಠತೋ ಬ್ರಹ್ಮನ್ಭೂರಿ ಭಸ್ಮ ವಿನಿರ್ಗತಂ ।
ನ ನೃತ್ಯೇಽಹಂ ನ ಮೇ ಹರ್ಷಸ್ತಥಾಽಪಿ ಮುನಿಸತ್ತಮ ॥ ೨೩ ॥

---

೧೮. ಕಾಮ, ಅನುರಾಗಗಳಿಗೆ ಒಳಗಾಗಿ ಹೀಗೆ ನರ್ತನಮಾಡುವುದು ಋಷಿಧರ್ಮಗಳಿಗೆ ಅತ್ಯಂತ ವಿರುದ್ಧವಾಗಿರುವುದು. ಸಂಗೀತ ಮತ್ತು ನೃತ್ಯ ಶಾಸ್ತ್ರಗಳೆರಡೂ ಸ್ತ್ರೀಯರಿಗೆ ಮಾತ್ರ ಪರಮ ಪ್ರಿಯಗಳು.

೧೯. ಇವುಗಳಿಂದ ಸದಾಚಾರವಂತನಾದ ಬ್ರಾಹ್ಮಣನಿಗೆ ತಪೋನಾಶ ವಾಗುವುದು. ಎಲೈ ಬ್ರಾಹ್ಮಣೋತ್ತಮನೆ! ಇದನ್ನು ತಿಳಿದೂ ನೀನು ಹೀಗೇಕೆ ಬಹಳವಾಗಿ ಕುಣಿಯುತ್ತಿರುವೆ?''

೨೦. ಋಷಿಯು ಹೇಳುತ್ತಾನೆ:—''ಅಯ್ಯಾ ಬ್ರಾಹ್ಮಣನೆ! ನನ್ನ ಕೈಯಿಂದ ಬಿದ್ದ ಶಾಕರಸವು ಕುಶವಾಗಿರುವುದು ಕಾಣುವುದಿಲ್ಲವೆ? ಆದುದರಿಂದಲೇ ನಾನು ಕುಣಿಯುತ್ತಿರುವೆನು. ಇಂದಿಗೆ ನಾನು ಸಿದ್ಧನಾದೆನು, ಸಂದೇಹವಿಲ್ಲ.''

೨೧. ಆತನ ಆ ಮಾತುಗಳನ್ನು ಕೇಳಿ ನಾನೂ ಬಹಳವಾಗಿ ನಕ್ಕೆನು. ಪಾರ್ವತಿಯೆ! ನಾನೂ ನನ್ನ ಕೈಬೆರಳುಗಳೆರಡರಿಂದ ಚಿಟಿಕೆಯನ್ನು ಹಾಕಲಶು ವಾದೆನು.

೨೨. ಆ ಕ್ಷಣದಲ್ಲಿಯೇ ಕೈಗಳಿಂದ ಹಿಮದಂತೆ ಪರಿಶುದ್ಧವಾದ ಭಸ್ಮವು ಹೊರಟುಬಂದಿತು. ವಿಶಾಲಾಕ್ಷಿಯೆ! ನಾನೂ ನಗುತ್ತಲೇ ಗರ್ವದಿಂದ ಬೀಗು ತ್ತಿರುವ ಆ ಬ್ರಾಹ್ಮಣನಿಗಿಂತೆಂದೆನು.

೨೩. ''ಅಯ್ಯಾ ಬ್ರಾಹ್ಮಣನೆ! ನನ್ನ ಕೈಬೆರಳುಗಳಿಂದ ಅಪಾರವಾಗಿ ಬರು ತ್ತಿರುವ ಈ ಭಸ್ಮರಾಶಿಯನ್ನು ನೋಡು. ಮುನಿಸತ್ತಮನೆ! ಈ ಸಿದ್ಧಿಯಿದ್ದರೂ ನಾನು ಕುಣಿದಾಡುವುದಿಲ್ಲ. ನನಗೆ ಸಂತೋಷವೂ ಇಲ್ಲ.

**ತದ್ದೃಷ್ಟ್ವಾ ಮಹದಾಶ್ಚರ್ಯಂ ಲಜ್ಜಿತೋ ದ್ವಿಜಸತ್ತಮಃ ।**
**ಧೈರ್ಯಂ ಚ ತಾದೃಶಂ ದೃಷ್ಟ್ವಾ ವಿಸ್ಮಯಂ ಪರಮಂ ಗತಃ ॥ ೨೪ ॥**
**ಅಬ್ರವೀತ್ಪ್ರಾಂಜಲಿರ್ಭೂತ್ವಾ ವಿಸ್ಮಿತೇನಾಽಂತರಾತ್ಮನಾ ।**
**ನಾಽನ್ಯಂ ದೇವಮಹಂ ಮನ್ಯೇ ತ್ವಾಂ ಮುಕ್ತ್ವಾ ವೃಷಭಧ್ವಜಂ ॥ ೨೫ ॥**
**ನಾಽನ್ಯಸ್ಯ ವಿದ್ಯತೇ ಶಕ್ತಿರೀದೃಶೀ ಭುವನತ್ರಯೇ ।**
**ತಸ್ಮಾತ್ಕ್ಷಮಸ್ವ ದೇವೇಶ ಮಯಾಽಜ್ಞಾನಾದನುಷ್ಠಿತಂ ॥ ೨೬ ॥**
**ತಪಃಕ್ಷಯಕರಂ ಕರ್ಮ ವಿರುದ್ಧಂ ನರ್ತನಂ ಸತಾಂ ।**
**ಬಹುಕಾಲಾರ್ಜಿತಂ ಪುಣ್ಯಂ ತಪಸಾ ದುಷ್ಕರೇಣ ತು ।**
**ತದ್ಗತಂ ಸಹಸಾ ದೇವ ಮದೀಯಂ ನರ್ತನೇನ ತು ॥ ೨೭ ॥**
**ತಸ್ಯ ತದ್ವಚನಂ ಶ್ರುತ್ವಾ ಮಯೋಕ್ತೋ ದ್ವಿಜಸತ್ತಮಃ ।**
**ವರಂ ವರಯ ಭದ್ರಂ ತೇ ತುಷ್ಟೋಽಹಂ ದ್ವಿಜಸತ್ತಮ ॥ ೨೮ ॥**
**ಜ್ಞಾನೇನಾಽನೇನ ವಿಪ್ರೇಂದ್ರ ಕಂ ತೇ ಕಾಮಂ ಕರೋಮ್ಯಹಂ ॥ ೨೯ ॥**

---

೨೪. ಆಶ್ಚರ್ಯಕರವಾದ ನನ್ನ ಶಕ್ತಿಯನ್ನು ಕಂಡು ಆ ದ್ವಿಜನು ನಾಚಿಕೆಗೊಂಡನು. ಮತ್ತು ನನ್ನ ಈ ಮನೋನಿಗ್ರಹಕ್ಕಾಗಿ ಬಹಳವಾದ ವಿಸ್ಮಯವನ್ನು ತಾಳಿದನು.

೨೫. ಆಶ್ಚರ್ಯಚಕಿತವಾದ ಆ ಮನಸ್ಸಿನಿಂದಲೇ ಆತನು ಕೈಗಳನ್ನು ಜೋಡಿಸಿಕೊಂಡು ಹೇಳತೊಡಗಿದನು. "ನೀನು ವೃಷಭವಾಹನನಾದ ಮಹಾದೇವನಲ್ಲದೆ ಯಾರೋ ಮತ್ತೊಬ್ಬನೆಂಬುದು ನನ್ನ ಮನಸ್ಸಿಗೆ ತೋರುವುದಿಲ್ಲ.

೨೬. ಇಂತಹ ಅದ್ಭುತಶಕ್ತಿಯು ಮೂರು ಲೋಕಗಳಲ್ಲಿಯೂ ಮತ್ತೊಬ್ಬನಿಗಿರುವುದಿಲ್ಲ. ದೇವದೇವನೆ! ಆದುದರಿಂದ ನಾನು ಅಜ್ಞಾನದಿಂದ ಮಾಡಿದ ಅಪರಾಧವನ್ನು ಮನ್ನಿಸು.

೨೭. ನೃತ್ಯಾದಿ ಕರ್ಮವು ಸತ್ಪುರುಷರ ತಪಸ್ಸನ್ನು ನಾಶಗೊಳಿಸುವ ವಿರುದ್ಧ ಕ್ರಿಯೆಯಾಗಿರುವುದು. ಎಲೈ ಮಹೇಶ್ವರನೆ! ದುಷ್ಕರವಾದ ತಪಸ್ಸನ್ನಾಚರಿಸಿ ಬಹಳ ಕಾಲದಿಂದ ಸಂಪಾದಿಸಿದ ಪುಣ್ಯವೆಲ್ಲವೂ ಈ ನರ್ತನದಿಂದ ಕ್ಷಣಮಾತ್ರದಲ್ಲಿ ನಷ್ಟವಾಯಿತು."

೨೮. ಈ ಮಾತುಗಳನ್ನು ಕೇಳಿ ನಾನು ಆ ಬ್ರಾಹ್ಮಣೋತ್ತಮನಿಗೆ ಹೇಳಿದೆನು. "ಅಯ್ಯಾ ದ್ವಿಜೋತ್ತಮನೆ! ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿರುವೆನು. ನಿನಗೆ ಮಂಗಳವಾಗಲಿ, ನನ್ನಿಂದ ಬೇಕಾದ ವರವನ್ನು ಕೇಳು.

೨೯. ಈಗ ನಿನಗೆ ಸುಜ್ಞಾನವುಂಟಾಗಿರುವುದರಿಂದ ನಿನ್ನ ಯಾವ ಅಭೀಷ್ಟವನ್ನು ನೆರವೇರಿಸಿಕೊಡಲಿ?

ಋಷಿರುವಾಚ :—

ಯದಿ ದೇವ ಪ್ರಸನ್ನಸ್ತ್ವಂ ಶರಣಾಗತವತ್ಸಲ ।
ಯಥಾ ನ ಸ್ಯಾತ್ತಪೋಹಾನಿಸ್ತಥಾ ನೀತಿರ್ವಿಧೀಯತಾಂ ॥ ೩೦ ॥
ಮಯಾ ಪ್ರೋಕ್ತಂ ಪ್ರಸನ್ನೇನ ತಸ್ಯ ವಿಪ್ರಸ್ಯ ಪಾರ್ವತಿ ।
ತಪಸ್ತೇ ವರ್ಧತಾಂ ವಿಪ್ರ ಮಹಾಕಾಲವನಂ ವ್ರಜ ॥ ೩೧ ॥
ತತ್ರಾಸ್ತೇ ಸರ್ವದಾ ಪುಣ್ಯಾ ಸಪ್ತಕಲ್ಪೋದ್ಭವಾ ಗುಹಾ ।
ಪಿಶಾಚೇಶ್ವರದೇವಸ್ಯ ಉತ್ತರೇಣ ವ್ಯವಸ್ಥಿತಾ ॥ ೩೨ ॥
ತತ್ರ ದ್ರಕ್ಷ್ಯಸಿ ಯಲ್ಲಿಂಗಂ ಸಪ್ತಕಲ್ಪೋಧ್ಭವಂ ಶುಭಂ ।
ತಸ್ಯ ದರ್ಶನಮಾತ್ರೇಣ ತಪಸ್ತೇ ವೃದ್ಧಿಮೇಷ್ಯತಿ ॥ ೩೩ ॥
ಕಾಮಕ್ರೋಧೋದ್ಭವಂ ಪಾಪಂ ಲೋಭಮೋಹಸಮನ್ವಿತಂ ।
ಈರ್ಷ್ಯಾಮತ್ಸರಜಂ ಚೈವ ನಾಶಂ ಯಾತಿ ಚ ಕಿಲ್ಬಿಷಂ ॥ ೩೪ ॥
ಮದೀಯಂ ವಚನಂ ಶ್ರುತ್ವಾ ಸ ವಿಪ್ರೋ ವೇದಪಾರಗಃ ।
ಶ್ರುತ್ವಾ ಚ ನಿಯಮಂ ದೇವಿ ಮದುಕ್ತಂ ಸ ಗತೋ ದ್ವಿಜಃ ॥ ೩೫ ॥

---

೩೦. ಋಷಿಯು ಕೇಳುತ್ತಾನೆ:—ದೇವೇಶ್ವರನೆ! ಶರಣಾಗತವತ್ಸಲನಾದ ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ ನನ್ನ ಅಕಾರ್ಯದಿಂದ ತಪೋಹಾನಿ ಯುಂಟಾಗದಿರುವಂತೆ ಉಪಾಯವನ್ನು ಮಾಡು.

೩೧. ಎಲೌ ಪಾರ್ವತಿಯೆ! ಆಗ ನಾನು ಪ್ರಸನ್ನನಾಗಿ ಆ ಬ್ರಾಹ್ಮಣನಿಗಿಂತೆಂದೆನು. "ವಿಪ್ರಶ್ರೇಷ್ಠನೆ! ನಿನ್ನ ತಪಸ್ಸು ಉತ್ತರೋತ್ತರಾಭಿವೃದ್ಧಿಯನ್ನು ಪಡೆಯಲಿ, ನೀನು ಮಹಾಕಾಲವನಕ್ಕೆ ಹೋಗು.

೩೨. ಅಲ್ಲಿ ಏಳು ಕಲ್ಪಗಳ ಹಿಂದೆ ನಿರ್ಮಿತವಾದ ಗುಹೆಯೊಂದು ಯಾವಾಗಲೂ ಪುಣ್ಯಪ್ರದವಾಗಿ ಕಂಗೊಳಿಸುತ್ತಿರುವುದು. ಅದು ಪಿಶಾಚೇಶ್ವರ ಮಹಾ ಲಿಂಗಕ್ಕೆ ಉತ್ತರದಿಕ್ಕಿನಲ್ಲಿರುವುದು.

೩೩. ಅದರಲ್ಲಿ ಏಳು ಕಲ್ಪಗಳ ಹಿಂದೆ ಉದ್ಭವಿಸಿದ ಪವಿತ್ರವಾದ ಲಿಂಗವೊಂದಿರುವುದು. ಅದರ ದರ್ಶನವನ್ನು ಮಾಡಿದ ಮಾತ್ರದಿಂದಲೇ ನಿನ್ನ ತಪಸ್ಸು ಅಭಿವೃದ್ಧಿಯನ್ನು ಪಡೆಯುವುದು.

೩೪. ಕಾಮ, ಕ್ರೋಧ, ಲೋಭ, ಮೋಹ, ಅಸೂಯೆ, ಮಾತ್ಸರ್ಯಗಳಿಂದ ಉದ್ಭವಿಸುವ ಪಾತಕಗಳೆಲ್ಲವೂ ಅಲ್ಲಿ ನಾಶವಾಗುವುವು."

೩೫. ನನ್ನ ಮಾತುಗಳನ್ನು ಕೇಳಿ ವೇದಪಾರಂಗತನಾದ ಆ ಬ್ರಾಹ್ಮಣನು ಪುನಃ ಆ ಮಹಾಲಿಂಗದ ಸೇವೆಯನ್ನು ಮಾಡುವ ಪ್ರಕಾರವನ್ನೂ ನನ್ನಿಂದ ತಿಳಿದುಕೊಂಡನು.

ನಿಃಸೃತೋ ನಿಯತೋ ಭೂತ್ವಾ ನಮಸ್ಕೃತ್ಯ ಪುನಃ ಪುನಃ ।
ಆಜಗಾಮ ಗುಹಾ ಯತ್ರ ಮಹಾಕಾಲವನೋತ್ತಮೇ ॥ ೩೬ ॥
ದದರ್ಶ ತತ್ರ ತಲ್ಲಿಂಗಂ ತಪಸೋ ವರ್ಧನಂ ಪರಂ ।
ದ್ವಾದಶಾದಿತ್ಯಸಂಕಾಶೋ ಜಾತೋ ವೈ ಲಿಂಗದರ್ಶನಾತ್ ॥ ೩೭ ॥
ಏತಸ್ಮಿನ್ನಂತರೇ ದೇವಿ ದೇವೈರುಕ್ತಂ ನಭಸ್ತಲೇ ।
ಗೋಪ್ಯಂ ಲಿಂಗಂ ಗುಹೋತ್ಥಂ ತು ದೃಷ್ಟಂ ಮಂಕಣಕೇನ ತು ॥ ೩೮ ॥
ಸಿದ್ಧಿಃ ಪ್ರಾಪ್ತಾ ದ್ವಿಜೇನೈವ ದರ್ಶನೇನ ಸುದುರ್ಲಭಾ ।
ತಸ್ಮಾದ್ಗುಹೇಶ್ವರೋ ದೇವೋ ಭವಿಷ್ಯತಿ ಮಹೀತಲೇ ॥ ೩೯ ॥
ಭಕ್ತ್ಯಾ ಪರಮಯೋಪೇತಾ ಯೇ ದ್ರಕ್ಷ್ಯಂತಿ ಗುಹೇಶ್ವರಂ ।
ನ ತೇಷಾಂ ಜಾಯತೇ ವಿಘ್ನೋ ಧರ್ಮಸ್ಯ ತಪಸಸ್ತಥಾ ॥ ೪೦ ॥
ಅಷ್ಟಮ್ಯಾಂ ವಾ ಚತುರ್ದಶ್ಯಾಂ ದರ್ಶನಂ ಯಃ ಕರಿಷ್ಯತಿ ।
ಬ್ರಹ್ಮಲೋಕಂ ಗಮಿಷ್ಯಂತಿ ಪಿತರಸ್ತಸ್ಯ ದೇಹಿನಃ ॥ ೪೧ ॥

---

೩೬. ಮತ್ತು ನಿಯಮವನ್ನು ಸ್ವೀಕರಿಸಿ ಹೊರಟು ಆತನು ಮತ್ತೆ ಮತ್ತೆ ನನಗೆ ನಮಸ್ಕರಿಸುತ್ತ ಉತ್ತಮ ಕ್ಷೇತ್ರವಾದ ಮಹಾಕಾಲವನವನ್ನು ಸೇರಿ ಆ ಗುಹೆಯಿದ್ದಲ್ಲಿಗೆ ಬಂದನು.

೩೭. ಅಲ್ಲಿ ತನ್ನ ತಪಸ್ಸನ್ನು ಅಭಿವೃದ್ಧಿಗೊಳಿಸುವ ಉತ್ತಮಲಿಂಗವನ್ನೂ ಕಂಡನು. ಅದರ ದರ್ಶನ ಮಾತ್ರದಿಂದಲೇ ಆತನು ದ್ವಾದಶಾದಿತ್ಯರ ತೇಜಸ್ಸಿಗೆ ಸಮನಾದ ಕಾಂತಿಯನ್ನು ಹೊಂದಿದನು.

೩೮. ದೇವಿಯೆ! ಈ ಸಮಯದಲ್ಲಿಯೇ ದೇವತೆಗಳೆಲ್ಲರೂ ಆಕಾಶದಲ್ಲಿ ನೆರೆದು ಹೇಳತೊಡಗಿದರು. "ಈ ಗುಹೆಯಲ್ಲಿ ಬಹಳ ಗೋಪ್ಯವಾಗಿದ್ದ ಈ ಮಹಾಲಿಂಗವು ಮಂಕಣಕನಿಂದ ನೋಡಲ್ಪಟ್ಟಿತು.

೩೯. ಇದರ ದರ್ಶನಮಾತ್ರದಿಂದಲೇ ಈ ಬ್ರಾಹ್ಮಣನಿಗೆ ಅತಿದುರ್ಲಭವಾದ ಸಿದ್ಧಿಯು ಲಭಿಸಿತು. ಆದುದರಿಂದ ಈ ಮಹಾಲಿಂಗವು ಭೂಲೋಕದಲ್ಲಿ ಗುಹೇಶ್ವರನೆಂದೇ ಪ್ರಸಿದ್ಧವಾಗಲಿ.

೪೦. ಯಾರು ಪರಮಭಕ್ತಿಯುಕ್ತರಾಗಿ ಈ ಗುಹೇಶ್ವರನ ದರ್ಶನವನ್ನು ಮಾಡುವರೊ. ಅವರು ಮಾಡುವ ಧರ್ಮಕಾರ್ಯಗಳಿಗಾಗಲಿ, ತಪಸ್ಸಿಗಾಗಲಿ, ವಿಘ್ನಗಳುಂಟಾಗುವುದಿಲ್ಲ.

೪೧. ಯಾವನು ಅಷ್ಟಮಿ ಅಥವಾ ಚತುರ್ದಶೀತಿಥಿಗಳಲ್ಲಿ ಇದರ ದರ್ಶನವನ್ನು ಮಾಡುವನೊ, ಆ ಮಾನವನ ಪಿತೃಗಳು ಬ್ರಹ್ಮಲೋಕಕ್ಕೆ ಹೋಗಿ ಸೇರುವರು.

ಅತ್ರಾಽಽಗತ್ಯ ಪ್ರಯತ್ನೇನ ದರ್ಶನಂ ಯಃ ಕರಿಷ್ಯತಿ ।
ಉದ್ಧರಿಷ್ಯತಿ ಚಾತ್ಮಾನಂ ಪುರುಷಾನೇಕವಿಂಶತಿಂ ॥ ೪೨ ॥
ಕೃತ್ವಾ ಪಾಪಸಹಸ್ರಾಣಿ ದರ್ಶನಂ ಯಃ ಕರಿಷ್ಯತಿ ।
ಸ ಯಾತಿ ಪರಮಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ॥ ೪೩ ॥
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ದರ್ಶನಾತ್ತಸ್ಯ ಲಿಂಗಸ್ಯ ಸರ್ವಂ ಯಾಸ್ಯತಿ ಸಂಕ್ಷಯಂ ॥ ೪೪ ॥
ಯತ್ಕಿಂಚಿದಶುಭಂ ಕರ್ಮ ಜನ್ಮಕೋಟಿಶತಾರ್ಜಿತಂ ।
ಕ್ಷಯಂ ಯಾಸ್ಯತಿ ತತ್ಸರ್ವಂ ಸ್ಪರ್ಶಮಾತ್ರೇಣ ನಾಽನ್ಯಥಾ ॥ ೪೫ ॥
ಮಹಾಪಾತಕಯುಕ್ತಾ ಹಿ ದೇಹಿನೋ ಯೇ ಮಹೀತಲೇ ।
ತೇಽಪಿ ಲಿಂಗಂ ಸಮಾಸಾದ್ಯ ಮುಚ್ಯಂತೇ ಸರ್ವಪಾತಕೈಃ ॥ ೪೬ ॥
ಇತ್ಯುಕ್ತ್ವಾ ಸ ದ್ವಿಜೋ ದೇವಿ ದಿವ್ಯೋ ಮಂಕಣಕೋ ಮುನಿಃ ।
ಕೃತ್ವಾಽಽಶ್ರಮಪದಂ ಪುಣ್ಯಂ ತತ್ರೈವ ತಪಸಿ ಸ್ಥಿತಃ ॥ ೪೭ ॥

---

೪೨. ಪ್ರಯತ್ನಪೂರ್ವಕವಾಗಿ ಇಲ್ಲಿಗೆ ಬಂದು ಯಾವನು ಗುಹೇಶ್ವರನ ದರ್ಶನವನ್ನು ಮಾಡುವನೋ, ಅವನು ತಾನೂ ಉದ್ಧೃತನಾಗುವನಲ್ಲದೆ ತನ್ನ ಇಪ್ಪತ್ತೊಂದು ಕುಲದವರನ್ನೂ ಉದ್ಧರಿಸುವನು.

೪೩. ಸಾವಿರಾರು ಪಾತಕಗಳನ್ನು ಮಾಡಿದ್ದರೂ ಯಾವನು ಈ ಲಿಂಗದ ದರ್ಶನವನ್ನು ಮಾಡುವನೋ, ಅವನು ತನ್ನ ಪಾತಕಗಳನ್ನು ನೀಗಿ ಮಹೇಶ್ವರ ನಿರುವ ಪರಮಪದವನ್ನು ಸೇರುವನು.

೪೪. ಬ್ರಹ್ಮಹತ್ಯೆ, ಸುರಾಪಾನ, ಕಳ್ಳತನ, ಗುರುದಾರಾಭಿಲಾಷೆ, ಮುಂತಾದ ಸಕಲ ಮಹಾಪಾತಕಗಳೂ ಈ ಲಿಂಗದರ್ಶನದಿಂದ ನಾಶವನ್ನು ಹೊಂದುವುವು.

೪೫. ನೂರಾರುಕೋಟಿ ಜನ್ಮಗಳಿಂದ ಗಳಿಸಿರುವ ಎಷ್ಟೇ ಸ್ವಲ್ಪವಾದ ಪಾತಕವಾದರೂ ಈ ಮಹಾಲಿಂಗವನ್ನು ಮುಟ್ಟುವ ಮಾತ್ರದಿಂದಲೇ ಕ್ಷಣದಲ್ಲಿ ನಾಶವಾಗುವುದು.

೪೬. ಯಾವ ಮಾನವರು ಭೂಲೋಕದಲ್ಲಿ ಮಹಾಪಾತಕಗಳನ್ನು ಮಾಡಿರುವರೊ ಅವರೂ ಈ ಲಿಂಗದ ಬಳಿಗೆ ಬಂದು ಸೇವಿಸುವುದರಿಂದ ತಮ್ಮ ಸಕಲ ಪಾಪಗಳನ್ನೂ ಕಳೆದುಕೊಳ್ಳುವರು.''

೪೭. ಎಲೌ ದೇವಿಯೆ! ಇಂತೆಂದ ದೇವತೆಗಳ ಮಾತನ್ನು ಕೇಳಿ ಮಂಕಣಕ ಮಹರ್ಷಿಯು ಅಲ್ಲಿಯೇ ಪವಿತ್ರವಾದ ಆಶ್ರಮವೊಂದನ್ನು ಕಟ್ಟಿಕೊಂಡು ತಪಸ್ಸಿನಲ್ಲಿ ನಿರತನಾಗಿದ್ದನು.

**ಏಷ ವೈ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ಶ್ರವಣಾತ್ಕೀರ್ತನಾದ್ವಾಽಪಿ ಸರ್ವಪಾಪೈಃ ಪ್ರಮುಚ್ಯತೇ ॥ ೪೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಗುಹೇಶ್ವರಮಾಹಾತ್ಮ್ಯವರ್ಣನಂ"ನಾಮ ದ್ವಿತೀಯೋಽಧ್ಯಾಯಃ**

---

೪೮. ಪಾರ್ವತಿ! ಇಂತು ಪಾಪನಾಶಕವಾದ ಗುಹೇಶ್ವರನ ಪ್ರಭಾವವನ್ನು ನಿನಗೆ ವಿಸ್ತರಿಸಿ ಹೇಳಿರುವೆನು. ಇದನ್ನು ಕೇಳಿದವನೂ ಹೇಳಿದವನೂ ಸಕಲಪಾತಕಗಳಿಂದಲೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಗುಹೇಶ್ವರಮಹಾತ್ಮ್ಯವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ಘುಂಢೇಶ್ವರಮಾಹಾತ್ಮ್ಯವರ್ಣನಂ

ಶ್ರೀ ರುದ್ರ ಉವಾಚ :—

ಘುಂಢೇಶ್ವರಂ ತೃತೀಯಂ ತು ಸುಖಸ್ವರ್ಗಫಲಪ್ರದಂ ।
ಸರ್ವಪಾಪಹರಂ ಲಿಂಗಂ ನೃಣಾಂ ದುಷ್ಕೃತನಾಶನಂ ॥ ೧ ॥
ಘುಂಢಶ್ಚಾಽಽಸೀತ್ಪುರಾ ದೇವಿ ಕೈಲಾಸೇ ಗಣನಾಯಕಃ ।
ಸ ಚ ಕಾಮೀ ದುರಾಚಾರೋ ವ್ಯಸನೋಪಹತೇಂದ್ರಿಯಃ ॥ ೨ ॥
ಗತೋಽಸೌ ಶಕ್ರಲೋಕಂ ತು ಕೌತುಕಾರ್ಥಂ ಯದೃಚ್ಛಯಾ ।
ಯತ್ರ ನೃತ್ಯತಿ ಸಾ ರಂಭಾ ಶಕ್ರಸ್ಯಾಽಗ್ರೇ ವಿವೃಣ್ವತೀ ॥ ೩ ॥
ಭಾವಾನ್ಬಹುವಿಧಾನ್ರಮ್ಯಾನ್ದೃಷ್ಟಿಹಸ್ತಾದಿಕಾನ್ಛುಭಾನ್ ।
ಸೂಚೀವಿದ್ಧಾದಿಕರಣಾನ್ಪತಾಕಾದಿಕಹಸ್ತಕಾನ್ ।
ನೃತ್ಯಂ ಹಸ್ತಾದಿಸಂಯುಕ್ತಂ ಲಯತಾಲಾಽನುಗಂ ತಥಾ ॥ ೪ ॥

---

## ಕನ್ನಡದ ಅನುವಾದ

### ಘುಂಢೇಶ್ವರಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ:—ಮೂರನೆಯದೇ ಘುಂಢೇಶ್ವರವೆಂಬ ಮಹಾಲಿಂಗವು. ಇದು ಸರ್ವಪಾಪಹರವೂ, ಸುಖ ಮತ್ತು ಸ್ವರ್ಗಭೋಗಗಳನ್ನು ಕೊಡುವುದೂ, ದುರಿತನಾಶಕವೂ ಆಗಿರುವುದು.

೨. ದೇವಿಯೆ! ಹಿಂದೆ ಕೈಲಾಸದಲ್ಲಿ ಘುಂಢನೆಂಬೊಬ್ಬ ಗಣನಾಯಕನಿದ್ದನು. ಅವನು ಕಾಮಾಸಕ್ತನೂ, ದುರಾಚಾರಿಯೂ, ವ್ಯಸನಾಸಕ್ತಗಳಾದ ಇಂದ್ರಿಯಗಳುಳ್ಳವನೂ ಆಗಿದ್ದನು.

೩. ಒಮ್ಮೆ ಆತನು ಅಕಸ್ಮಾತ್ತಾಗಿ ಕುತೂಹಲದಿಂದ ಇಂದ್ರಲೋಕವನ್ನು ನೋಡಲು ಹೊರಟನು. ಅಲ್ಲಿ ರಂಭೆಯೆಂಬ ಅಪ್ಸರೆಯು ಹಾವಭಾವಗಳಿಂದ ನಾಟ್ಯವನ್ನಾಡುತ್ತಿದ್ದಳು.

೪. ಮನೋಹರಗಳಾದ ಅನೇಕ ವಿಧದ ಮನೋಭಾವಗಳನ್ನೂ, ಕಣ್ಣು ಮತ್ತು ಕೈಗಳ ವಿಕ್ಷೇಪಗಳನ್ನೂ, ಸೂಚೀವಿದ್ಧವೇ ಮೊದಲಾದ ಕರಣಗಳನ್ನೂ, ಪತಾಕಾದಿ ಹಸ್ತಮುದ್ರೆಗಳನ್ನೂ, ಲಯ ಮತ್ತು ತಾಳಗಳನ್ನನುಸರಿಸುತ್ತ ಲಾಸ್ಯದಿಂದೊಡಗೂಡಿದ ನಾಟ್ಯವನ್ನೂ ಆಕೆಯು ತೋರಿಸುತ್ತಿದ್ದಳು.

ಶಕ್ರೋಽಪಿ ತ್ರಿದಶೈಃ ಸಾರ್ಧಂ ತನ್ಮುಖಾಸಕ್ತಲೋಚನಃ ।
ಬಭೂವ ಹೃಷ್ಟಚೇತಾ ಸ್ವೈ ಹೃಷಿತಾಂಗರುಹಾನನಃ ॥ ೫ ॥
ಏತಸ್ಮಿನ್ನಂತರೇ ದೇವಿ ಢುಂಢಸ್ತಲ್ಲಲಿತೇನ ತು ।
ಕಾಮರಾಗವಶೇನೈವ ಭಾವ್ಯರ್ಥೇನ ಚ ಮೋಹಿತಃ ॥ ೬ ॥
ತೇನ ರಂಗರತಾ ರಂಭಾ ಪುಷ್ಪಗುಚ್ಛೇನ ತಾಡಿತಾ ॥ ೭ ॥
ಸ ಶಪ್ತೋ ವಾಸವೇನೈವ ದೃಷ್ಟ್ವಾಽನ್ಯಾಯಂ ಗಣಸ್ಯ ತು ।
ಪತ ತ್ವಂ ಮಾನುಷಂ ಲೋಕಂ ರಂಗಭಂಗಸ್ತ್ವಯಾ ಕೃತಃ ॥ ೮ ॥
ಇತಿ ಶಪ್ತೋ ಗಣೋ ದೇವಿ ಶಕ್ರೇಣಾಽಮಿತತೇಜಸಾ ।
ಪತಿತೋ ಮಾನುಷೇ ಲೋಕೇ ವಿಸಂಜ್ಞೋ ವಿಹ್ವಲೇಂದ್ರಿಯಃ ॥ ೯ ॥
ಕಾ ದಿಗ್ಭೂತೋ ಹತೋತ್ಸಾಹೋ ವಿಲಲಾಪ ಪುನಃ ಪುನಃ ।
ಅಹೋಽನ್ಯಾಯಫಲಂ ಪ್ರಾಪ್ತಂ ಮಯಾ ಮೋಹಾದನುಷ್ಠಿತಂ ॥ ೧೦ ॥
ತಸ್ಮಾನ್ನೀತಿರ್ವಿಧಾತವ್ಯಾ ಪುರುಷೇಣ ವಿಜಾನತಾ ।
ನ್ಯಾಯಮಾರ್ಗಂ ಸಮಾಶ್ರಿತ್ಯ ಯೇನ ಸಿದ್ಧಿರ್ಭವೇನ್ಮಮ ॥ ೧೧ ॥

---

೫. ಮಹೇಂದ್ರನೂ ದೇವತೆಗಳೂ ಆಕೆಯ ಮುಖವನ್ನೇ ನೋಡುತ್ತ ಮನಸ್ಸಂತೋಷದಿಂದಲೂ, ಪುಳಕಿತಗಳಾದ ದೇಹಗಳಿಂದಲೂ, ಅರಳಿದ ಮುಖಗಳಿಂದಲೂ ಕೂಡಿದ್ದರು.

೬–೭. ಎಲೌ ದೇವಿಯೆ! ಇಷ್ಟರಲ್ಲಿಯೇ ಢುಂಢನು ಆಕೆಯ ಲಲಿತ ಚೇಷ್ಟೆಗಳಿಂದ ಕಾಮಮೋಹಿತನಾಗಿ ಮುಂದಾಗಬೇಕಾದ ಅದೃಷ್ಟದಿಂದ ಪ್ರೇರಿತನಾಗಿ ಸಭಾಮಂಟಪದಲ್ಲಿದ್ದ ರಂಭೆಯನ್ನು ಹೂವಿನ ದಂಡೆಯಿಂದ ಹೊಡೆದನು.

೮. ಆಗ ಮಹೇಂದ್ರನು ಈ ಅನ್ಯಾಯವನ್ನು ಕಂಡು "ನೀನು ರಂಗಭೂಮಿಯ ಮರ್ಯಾದೆಯನ್ನು ಭಂಗಮಾಡಿರುವೆಯಾದುದರಿಂದ ಭೂಲೋಕದಲ್ಲಿ ಬೀಳು" ಎಂದು ಆ ಗಣನಾಯಕನಿಗೆ ಶಾಪವನ್ನಿತ್ತನು.

೯. ಇಂತು ಅಮಿತಪ್ರಭಾವನಾದ ಇಂದ್ರನಿಂದ ಶಾಪೋಪಹತನಾದ ಆ ಗಣನಾಯಕನು ಎಚ್ಚರವಿಲ್ಲದವನೂ, ಇಂದ್ರಿಯಪರವಶನೂ ಆಗಿ ಮನುಷ್ಯಲೋಕದಲ್ಲಿ ಬಂದು ಬಿದ್ದನು.

೧೦. ದಿಕ್ಕುತೋಚದವನಾಗಿ ಉತ್ಸಾಹವಿಲ್ಲದೆ ಮತ್ತೆ ಮತ್ತೆ ಪ್ರಲಾಪವನ್ನು ಮಾಡತೊಡಗಿದನು. "ಅಯ್ಯೋ! ನಾನು ಮೋಹದಿಂದ ನಡೆಸಿದ ಅನ್ಯಾಯದ ಫಲವೇ ನನಗೆ ಈಗ ಪ್ರಾಪ್ತವಾಗಿರುವುದು.

೧೧. ಆದುದರಿಂದ ಬುದ್ಧಿವಂತನಾದ ಪುರುಷನು ಯಾವಾಗಲೂ ಧರ್ಮಕಾರ್ಯಗಳನ್ನೇ ಮಾಡುತ್ತಿರಬೇಕು. ನಾನೂ ನ್ಯಾಯಮಾರ್ಗವನ್ನೇ ಅನುಸರಿಸುವೆನು. ಅದರಿಂದ ನನಗೂ ಸಿದ್ಧಿಯು ಲಭಿಸುವುದು.

ಇತ್ಯುಕ್ತ್ವಾ ಸ ತಪಸ್ತೇಪೇ ಮಹೇಂದ್ರೇ ಪರ್ವತೋತ್ತಮೇ ।
ಶ್ರೀಶೈಲೇ ಮಲಯೇ ವಿಂಧ್ಯೇ ಪಾರಿಯಾತ್ರೇ ಯಮಾಲಯೇ ॥ ೧೨ ॥
ನೋ ಸಿದ್ಧೋಽಸೌ ಯದಾ ದೇವಿ ತದಾ ಗಂಗಾಮಹತ್ತಟಂ ।
ಯಮುನಾಂ ಚಂದ್ರಭಾಗಾಂ ಚ ವಿತಸ್ತಾಂ ನರ್ಮದಾಂ ನದೀಂ ॥ ೧೩ ॥
ಗೋದಾವರೀಂ ಭೀಮರಥೀಂ ಕೌಶಿಕೀಂ ಶಾರದಾಂ ಶಿವಾಂ ।
ಚರ್ಮಣ್ವತೀಂ ಸಮಾಸಾದ್ಯ ಸ್ನಾತ್ವಾ ತ್ಯಕ್ತಕ್ರಿಯೋಽಭವತ್ ॥ ೧೪ ॥
ತೀರ್ಥಂ ವ್ಯರ್ಥಂ ತಪೋ ವ್ಯರ್ಥಂ ತೀರ್ಥಯಾತ್ರಾಫಲಂ ಯತಃ ।
ನ ಪ್ರಾಪ್ತಂ ಚ ಮಯಾಽಭೀಷ್ಟಮಟತಾ ಕರ್ಮಭೂಮಿಷು ॥ ೧೫ ॥
ಏತಸ್ಮಿನ್ನಂತರೇ ದೇವಿ ವಾಗುವಾಚಾಽಶರೀರಿಣೀ ।
ಆಶ್ವಾಸಯಂತೀ ಗಣಪಂ ಮಹಾಕಾಲಾಯನೇ ವ್ರಜ ॥ ೧೬ ॥
ಪ್ರಯಾಗಾದ್ಯಾನಿ ತೀರ್ಥಾನಿ ಪೃಥಿವ್ಯಾಂ ಯಾನಿ ಸಂತಿ ವೈ ।
ಸದಾ ಸಿದ್ಧಿಕರಂ ತೇಷಾಂ ಮಹಾಕಾಲಂ ವಿಶಿಷ್ಯತೇ ॥ ೧೭ ॥

೧೨. ಇಂತೆಂದು ಆ ಗಣನಾಯಕನು ಪರ್ವತೋತ್ತಮವೆನಿಸಿದ ಮಹೇಂದ್ರದಲ್ಲಿಯೂ, ಶ್ರೀಶೈಲದಲ್ಲಿಯೂ, ಮಲಯದಲ್ಲಿಯೂ, ವಿಂಧ್ಯಪರ್ವತದಲ್ಲಿಯೂ, ಪಾರಿಯಾತ್ರದಲ್ಲಿಯೂ, ಯಮಾಲಯದಲ್ಲಿಯೂ ತಪಸ್ಸನ್ನಾಚರಿಸಿದನು.

೧೩–೧೪. ದೇವಿ! ಆದರೂ ಎಲ್ಲಿಯೂ ಅವನಿಗೆ ಸಿದ್ಧಿಯು ಲಭಿಸಲಿಲ್ಲ. ಪುನಃ ಪವಿತ್ರವಾದ ಗಂಗಾತೀರವನ್ನೂ, ಯಮುನಾ, ಚಂದ್ರಭಾಗಾ, ವಿತಸ್ತಾ, ನರ್ಮದಾ, ಗೋದಾವರಿ, ಭೀಮರಥಿ, ಕೌಶಿಕಿ, ಪವಿತ್ರವಾದ ಸರಸ್ವತಿ, ಚರ್ಮಣ್ವತಿಯೇ ಮುಂತಾದ ನದಿಗಳನ್ನೂ ಸೇವಿಸಿ ಸ್ನಾನಮಾಡಿ ಕರ್ಮಸನ್ನ್ಯಾಸವನ್ನು ಮಾಡಿದನು.

೧೫. "ತೀರ್ಥಸೇವೆಗಳು ವ್ಯರ್ಥವಾದುವು. ತಪಸ್ಸು ನಿಷ್ಫಲವಾಯಿತು. ತೀರ್ಥಯಾತ್ರೆಗಳ ಮೂಲಕವೂ ಈ ಕರ್ಮಭೂಮಿಯಲ್ಲಿ ತಿರುಗುತ್ತಿರುವ ನನಗೆ ಇಷ್ಟಾರ್ಥಪ್ರಾಪ್ತಿಯುಂಟಾಗಲಿಲ್ಲ" ಎಂದು ಅವನು ಯೋಚಿಸುತ್ತಿದ್ದನು.

೧೬. ಇಷ್ಟರಲ್ಲಿಯೇ ಆ ಗಣನಾಯಕನನ್ನು ಸಮಾಧಾನಗೊಳಿಸುತ್ತ ಒಂದು ಅಶರೀರವಾಣಿಯು ಹೇಳತೊಡಗಿತು. "ಎಲೈ ಗಣನಾಯಕನೆ! ನೀನು ಮಹಾಕಾಲವನಕ್ಕೆ ಹೋಗು.

೧೭. ಈ ಭೂಮಂಡಲದಲ್ಲಿ ಪ್ರಯಾಗವೇ ಮೊದಲಾಗಿ ಎಷ್ಟು ತೀರ್ಥಗಳಿರುವುವೊ, ಅವುಗಳೆಲ್ಲವುಗಳಿಗಿಂತಲೂ ಮಹಾಕಾಲವನವು ಯಾವಾಗಲೂ ಸಿದ್ಧಿಪ್ರದವಾದುದೆಂದು ವಿಶೇಷಕೀರ್ತಿಯನ್ನು ತಾಳಿರುವುದು.

ತತ್ರಾಸ್ತೇ ಸುಮಹಾಪುಣ್ಯಂ ಲಿಂಗಂ ಸರ್ವಾರ್ಥಸಾಧಕಂ ।
ಪಿಶಾಚೇಶ್ವರಸಾನ್ನಿಧ್ಯೇ ತನೂರಾಧಯ ಸತ್ವರಂ ॥ ೧೮ ॥
ಪ್ರಸಾದಾತ್ತಸ್ಯ ಲಿಂಗಸ್ಯ ಪುನರ್ಯಾಸ್ಯಸಿ ಶಾಂಕರಂ ।
ಲೋಕಂ ತೇಜಸ್ವಿನಾಂ ಗಮ್ಯಂ ದುರ್ಲಭಂ ಪಾಪಿನಾಂ ಸದಾ ॥ ೧೯ ॥
ಇತಿ ಶ್ರುತ್ವಾ ತತೋ ವಾಣೀಮಾಕಾಶಸ್ಥಾಂ ಗಣಸ್ತದಾ ।
ಆಜಗಾಮ ಮುದಾ ಯುಕ್ತೋ ಮಹಾಕಾಲವನೋತ್ತಮೇ ॥ ೨೦ ॥
ದದರ್ಶ ತತ್ರ ತಲ್ಲಿಂಗಂ ಸರ್ವಸಂಪತ್ಕರಂ ಶುಭಂ ।
ಪೂಜಯಾಮಾಸ ದೇವೇಶಂ ಭಕ್ತ್ಯಾ ಪರಮಯಾ ಯುತಃ ॥ ೨೧ ॥
ಲಿಂಗಮಧ್ಯಾತ್ತತೋ ವಾಣೀ ನಿಃಸೃತಾ ಪರ್ವತಾತ್ಮಜೇ ।
ಅಹೋ ತುಷ್ಟೋಽಸ್ಮಿ ತೇ ವತ್ಸ ಕಿಂ ಕಾಮಂ ಪ್ರದದಾಮ್ಯಹಂ ॥ ೨೨ ॥

ಢುಂಢ ಉವಾಚ :—

ಯದಿ ತುಷ್ಟೋಽಸಿ ದೇವೇಶ ಶರಣಾಗತವತ್ಸಲ ।
ತ್ವತ್ಪಾದಪಂಕಜೇ ಭೂಯಾದ್ಭಕ್ತಿರ್ಮೇಽವಿಚಲಾ ಸದಾ ॥ ೨೩ ॥

---

೧೮. ಅಲ್ಲಿ ಮಹಾಪುಣ್ಯಪ್ರದವೂ, ಸಕಲಾರ್ಥಸಾಧಕವೂ ಆದ ಮಹಾಲಿಂಗವೊಂದಿರುವುದು. ಪಿಶಾಚೇಶ್ವರನ ಸಮ್ಮುಖದಲ್ಲಿರುವ ಆ ಲಿಂಗವಿರುವಲ್ಲಿಗೆ ಜಾಗ್ರತೆಯಾಗಿ ಹೋಗಿ ಅದನ್ನು ಪೂಜಿಸು.

೧೯. ಆ ಲಿಂಗದ ಪ್ರಭಾವದಿಂದ ನೀನು ಪುನಃ ಮಹೇಶ್ವರನ ಲೋಕವನ್ನು ಸೇರುವೆ. ಪಾಪಿಗಳಿಗೆ ದುರ್ಲಭವೂ, ತೇಜಃಪೂರಿತವೂ ಆದ ಕೈಲಾಸ ಲೋಕವನ್ನು ಈ ಲಿಂಗಪೂಜಾಮಹಿಮೆಯಿಂದ ಸೇರಬಹುದು.''

೨೦. ಇಂತೆಂದು ಆಕಾಶಮಧ್ಯದಿಂದ ನುಡಿದ ಮಾತುಗಳನ್ನು ಕೇಳಿ ಆ ಢುಂಢನಾಮಕನಾದ ಗಣನಾಯಕನು ಮಹಾಸಂತೋಷದಿಂದ ಮಹಾಕಾಲವನಕ್ಷೇತ್ರಕ್ಕೆ ಬಂದು ಸೇರಿದನು.

೨೧. ಅಲ್ಲಿ ಸರ್ವೈಶ್ವರ್ಯಪ್ರದಾಯಕವೂ ಪವಿತ್ರವೂ ಆದ ಮಹಾಲಿಂಗವಿದ್ದುದನ್ನು ಕಂಡು ಮಹೇಶ್ವರನನ್ನು ಅಪರಿಮಿತವಾದ ಭಕ್ತಿಯಿಂದೊಡಗೂಡಿ ಪೂಜಿಸುತ್ತಿದ್ದನು.

೨೨. ಎಲೌ ಪಾರ್ವತಿಯೇ! ಕಾಲಾನುಕ್ರಮದಲ್ಲಿ ಆ ಲಿಂಗದ ಮಧ್ಯದಿಂದ ಒಂದು ಅಶರೀರವಾಣಿಯು, "ಎಲೈ ವತ್ಸನೆ! ನಿನ್ನ ತಪಸ್ಸಿಗೆ ಸಂತುಷ್ಟನಾಗಿರುವೆನು; ನಿನ್ನ ಯಾವ ಅಭೀಷ್ಟವನ್ನು ಪೂರೈಸಲಿ?'' ಎಂದು ನುಡಿಯಿತು.

೨೩. ಢುಂಢನು ಹೇಳುತ್ತಾನೆ:—ದೇವಾಧಿದೇವನೆ! ಶರಣಾಗತವತ್ಸಲನೆ! ನೀನು ನನ್ನಲ್ಲಿ ಸಂತೋಷಗೊಂಡಿರುವೆಯಾದರೆ ಅನುಗಾಲವೂ ನಿನ್ನ ಪಾದಪದ್ಮಗಳಲ್ಲಿಯೇ ನನಗೆ ನಿಶ್ಚಲವಾದ ಭಕ್ತಿಯುಂಟಾಗಲಿ.

ವರಮೇಕಂ ಪ್ರಯಚ್ಛಾಽತು ಯದಿ ತುಷ್ಟೋ ಮಹೇಶ್ವರಃ ॥ ೨೪ ॥
ಯೇ ಚ ತ್ವಾಂ ಮಾನವಾ ದೇವ ಪಶ್ಯಂತಿ ಪರಮೇಶ್ವರ ।
ಪಾಪಾತ್ಸದ್ಯೋ ವಿನಿರ್ಮುಕ್ತಾಸ್ತೇ ಭವಂತು ಮಹೀತಲೇ ॥ ೨೫ ॥
ಘುಂಢಸ್ಯ ಭಾಷಿತಂ ಶ್ರುತ್ವಾ ಲಿಂಗೇನೋಕ್ತಂ ಯಶಸ್ವಿನಿ ।
ಯೇ ಚ ಮಾಂ ಪೂಜಯಿಷ್ಯಂತಿ ಶ್ರದ್ಧಯಾ ಪರಯಾ ಪುನಃ ।
ತೇ ಭವಿಷ್ಯಂತಿ ಸತತಂ ಸದಾ ಪಾತಕವರ್ಜಿತಾಃ ॥ ೨೬ ॥
ಲಪ್ಸ್ಯಂತಿ ತೇ ಪರಾನ್ಕಾಮಾನ್ಭವಿಷ್ಯಂತಿ ನರೋತ್ತಮಾಃ ।
ಪೂಜ್ಯಾಃ ಸರ್ವೇಷು ಲೋಕೇಷು ಸರ್ವಾಽಲಂಕಾರಭೂಷಿತಾಃ ॥ ೨೭ ॥
ಏವಂ ಲಬ್ಧವರೋ ಘುಂಢಃ ಪ್ರಾಂಜಲಿಃ ಪುನರಬ್ರವೀತ್ ।
ಮನ್ನಾಮ್ನಾ ಪ್ರಥಿತಂ ಲಿಂಗಂ ಸಂಭೂಯಾದ್ಭುವನೇ ಸದಾ ॥ ೨೮ ॥
ಏವಮಸ್ತ್ವಿತಿ ಲಿಂಗೇನ ಪ್ರೋಕ್ತಂ ತುಷ್ಟೇನ ಪಾರ್ವತಿ ।
ತದಾ ಪ್ರಭೃತಿ ವಿಖ್ಯಾತೋ ದೇವೋ ಘುಂಢೇಶ್ವರಃ ಪರಃ ॥ ೨೯ ॥
ಯಸ್ಯ ದರ್ಶನಮಾತ್ರೇಣ ಸದಾ ಸಿದ್ಧಿರ್ಭವೇನ್ನೃಣಾಂ ॥ ೩೦ ॥

---

೨೪. ಮಹೇಶ್ವರನೆ! ಸಂತುಷ್ಟನಾದ ನೀನು ಮತ್ತೊಂದು ವರವನ್ನೂ ನನಗೆ ಕೊಡುವವನಾಗು.

೨೫. ಪರಮೇಶ್ವರ! ಯಾವ ಮಾನವರು ನಿನ್ನ ದರ್ಶನವನ್ನು ಮಾಡುವರೊ, ಅವರು ಭೂಲೋಕದಲ್ಲಿ ನಿಮಿಷಮಾತ್ರದಲ್ಲಿಯೇ ತಮ್ಮ ಪಾತಕಗಳಿಂದ ಮುಕ್ತರಾಗುವಂತೆ ಅನುಗ್ರಹಿಸು.''

೨೬. ಪ್ರಿಯೆಯೆ! ಘುಂಢನ ಈ ಮಾತನ್ನು ಕೇಳಿ ಆ ಮಹಾಲಿಂಗವು ಪುನಃ ಇಂತೆಂದಿತು. ''ಯಾರು ನನ್ನನ್ನು ಮತ್ತೆ ಮತ್ತೆ ಶ್ರದ್ಧಾಯುತರಾಗಿ ಪೂಜಿಸುವರೊ, ಅವರು ಸರ್ವಕಾಲದಲ್ಲಿಯೂ ಪಾಪಗಳಿಂದ ವರ್ಜಿತರಾಗುವರು.

೨೭. ಇತರರಿಗೆ ಅಲಭ್ಯಗಳಾದ ಅಭೀಷ್ಟಗಳನ್ನೂ ಅವರು ಪಡೆಯುವರಲ್ಲದೆ ನನ್ನ ಗಣಗಳಲ್ಲಿ ಉತ್ತಮಸ್ಥಾನಗಳಿಗೂ ಅರ್ಹರಾಗುವರು; ಹದಿನಾಲ್ಕು ಲೋಕಗಳಲ್ಲಿಯೂ ಪೂಜ್ಯರಾಗಿ ಸರ್ವಾಭರಣಾಲಂಕೃತರಾಗಿರುವರು.''

೨೮. ಇಂತು ವರವನ್ನು ಪಡೆದ ಘುಂಢನು ಮತ್ತೆ ಕೈಗಳನ್ನು ಮುಗಿದುಕೊಂಡು ಹೇಳಿದನು. ''ಈ ಮಹಾಲಿಂಗವು ಭೂಲೋಕದಲ್ಲಿ ಇನ್ನು ಮೇಲೆ ನನ್ನ ಹೆಸರಿನಿಂದಲೇ ಪ್ರಸಿದ್ಧವಾಗಬೇಕು.''

೨೯. ಪಾರ್ವತಿಯೆ! ಹಾಗೆಯೇ ಆಗಲೆಂದು ಆಗ ಲಿಂಗದೊಳಗಿನಿಂದಲೇ ಮಹೇಶ್ವರನು ಸಂತೋಷದಿಂದ ನುಡಿದನು. ಅಂದಿನಿಂದ ಆ ಮಹಾಲಿಂಗವು ಘುಂಢೇಶ್ವರವೆಂದೇ ಪ್ರಸಿದ್ಧವಾಗಿರುವುದು.

೩೦. ಅದರ ದರ್ಶನವನ್ನು ಮಾಡುವುದರಿಂದಲೇ ಮನುಜರಿಗೆ ಯಾವಾಗಲೂ ಕಾರ್ಯಸಿದ್ಧಿಯುಂಟಾಗುವುದು.

ಭಕ್ತ್ಯಾ ಯೇ ಪೂಜಯಿಷ್ಯಂತಿ ದೇವಂ ಢುಂಢೇಶ್ವರಂ ಪರಂ ।
ಆಜನ್ಮಪ್ರಭವಂ ಪಾಪಂ ತೇಷಾಂ ಯಾಸ್ಯತಿ ತತ್ಕ್ಷಣಾತ್ ॥ ೩೦ ॥
ಸ ಏವ ಸುಕೃತೀ ಲೋಕೇ ಸ ಏವ ಮಮ ವಲ್ಲಭಃ ।
ಯಃ ಪಶ್ಯತಿ ನರೋ ಭಕ್ತ್ಯಾ ಲಿಂಗಂ ಢುಂಢೇಶ್ವರಂ ಪರಂ ॥ ೩೧ ॥
ರಾಜಸೂಯಶತೇನೈವ ಯತ್ಪುಣ್ಯಂ ಚ ಭವಿಷ್ಯತಿ ।
ತತೋ ಭವಿಷ್ಯತ್ಯಧಿಕಂ ಢುಂಢೇಶ್ವರನಿರೀಕ್ಷಣಾತ್ ॥ ೩೨ ॥
ಮಾನಸಂ ವಾಚಿಕಂ ವಾಽಪಿ ಕಾಯಿಕಂ ಗುಹ್ಯಸಂಭವಂ ।
ಪ್ರಕಾಶಂ ವಾಽಪ್ರಕಾಶಂ ಚ ಪ್ರಸಂಗಾದಪಿ ಯತ್ಕೃತಂ ।
ತತ್ಸರ್ವಂ ಯಾಸ್ಯತಿ ಕ್ಷಿಪ್ರಂ ಢುಂಢೇಶ್ವರಸ್ಯ ದರ್ಶನಾತ್ ॥ ೩೪ ॥
ಇತ್ಯುಕ್ತಸ್ತು ಮಯಾ ದೇವಿ ಸ ಢುಂಢೋ ಗಣನಾಯಕಃ ।
ಕೃತೋ ಲಿಂಗಸ್ಯ ಮಾಹಾತ್ಮ್ಯಾದ್ಗತೋ ಲೋಕೇ ಮದೀಯಕೇ ।
ರೇಜೇ ಚ ಗಣಸ್ಯೈಃ ಸಾರ್ಧಂ ಮಮಾಽಭೀಷ್ಟತರೋಽಭವತ್ ॥ ೩೫ ॥

---

೩೦. ಯಾರು ಭಕ್ತಿಯಿಂದ ಸರ್ವಶ್ರೇಷ್ಠವಾದ ಈ ಢುಂಢೇಶ್ವರಮಹಾಲಿಂಗವನ್ನು ಪೂಜಿಸುವರೊ, ಅವರು ಜನ್ಮದಿನದಿಂದ ಮಾಡಿದ ಪಾತಕಗಳೆಲ್ಲವೂ ಕ್ಷಣಮಾತ್ರದಲ್ಲಿ ನಾಶವಾಗುವುವು.

೩೧. ಯಾವನು ಈ ಢುಂಢೇಶ್ವರಲಿಂಗವನ್ನು ಭಕ್ತಿಯಿಂದ ನೋಡುವನೊ, ಅವನೇ ಲೋಕದಲ್ಲಿ ಪರಮ ಪುಣ್ಯವಂತನು. ಅವನೇ ನನಗೆ ಅತ್ಯಂತ ಪ್ರಿಯತಮನಾದವನು.

೩೨. ಒಂದು ನೂರು ರಾಜಸೂಯಯಾಗಗಳನ್ನು ಮಾಡುವುದರಿಂದ ಯಾವ ಫಲವುಂಟೊ, ಅದಕ್ಕೂ ಹೆಚ್ಚಿನ ಫಲವು ಢುಂಢೇಶ್ವರನ ದರ್ಶನಮಾತ್ರದಿಂದಲೇ ಮನುಷ್ಯನಿಗೆ ಲಭಿಸುವುದು.

೩೪. ಮನಸ್ಸಿನಲ್ಲಾಗಲಿ, ಮಾತಿನಲ್ಲಾಗಲಿ, ದೇಹದಿಂದಾಗಲಿ, ಇಂದ್ರಿಯಗಳಿಂದಾಗಲಿ, ಬಹಿರಂಗದಲ್ಲಾಗಲಿ, ಏಕಾಂತದಲ್ಲಾಗಲಿ, ಪ್ರಸಂಗವಶದಿಂದಾಗಲಿ ಮಾಡಿದ ಯಾವ ಪಾಪಗಳಿರುವುವೊ, ಅವುಗಳೆಲ್ಲವೂ ಶೀಘ್ರವಾಗಿಯೇ ಢುಂಢೇಶ್ವರನ ದರ್ಶನದಿಂದ ನಾಶವಾಗುವುವು.

೩೫. ಎಲೌ ದೇವಿಯೇ! ಇಂತೆಂದು ನಾನು ಹೇಳಲು ಆ ಢುಂಢನು ಮತ್ತೆ ಗಣನಾಯಕನಾಗಿ, ಆ ಲಿಂಗದ ಮಾಹಾತ್ಮ್ಯದ ಫಲವಾಗಿ ಪುನಃ ನನ್ನ ಲೋಕಕ್ಕೆ ಬಂದು ಸೇರಿದನು. ಮತ್ತು ಇತರ ಗಣಾಧಿಪತಿಗಳೊಡನೆ ರಾರಾಜಿಸುತ್ತ ನನಗೆ ಪರಮಪ್ರಿಯತಮನಾಗಿದ್ದನು.

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ಶ್ರವಣಾತ್ಕೀರ್ತನಾದ್ವಾಽಪಿ ಮಮ ಲೋಕೇ ಮಹೀಯತೇ ॥ ೩೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಢುಂಢೇಶ್ವರಮಾಹಾತ್ಮ್ಯವರ್ಣನಂ" ನಾಮ ತೃತೀಯೋಽಧ್ಯಾಯಃ**

---

೩೬. ಪ್ರಿಯೆಯೆ! ಇಂತು ಪಾಪನಾಶಕವಾದ ಢುಂಢೇಶ್ವರನ ಮಹಾಮಹಿಮೆಯನ್ನು ನಿನಗೆ ಹೇಳಿರುವೆನು. ಇದನ್ನು ಕೇಳಿದವನೂ, ಹೇಳಿದವನೂ ನನ್ನ ಲೋಕದಲ್ಲಿ ಸಂಪೂಜ್ಯನಾಗುವನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಢುಂಢೇಶ್ವರಮಾಹಾತ್ಮ್ಯವರ್ಣನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಡಮರುಕೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಖ್ಯಾತೋಽವಂತ್ಯಾಂ ಚತುರ್ಥೋಽಸೌ ದೇವೋ ಡಮರುಕೇಶ್ವರಃ ।
ದೃಷ್ಟೇ ಯಸ್ಮಿನ್ ಜಗನ್ನಾಥೇ ಯಾತಿ ಪಾಪಂ ಚ ಸಂಕ್ಷಯಂ ॥ ೧ ॥
ಪುರಾ ವೈವಸ್ವತೇ ಕಲ್ಪೇ ರುರುರ್ನಾಮ ಮಹಾಽಸುರಃ ।
ತಸ್ಯ ಪುತ್ರೋ ಮಹಾಬಾಹುರ್ವಜ್ರೋ ನಾಮ ಮಹಾಬಲಃ ।
ಬಭೂವ ಸ ಮಹಾಕಾಯಸ್ತೀಕ್ಷ್ಣದಂಷ್ಟ್ರೋ ಭಯಂಕರಃ ॥ ೨ ॥
ತೇನ ದೇವಾಃ ಸ್ವಾಽಧಿಕಾರಾಚ್ಚಾಲಿತಾಸ್ತ್ರಿದಶಾಲಯಾತ್ ॥ ೩ ॥
ತತೋ ನೀತಂ ಧನಂ ತೇಷಾಂ ಬ್ರಹ್ಮಾಣಂ ತೇ ತತೋ ಯಯುಃ ।
ಬ್ರಹ್ಮಾಽಪಿ ಭಯಸಂವಿಗ್ನೋ ಬಭೂವಾಕುಲಿತೇಂದ್ರಿಯಃ ॥ ೪ ॥

---

## ಕನ್ನಡದ ಅನುವಾದ

### ಡಮರುಕೇಶ್ವರಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ:—ಅವಂತೀಕ್ಷೇತ್ರದಲ್ಲಿ ಪ್ರಖ್ಯಾತನಾಗಿರುವ ಡಮರುಕೇಶ್ವರನೇ ನಾಲ್ಕನೆಯ ದೈವವು. ಲೋಕೇಶ್ವರನಾದ ಆತನ ದರ್ಶನದಿಂದ ಸಕಲ ಪಾತಕಗಳೂ ನಾಶವಾಗುವುವು.

೨. ಹಿಂದೆ ವೈವಸ್ವತಕಲ್ಪದಲ್ಲಿ ರುರುವೆಂಬ ಹೆಸರಿನ ಮಹಾರಾಕ್ಷಸನೊಬ್ಬನಿದ್ದನು. ಆತನ ಪುತ್ರನೇ ವಜ್ರನೆಂಬುವನು. ಇವನು ಮಹಾಪರಾಕ್ರಮಿಯೂ, ಅತ್ಯಂತಬಲಶಾಲಿಯೂ, ಉನ್ನತದೇಹವುಳ್ಳವನೂ, ಮೊನಚಾದ ಕೋರೆದಾಡೆಗಳುಳ್ಳವನಾಗಿ ಭಯಂಕರನೂ ಆಗಿದ್ದನು.

೩. ದೇವತೆಗಳು ಅವನಿಗೆ ಸೋತು ತಮ್ಮ ರಾಜ್ಯವಾದ ಸ್ವರ್ಗಲೋಕದಿಂದ ಭ್ರಷ್ಟರಾಗಿದ್ದರು.

೪. ಅವರ ಐಶ್ವರ್ಯವನ್ನೆಲ್ಲ ಆ ರಾಕ್ಷಸನು ಕಸಿದುಕೊಂಡಿದ್ದನು. ಆಗ ದೇವತೆಗಳೆಲ್ಲರೂ ಬ್ರಹ್ಮದೇವನನ್ನು ಶರಣುಹೊಕ್ಕರು; ಬ್ರಹ್ಮನೂ ಭಯಾವಿಷ್ಟನಾಗಿ ಚಿತ್ತಸ್ಥೈರ್ಯವಿಲ್ಲದವನಾದನು.

ಜ್ಞಾತ್ವಾವಧ್ಯಂ ಸುರೈಃ ಸಾರ್ಧಂ ಸರ್ವೈಃ ಸೋಽಥ ಮಹಾಬಲಃ ।
ತೇಷು ನಷ್ಟೇಷು ಯೇ ವಿಪ್ರಾ ಯಜ್ವಾನೋಽಥ ತಪಸ್ವಿನಃ ।
ತಾನ್ ಜಘಾನ ಸ ದುಷ್ಟಾತ್ಮಾ ಯೇ ಚಾಽನ್ಯೇ ಧರ್ಮಚಾರಿಣಃ ॥ ೫ ॥
ನಿಃಸ್ವಾಧ್ಯಾಯವಷಟ್ಕಾರಂ ತದಾಽಽಸೀದ್ಧರಣೀತಲಂ ।
ನಷ್ಟಯಜ್ಞೋತ್ಸವಂ ದೇವಿ ಹಾಹಾಭೂತಮಚೇತನಂ ॥ ೬ ॥
ತತಃ ಪ್ರವ್ಯಥಿತಾ ದೇವಾಸ್ತಥಾ ಸರ್ವೇ ಮಹರ್ಷಯಃ ।
ಸಮೇತ್ಯಾಽಮಂತ್ರಯನ್ಮಂತ್ರಂ ವಧಾರ್ಥಂ ತಸ್ಯ ದುರ್ಮತೇಃ ॥ ೭ ॥
ತತಃ ಕಾಯೋಽಭವತ್ಸದ್ಯಃ ಸರ್ವೇಷಾಂ ಪುರತಸ್ತದಾ ।
ತೇಷಾಂ ಚಿಂತಯತಾಂ ದೇವಿ ತೇಜಃಪುಂಜೇನ ಚಾಽಽವೃತಃ ॥ ೮ ॥
ತಸ್ಮಾತ್ತಸ್ಯಾ ಸಮುತ್ಪನ್ನಾ ದಿವ್ಯಾ ಕಮಲಲೋಚನಾ ।
ದ್ಯೋತಯಂತೀ ದಿಶಃ ಸರ್ವಾಃ ಸ್ವತೇಜೋಭಿಃ ಸಮಂತತಃ ॥ ೯ ॥
ಸಾಽಬ್ರವೀತ್ತ್ರಿದಶಾನ್ಸರ್ವಾನ್ಕಸ್ಮಾತ್ಸೃಷ್ಟಾ ಹ್ಯಹಂ ಸುರಾಃ ।
ಯತ್ಕರ್ತವ್ಯಂ ಮಯಾ ಕರ್ಮ ತಚ್ಛೀಘ್ರಂ ಸನ್ನಿವೇದ್ಯತಾಂ ॥ ೧೦ ॥

---

೫. ಸಕಲ ದೇವತೆಗಳೂ ಅವನನ್ನು ಕೊಲ್ಲಲು ಶಕ್ತರಲ್ಲವೆಂಬುದನ್ನು ಆತನು ತಿಳಿದನು. ಮಹಾಬಲಶಾಲಿಯಾದ ಆ ರಾಕ್ಷಸನಾದರೊ, ದೇವತೆಗಳು ಯುದ್ಧದಲ್ಲಿ ಸೋತು ಓಡಿಹೋಗಲು ಅವರ ತೃಪ್ತಿಗಾಗಿ ಯಜ್ಞಗಳನ್ನು ಮಾಡುತ್ತಿದ್ದ ಋತ್ವಿಜರನ್ನೂ, ತಪಸ್ವಿಗಳನ್ನೂ, ಇತರ ಧರ್ಮನಿರತರನ್ನೂ ಕ್ರೂರ ಬುದ್ಧಿಯಿಂದ ಹಿಂಸಿಸುತ್ತಿದ್ದನು.

೬–೭. ದೇವಿಯೆ! ಆಗ ಭೂಮಿಯೆಲ್ಲವೂ ವೇದಾಧ್ಯಯನರಹಿತವೂ, ಯಜ್ಞಾದಿ ಮಹೋತ್ಸವಗಳಿಲ್ಲದುದೂ, ಹಾಹಾಕಾರದಿಂದ ಕೂಡಿದುದೂ, ನಿಶ್ಚೇಷ್ಟವೂ ಆಗಿದ್ದಿತು. ಆಗ ಇವನಿಂದ ಪೀಡಿತರಾಗಿದ್ದ ಸಕಲದೇವತೆಗಳೂ, ಸಮಸ್ತ ಮಹರ್ಷಿಗಳೂ ಒಂದೆಡೆಯಲ್ಲಿ ಕಲೆತು ಆ ದುರಾತ್ಮನ ನಿಗ್ರಹಕ್ಕೆ ತಕ್ಕ ಉಪಾಯವನ್ನು ಚಿಂತಿಸಲು ಮಂತ್ರಾಲೋಚನಾಸಭೆಯನ್ನು ಸೇರಿಸಿದರು.

೮. ಪಾರ್ವತಿಯೆ! ಇಂತು ಚಿಂತಿಸುತ್ತಿರುವ ಅವರೆದುರಿನಲ್ಲಿ ತೇಜಸ್ಸಿನಿಂದ ಆವೃತವಾದ ಒಂದಾನೊಂದು ಬೃಹದಾಕಾರವು ಆ ಕ್ಷಣದಲ್ಲಿಯೆ ಕಾಣಿಸಿಕೊಂಡಿತು.

೯. ಅದರಿಂದ ದಿವ್ಯಳೂ, ಕಮಲನೇತ್ರೆಯೂ, ಸುತ್ತಲೂ ಪಸರಿಸುತ್ತಿರುವ ತನ್ನ ತೇಜಸ್ಸಿನಿಂದ ಹತ್ತು ದಿಕ್ಕುಗಳನ್ನು ಬೆಳಗುತ್ತಿರುವವಳೂ ಆದ ಒಬ್ಬ ಸ್ತ್ರೀರೂಪಶಕ್ತಿಯು ಹೊರಟು ಬಂದಳು.

೧೦. ಆಕೆಯು ಸಕಲದೇವತೆಗಳನ್ನೂ ಕುರಿತು "ಎಲೈ ಸುರರಿರಾ! ನನ್ನನ್ನೇಕೆ ಸೃಷ್ಟಿಮಾಡಿದಿರಿ? ಈಗ ನಾನು ಮಾಡಬೇಕಾಗಿರುವ ಕರ್ತವ್ಯವನ್ನು ತಡೆಮಾಡದೆ ವಿಜ್ಞಾಪಿಸಿಕೊಳ್ಳಿರಿ" ಎಂದು ಹೇಳಿದಳು.

ತತಸ್ತು ತ್ರಿದಶಾಃ ಸರ್ವೇ ಶ್ರುತ್ವಾ ತಸ್ಯಾಃ ಶುಭಾ ಗಿರಃ ।
ಆಚಖ್ಯುಃ ಸಕಲಂ ತಸ್ಯೈ ತದಾ ವಜ್ರಸ್ಯ ಚೇಷ್ಟಿತಂ ॥ ೧೧ ॥
ಶ್ರುತ್ವಾ ಜಹಾಸ ಸಾ ದೇವೀ ಸಾಽಟ್ಟಹಾಸಂ ಮುಹುರ್ಮುಹುಃ ।
ತಸ್ಯಾ ಹಸಂತ್ಯಾ ನಿಃಸಸ್ರುಃ ಕನ್ಯಾಃ ಕಮಲಲೋಚನಾಃ ॥ ೧೨ ॥
ಪಾಶಾಂಕುಶಧರಾ ರೌದ್ರಾ ಜ್ವಾಲಾಮಾಲಾವೃತಾನನಾಃ ।
ಫೇತ್ಕಾರೇಣ ಚ ಸಂನಾದೈಶ್ಚಾಲಯಂತ್ಯಶ್ಚರಾಚರಂ ॥ ೧೩ ॥
ಗತಾಃ ಸರ್ವಾ ಮಹಾದೇವಿ ಯತ್ರ ವಜ್ರೋ ಮಹಾಸುರಃ ।
ಯುದ್ಧಂ ತು ತುಮುಲಂ ಜಾತಂ ತಾಭಿಸ್ತಸ್ಯ ಭಯಾವಹಂ ॥ ೧೪ ॥
ಶಸ್ತ್ರಾಽಸ್ತ್ರೈರ್ಬಹುಧಾ ಮುಕ್ತೈರ್ವ್ಯಾಪ್ತಂ ಚೈವ ದಿಗಂತರಂ ।
ಸನ್ನದ್ಧಾಽಖಿಲಸೈನ್ಯಾಸ್ತೇ ಯುಯುಧುಃ ಸಮರೇ ಭೃಶಂ ॥ ೧೫ ॥
ತತಃ ಪ್ರವವೃತೇ ಯುದ್ಧಂ ತಯಾ ದೇವ್ಯಾ ಸುರದ್ವಿಷಾಂ ।
ತತೋ ಮಾತೃಗಣಂ ಕ್ರುದ್ಧಂ ಮರ್ದಯನ್ತಂ ಮಹಾಽಸುರಾನ್ ॥ ೧೬ ॥

---

೧೧. ಅಭಯಪ್ರದಗಳಾದ ಆಕೆಯ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ಆಕೆಗೆ ವಜ್ರಮಹಾರಾಕ್ಷಸನ ದುಷ್ಕೃತ್ಯಗಳನ್ನೆಲ್ಲ ವಿವರಿಸಿದರು.

೧೨. ಇದನ್ನು ಕೇಳಿ ಆ ದೇವಿಯು ಗಟ್ಟಿಯಾಗಿ ನಕ್ಕಳು. ಮತ್ತೆ ಮತ್ತೆ ಅಟ್ಟಹಾಸವನ್ನು ಮಾಡುತ್ತಿದ್ದ ಆಕೆಯ ನಗೆಯೊಡನೆಯೇ ಆಕೆಯ ಮುಖದಿಂದ ಕಮಲನೇತ್ರೆಯರಾದ ಅನೇಕ ಕನ್ಯೆಯರುದ್ಭವಿಸಿದರು.

೧೩. ಅವರೆಲ್ಲರೂ ಪಾಶಾಂಕುಶಗಳನ್ನು ಹಿಡಿದು ರೌದ್ರಾಕಾರವನ್ನು ತಾಳಿ, ಮುಖಗಳಿಂದ ಬೆಂಕಿಯನ್ನುಗುಳುತ್ತ ಅಟ್ಟಹಾಸಗಳಿಂದಲೂ ಸಿಂಹನಾದಗಳಿಂದಲೂ ಚರಾಚರಗಳಿಂದೊಡಗೂಡಿದ ಜಗತ್ತನ್ನೇ ನಡುಗಿಸುತ್ತಿದ್ದರು.

೧೪. ಮಹಾದೇವಿಯೆ! ಅವರೆಲ್ಲರೂ ವಜ್ರಾಸುರನಿದ್ದಲ್ಲಿಗೆ ಓಡಿದರು. ಅವನಿಗೂ ಅವರಿಗೂ ಭಯಂಕರವಾದ ಮಹಾತುಮುಲಯುದ್ಧವು ಪ್ರಾರಂಭಿಸಿತು.

೧೫. ಎರಡು ಕಡೆಯವರೂ ಅಸಂಖ್ಯಾತಗಳಾಗಿ ಪ್ರಯೋಗಿಸಿದ ಬಹುವಿಧ ಶಸ್ತ್ರಾಸ್ತ್ರಗಳಿಂದ ಆಕಾಶವೆಲ್ಲವೂ ತುಂಬಿಹೋಯಿತು. ರಾಕ್ಷಸರೂ ತಮ್ಮ ಸಕಲ ಸೈನ್ಯಗಳನ್ನೂ ಸಜ್ಜುಗೊಳಿಸಿ ಯುದ್ಧಭೂಮಿಯಲ್ಲಿ ಬಹುವಾಗಿ ಹೋರಾಡಿದರು.

೧೬. ಇಂತು ದೇವಿಗೂ ದೇವದ್ವೇಷಿಗಳಾದ ರಾಕ್ಷಸರಿಗೂ ಯುದ್ಧವುಂಟಾಯಿತು. ಅದರಲ್ಲಿ ಮಾತೃಗಣವು ಕೋಪದಿಂದ ಮಹಾದೈತ್ಯರನ್ನು ನಾಶಮಾಡತೊಡಗಿತು.

**ಪರಾಙ್ಮುಖಂ ಬಲಂ ದೃಷ್ಟ್ವಾ ವಜ್ರೋ ಮಾಯಾಮಥಾಽಸೃಜತ್ ।**
**ತಾಮಸೀಂ ನಾಮ ದುಃಸಾಧ್ಯಾಂ ಯಯಾ ಮುಹ್ಯಂತಿ ಕನ್ಯಕಾಃ ॥ ೧೭ ॥**
**ತಮೋಭೂತೇ ತತಸ್ತಸ್ಮಿನ್ಸಾ ದೇವೀ ಭಯವಿಹ್ವಲಾ ।**
**ತಾಭಿಃ ಸಾರ್ಧಂ ಸಮಾಯಾತಾ ಮಹಾಕಾಲವನೋತ್ತಮಂ ॥ ೧೮ ॥**
**ಕಪಾಲವಾನ್ ಹರೋ ಯತ್ರ ಲಿಂಗಾಕಾರೇಣ ಸಂಸ್ಥಿತಃ ।**
**ಜ್ಞಾತ್ವಾ ಮಾತೃಗಣಂ ನಷ್ಟಂ ತತೋ ಮಾಯಾಪ್ರಭಾವತಃ ॥ ೧೯ ॥**
**ವಜ್ರೋಽಪಿ ತ್ರಿದಶಾನ್ ಜ್ಞಾತ್ವಾ ದೇವ್ಯಾ ಸಾರ್ಧಮುಪೋಷಿತಾನ್ ।**
**ಆಜಗಾಮ ತಮುದ್ದೇಶಂ ಸ್ವಸೈನ್ಯಪರಿವಾರಿತಃ ॥ ೨೦ ॥**
**ಮಹಾಕಾಲವನೇ ದಿವ್ಯೇ ರಥಕೋಟಿಶತೈರ್ವೃತಃ ।**
**ಸಮಂತಾಚ್ಚ ವನಂ ದೇವಿ ತತ್ಕ್ರುದ್ಧೋ ವಾಕ್ಯಮಬ್ರವೀತ್ ॥ ೨೧ ॥**
**ಅದ್ಯ ದೇವಾನ್ ಹನಿಷ್ಯಾಮಿ ತಯಾ ಸಾಕಂ ಸುದುಷ್ಟಯಾ ।**
**ಕನ್ಯಾಭಿಃ ಸಹ ಯಾ ನಷ್ಟಾ ತಮೋ ಮಾಯಾಬಲೇನ ತು ॥ ೨೨ ॥**
**ಏತಸ್ಮಿನ್ನಂತರೇ ಕಾಲೇ ನಾರದೋ ಮುನಿಸತ್ತಮಃ ।**
**ಸೋತ್ಸುಕಸ್ತು ಸಮಾಯಾತೋ ಮಂದರೇ ಚಾರುಕಂದರೇ ॥ ೨೩ ॥**

---

೧೭–೧೮. ತನ್ನ ಬಲವು ಯುದ್ಧವಿಮುಖವಾಗುತ್ತಿರುವುದನ್ನು ಕಂಡು ರಾಕ್ಷಸೇಶ್ವರನಾದ ವಜ್ರನು ಸಹಿಸಲಸಾಧ್ಯವಾದ ತಾಮಸಿಯೆಂಬ ಮಾಯೆಯನ್ನುಂಟುಮಾಡಿದನು. ಇದರಿಂದ ಆ ಶಕ್ತಿಕನ್ಯಕೆಯರು ದಿಗ್ಭ್ರಮೆಯನ್ನು ಹೊಂದಿದರು. ಯುದ್ಧರಂಗವೆಲ್ಲವೂ ಅಂಧಕಾರದಿಂದಾವೃತವಾಗಲು ಆ ದೇವಿಯು ಭಯದಿಂದೊಡಗೂಡಿ ತನ್ನ ಸೈನ್ಯವಾದ ಕನ್ಯಕೆಯರೊಡನೆ ಉತ್ತಮವಾದ ಮಹಾಕಾಲವನಕ್ಷೇತ್ರಕ್ಕೆ ಬಂದು ಸೇರಿದಳು.

೧೯–೨೦. ಅಲ್ಲಿ ಮಹೇಶ್ವರನು ಲಿಂಗಾಕಾರದಿಂದ ನೆಲಸಿರುವನಷ್ಟೆ. ಮಾಯೆಯ ಮಹಿಮೆಯಿಂದ ಮಾತೃಗಣವು ನಷ್ಟವಾದುದನ್ನೂ, ದೇವತೆಗಳೂ ದೇವಿಯೊಡನೆ ಮಹಾಕಾಲವನದಲ್ಲಿರುವುದನ್ನೂ ತಿಳಿದು ವಜ್ರಾಸುರನೂ ತನ್ನ ಮಹಾಸೈನ್ಯದಿಂದ ಪರಿವಾರಿತನಾಗಿ ಆ ಪ್ರದೇಶಕ್ಕೇ ಬಂದನು.

೨೧. ಮಹಾದೇವಿಯೆ! ದಿವ್ಯವಾದ ಮಹಾಕಾಲವನವನ್ನು ನೂರಾರು ಕೋಟಿ ಸಂಖ್ಯೆಯ ತನ್ನ ರಥಸೈನ್ಯದಿಂದ ಸುತ್ತುವರೆದು ಕೋಪದಿಂದ ಇಂತೆಂದು ಹೇಳತೊಡಗಿದನು.

೨೨. ನನ್ನ ತಾಮಸೀಮಾಯೆಯ ಬಲದಿಂದ ಸಮಸ್ತಕನ್ಯೆಯರೊಡನೆ ಯಾವಳು ಓಡಿಹೋದಳೊ, ಅವಳೊಡನೆಯೇ ಸಕಲದೇವತೆಗಳನ್ನೂ ಇಂದೇ ನಾಶಗೊಳಿಸುವೆನು.

೨೩. ಈ ಸಮಯದಲ್ಲಿಯೇ ಮುನಿವರ್ಯನಾದ ನಾರದನು ಕುತೂಹಲ

ಕಥಯಾಮಾಸ ದೇವಾನಾಂ ವಜ್ರಾದ್ದೇವಪರಾಭವಂ ॥ ೨೪ ॥
ಮಹಾಕಾಲವನೇ ದೇವ ತಾಡಿತಾಸ್ತ್ರಿದಶಾಃ ಪ್ರಭೋ ।
ವಜ್ರೇಣ ರುರುಪುತ್ರೇಣ ತಸ್ಮಾದ್ಯಾಹಿ ಮಹೇಶ್ವರ ॥ ೨೫ ॥
ನಾರದಸ್ಯ ವಚಃ ಶ್ರುತ್ವಾ ತತೋಽಹಂ ಪರಮೇಶ್ವರಿ ।
ಮಂದರಾದಾಗತಸ್ತೂರ್ಣಂ ಕೃತ್ವಾ ರೂಪಂ ಸುಭೈರವಂ ॥ ೨೬ ॥
ಸರ್ಪೈರ್ಲಸದ್ಭಿರತ್ಯುಗ್ರೈರ್ಭೀಷಣೈರ್ಗಣಸಂವೃತಃ ।
ಅಗ್ರೇ ದೃಷ್ಟಂ ಮಹತ್ಸೈನ್ಯಂ ದಾನವಾನಾಂ ಭಯಾವಹಂ ॥ ೨೭ ॥
ಮಹಾಕಾಲವನಂ ರುದ್ಧಂ ಸಮಂತಾದಸುರೇಣ ತು ।
ವಜ್ರೇಣ ರುರುಪುತ್ರೇಣ ದುಃಸಹೇನ ಯಶಸ್ವಿನಿ ॥ ೨೮ ॥
ತದಾಗತ್ಯ ಮಯಾ ತಾಡ್ಯ ರೌದ್ರಂ ಡಮರುಕಂ ತಥಾ ।
ಮೋಹಿತಂ ಸಹಸಾ ಸೈನ್ಯಂ ವಜ್ರಸ್ಯೈವ ದುರಾತ್ಮನಃ ॥ ೨೯ ॥

---

ಭರಿತನಾಗಿ ಬರುತ್ತ ಸುಂದರಗಳಾದ ತಪ್ಪಲುಗಳಿಂದ ಕೂಡಿದ್ದ ಮಂದರಪರ್ವತಕ್ಕೆ ಬಂದು ಸೇರಿದನು.

೨೪. ಮತ್ತು ಆ ವಜ್ರಾಸುರನಿಂದ ದೇವತೆಗಳಿಗೆ ಪರಾಭವವಾದ ವಿಷಯವನ್ನು ನಿರೂಪಿಸಿದನು.

೨೫. "ಲೋಕೇಶ್ವರನಾದ ಮಹಾದೇವನೆ! ರುರುರಾಕ್ಷಸನ ಪುತ್ರನಾದ ವಜ್ರನಿಂದ ಪೆಟ್ಟುತಿಂದು ದೇವತೆಗಳು ಮಹಾಕಾಲವನದಲ್ಲಿ ಸಂಕಟಪಡುತ್ತಿರುವರು. ಆದುದರಿಂದ ಅಲ್ಲಿಗೆ ನೀನು ಈಗಲೇ ಹೋಗಬೇಕು."

೨೬. ಪರಮೇಶ್ವರಿಯೆ! ನಾರದನಾಡಿದ ಈ ಮಾತುಗಳನ್ನು ಕೇಳಿ ನಾನು ನಿಮಿಷಮಾತ್ರದಲ್ಲಿಯೇ ನನ್ನ ಭಯಂಕರವಾದ ರೂಪವನ್ನು ತಾಳಿ ಮಂದರ ಪರ್ವತದಿಂದ ಆ ಕ್ಷೇತ್ರಕ್ಕೆ ಪ್ರಾಪ್ತನಾದೆನು.

೨೭. ಹೊಳೆಯುತ್ತಿರುವ ಮಹಾವಿಷಧಾರಿಗಳಾದ ಸರ್ಪಗಳಿಂದಲೂ ಭೀಷಣಗಳಾದ ನನ್ನ ಗಣಪರಿವಾರದಿಂದಲೂ ಕೂಡಿ ಬರುತ್ತಿರುವ ನನ್ನ ಇದಿರಿನಲ್ಲಿಯೇ ಭಯಂಕರವಾದ ಆ ರಾಕ್ಷಸರ ಮಹಾಸೈನ್ಯವು ಕಂಡು ಬಂದಿತು.

೨೮. ಎಲೌ ಪ್ರಿಯಳೆ! ರುರುಪುತ್ರನೂ ಅಜೇಯನೂ ಆದ ವಜ್ರಾಸುರನಿಂದ ಮಹಾಕಾಲವನವೆಲ್ಲವೂ ಸುತ್ತುವರೆಯಲ್ಪಟ್ಟಿದ್ದಿತು.

೨೯. ಆಗ ನಾನು ಭಯೋತ್ಪಾದಕವಾದ ನನ್ನ ಡಮರುಕವನ್ನು ಧ್ವನಿಗೈಯುತ್ತ ಬರುತ್ತಿರಲು ದುರಾತ್ಮನಾದ ಆ ವಜ್ರದೈತ್ಯನ ಸೈನ್ಯವೆಲ್ಲವೂ ಒಮ್ಮೆಯೇ ಮೂರ್ಛೆಗೊಂಡಿತು.

ಡಮರುಕಸ್ಯ ನಾದೇನ ಹ್ಯುತ್ಥಿತಂ ಲಿಂಗಮುತ್ತಮಂ ।
ವಿದಾರ್ಯ ವಸುಧಾಂ ದೇವಿ ಜ್ವಾಲಾಮಾಲಾಕುಲಂ ತದಾ ॥ ೩೦ ॥
ತಸ್ಯ ಲಿಂಗಸ್ಯ ಚ ತದಾ ಮಹಾಜ್ವಾಲಾ ವಿನಿರ್ಗತಾ ।
ಏಕದೇಶಾದ್ವರಾರೋಹೇ ಬ್ರಹ್ಮಾಂಡವ್ಯಾಪಿನೀ ತಥಾ ॥ ೩೧ ॥
ಲಿಂಗಸ್ಯಾಽನ್ಯಪ್ರದೇಶಾತ್ತು ವಾಯುಃ ಸಮಭವನ್ಮಹಾನ್ ॥ ೩೨ ॥
ತೇಜೋಜ್ವಾಲಾಸಮೂಹೇನ ವಾತೇನ ಪ್ರೇರಿತೇನ ಚ ।
ಸಹ ಚಕ್ರೇಣ ತತ್ಸೈನ್ಯಂ ದಗ್ಧಂ ಭಸ್ಮತ್ವಮಾಗತಂ ॥ ೩೩ ॥
ತತೋ ದೇವಗಣಾಃ ಸರ್ವೇ ಹರ್ಷನಿರ್ಭರಮಾನಸಾಃ ।
ನಮಶ್ಚಕ್ರುರ್ಹತೇ ತಸ್ಮಿನ್ ರುರುಪುತ್ರೇ ಮಹಾಬಲೇ ॥ ೩೪ ॥
ಅಸ್ಯ ದೇವಸ್ಯ ಮಾಹಾತ್ಮ್ಯಾದ್ದಗ್ಧೋ ವಜ್ರೋ ಮಹಾಬಲಃ ।
ಸಸೈನ್ಯೋಽಭೂತ್ತತಸ್ತಸ್ಮಾದೇಷ ಡಮರುಕೇಶ್ವರಃ ।
ಖ್ಯಾತಿಂ ಯಾಸ್ಯತಿ ಲೋಕೇಽಸ್ಮಿನ್ಸರ್ವಕಾಮಫಲಪ್ರದಃ ॥ ೩೫ ॥
ಡಮರುಕಸ್ಯ ನಾದೇನ ಜಾತೋ ಯಸ್ಮಾನ್ಮಹೀತಲೇ ।
ಅತಃ ಪೂಜ್ಯವರೋ ದೇವೋ ಭವಿಷ್ಯತಿ ನ ಸಂಶಯಃ ॥ ೩೬ ॥

೩೦. ದೇವಿಯೆ! ಡಮರುಗದ ಧ್ವನಿಯೊಡನೆಯೇ ಭೂಮಿಯಿಂದ ಒಂದು ಲಿಂಗವುದ್ಭವಿಸಿತು. ಭೂಮಿಯನ್ನು ಸೀಳಿಕೊಂಡು ಬಂದ ಆ ಉತ್ತಮಲಿಂಗವು ಮಹಾಜ್ವಾಲೆಗಳಿಂದಾವೃತವಾಗಿದ್ದಿತು.

೩೧–೩೨. ಆ ಲಿಂಗದ ಒಂದು ಪಾರ್ಶ್ವದಿಂದ ಒಂದು ಮಹಾಜ್ವಾಲೆಯು ಹೊರಟು ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿತು. ಮತ್ತೊಂದು ಭಾಗದಿಂದ ಪ್ರಚಂಡ ವಾದ ಬಿರುಗಾಳಿಯೊಂದು ಬೀಸತೊಡಗಿತು.

೩೩. ಈ ಮಹಾವಾತದಿಂದ ಪ್ರೇರಿತಗಳಾದ ತೇಜೋಜ್ವಾಲೆಗಳಿಗೆ ಸಿಕ್ಕಿ ಆ ದೈತ್ಯಸೈನ್ಯವೆಲ್ಲವೂ ಭಸ್ಮೀಭೂತವಾಯಿತು.

೩೪. ರುರುಪುತ್ರನೂ ಮಹಾಬಲಶಾಲಿಯೂ ಆದ ಆ ವಜ್ರದೈತ್ಯನು ಮಡಿಯಲು ಸಕಲದೇವತಾಗಣಗಳೂ ಆನಂದಭರಿತವಾದ ಮನಸ್ಸುಳ್ಳವರಾಗಿ ಆ ಮಹಾಲಿಂಗವನ್ನು ನಮಸ್ಕರಿಸಿದರು.

೩೫. "ಆ ಮಹಾಲಿಂಗದ ಪ್ರಭಾವದಿಂದ ಮಹಾಪರಾಕ್ರಮಿಯಾದ ವಜ್ರನು ನಿಗ್ರಹೀತನಾದನು. ಅವನ ಸೈನ್ಯವೂ ಭಸ್ಮವಾಯಿತು. ಆದುದರಿಂದ ಇದಕ್ಕೆ ಡಮರುಕೇಶ್ವರವೆಂದು ಹೆಸರಾಗಲಿ. ಈ ಹೆಸರಿನಿಂದಲೇ ಈ ಲಿಂಗವು ಭಕ್ತರಿಗೆ ಸಕಲಾಭೀಷ್ಟಗಳನ್ನೀಯುತ್ತ ಪ್ರಖ್ಯಾತಿಯನ್ನು ಪಡೆಯುವುದು."

೩೬. ಎಲೌ ದೇವಿಯೆ! ಡಮರುಕದ ನಾದದಿಂದ ಈ ಲಿಂಗವುದ್ಭವಿಸಿದ ಕಾರಣದಿಂದ ಇದು ಭೂಲೋಕದಲ್ಲಿ ಸಕಲರಿಗೂ ಪರಮಪೂಜ್ಯವಾಗಿರುವುದು, ಇದರಲ್ಲಿ ಸಂದೇಹವಿಲ್ಲ.

ದೃಷ್ಟ್ವಾ ಯೇ ಪೂಜಯಿಷ್ಯಂತಿ ದೇವಂ ಡಮರುಕೇಶ್ವರಂ ।
ತೇ ಸರ್ವೇ ದುಃಖನಿರ್ಮುಕ್ತಾ ಭವಿಷ್ಯಂತಿ ಗತಜ್ವರಾಃ ॥ ೩೭ ॥
ಚಾಂದ್ರಾಯಣಾನಾಂ ವಿಧಿವಚ್ಛತಾನಾಮಥ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಡಮರುಕೇಶ್ವರಪೂಜನಾತ್ ॥ ೩೮ ॥
ಅಸ್ಮಿನ್ ಸ್ಥಾನೇ ಸ್ಥಿತಂ ಲಿಂಗಂ ಭಕ್ತ್ಯಾ ಡಮರುಕೇಶ್ವರಂ ।
ಪ್ರಸಂಗಾದಪಿ ಪಶ್ಯಂತಿ ಹ್ಯಪಿ ಪಾಪಪರಾ ನರಾಃ ।
ತೇಽಪ್ಯವಶ್ಯಂ ಯಾಸ್ಯಂತಿ ರುದ್ರಲೋಕಂ ಸನಾತನಂ ॥ ೩೯ ॥
ಭಕ್ತಾಃ ಸ್ತೋಷ್ಯಂತಿ ಯೇ ಲಿಂಗಂ ಖ್ಯಾತಂ ಡಮರುಕೇಶ್ವರಂ ।
ಮಾನಸೈಃ ಪಾತಕೈರ್ಮುಕ್ತಾ ಯಾಸ್ಯಂತಿ ಪರಮಂ ಪದಂ ॥ ೪೦ ॥
ಅಶ್ವಮೇಧ ಸಹಸ್ರಂ ತು ವಾಜಪೇಯಶತಂ ಭವೇತ್ ।
ಗೋಸಹಸ್ರಫಲಂ ಚಾತ್ರ ದೃಷ್ಟ್ವಾ ಪ್ರಾಪ್ಸ್ಯಂತಿ ಮಾನವಾಃ ॥ ೪೧ ॥
ಯೋ ಯಾತಿ ಸಂಗರೇ ಧೀರೋ ದೃಷ್ಟ್ವಾ ಡಮರುಕೇಶ್ವರಂ ।
ಜಯೇದ್ರಿಪೂನಥಾಂತೇ ಸ ರುದ್ರಲೋಕೇ ಮಹೀಯತೇ ॥ ೪೨ ॥

೩೭. ಯಾರು ದೇವದೇವನಾದ ಈ ಡಮರುಕೇಶ್ವರನನ್ನು ನೋಡಿ ಪೂಜಿಸುವರೊ, ಅವರೆಲ್ಲರೂ ಸಕಲದುಃಖಗಳನ್ನೂ ಕಳೆದುಕೊಳ್ಳುವರಲ್ಲದೆ ದೇಹದ ಅನಾರೋಗ್ಯದಿಂದಲೂ ಮುಕ್ತರಾಗುವರು.

೩೮. ಒಂದು ನೂರುಸಲ ವಿಧ್ಯುಕ್ತರೀತಿಯಲ್ಲಿ ಚಾಂದ್ರಾಯಣವ್ರತವನ್ನಾಚರಿಸಿದವರಿಗೆ ಯಾವ ಫಲವುಂಟೊ, ಅದೇ ಫಲವನ್ನೇ ಒಮ್ಮೆ ಡಮರುಕೇಶ್ವರನ ಪೂಜೆಯಿಂದ ಪಡೆಯಬಹುದು.

೩೯. ಈ ಮಹಾಕ್ಷೇತ್ರದಲ್ಲಿ ನೆಲಸಿರುವ ಡಮರುಕೇಶ್ವರ ಮಹಾಲಿಂಗವನ್ನು ಯಾದೃಚ್ಛಿಕವಾಗಿಯಾದರೂ ಕಂಡು ಯಾರು ಭಕ್ತಿಯಿಂದ ಸೇವಿಸುವರೊ, ಅವರು ಮಹಾಪಾತಕಗಳನ್ನು ಮಾಡಿದವರಾದರೂ ಸನಾತನವಾದ ಕೈಲಾಸವನ್ನು ಖಂಡಿತನಾಗಿಯೂ ಪಡೆಯುವರು.

೪೦. ಪ್ರಸಿದ್ಧವಾದ ಈ ಡಮರುಕೇಶ್ವರ ಮಹಾಲಿಂಗವನ್ನು ಯಾವ ಭಕ್ತರು ಸ್ತೋತ್ರಮಾಡುವರೊ, ಅವರು ಮಾನಸಿಕಗಳಾದ ಪಾತಕಗಳನ್ನು ಕಳೆದುಕೊಂಡು ಪರಮಪದವನ್ನು ಹೊಂದುವರು.

೪೧. ಈ ಲಿಂಗದ ದರ್ಶನದಿಂದ ಮಾನವರು ಒಂದು ಸಾವಿರ ಅಶ್ವಮೇಧ ಯಜ್ಞಗಳ ಫಲವನ್ನೂ, ಒಂದು ನೂರು ವಾಜಪೇಯಗಳ ಪುಣ್ಯವನ್ನೂ, ಒಂದು ಸಾವಿರ ಗೋದಾನಗಳ ಫಲವನ್ನೂ ಒಟ್ಟಿಗೆ ಪಡೆಯುವರು.

೪೨. ಯಾವ ಕ್ಷತ್ರಿಯವೀರನು ಈ ಡಮರುಕೇಶ್ವರನನ್ನು ಸೇವಿಸಿ ಯುದ್ಧರಂಗಕ್ಕೆ ತೆರಳುವನೊ, ಅವನು ಶತ್ರುಗಳನ್ನು ಜಯಿಸುವನು ಮತ್ತು ದೇಹಾಂತ್ಯದಲ್ಲಿ ರುದ್ರಲೋಕದಲ್ಲಿ ಪೂಜ್ಯನಾಗುವನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಸ್ತುತಸ್ತು ಕೀರ್ತಿತಶ್ಚೈವ ಸರ್ವಾಽಭೀಷ್ಟಫಲಪ್ರದಃ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೋ ಚತುರಶೀತಿಲಿಂಗಮಾಹಾತ್ಮ್ಯೇ
"ಡಮರುಕೇಶ್ವರಮಾಹಾತ್ಮ್ಯವರ್ಣನಂ"
ನಾಮ ಚತುರ್ಥೋಽಧ್ಯಾಯಃ

---

೪೩. ಎಲೌ ದೇವಿಯೆ! ಇಂತು ಪ್ರಖ್ಯಾತವೂ, ಪಾತಕನಾಶಕವೂ ಆದ ಡಮರುಕೇಶ್ವರಮಹಿಮೆಯನ್ನು ನಿನಗೆ ಹೇಳಿರುವೆನು. ಇದನ್ನು ಸ್ತೋತ್ರಮಾಡಿದವನೂ, ಪಠನ ಮಾಡಿದವನೂ ಸಕಲ ವಾಂಛಿತಗಳನ್ನೂ ಪಡೆಯುವರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಡಮರುಕೇಶ್ವರಮಾಹಾತ್ಮ್ಯವರ್ಣನ"ವೆಂಬ
ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ಅನಾದಿಕಲ್ಪೇಶ್ವರಮಾಹಾತ್ಮ್ಯವರ್ಣನಂ

ಶ್ರೀ ರುದ್ರ ಉವಾಚ :—

ಅನಾದಿಕಲ್ಪೇಶ್ವರಂ ದೇವಂ ಪಂಚಮಂ ವಿದ್ಧಿ ಪಾರ್ವತಿ ।
ಸರ್ವಪಾಪಹರಂ ನಿತ್ಯಮನಾದಿರ್ಗೀಯತೇ ಸದಾ ॥ ೧ ॥
ಕಲ್ಪಸ್ಯಾಽಽದೌ ಪುರಾ ದೇವಿ ಲಿಂಗಮೇತದ್ವಿನಿರ್ಗತಂ ।
ಯದಾ ನಾಽಗ್ನಿರ್ನ ಚಾಽಽದಿತ್ಯೋ ನ ಭೂಮಿರ್ನ ದಿಶೋ ನ ಖಂ ॥ ೨ ॥
ನ ವಾಯುರ್ನ ಜಲಂ ಚೈವ ನ ದ್ಯೌರ್ನೇಂದುಗ್ರಹಾ ನ ಚ ।
ನ ದೇವಾಸುರಗಂಧರ್ವಾ ನ ಪಿಶಾಚಾ ನ ರಾಕ್ಷಸಾಃ ॥ ೩ ॥
ಅತೋ ಲಿಂಗಾತ್ಸಮುದ್ಭೂತಂ ಜಗತ್ಸ್ಥಾವರಜಂಗಮಂ ।
ಕಾಲೇನ ಚ ಲಯಂ ಯಾತಿ ಲಿಂಗೇಽಸ್ಮಿನ್ಸರ್ವತಾತ್ಮಜೇ ॥ ೪ ॥
ಅಸ್ಮಾಲ್ಲಿಂಗಾತ್ಸಮುದ್ಭೂತಾ ವಂಶಾ ದೇವರ್ಷಿಪೈತೃಕಾಃ ।
ಮನ್ವಂತರಾಣಿ ವಂಶಾನಿ ವಂಶಾನುಚರಿತಂ ಚ ಯತ್ ॥ ೫ ॥

---

## ಕನ್ನಡದ ಅನುವಾದ

### ಅನಾದಿಕಲ್ಪೇಶ್ವರಮಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ:—ಓ ಪಾರ್ವತಿಯೆ! ಐದನೆಯ ಮಹಾ ಲಿಂಗವೇ ಅನಾದಿಕಲ್ಪೇಶ್ವರವೆಂದು ತಿಳಿ. ಈ ಲಿಂಗವು ಸಕಲ ಪಾಪಗಳನ್ನು ಕಳೆಯುವುದೆಂದೂ, ಶಾಶ್ವತವೆಂದೂ, ಅನಾದಿಯೆಂದೂ ಹೇಳಲ್ಪಡುವುದು.

೨. ದೇವಿಯೆ! ಕಲ್ಪದ ಆದಿಯಲ್ಲಿ ಈ ಲಿಂಗವು ಮೊದಲು ಉದ್ಭವ ವಾಯಿತು. ಆಗ ಅಗ್ನಿಯಾಗಲಿ, ಸೂರ್ಯನಾಗಲಿ, ಭೂಮಿಯಾಗಲಿ, ಆಕಾಶ ವಾಗಲಿ ರೂಪುಗೊಂಡಿರಲಿಲ್ಲ.

೩. ಮತ್ತು ವಾಯುಜಲಗಳೂ, ಅಂತರಿಕ್ಷವೂ, ಚಂದ್ರನೂ, ಗ್ರಹಗಳೂ, ದೇವತೆಗಳು, ಅಸುರರು, ಗಂಧರ್ವರು, ಪಿಶಾಚರು, ರಾಕ್ಷಸರು ಮುಂತಾದ ಜಾತಿಭೇದಗಳೂ ಇರಲಿಲ್ಲ.

೪. ಎಲೌ ಪರ್ವತರಾಜಪುತ್ರಿಯೆ! ಈ ಮಹಾಲಿಂಗದಿಂದಲೇ ಸ್ಥಾವರ ಜಂಗಮಗಳಿಂದೊಡಗೂಡಿದ ಪ್ರಪಂಚವೆಲ್ಲವೂ ಉಂಟಾಗಿರುವುದು. ಮತ್ತು ಕಲ್ಪಾಂತ್ಯದಲ್ಲಿ ಇದರಲ್ಲಿಯೇ ಲಯವನ್ನು ಹೊಂದುವುದು.

೫. ಈ ಲಿಂಗದಿಂದಲೇ ದೇವತೆಗಳೂ, ಮಹರ್ಷಿಗಳೂ, ಪಿತೃಗಳೂ, ಅವರ ವಂಶಗಳೂ, ಮನ್ವಂತರಗಳೂ, ಮನುವಂಶಸಂತತಿಗಳೂ, ರಾಜಾಧಿ ರಾಜರ ಲೋಕಕಲ್ಯಾಣಕಾರ್ಯಗಳೂ ಉದ್ಭವಿಸಿರುವುವು.

ಯಾವಂತ್ಯಸ್ಸೃಷ್ಟಯಶ್ಚೈವ ಯಾವಂತಃ ಪ್ರಲಯಾಸ್ತಥಾ ।
ಸಮುದ್ರಾಃ ಪರ್ವತಾಶ್ಚೈವ ನಿಮ್ನಗಾಃ ಕಾನನಾನಿ ಚ ॥ ೬ ॥
ಭೂರ್ಲೋಕಾದ್ಯಾಶ್ಚ ಯೇ ಲೋಕಾಃ ಪಾತಾಲಾಃ ಸಪ್ತ ಯೇ ಸ್ಮೃತಾಃ ।
ಗತಿಸ್ತಥಾಽರ್ಕಸೋಮಾದಿಗ್ರಹರ್ಕ್ಷ ಜ್ಯೋತಿಷಾಮಪಿ ॥ ೭ ॥
ದೃಶ್ಯಾಽದೃಶ್ಯಂ ಚ ತತ್ಸರ್ವಮತೋ ಲಿಂಗಾದ್ವರಾನನೇ ।
ಅನಾದಿಕಾರಣಂ ಯತ್ತದವ್ಯಕ್ತಾಖ್ಯಂ ಮಹರ್ಷಯಃ ।
ಯದಾಹುಃ ಪುರುಷಂ ಸೂಕ್ಷ್ಮಂ ನಿತ್ಯಂ ಸದಸದಾತ್ಮಕಂ ॥ ೮ ॥
ಧ್ರುವಮಕ್ಷಯಮಜರಮಮೇಯಂ ನಾನ್ಯಸಂಶ್ರಯಂ ।
ಗಂಧರೂಪರಸೈರ್ಹೀನಂ ಶಬ್ದಸ್ಪರ್ಶವಿವರ್ಜಿತಂ ॥ ೯ ॥
ಅನಾದ್ಯಂತಂ ಜಗದ್ಯೋನಿಂ ತ್ರಿಗುಣಪ್ರಭವಾಽವ್ಯಯಂ ।
ಅಸಾದೃಶ್ಯಮವಿಜ್ಞೇಯಂ ಲಿಂಗಂ ಪ್ರೋಕ್ತಂ ಮಹರ್ಷಿಭಿಃ ॥ ೧೦ ॥
ಪ್ರಲಯಸ್ಯಾಂತೇ ತೇನೇದಂ ದಿವ್ಯಮಾಸೀದಶೇಷತಃ ॥ ೧೧ ॥

---

೬–೭. ಎಲೌ ಸುಂದರಿಯೆ! ಎಷ್ಟು ಸೃಷ್ಟಿಗಳಿರುವುವೊ, ಪ್ರಳಯಗಳಾಗಿರುವುವೊ, ಸಮುದ್ರಗಳು, ಪರ್ವತಗಳು, ನದಿಗಳು, ಅರಣ್ಯಗಳು, ಭೂಮಿಯೇ ಮೊದಲಾದ ಊರ್ಧ್ವಲೋಕಗಳೂ, ಸ್ಮೃತಿಗಳಲ್ಲಿ ವಿವರಿಸಿರುವ ಏಳು ಪಾತಾಳಗಳೂ, ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳೇ ಮುಂತಾದ ಜ್ಯೋತಿಗಳ ಗತಿಪಥಗಳೂ, ಹೆಚ್ಚೇಕೆ ಹದಿನಾಲ್ಕು ಲೋಕಗಳಲ್ಲಿ ಕಾಣಿಸುವ ಕಾಣಿಸದಿರುವ ಸಮಸ್ತ ವಸ್ತುಗಳೂ ಈ ಲಿಂಗದಿಂದಲೇ ಹೊರಹೊಮ್ಮಿರುವುವು.

೮. ಇದನ್ನೇ ಅನಾದಿಕಾರಣವೆಂದೂ, ಅವ್ಯಕ್ತನಾಮಕವಾದದ್ದೆಂದೂ, ಪುರುಷನೆಂದೂ, ಸೂಕ್ಷ್ಮವೆಂದೂ, ನಿತ್ಯವೆಂದೂ, ಸದಸದಾತ್ಮಕವೆಂದೂ ಮಹರ್ಷಿಗಳು ಹೇಳಿರುವರು.

೯. ಮತ್ತು ಶಾಶ್ವತವೂ, ನಾಶರಹಿತವೂ, ಜರಾವರ್ಜಿತವೂ, ಅಪ್ರಮೇಯವೂ, ಅನ್ಯಾಶ್ರಯರಹಿತವೂ, ಗಂಧರೂಪರಸಾದಿ ಗುಣವಿಹೀನವೂ, ಶಬ್ದಸ್ಪರ್ಶಾದೀಂದ್ರಿಯಗಳಿಗೆ ಸಿಲುಕದುದೂ ಈ ಲಿಂಗವೇ ಆಗಿರುವುದು.

೧೦. ಆದ್ಯಂತರಹಿತವೂ, ಜಗತ್ತಿಗೆ ಬೀಜವೂ, ತ್ರಿಗುಣಗಳಿಗೆ ಉತ್ಪತ್ತಿಸ್ಥಾನವಾದ ಅವ್ಯಕ್ತವೂ, ಅನುಪಮವೂ, ಮನೋವಾಗಗೋಚರವೂ ಆಗಿರುವುದೆಂದು ಈ ಲಿಂಗವನ್ನು ಮಹರ್ಷಿಗಳು ತಿಳಿಸಿರುವರು.

೧೧. ಪ್ರಳಯದ ಕೊನೆಯಲ್ಲಿ ಈ ಲಿಂಗದಿಂದಲೇ ದೇವಲೋಕಗಳು ಮೊದಲುಗೊಂಡು ಸಕಲ ಬ್ರಹ್ಮಾಂಡವೂ ಉಂಟಾಯಿತು.

ಅಹಮುರ್ವ್ಯಾಂ ಪ್ರಬುದ್ಧಸ್ತು ಜಗದಾದಿರನಾದಿಮಾನ್ ।
ಸರ್ವಹೇತುರಚಿಂತ್ಯಾತ್ಮಾ ಪರಃ ಕೋಽಪ್ಯಪರಕ್ರಿಯಃ ॥ ೧೨ ॥
ಪ್ರಕೃತಿಂ ಪುರುಷಂ ಚೈವ ಪ್ರದರ್ಶ್ಯಾಶು ಜಗತ್ಪತಿಃ ।
ಕ್ಷೋಭಯಾಮಾಸ ಯೋಗೇನ ಪರೇಣ ಪರಮೇಶ್ವರಃ ॥ ೧೩ ॥
ಯಥಾ ಸನ್ನಿಧಿಮಾತ್ರೇಣ ಗಂಧಃ ಕ್ಷೋಭಾಯ ಜಾಯತೇ ।
ಮನಸೋ ನೋಪಕರ್ತೃತ್ವಾತ್ತಥಾಽಸೌ ಪರಮೇಶ್ವರಃ ।
ಅನಾದಿಃ ಕಥ್ಯತೇ ದೇವೋ ಜಗತ್ಕಾರಣತತ್ಪರಂ ॥ ೧೪ ॥
ಪ್ರಧಾನಂ ಕ್ಷೋಭ್ಯಮಾಣಂ ತು ತೇನ ಲಿಂಗೇನ ಪಾರ್ವತಿ ।
ಜಾಯತೇ ಭುವನಾಧಾರೋ ಬ್ರಹ್ಮಾಂಡ ಇತಿ ವಿಶ್ರುತಃ ॥ ೧೫ ॥
ಯಸ್ಮಿನ್ನಂಡೇ ಜಗತ್ಸರ್ವಂ ಸದೇವಾಽಸುರಮಾನುಷಂ ।
ಉತ್ಪನ್ನಂ ಚ ವಿಲೀನಂ ಚ ಯಸ್ಯಾಂತೋಽಪಿ ನ ಲಭ್ಯತೇ ॥ ೧೬ ॥
ಸ ಏವ ಕ್ಷೋಭಕಃ ಪೂರ್ವಂ ಸ ಕ್ಷೋಭ್ಯಃ ಪೃಥಿವೀಪತಿಃ ।
ಸ ಸಂಕೋಚವಿಕಾಸಾಭ್ಯಾಂ ಪ್ರಧಾನತ್ವೇ ವ್ಯವಸ್ಥಿತಃ ॥ ೧೭ ॥

---

೧೨. ಆಗ ನಾನು ಜಗತ್ತಿನ ಆದಿಕಾರಣನೂ, ಅನಾದಿಸಿದ್ಧನೂ, ಸಕಲ ಹೇತುವೂ, ಅಚಿಂತ್ಯಮಹಿಮನೂ, ಪರಾತ್ಪರನೂ, ಆಗಿದ್ದರೂ ಅಪರವಾದ ಕರ್ಮದಲ್ಲಿ ಆಸಕ್ತನಾಗಿ ಭೂಮಿಯಲ್ಲಿ ಉದ್ಭವಿಸಿದೆನು.

೧೩. ಜಗನ್ನಾಥನಾದ ಪರಮೇಶ್ವರನು ತನ್ನ ಯೋಗಮಾಯೆಯಿಂದ ಪ್ರಕೃತಿ ಪುರುಷರೆಂಬ ಎರಡು ಪದಾರ್ಥಗಳನ್ನುಂಟುಮಾಡಿ ಕ್ಷೋಭಿಸತೊಡಗಿದನು.

೧೪. ಗಂಧವು ವಸ್ತುತಃ ಸಂಪರ್ಕವಿಲ್ಲದಿದ್ದರೂ ದೇಹದಲ್ಲಿ ಬಳಿಯಲ್ಪಟ್ಟು ಸಾನ್ನಿಧ್ಯಮಾತ್ರದಿಂದಲೇ ಮನಸ್ಸಿನಲ್ಲಿ ಹೇಗೆ ಕ್ಷೋಭೆಯನ್ನುಂಟುಮಾಡುವುದೊ, ಹಾಗೆಯೇ ಪುರುಷರೂಪಿಯಾದ ಪರಮೇಶ್ವರನೂ ಪ್ರಕೃತಿಯಲ್ಲಿ ಕ್ಷೋಭೆಯನ್ನುಂಟುಮಾಡುವನು. ಆದುದರಿಂದಲೇ ಜಗತ್ತಿಗೆ ಪರಂಪರಾಕಾರಣನಾದ ದೇವದೇವನು ಅನಾದಿಯೆಂದು ಕರೆಯಲ್ಪಡುವನು.

೧೫. ಎಲೌ ಪಾರ್ವತಿಯೆ! ಆ ಲಿಂಗದಿಂದ ಕ್ಷೋಭೆಗೊಂಡ ಪ್ರಧಾನವೇ ಲೋಕಗಳಿಗೆ ಆಧಾರವಾಗಿ ನಿಂತು ಬ್ರಹ್ಮಾಂಡವೆಂದು ಕರೆಯಲ್ಪಡುವುದು.

೧೬. ಈ ಅಂಡದಲ್ಲಿಯೇ ದೇವತೆಗಳು, ಮನುಷ್ಯರು, ರಾಕ್ಷಸರು ಮುಂತಾದವರನ್ನೊಳಗೊಂಡ ಸಕಲ ಲೋಕಗಳೂ ಹುಟ್ಟಿ ಲಯಿಸುತ್ತಿರುವುವು. ಇವುಗಳ ಉತ್ಪತ್ತಿಪ್ರಳಯಗಳ ಪ್ರವಾಹಕ್ಕೆ ಕೊನೆಯೇ ಕಾಣುವುದಿಲ್ಲ.

೧೭. ಲೋಕನಾಥನಾದ ಆತನೇ ಮೊದಲು ಕ್ಷೋಭಕನೂ ಬಳಿಕ

ಉತ್ಪನ್ನಃ ಸ ಜಗನ್ನಾಥೋ ನಿರ್ಗುಣೋಽಪಿ ರಜೋಗುಣಃ ।
ಭುಂಜನ್ಪ್ರವರ್ತತೇ ಸರ್ಗಂ ಬ್ರಹ್ಮತ್ವಂ ಸಮುಪಾಗತಃ ॥ ೧೮ ॥
ಬ್ರಹ್ಮತ್ವೇ ಸೃಜತೇ ಲೋಕಾಂಸ್ತತಃ ಸತ್ತ್ವಾತಿರೇಕತಃ ।
ವಿಷ್ಣುತ್ವಮೇತ್ಯ ಧರ್ಮೇಣ ಕರೋತಿ ಪರಿಪಾಲನಂ ॥ ೧೯ ॥
ತತಸ್ತಮೋಗುಣೋದ್ಭಿನ್ನೋ ರುದ್ರತ್ವೇನಾಽಖಿಲಂ ಜಗತ್ ।
ಉಪಸಂಹೃತ್ಯ ವೈ ಶೇತೇ ತ್ರೈಲೋಕ್ಯಂ ತ್ರಿಗುಣೋಽಗುಣಃ ॥ ೨೦ ॥
ಯಥಾ ಪ್ರಾಗ್ವ್ಯಾಪಕಃ ಕ್ಷೇತ್ರೀ ಪಾಲಕೋ ಲಾವಕಸ್ತಥಾ ।
ನ ಸಂಜ್ಞಾ ಯಾತಿ ತದ್ವಚ್ಚ ಬ್ರಹ್ಮವಿಷ್ಣುತ್ವರುದ್ರತಾಃ ॥ ೨೧ ॥
ಬ್ರಹ್ಮತ್ವೇ ಸೃಜತೇ ಲೋಕಾನ್ರುದ್ರತ್ವೇ ಸಂಹರತ್ಯಪಿ ।
ವಿಷ್ಣುತ್ವೇ ಪಾತಿ ತಾನ್ ಸರ್ವಾಂಸ್ತಿಸ್ರೋಽವಸ್ಥಾಃ ಸ್ಮೃತಾಃ ಸದಾ ॥ ೨೨ ॥

---

ಕ್ಷೋಭ್ಯನೂ ಆಗುವನು. ತನ್ನ ಮಹಿಮೆಯ ಸಂಕೋಚವಿಕಾಸಗಳಿಂದ ಪ್ರಧಾನ ವಾಗಿ ತಾನೇ ಕಾಣುತ್ತಿರುವನು.

೧೮. ನಿರ್ಗುಣನಾದರೂ ರಜೋಗುಣಾಧಿಕ್ಯವನ್ನು ಸ್ವೀಕರಿಸಿ ಆ ಜಗನ್ನಾಥನೇ ಹುಟ್ಟಿದಂತೆ ತೋರುವನು. ಗುಣಭೋಕ್ತೃವಾಗಿ ಬ್ರಹ್ಮನೆಂಬ ನಾಮ ರೂಪಗಳನ್ನು ಪಡೆದು ಸೃಷ್ಟಿಯನ್ನುಂಟುಮಾಡುವನು.

೧೯. ಆಗ ಸತ್ತ್ವಗುಣವಿಶಿಷ್ಟನಾಗಿ ಬ್ರಹ್ಮರೂಪದಿಂದ ಲೋಕಗಳನ್ನೆಲ್ಲ ಉಂಟುಮಾಡುವನು. ವಿಷ್ಣುತ್ವವನ್ನು ತಾಳಿ ಧರ್ಮದಿಂದ ಅವುಗಳ ಪರಿಪಾಲನ ವನ್ನೂ ಮಾಡುವನು.

೨೦. ಕಡೆಯಲ್ಲಿ ತಮೋಗುಣಭರಿತನಾಗಿ ರುದ್ರನೆನಿಸಿ ಸಕಲಜಗತ್ತನ್ನೂ ತನ್ನಲ್ಲಿಯೇ ಲಯಗೊಳಿಸಿಕೊಂಡು ಯೋಗನಿದ್ರೆಯಲ್ಲಿ ಮಲಗಿರುವನು. ಇಂತು ನಿರ್ಗುಣವಾದ ಆ ಪರಬ್ರಹ್ಮವೂ ಸಗುಣರೂಪಗಳನ್ನು ತಾಳುವುದು.

೨೧. ಕ್ಷೇತ್ರಕರ್ಷಕನು ಮೊದಲು ವಾಪಕನೆನಿಸಿ ಹೇಗೆ ಬೀಜಗಳನ್ನು ನೆಟ್ಟು ಬಳಿಕ ಅವು ಮೊಳೆತು ಪಕ್ವವಾಗುವವರೆಗೂ ಜಾಗರೂಕತೆಯಿಂದ ಪಾಲಿಸಿ, ಕಡೆಯಲ್ಲಿ ತಾನೇ ಪೈರನ್ನು ಕತ್ತರಿಸಿಹಾಕುವನೊ, ಹಾಗೆಯೇ ಪರಮೇಶ್ವರನೂ ಬ್ರಹ್ಮ, ವಿಷ್ಣು, ರುದ್ರರೆಂಬ ನಾಮಗಳಿಂದ ಕರೆಯಲ್ಪಟ್ಟು ಸೃಷ್ಟಿ, ಸ್ಥಿತಿ ಲಯಗಳನ್ನು ಮಾಡುತ್ತಿರುವನು.

೨೨. ಬ್ರಹ್ಮನಾಗಿ ಸಕಲ ಲೋಕಗಳನ್ನೂ ಸೃಜಿಸುವನು. ಮಹಾವಿಷ್ಣುವಾಗಿ ಪಾಲಿಸುವನು. ರುದ್ರನಾಗಿ ಸಂಹರಿಸುವನು. ಪರಮಾತ್ಮನಿಗೆ ಈ ಮೂರು ಅವಸ್ಥೆಗಳೂ ಅನಾದಿಸಿದ್ಧಗಳೆಂದು ತಿಳಿಯಬೇಕು.

ರಜೋ ಬ್ರಹ್ಮಾ ತಮೋ ರುದ್ರಃ ಸತ್ವಂ ವಿಷ್ಣುರ್ಜಗತ್ಪತಿಃ ।
ಏತ ಏವ ತ್ರಯೋ ವೇದಾ ಏತ ಏವ ತ್ರಯೋ ನರಾಃ ॥ ೨೩ ॥
ಕಲ್ಪೇ ಕಲ್ಪೇ ಹ್ಯನಾದಿಸ್ತು ಗೀಯತೇ ತ್ರಿದಶೈಃ ಸದಾ ।
ಪಿತೃಭಿಶ್ಚ ಗಣೈಃ ಸಿದ್ಧೈರತೋಽನಾದಿಕಲ್ಪೇಶ್ವರಃ ॥ ೨೪ ॥
ನಾಮ ಪ್ರಾಪ್ತಂ ವಿಶಾಲಾಕ್ಷಿ ಮಹಾಕಾಲವನಂ ಸದಾ ।
ಯದಾ ಜಾತೋ ವಿವಾದಸ್ತು ಬ್ರಹ್ಮಣಃ ಕೇಶವಸ್ಯ ಚ ॥ ೨೫ ॥
ಅಹಂ ಜ್ಯಾಯಾನಹಂ ಜ್ಯಾಯಾನ್ಕಲ್ಪಾದೌ ಸೃಷ್ಟಿಕಾರಣಾತ್ ।
ದಿವ್ಯಾ ಸಮುತ್ಥಿತಾ ವಾಣೀ ನಿರಾಲಂಬಾ ತದಾಽಂಬರಾತ್ ॥ ೨೬ ॥
ಮಹಾಕಾಲವನೇ ಲಿಂಗಂ ಕಲ್ಪೇಶ್ವರೇತಿ ಸಂಜ್ಞಕಂ ।
ತಸ್ಯಾದಿಮಥವಾಽಂತಂ ಚ ಯಃ ಪಶ್ಯತಿ ಸ ಚ ಪ್ರಭುಃ ।
ಭವಿಷ್ಯತಿ ನ ಸಂದೇಹೋ ನ ವಾದಃ ಕ್ರಿಯತಾಮಿತಿ ॥ ೨೭ ॥
ತತೋ ದೇವಿ ಗತೋ ಬ್ರಹ್ಮಾ ಊರ್ಧ್ವಲೋಕಮನಂತಕಂ ।
ಅಧೋಲೋಕಂ ಗತೋ ವಿಷ್ಣುಸ್ತೇನ ವಾಕ್ಯೇನ ಸತ್ವರಂ ॥ ೨೮ ॥

---

೨೩. ರಜೋಗುಣವೇ ಬ್ರಹ್ಮನು. ತಮಸ್ಸೇ ರುದ್ರನು. ಸತ್ತ್ವವೇ ಲೋಕನಾಥನಾದ ಮಹಾವಿಷ್ಣುವು. ಈ ತ್ರಿಗುಣಗಳೇ ಮೂರು ವೇದಗಳೂ ಆಗಿರುವುವು. ಇವೇ ತ್ರಿಮೂರ್ತಿಗಳೆನಿಸಿರುವುವು.

೨೪. ಪ್ರತಿಯೊಂದು ಕಲ್ಪದಲ್ಲಿಯೂ ಈ ಮಹಾಲಿಂಗವು ದೇವತೆಗಳಿಗೂ, ಪಿತೃಗಳಿಗೂ, ಗಣಗಳಿಗೂ, ಸಿದ್ಧರಿಗೂ, ಸ್ತೋತ್ರಾರ್ಹವಾದ ಅನಾದಿವಸ್ತುವಾಗಿರುವುದು. ಆದುದರಿಂದ ಇದಕ್ಕೆ ಅನಾದಿಕಲ್ಪೇಶ್ವರವೆಂಬ ಹೆಸರಾಗಿರುವುದು.

೨೫. ಓ ವಿಶಾಲಾಕ್ಷಿಯೆ! ಈ ಹೆಸರಾಂತ ಲಿಂಗವು ಯಾವಾಗಲೂ ಮಹಾಕಾಲವನದಲ್ಲಿರುವುದು. ಹಿಂದೊಮ್ಮೆ ಬ್ರಹ್ಮವಿಷ್ಣುಗಳಲ್ಲಿ ಒಂದು ಮಹತ್ತರವಾದ ವಿವಾದವುಂಟಾಯಿತು.

೨೬. ಕಲ್ಪಾದಿಯಲ್ಲಿ ಸೃಷ್ಟಿಯನ್ನು ಯಾರು ಮಾಡಬೇಕೆಂಬ ವಿಷಯದಲ್ಲಿ "ನಾನು ಹೆಚ್ಚು ತಾನು ಹೆಚ್ಚು" ಎಂದು ಅವರು ವಿವದಿಸುತ್ತಿರಲು ಆಕಾಶದಿಂದ ಒಂದು ಅಶರೀರವಾಣಿಯು ಅವರನ್ನು ಕುರಿತು ಹೀಗೆಂದಿತು.

೨೭. "ಮಹಾಕಾಲವನಕ್ಷೇತ್ರದಲ್ಲಿ ಅನಾದಿಕಲ್ಪೇಶ್ವರವೆಂಬ ಹೆಸರಿನ ಲಿಂಗವೊಂದಿರುವುದು. ಅದರ ಬುಡವನ್ನಾಗಲಿ ತಲೆಯನ್ನಾಗಲಿ ನೋಡಿದವನೇ ನಿಮ್ಮಿಬ್ಬರಲ್ಲಿ ಲೋಕೇಶ್ವರನಾಗುವನು. ಇದರಲ್ಲಿ ಸಂದೇಹವಿಲ್ಲ. ಸುಮ್ಮನೆ ವಾದಗಳನ್ನು ಮಾಡಬೇಡಿರಿ."

೨೮. ದೇವಿಯೆ! ಈ ಮಾತನ್ನು ಕೇಳಿ ಬ್ರಹ್ಮದೇವನು ಶಿರಸ್ಸನ್ನು ನೋಡಲು ಅನಂತಕಾಲದವರೆಗೂ ಮೇಲಕ್ಕೆ ಹೋದನು. ಮಹಾವಿಷ್ಣುವೂ ಸಂಭ್ರಮದಿಂದ ಅಧೋಲೋಕಗಳಿಗಿಳಿದನು.

ನಾದಿರ್ದೃಷ್ಟೋ ನ ಚಾಽಂತಶ್ಚ ಬ್ರಹ್ಮಣಾ ಕೇಶವೇನ ತು ।
ತದಾ ತೌ ವಿಸ್ಮಯಾಪನ್ನೌ ತುಷ್ಟುವಾತೇ ಪರಸ್ಪರಂ ॥ ೨೯ ॥
ವೇದೋಕ್ತಸೂಕ್ತೈರ್ವಿವಿಧೈರಭಿನಂದ್ಯ ಪುರಃಸ್ಥಿತೌ ।
ನಾಽಽದಿರಸ್ತಿ ನ ಚಾಽಂತಶ್ಚ ನ ಚ ಕಲ್ಪೋಽತ್ರ ದೃಶ್ಯತೇ ॥ ೩೦ ॥
ತಸ್ಮಾದನಾದಿಕಲ್ಪೋಽಯಮದ್ಯಪ್ರಭೃತಿ ಭೂತಲೇ ।
ಖ್ಯಾತಿಂ ಯಾಸ್ಯತಿ ನಾಮ್ನಾ ಚ ಮಹಾಕಾಲವನೋತ್ತಮೇ ॥ ೩೧ ॥
ಪಂಚಪಾತಕಸಂಯುಕ್ತೋ ಯೋ ಮರ್ತ್ಯೋ ದುಷ್ಟಮಾನಸಃ ।
ಸೋಽಪಿ ಗಚ್ಛೇಚ್ಛಿವಂ ದೃಷ್ಟ್ವಾಽನಾದಿಕಲ್ಪೇಶ್ವರಂ ಶಿವಂ ॥ ೩೨ ॥
ಶಿವಮಸ್ತು ಸದಾ ತೇಷಾಂ ಯೇಷಾಂ ತ್ವಂ ದರ್ಶನಂ ಗತಃ ।
ತೇ ಧನ್ಯಾ ಮಾನುಷೇ ಲೋಕೇ ಯೇ ತ್ವಾಂ ಶರಣಮಾಗತಾಃ ॥ ೩೩ ॥
ಸರ್ವತೀರ್ಥಾಽಭಿಷೇಕೈಸ್ತು ಯತ್ಪುಣ್ಯಂ ಪ್ರಾಪ್ಯತೇ ನರೈಃ ।
ತತ್ಸರ್ವಮಧಿಕಂ ದೇವ ಲಭ್ಯತೇ ತವ ದರ್ಶನಾತ್ ॥ ೩೪ ॥

---

೨೯. ಆದರೆ ಚತುರ್ಮುಖನು ಲಿಂಗದ ಅಗ್ರವನ್ನಾಗಲಿ ಕೇಶವನು ಅದರ ಬುಡವನ್ನಾಗಲಿ ಕಾಣಲಿಲ್ಲ. ಇಬ್ಬರೂ ವಿಸ್ಮಯಾವಿಷ್ಟರಾಗಿ ಆದ್ಯಂತರಹಿತವಾದ ಆ ಮಹಾಲಿಂಗವನ್ನು ಸ್ತುತಿಸತೊಡಗಿದರು.

೩೦. ಬಹುವಿಧಗಳಾದ ವೇದಸೂಕ್ತಗಳಿಂದ ಹೊಗಳಿದಬಳಿಕ ಅದರ ಮುಂಗಡೆ ನಿಂತು ಇಂತೆಂದರು. "ಈ ಮಹಾಲಿಂಗಕ್ಕೆ ಆದಿಯಾಗಲಿ ಅಂತವಾಗಲಿ ಇಲ್ಲ. ಇಲ್ಲಿ ಕಲ್ಪವೂ ಇಲ್ಲ.

೩೧. ಆದುದರಿಂದ ಇಂದು ಮೊದಲಾಗಿ ಭೂಲೋಕದಲ್ಲಿ ಇದಕ್ಕೆ ಅನಾದಿಕಲ್ಪೇಶ್ವರನೆಂದು ಹೆಸರಾಗಲಿ. ಮಹಾಕಾಲವನವಾದ ಈ ಉತ್ತಮ ಕ್ಷೇತ್ರದಲ್ಲಿ ಇದು ಬಹಳವಾದ ಪ್ರಖ್ಯಾತಿಯನ್ನು ಪಡೆಯುವುದು.

೩೨. ಪಂಚಮಹಾಪಾತಕಗಳನ್ನು ಮಾಡಿ ದುಷ್ಟಬುದ್ಧಿಯುಳ್ಳ ಮನುಷ್ಯನೇ ಆಗಿದ್ದರೂ ಈ ಅನಾದಿಕಲ್ಪೇಶ್ವರಮಹಾಲಿಂಗದ ದರ್ಶನದ ಫಲವಾಗಿ ಶಿವಸಾಯುಜ್ಯವನ್ನು ಪಡೆಯುವನು.

೩೩. ಯಾರಿಗೆ ನೀನು ದರ್ಶನವನ್ನು ಕರುಣಿಸುವೆಯೊ, ಅವರಿಗೆ ಮಂಗಳವುಂಟಾಗಲಿ, ನಿನ್ನನ್ನು ಶರಣುಹೊಂದಿದ ಜನರೇ ಮನುಷ್ಯಲೋಕದಲ್ಲಿ ಪರಮಧನ್ಯರಾಗಿರುವರು.

೩೪. ದೇವದೇವನೆ! ಭೂಲೋಕದ ಸಕಲ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ನರರಿಗೆ ಯಾವ ಪುಣ್ಯವು ಲಭಿಸುವುದೊ, ಅಷ್ಟರ ಮತ್ತು ಅದಕ್ಕೂ ಹೆಚ್ಚಿನ ಪುಣ್ಯವು ನಿನ್ನ ದರ್ಶನದಿಂದ ಲಭಿಸುವುದು.

ತಾವತ್ಪತಂತಿ ಸಂಸಾರೇ ಸುಖದುಃಖಸಮಾಕುಲೇ ।
ಯಾವನ್ನ ದೃಶ್ಯತೇ ದೇವ ಸಂಸಾರಾರ್ಣವತಾರಕಃ ॥ ೩೫ ॥
ಯದಾ ಪಾಪಕ್ಷಯಃ ಪುಂಸಾಂ ತದಾ ತ್ವದ್ದರ್ಶನಂ ಭವೇತ್ ॥ ೩೬ ॥
ಬ್ರಹ್ಮಹಾ ವಾ ಸುರಾಪೋ ವಾ ಸ್ತೇಯೀ ಚ ಗುರುತಲ್ಪಗಃ ।
ತತ್ಸಂಸರ್ಗೀ ನರೋ ಯಸ್ತು ಮಹಾಕಿಲ್ಬಿಷಕಾರಕಃ ।
ಸೋಽಪಿ ಯಾತಿ ಪರಂ ಸ್ಥಾನಂ ಪುನರಾವೃತ್ತಿವರ್ಜಿತಂ ॥ ೩೭ ॥
ಯತ್ಫಲಂ ಚಾಶ್ವಮೇಧೇನ ರಾಜಸೂಯೇನ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ತವ ದೇವ ಸಮರ್ಚನಾತ್ ॥ ೩೮ ॥
ತೇ ನರಾಃ ಪಶವೋ ಲೋಕೇ ತೇಷಾಂ ಜನ್ಮ ನಿರರ್ಥಕಂ ।
ಯೈರ್ನ ದೃಷ್ಟೋ ಮಹಾದೇವೋಽನಾದಿಕಲ್ಪೇಶ್ವರಃ ಶಿವಃ ॥ ೩೯ ॥
ಇತ್ಯುಕ್ತ್ವಾ ಕೇಶವೋ ದೇವೋ ಬ್ರಹ್ಮಾ ಚೈವ ವರಾನನೇ ।
ವಾಮೇ ದಕ್ಷಿಣಭಾಗೇ ಚ ತಸ್ಯ ಲಿಂಗಸ್ಯ ಸಂಸ್ಥಿತೌ ॥ ೪೦ ॥

---

೩೫. ಮಹಾದೇವ! ಸಂಸಾರಸಾಗರದಿಂದ ಉದ್ಧರಿಸುವವನಾದ ನಿನ್ನನ್ನು ಎಲ್ಲಿಯವರೆಗೆ ಮಾನವನು ನೋಡುವುದಿಲ್ಲವೊ, ಅಲ್ಲಿಯವರೆಗೆ ಮಾತ್ರ ಅವನು ಸುಖದುಃಖಮಯವಾದ ಸಂಸಾರದಲ್ಲಿ ತೊಳಲುವನು.

೩೬. ಮನುಷ್ಯರ ಸಕಲ ಪಾಪಗಳು ನಾಶವಾದಮೇಲೆಯೇ ನಿನ್ನ ದರ್ಶನವು ಅವನಿಗೆ ಲಭಿಸುವುದು.

೩೭. ಬ್ರಹ್ಮಘಾತಕನು, ಸುರಾಪಾನನಿರತನು, ಕಳ್ಳನು, ಗುರುದಾರ ರತನು, ಇವರ ಸಹವಾಸದಲ್ಲಿರುವವನು ಮತ್ತು ಇತರ ಮಹಾ ಪಾಪಗಳನ್ನು ಮಾಡಿದವನಾದ ಮನುಷ್ಯನೂ ಸಹ ಪುನರಾವೃತ್ತಿರಹಿತವಾದ ಪರಾತ್ಪರವಾದ ಉತ್ತಮ ಲೋಕವನ್ನು ಪಡೆಯುವನು.

೩೮. ದೇವನೆ! ರಾಜಸೂಯಾಶ್ವಮೇಧಾದಿ ಮಹಾಯಜ್ಞಗಳಿಂದ ಯಾವ ಪುಣ್ಯವು ಲಭಿಸುವುದೊ, ಅದನ್ನೇ ಸುಲಭವಾಗಿ ನಿನ್ನ ಪೂಜೆಯಿಂದ ಮನುಷ್ಯ ಸಾಮಾನ್ಯರೂ ಪಡೆಯಬಹುದು.

೩೯. ಅನಾದಿಕಲ್ಪೇಶ್ವರನೆಂಬ ಈ ಮಹಾಶಿವಲಿಂಗವನ್ನು ಯಾರು ನೋಡಿರುವುದಿಲ್ಲವೊ, ಆ ಮನುಜರೇ ಲೋಕದಲ್ಲಿ ಪಶುಗಳು. ಅವರ ಜನ್ಮಗಳು ನಿಷ್ಪ್ರಯೋಜನಗಳೆಂದು ತಿಳಿಯಬೇಕು.

೪೦. ಎಲೌ ಪಾರ್ವತಿಯೆ! ಇಂತೆಂದು ಬ್ರಹ್ಮದೇವನೂ ಶ್ರೀಮನ್ನಾರಾಯಣನೂ ಆ ಸ್ಥಳವನ್ನು ಬಿಡಲಾರದೆ ಆ ಮಹಾಲಿಂಗದ ಎಡಬಲಪಾರ್ಶ್ವಗಳಲ್ಲಿ ನೆಲಸಿರುವರು

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಯಸ್ಯ ಶ್ರವಣಮಾತ್ರೇಣ ಲಭ್ಯತೇ ಪರಮಂ ಪದಂ ॥ ೪೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಅನಾದಿಕಲ್ಪೇಶ್ವರಮಾಹಾತ್ಮ್ಯವರ್ಣನಂ"
ನಾಮ ಪಂಚಮೋಽಧ್ಯಾಯಃ**

---

೪೧. ದೇವಿ! ಇಂತು ನಿನಗೆ ಪಾಪನಾಶಕವಾದ ಅನಾದಿಕಲ್ಪೇಶ್ವರ ಲಿಂಗದ ಮಾಹಾತ್ಮ್ಯವನ್ನು ನಿರೂಪಿಸಿರುವೆನು. ಇದನ್ನು ಕೇಳುವ ಮಾತ್ರದಿಂದಲೇ ಪರಮಪದವು ಲಭಿಸುವುದು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಅನಾದಿಕಲ್ಪೇಶ್ವರಮಾಹಾತ್ಮ್ಯವರ್ಣನ"ವೆಂಬ
ಐದನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ಷಷ್ಠೋಽಧ್ಯಾಯಃ

### ಸ್ವರ್ಣಜ್ವಾಲೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಮಹಾದೇವ ಉವಾಚ :—**

**ಸ್ವರ್ಣಜ್ವಾಲೇಶ್ವರಂ ಷಷ್ಠಂ ವಿದ್ಧಿ ಚಾತ್ರ ಯಶಸ್ವಿನಿ ।**
**ಯಸ್ಯ ದರ್ಶನಮಾತ್ರೇಣ ಧನವಾನಿಹ ಜಾಯತೇ ॥ ೧ ॥**
**ಪುರಾ ಸಾರ್ಧಂ ತ್ವಯಾ ದೇವಿ ಕ್ರೀಡತೋ ಮಮ ಮಂದಿರೇ ।**
**ಜಾತಂ ವರ್ಷಶತಂ ದಿವ್ಯಂ ಸುರತೈಕರತಸ್ಯ ಚ ॥ ೨ ॥**
**ದೇವೈಃ ಸರ್ವೈಸ್ತತೋ ವಹ್ನಿಃ ಪ್ರೇರಿತೋ ಮಮ ಸನ್ನಿಧೌ ।**
**ತತೋ ವಹ್ನಿಃ ಸಮಾಯಾತಸ್ತ್ರೈಲೋಕ್ಯಾರ್ಥೇ ಯಶಸ್ವಿನಿ ॥ ೩ ॥**
**ತತೋ ವಹ್ನಿಮುಖೇ ಕ್ಷಿಪ್ತಂ ವೀರ್ಯಂ ಸ್ವಂ ಕ್ರೀಡತಾ ಮಯಾ ।**
**ದಹ್ಯಮಾನಸ್ತದಾ ತೇನ ಗಂಗಾಂ ವಹ್ನಿರ್ಜಗಾಮ ಹ ॥ ೪ ॥**
**ತತ್ರ ಗತ್ವಾ ಪ್ರಚಿಕ್ಷೇಪ ವೀರ್ಯಮಗ್ನಿಃ ಸುದುರ್ಧರಂ ।**
**ತಥಾಽಪಿ ದಹ್ಯತೇ ವಹ್ನಿರ್ವೀರ್ಯಶೇಷೇಣ ಪಾರ್ವತಿ ॥ ೫ ॥**

---

### ಕನ್ನಡದ ಅನುವಾದ

#### ಸ್ವರ್ಣಜ್ವಾಲೇಶ್ವರಮಾಹಾತ್ಮ್ಯವರ್ಣನ

೧. ಈಶ್ವರನು ಹೇಳುತ್ತಾನೆ:—ಎಲೌ ಯಶಸ್ವಿನಿಯೆ! ಆರನೆಯ ಮಹಾಲಿಂಗವೇ ಸ್ವರ್ಣಜ್ವಾಲೇಶ್ವರನೆಂದು ತಿಳಿ. ಇದನ್ನು ನೋಡುವುದರಿಂದಲೇ ಮನುಷ್ಯನು ಈ ಲೋಕದ ಐಶ್ವರ್ಯವನ್ನು ಪಡೆಯುವನು.

೨. ದೇವಿಯೆ! ಹಿಂದೆ ನಿನ್ನೊಡನೆ ಸುರತಕೇಳಿಯಲ್ಲಿ ಆಸಕ್ತನಾಗಿ ಮನೆಯಲ್ಲಿಯೇ ನಾನು ನಿಂತಿರಲು ಒಂದುನೂರು ದಿವ್ಯವರ್ಷಗಳು ಕಳೆದುಹೋದುವು.

೩. ಲೋಕಕಲ್ಯಾಣಕಾರ್ಯಕ್ಕಾಗಿ ದೇವತೆಗಳೆಲ್ಲರೂ ಸಭೆಯನ್ನು ಮಾಡಿಕೊಂಡು ಅಗ್ನಿದೇವನನ್ನು ನನ್ನ ಬಳಿಗೆ ಕಳುಹಿಸಿದರು. ಬ್ರಹ್ಮಾಂಡದ ಕಾರ್ಯಾರ್ಥವಾಗಿ ಅಗ್ನಿಯು ನನ್ನಲ್ಲಿಗೆ ಬಂದನು.

೪. ಕ್ರೀಡಾಸಕ್ತನಾಗಿದ್ದ ನನ್ನ ವೀರ್ಯವನ್ನು ನಾನು ಅಗ್ನಿಮುಖದಲ್ಲಿ ಹಾಕಲು ಆತನು ಅದರ ವೇಗವನ್ನು ತಡೆಯಲಾರದೆ ತಾಪಗೊಂಡು ಗಂಗಾನದಿಯ ಬಳಿಗೆ ಬಂದನು.

೫. ಅಲ್ಲಿಗೆ ಹೋಗಿ ತನಗೆ ಧರಿಸಲಸಾಧ್ಯವಾದ ಆ ವೀರ್ಯವನ್ನು ಆ ನದಿಯಲ್ಲಿ ಚೆಲ್ಲಿದನು. ಪಾರ್ವತಿಯೆ! ಆದರೂ ತನ್ನಲ್ಲಿ ನಿಂತ ವೀರ್ಯದ ಕಿಂಚಿಚ್ಛೇಷದಿಂದಲೇ ಈಗಲೂ ಅಗ್ನಿಯು ದಹಿಸುತ್ತಿರುವನು.

ಜಾತಂ ರಮ್ಯಂ ತತೋ ದಿವ್ಯಂ ವೀರ್ಯಶೇಷೇಣ ಕಾಂಚನಂ ।
ಜ್ವಲಂತಂ ಚಾಽತಿತಾಪೇನ ದುಃಸಹಂ ದುರ್ಧರಂ ಪ್ರಿಯೇ ॥ ೬ ॥
ಅಗ್ನೇರಪತ್ಯಂ ಪ್ರಥಮಂ ದೃಷ್ಟ್ವೋತ್ಪನ್ನಂ ತು ಪಾರ್ವತಿ ।
ಲೋಭಾಽಭಿಭೂತಾ ಅಸುರಾಃ ಸುರಾ ಗಂಧರ್ವಕಿನ್ನರಾಃ ॥ ೭ ॥
ಯಕ್ಷಾಃ ಸಾಧ್ಯಾಃ ಪಿಶಾಚಾಶ್ಚ ಮನುಷ್ಯಾ ರಾಕ್ಷಸಾಃ ಖಗಾಃ ।
ಅಭ್ಯಧಾವನ್ಸಸಂರಬ್ಧಾಸ್ತೇ ಸುವರ್ಣಜಿಘೃಕ್ಷವಃ ॥ ೮ ॥
ಸುವರ್ಣಾರ್ಥೇ ಮಹಾನ್ನಾದೋ ಮಮೇದಮಿತಿ ಜಲ್ಪತಾಂ ।
ಅಜ್ಞಾನಾತ್ಸಂಗರಶ್ಚೈವ ಸಂಜಾತಃ ಪ್ರಾಣಹಾರಕಃ ॥ ೯ ॥
ಅಥಾಽಽವರಣಮುಖ್ಯಾನಿ ನಾನಾಪ್ರಹರಣಾನಿ ಚ ।
ಪ್ರಗೃಹ್ಯಾಭ್ಯನದನ್ನಾದೈರ್ದೇವೈಃ ಸಾರ್ಧಂ ಯಶಸ್ವಿನಿ ॥ ೧೦ ॥
ಅಸುರಾ ಅಸುರೈಃ ಸಾರ್ಧಂ ಮನುಷ್ಯಾ ಮಾನುಷೈಃ ಸಹ ।
ಗಂಧರ್ವಾಃ ಸಹ ಗಂಧರ್ವೈಃ ಕಿನ್ನರೈಃ ಸಹ ಕಿನ್ನರಾಃ ॥ ೧೧ ॥

---

೬. ಬಳಿಕ ವೀರ್ಯಶೇಷದಿಂದ ಮನೋಹರವೂ, ದಿವ್ಯವೂ, ಅತಿ ಪ್ರಕಾಶವುಳ್ಳದೂ, ದುಸ್ಸಹವೂ, ಮುಟ್ಟಲಾರದುದೂ ಆದ ಕಾಂಚನವು ಉಂಟಾಯಿತು.

೭. ಎಲೌ ಗಿರಿಕನ್ಯಕೆಯೆ! ಇಂತು ಅಗ್ನಿಯಿಂದ ಮೊದಲು ಹುಟ್ಟಿದ ಸುವರ್ಣವೆಂಬ ಈ ಪದಾರ್ಥವನ್ನು ಕಂಡು ರಾಕ್ಷಸರೂ, ದೇವತೆಗಳೂ, ಗಂಧರ್ವರೂ, ಕಿನ್ನರರೂ ಅದರಲ್ಲಿ ಲೋಭಾವಿಷ್ಟರಾದರು.

೮. ಆ ಸುವರ್ಣವನ್ನು ತೆಗೆದುಕೊಳ್ಳಲೆಳಸಿ ಪರಮಸಂಭ್ರಮದಿಂದ ಆ ಯಕ್ಷರೂ, ಸಾಧ್ಯರೂ, ಪಿಶಾಚರೂ, ಮನುಷ್ಯರೂ, ರಾಕ್ಷಸರೂ, ಪಕ್ಷಿಗಳೂ ಓಡಿಬಂದರು.

೯. ಚಿನ್ನಕ್ಕಾಗಿ "ನನ್ನದು, ನನ್ನದು" ಎಂದು ಕೂಗಾಡುತ್ತಿರುವ ಇವರು ದೊಡ್ಡ ಗದ್ದಲವನ್ನುಂಟುಮಾಡಿದರು. ಅಜ್ಞಾನಿಗಳಾದ ಅವರಲ್ಲಿ ಪ್ರಾಣಾಪಹಾರಕವಾದ ಕಲಹವೇ ಉಂಟಾಯಿತು.

೧೦. ಆಗ ದೇವತೆಗಳು ಅನೇಕ ಶಸ್ತ್ರಾಸ್ತ್ರಗಳನ್ನೂ ಇತರ ಪ್ರಹರಣಗಳನ್ನೂ ತೆಗೆದುಕೊಂಡು ತಮ್ಮತಮ್ಮಲ್ಲಿಯೇ ಸೆಣಸಿ ಸಿಂಹನಾದಗಳನ್ನು ಮಾಡತೊಡಗಿದರು.

೧೧. ಅಸುರರು ಅಸುರರೊಡನೆಯೂ, ಮನುಷ್ಯರು ಮನುಷ್ಯರೊಡನೆಯೂ, ಗಂಧರ್ವರು ಗಂಧರ್ವರೊಡನೆಯೂ, ಕಿನ್ನರರು ಇತರ ಕಿನ್ನರರೊಡನೆಯೂ ಕಾದಾಡಲನುವಾದರು.

ಭೂತೈಃ ಸಾರ್ಧಂ ಚ ಭೂತಾನಿ ರಾಕ್ಷಸೈಃ ಸಹ ರಕ್ಷಸಾಃ ।
ವೇತಾಲೈಃ ಸಹ ವೇತಾಲಾಃ ಯುದ್ಧಂ ಚಕ್ರುಃ ಸುದಾರುಣಂ ॥ ೧೨ ॥
ಪುತ್ರಸ್ತು ಪಿತರಂ ದ್ವೇಷ್ಟಿ ಪಿತಾ ಪುತ್ರಂ ತಥೈವ ಚ ।
ಹಂತಿ ಭಾರ್ಯಾ ಸ್ವಭರ್ತಾರಂ ಭರ್ತಾ ಚ ಸ್ವಾಂ ಪ್ರಿಯಾಂ ತಥಾ ॥ ೧೩ ॥
ಮಾತರಂ ಸ್ವಸುತೋ ಹಂತಿ ಮಾತಾ ಪುತ್ರಂ ಹಿನಸ್ತಿ ಚ ।
ತತೋ ವೈರವಿನಿರ್ಬಂಧಃ ಸಂಜಾತಃ ಸ್ವರ್ಣಕಾರಣಾತ್ ॥ ೧೪ ॥
ಸುರಾಣಾಮಸುರಾಣಾಂ ಚ ಸರ್ವಂ ಘೋರತರಂ ಮಹತ್ ।
ಪ್ರಾಸಾಶ್ಚ ವಿಪುಲಾಸ್ತೀಕ್ಷ್ಣಾ ನ್ಯಪತಂತ ಸಹಸ್ರಶಃ ।
ತೋಮರಾಶ್ಚ ಸುತೀಕ್ಷ್ಣಾಗ್ರಾಃ ಶಸ್ತ್ರಾಣಿ ವಿವಿಧಾನಿ ಚ ॥ ೧೫ ॥
ಸುವರ್ಣಾರ್ಥೇ ಮಹಾದೇವಿ ವಮಂತೋ ರುಧಿರಂ ಬಹು ॥ ೧೬ ॥
ಅಸಿಶಕ್ತಿಗದಾಖುಷ್ಟ್ಯೋ ನಿಪೇತುರ್ಧರಣೀತಲೇ ।
ಛಿನ್ನಾನಿ ಪಟ್ಟಿಶೈಶ್ಚೈವ ಶಿರಾಂಸಿ ಯುಧಿ ದಾರುಣೈಃ ॥ ೧೭ ॥

---

೧೨. ಭೂತಗಳೊಡನೆ ಭೂತಗಳೂ, ರಾಕ್ಷಸರೊಡನೆ ರಾಕ್ಷಸರೂ, ಭೇತಾಳಗಳೊಡನೆ ಭೇತಾಳಗಳೂ ಭಯಂಕರವಾದ ಯುದ್ಧವನ್ನು ಮಾಡತೊಡಗಿದರು.

೧೩. ಮಗನು ತಂದೆಯನ್ನು ದ್ವೇಷಿಸಿದನು. ತಂದೆಯು ಪುತ್ರನಲ್ಲಿ ದ್ವೇಷವನ್ನಿಟ್ಟನು. ಸುವರ್ಣಕ್ಕಾಗಿ ಹೆಂಡತಿಯು ಗಂಡನನ್ನೂ ಗಂಡನು ಹೆಂಡತಿಯನ್ನೂ ಕೊಲ್ಲಲುದ್ಯುಕ್ತರಾದರು.

೧೪. ತಾಯಿಯನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗನೇ ಕೊಂದನು. ತಾಯಿಯೂ ಮಗನನ್ನೇ ಕೊಂದಳು. ಈ ರೀತಿಯಾಗಿ ಸುವರ್ಣಕ್ಕಾಗಿ ಪರಸ್ಪರ ವೈರವು ಬೇರೂರಿತು.

೧೫. ದೇವತೆಗಳಿಗೂ ರಾಕ್ಷಸರಿಗೂ ಭಯಂಕರವೂ ಮಹಾತೀವ್ರತರವೂ ಆದ ಕದನವೇ ಉಂಟಾಯಿತು. ವಿಶಾಲಗಳೂ ಸುತೀಕ್ಷ್ಣಗಳೂ ಆದ ಪ್ರಾಸಾಯುಧಗಳು ಸಾವಿರಗಟ್ಟಲೆಯಾಗಿ ಮಳೆಗರೆದುವು. ಹಾಗೆಯೇ ಮೊನಚಾದ ಅಲುಗುಗಳುಳ್ಳ ತೋಮರಗಳೂ ಇತರ ವಿಧಗಳಾದ ಆಯುಧಗಳೂ ಹಾರಾಡಿದುವು.

೧೬. ಮಹೇಶ್ವರಿಯೆ! ಚಿನ್ನಕ್ಕಾಗಿ ಎಲ್ಲರೂ ಬಹಳ ರಕ್ತವನ್ನು ಕಾರುವವರಾದರು.

೧೭. ಕತ್ತಿಗಳು, ಶಕ್ತ್ಯಾಯುಧಗಳು, ಗದೆಗಳು, ಖುಷ್ಟಿಗಳು ಭೂಮಿಯಲ್ಲಿ ಈಡಾಡಿದುವು. ಕ್ರೂರಗಳಾದ ಪಟ್ಟಿಶಗಳಿಂದ ಯುದ್ಧದಲ್ಲಿ ಅನೇಕರ ತಲೆಗಳು ಕಡಿದುಬಿದ್ದುವು.

ರುಧಿರೇಣಾಽವಲಿಪ್ತಾಂಗಾ ನಿಹತಾಶ್ಚ ಪರಸ್ಪರಂ ।
ಅದ್ರೀಣಾಮಿವ ಕೂಟಾನಿ ಧಾತುಯುಕ್ತಾನಿ ಶೇರತೇ ॥ ೧೮ ॥
ಹಾಹಾಕಾರಃ ಸಮುಭವದ್ಭಯಕೃಚ್ಚ ಸಹಸ್ರಶಃ ।
ಅನ್ಯೋಽನ್ಯಂ ಛಿಂದತಾಂ ಶಸ್ತ್ರೈಃ ಸುವರ್ಣಸ್ಯ ಚ ಕಾರಣಾತ್ ॥ ೧೯ ॥
ಪರಿಘೈರಾಯಸೈಃ ಪಾಶೈರ್ವಜ್ರಕಲ್ಪೈಶ್ಚ ಮುಷ್ಟಿಭಿಃ ।
ನಿಘ್ನತಾಂ ಸಮರೇಽನ್ಯೋಽನ್ಯಂ ಶಬ್ದೋ ದಿವಮಿವಾಽಸ್ಪೃಶತ್ ॥ ೨೦ ॥
ಛಿಂಧಿ ಭಿಂಧಿ ಪ್ರಧಾವ ತ್ವಂ ಪಾತಯಾಧಿಸರೇತಿ ಚ ।
ಅಶ್ರೂಯಂತ ಮಹಾಘೋರಾಃ ಶಬ್ದಾಸ್ತತ್ರ ಸಮಂತತಃ ॥ ೨೧ ॥
ಏವಂ ತು ತುಮುಲೇ ಯುದ್ಧೇ ವರ್ತಮಾನೇ ಮಹಾಭಯೇ ।
ಕಂಪಿತಾ ಧರಣೀ ದೇವಿ ದೇವಾಸ್ತ್ರಸ್ತಾಃ ಸವಾಸವಾಃ ॥ ೨೨ ॥
ಕ್ಷುಭ್ಯಂತಿ ಸ್ಮ ಸಮುದ್ರಾಶ್ಚ ಚೇಲುಶ್ಚ ಧರಣೀಧರಾಃ ।
ತಸ್ಯಾರ್ಥೇ ಪೀಡಿತಂ ಸರ್ವಂ ಸದೇವಾಽಸುರಮಾನುಷಂ ॥ ೨೩ ॥

---

೧೮. ಇಂತು ಪರಸ್ಪರರನ್ನು ಕೊಲ್ಲುತ್ತಿರಲು ಗಾಯಗಳಿಂದ ರಕ್ತವನ್ನು ಸುರಿಸುತ್ತಿರುವ ಹೆಣಗಳು ಧಾತುಗಳೊಡಗೂಡಿದ ಬೆಟ್ಟಗಳ ಕೋಡುಗಲ್ಲುಗಳಂತೆ ನೆಲದಲ್ಲಿ ಬಿದ್ದಿದ್ದುವು.

೧೯. ಈ ಚಿನ್ನವನ್ನು ಪಡೆಯುವ ಕಾರಣದಿಂದ ಅನ್ಯೋನ್ಯವಾಗಿ ಬಡಿದಾಡುತ್ತಿರುವ ಸಾವಿರಾರು ಶಸ್ತ್ರಸಜ್ಜಿತರಾದ ಜನರಲ್ಲಿ ಭಯಂಕರವಾದ ಹಾಹಾಕಾರವುಂಟಾಯಿತು.

೨೦. ಕಬ್ಬಿಣದ ಪರಿಘಗಳು, ಪಾಶಗಳು, ವಜ್ರಸಮಾನಗಳಾದ ಮುಷ್ಟಿಗಳು ಮುಂತಾದುವುಗಳಿಂದ ಯುದ್ಧಭೂಮಿಯಲ್ಲಿ ಅನ್ಯೋನ್ಯ ಸಂಹಾರವನ್ನು ಮಾಡುತ್ತಿರುವ ಜನರ ಕೂಗು ಸ್ವರ್ಗವನ್ನು ಮುಟ್ಟುವಂತಿದ್ದಿತು.

೨೧. "ಕತ್ತರಿಸು ; ಸೀಳು ; ಓಡಿಹೋಗು ; ಬೀಳಿಸು ; ಮುಂದೆ ನಿಲ್ಲು" ಮುಂತಾದ ಮಹಾ ಘೋರಶಬ್ದಗಳೇ ಆ ಪ್ರದೇಶದ ಎಲ್ಲೆಡೆಗಳಲ್ಲಿಯೂ ಕೇಳಿಬರುತ್ತಿದ್ದುವು.

೨೨. ದೇವಿಯೆ! ಇಂತು ಭಯಂಕರವಾದ ತುಮುಲಯುದ್ಧವು ಪ್ರಾರಂಭಿಸಲು ಭೂಮಿಯೆಲ್ಲವೂ ಕಂಪಿಸಿತು. ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ನಡುಗಿದರು.

೨೩. ಸಮುದ್ರಗಳು ಬತ್ತಿಹೋದುವು. ಪರ್ವತಗಳು ಚಲಿಸಿದುವು. ದೇವತೆಗಳು, ರಾಕ್ಷಸರು, ಮನುಷ್ಯರನ್ನೊಳಗೊಂಡ ಬ್ರಹ್ಮಾಂಡವೆಲ್ಲವೂ ಈ ಹಿರಣ್ಯಕ್ಕಾಗಿ ಹೆಣಗುತ್ತಿದ್ದಿತು.

ಋಷಯೋ ವಾಲಖಿಲ್ಯಾದ್ಯಾ ದೇವಾಃ ಶಕ್ರಪುರೋಗಮಾಃ ।
ಬೃಹಸ್ಪತಿಂ ಪುರಸ್ಕೃತ್ಯ ಬ್ರಹ್ಮಲೋಕಂ ಗತಾಃ ಸ್ತ್ರಿಯಃ ॥ ೨೪ ॥
ಸೋಚ್ಛ್ವಾಸಾ ಕಥಯಾಮಾಸುರ್ಜರ್ಜರೀಕೃತಮಸ್ತಕಾಃ ।
ವೃತ್ತಾಂತಂ ವಿಸ್ತರಾತ್ಸರ್ವಂ ಲೋಕತ್ರಯವಿನಾಶನಂ ॥ ೨೫ ॥
ತಚ್ಛ್ರುತ್ವಾ ವಚನಂ ತೇಷಾಂ ಬ್ರಹ್ಮಾ ಲೋಕಪಿತಾಮಹಃ ।
ಚಿಂತಯಿತ್ವಾ ಚ ತೈಃ ಸಾರ್ಧಮಾಜಗಾಮ ಮಮಾಂತಿಕಂ ॥ ೨೬ ॥
ಮಯಾ ಪೃಷ್ಟಾಸ್ತು ತೇ ಸರ್ವೇ ಕೇನೈತೇ ಜರ್ಜರೀಕೃತಾಃ ।
ಶಸ್ತ್ರಾಸ್ತ್ರೈಃ ಪೀಡಿತಾಃ ಕೇನ ಕಸ್ಮಾದ್ವೋ ಭಯಮಾಗತಂ ॥ ೨೭ ॥
ಕಶ್ಚಾಸೌ ದಾನವೋ ದುಷ್ಟೋ ಯೇನ ವೈ ಪೀಡಿತಾ ಭೃಶಂ ।
ತತ್ಸರ್ವಂ ಕಥಿತಂ ದೇವಿ ಮಮಾಗ್ರೇ ಭಯವಿಹ್ವಲೈಃ ॥ ೨೮ ॥
ತೇ ಮಾಮೂಚುಸ್ತದಾ ದೇವಾ ಬ್ರಹ್ಮಾದ್ಯಾ ಭಯಕಾರಣಂ ॥ ೨೯ ॥
ಲೋಭಾತ್ಸರ್ವೇ ವಿನಷ್ಟಾಃ ಸ್ಮ ಸುವರ್ಣಸ್ಯ ಚ ಕಾರಣಾತ್ ।
ಪೀಡಿತಂ ಚ ಜಗತ್ಸರ್ವಂ ಸದೇವಾಸುರಮಾನುಷಂ ॥ ೩೦ ॥

---

೨೪. ಆಗ ಮಹರ್ಷಿಗಳೂ, ವಾಲಖಿಲ್ಯರೂ, ದೇವತೆಗಳೂ, ಸ್ತ್ರೀಯರೂ, ಬೃಹಸ್ಪತ್ಯಾಚಾರ್ಯನನ್ನು ಮುಂದುಮಾಡಿಕೊಂಡು ಬ್ರಹ್ಮಲೋಕಕ್ಕೆ ಬಂದು ಸೇರಿದರು.

೨೫. ಯುದ್ಧದಿಂದ ತಲೆಯಲ್ಲಿ ಪೆಟ್ಟುತಿಂದವರಾಗಿ ನಿಟ್ಟುಸಿರುಗಳಿಂದ ಕೂಡಿ ಮೂರು ಲೋಕಗಳ ವಿನಾಶಕ್ಕೂ ಕಾರಣವಾದ ಈ ವೃತ್ತಾಂತವೆಲ್ಲವನ್ನೂ ವಿಸ್ತಾರವಾಗಿ ಬ್ರಹ್ಮನಲ್ಲಿ ಹೇಳಿಕೊಂಡರು.

೨೬. ಲೋಕಪಿತಾಮಹನಾದ ಬ್ರಹ್ಮದೇವನು ಅವರ ಮಾತುಗಳನ್ನು ಕೇಳಿ ಬಹುಕಾಲ ಅವರೊಡನೆ ಮಂತ್ರಾಲೋಚನೆಯನ್ನು ನಡೆಸಿ ನನ್ನ ಬಳಿಗೆ ಬಂದನು.

೨೭. ನಾನೂ ದೇವತೆಗಳನ್ನು ಪ್ರಶ್ನೆಮಾಡಿದೆನು. "ನೀವೆಲ್ಲರೂ ಯಾರಿಂದ ಇಂತು ಪೆಟ್ಟುತಿಂದಿರುವಿರಿ? ಯಾವನು ನಿಮ್ಮನ್ನು ಶಸ್ತ್ರಾಸ್ತ್ರಗಳಿಂದ ಪೀಡಿಸಿದನು? ಯಾರಿಂದ ನಿಮಗೆ ಈ ಭಯವುಂಟಾಗಿರುವುದು?

೨೮. ನೀವಿಂತು ಬಹುವಾಗಿ ಪೀಡೆಗೊಳಗಾಗಲು ಕಾರಣನಾದ ದುಷ್ಟ ರಾಕ್ಷಸನು ಯಾವನು?" ದೇವಿಯ! ಭಯಭ್ರಾಂತರಾದ ದೇವತೆಗಳು ನಡೆದುದೆಲ್ಲವನ್ನೂ ನನ್ನ ಮುಂದೆ ಬಿನ್ನವಿಸಿದರು.

೨೯. ಬ್ರಹ್ಮಾದಿ ದೇವತೆಗಳು ತಮಗೆ ಒದಗಿಬಂದ ಭಯಕ್ಕೆ ಕಾರಣವನ್ನು ನನಗೆ ತಿಳಿಸಿದರು.

೩೦. "ಲೋಭಬುದ್ಧಿಯುಳ್ಳವರಾಗಿ ಚಿನ್ನದ ಆಶೆಯೆ ಕಾರಣವಾಗಿ

ಇತಿ ತೇಷಾಂ ವಚಃ ಶ್ರುತ್ವಾ ಮಯಾ ಜ್ಞಾತಂ ವರಾನನೇ ।
ತಸ್ಯಾರ್ಥೇ ಕಲಹೋ ಘೋರಃ ಸಂಜಾತೋ ಹಿ ಪರಸ್ಪರಂ ॥ ೩೧ ॥
ಲೋಕತ್ರಯವಿನಾಶಶ್ಚ ಸಹಸಾ ಯೇನ ವೈ ಕೃತಃ ।
ಯಮುದ್ದಿಶ್ಯ ತ್ಯಜೇತ್ಪ್ರಾಣಾಂಸ್ತಮಾಹುರ್ಬ್ರಹ್ಮಘಾತಕಂ ॥ ೩೨ ॥
ಬ್ರಹ್ಮಹಾ ವಹ್ನಿಪುತ್ರಸ್ತು ಯಮುದ್ದಿಶ್ಯ ಮೃತೋ ಜನಃ ।
ಶರೀರಂ ಶಬಲಂ ಚೈವ ಸವಿಕಾರಂ ಭವಿಷ್ಯತಿ ॥ ೩೩ ॥
ಧಾತವೋ ಹಿ ಭವಿಷ್ಯಂತಿ ತಸ್ಯ ದೇಹೇ ನ ಸಂಶಯಃ ।
ಲಪ್ಸ್ಯತೇ ದುಃಖಮತುಲಂ ಛೇದದಾಹಾದಿಘರ್ಷಣಂ ॥ ೩೪ ॥
ಏತಸ್ಮಿನ್ನಂತರೇ ವಹ್ನಿರ್ದೃಷ್ಟ್ವಾ ಪುತ್ರಸ್ಯ ಚೇಷ್ಟಿತಂ ।
ಜ್ಞಾತ್ವಾ ಕ್ರೋಧಂ ಮದೀಯಂ ತು ಭೀತೋ ವೈ ಪುತ್ರಕಾರಣಾತ್ ॥ ೩೫ ॥
ಆಜಗಾಮ ಸುವರ್ಣೇನ ಸಾರ್ಧಂ ದೇವಿ ಮಮಾಂತಿಕಂ ।
ಪ್ರಸಾದಿತೋಽಹಂ ಪುತ್ರಾರ್ಥೇ ವಹ್ನಿನಾ ಹಿ ವರಾನನೇ ॥ ೩೬ ॥

---

ನಾವೆಲ್ಲರೂ ನಾಶವಾದೆವು. ದೇವರಾಕ್ಷಸ ಮಾನವರಿಗೆ ನಿವಾಸಗಳೆನಿಸಿದ ಮೂರು ಲೋಕಗಳೂ ಪೀಡೆಗೊಳಗಾಗಿರುವುವು.''

೩೧. ಮಂಗಳಾಂಗಿಯೆ! ಇಂತೆಂದ ಅವರ ಮಾತನ್ನು ಕೇಳಿ ನಾನು ಸುವರ್ಣಕ್ಕಾಗಿ ತಮ್ಮಲ್ಲಿಯೇ ಭಯಂಕರವಾಗಿ ಕಾದಾಡುತ್ತಿರುವ ಜನರ ಸಮಾಚಾರವನ್ನು ತಿಳಿದೆನು.

೩೨. ಯಾವುದರಿಂದ ನಿಮಿಷಮಾತ್ರದಲ್ಲಿ ಮೂರು ಲೋಕಗಳೂ ನಾಶವಾಗಲನುವಾದುವೊ, ಯಾವುದಕ್ಕಾಗಿ ಜನರು ಪ್ರಾಣಗಳನ್ನು ತ್ಯಜಿಸುವರೊ, ಅದನ್ನು ಬ್ರಹ್ಮಘಾತಕವೆಂದು ಕರೆಯಬೇಕು.

೩೩. ಅಗ್ನಿಸಂಭೂತವಾದ ಚಿನ್ನಕ್ಕಾಗಿಯೇ ಅನೇಕ ಜನರು ಮಡಿದಿರುವುದರಿಂದ ಅದೇ ಬ್ರಹ್ಮಘ್ನವು. ಅದರ ಶರೀರವು ಹಳದಿಯಾಗಿಯೂ ವಿಕಾರಗಳಿಗೆ ನೆಲೆಯೂ ಆಗಲಿ.

೩೪. ಅದರ ದೇಹದಿಂದ ಧಾತುಗಳುಂಟಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಅದಕ್ಕೆ ಕತ್ತರಿಸುವುದು, ಸುಡುವುದು, ಉಜ್ಜುವುದು ಮುಂತಾದುವುಗಳಿಂದ ಅತ್ಯಂತ ದುಃಖವುಂಟಾಗುವುದು.

೩೫. ದೇವಿಯೆ! ಇಷ್ಟರಲ್ಲಿ ಅಗ್ನಿಯು ಸುವರ್ಣದಿಂದುಂಟಾದ ವಿಪರೀತವನ್ನು ಕಂಡು ನನ್ನ ಕೋಪವನ್ನರಿತು ತನ್ನ ಪುತ್ರನಾದ ಸುವರ್ಣಕ್ಕಾಗಿ ಬಹಳ ಭಯಗೊಂಡನು.

೩೬. ಸಾರಸಮುಖಿಯೆ! ಸುವರ್ಣಸಹಿತನಾಗಿ ಅಗ್ನಿಯು ನನ್ನ ಸಮೀಪಕ್ಕೆ ಬಂದು ಪುತ್ರನಿಗಾಗಿ ಮಣಿದು ನನ್ನನ್ನು ಪ್ರಸನ್ನೀಕರಿಸಿಕೊಂಡನು.

ರಕ್ಷಣೀಯಸ್ತ್ವಯಾ ದೇವ ಪುತ್ರೋಽಯಂ ತವ ಶಂಕರ ।
ಭಾಂಡಾಗಾರೇ ಸ್ವಕೀಯೇ ತು ಕ್ರಿಯತಾಂ ಪರಮೇಶ್ವರ ॥ ೩೭ ॥
ತ್ವಯಿ ತುಷ್ಟೇ ಮಹಾದೇವ ಪ್ರಾಪ್ಯೋಽಯಂ ನಾಽತ್ರ ಸಂಶಯಃ ।
ಇಚ್ಛಯಾ ದೀಯತಾಂ ದೇವಿ ಯಸ್ಯ ಕಸ್ಯ ಜನಸ್ಯ ಚ ॥ ೩೮ ॥
ಇತಿ ತಸ್ಯ ವಚಃ ಶ್ರುತ್ವಾ ಪಿತೃದೇವಮುಖಸ್ಯ ಚ ।
ತಥೇತಿ ಚ ಪ್ರತಿಜ್ಞಾತಂ ಮಯಾ ಲೋಭಾದ್ಯಶಸ್ವಿನಿ ॥ ೩೯ ॥
ಸ್ನೇಹಾನ್ಮಯಾ ವಹ್ನಿಪುತ್ರ ಉತ್ಸಂಗೇ ಚ ಕೃತಸ್ತದಾ ।
ಸ್ನೇಹಾದ್ವೈ ಚುಂಬಿತೋ ಮೂರ್ಧ್ನಿ ಪರಿಷ್ವಕ್ತಃ ಪುನಃ ಪುನಃ ॥ ೪೦ ॥
ದದಾಮಿ ತೇ ಮಹಾಭಾಗ ವರಂ ವರಯ ಶೋಭನಂ ।
ಪರಿತುಷ್ಟೋಽಸ್ಮಿ ವೈ ಕಾಮಂ ಯಥೇಷ್ಟಂ ಸಮವಾಪ್ನುಹಿ ॥ ೪೧ ॥
ಅಹಮಾಜ್ಞಾಪಯಾಮಿ ತ್ವಾಂ ಶ್ರೇಯಶ್ಚೈವಮವಾಪ್ಸ್ಯಸಿ ।
ಮಮಾಽಭೀಷ್ಟಕರಂ ಸ್ಥಾನಂ ವಿದ್ಯತೇ ಪೃಥಿವೀತಲೇ ॥ ೪೨ ॥

---

೩೭. "ಶಂಕರನೆ! ದೇವದೇವನೆ! ಇವನು ನಿನ್ನ ಮಗನೇ ಆಗಿರುವನು. ಇವನನ್ನು ನೀನೇ ಕಾಪಾಡಬೇಕು. ಇವನನ್ನು ನಿನ್ನ ಭಂಡಾರದಲ್ಲಿ ಭದ್ರವಾಗಿ ರಿಸಲು ಅನುಜ್ಞೆಯನ್ನು ಕೊಡು.

೩೮. ಮಹಾದೇವನೆ! ನೀನು ಸಂತುಷ್ಟನಾದರೆ ಇವನನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ದೇವಿಯೆ! ಈ ಸ್ವರ್ಣವನ್ನು ನಿನ್ನ ಇಚ್ಛೆಯಂತೆ ಯಾರಿಗಾದರೂ ಕೊಡು."

೩೯. ಪಿತೃಗಳಿಗೂ ದೇವತೆಗಳಿಗೂ ಮುಖವಾದ ಅಗ್ನಿಯಾಡಿದ ಈ ಮಾತುಗಳನ್ನು ಕೇಳಿ ನಾನೂ ಪುತ್ರಮೋಹದಿಂದ ಹಾಗೆಯೇ ಆಗಲೆಂದು ಅಂಗೀಕರಿಸಿದೆನು.

೪೦. ಆ ಅಗ್ನಿಪುತ್ರನನ್ನು ಸ್ನೇಹದಿಂದ ಬರಮಾಡಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿ ಪ್ರೀತಿಯಿಂದ ಚುಂಬಿಸಿ ಮತ್ತೆ ಮತ್ತೆ ಆಲಿಂಗನ ಮಾಡಿಕೊಂಡೆನು.

೪೧. "ಎಲೈ ಮಹಾಭಾಗನೆ! ನಿನಗೆ ಬೇಕಾದ ಶುಭವರವನ್ನು ಕೇಳು; ಕೊಡುವೆನು. ನಿನ್ನಲ್ಲಿ ಸಂತುಷ್ಟನಾಗಿರುವೆನು. ನಿನ್ನ ಸಕಲಾಭಿಲಾಷೆಗಳೂ ಯಥೇಷ್ಟವಾಗಿ ನೆರವೇರಲಿ.

೪೨. ನಾನು ನಿನಗೆ ಆಜ್ಞಾಪಿಸುತ್ತಿರುವೆನು. ನಿನಗೆ ಉತ್ತರೋತ್ತರ ಶ್ರೇಯಸ್ಸುಂಟಾಗುವುದು. ಭೂಮಂಡಲದಲ್ಲಿ ನನಗೆ ಪ್ರಿಯವೂ ಸರ್ವಾಭೀಷ್ಟದಾಯಕವೂ ಆದ ಸ್ಥಾನವೊಂದಿರುವುದು.

ಅಕ್ಷಯಂ ಪ್ರಲಯೇ ಪುತ್ರ ಮಹಾಕಾಲವನಂ ಶುಭಂ ।
ತತ್ರೈವ ವಿದ್ಯತೇ ಲಿಂಗಂ ಕರ್ಕೋಟಕಸ್ಯ ದಕ್ಷಿಣೇ ॥ ೪೩ ॥
ಮಹಾಪಾಪಹರಂ ಪುತ್ರ ದರ್ಶನಾದ್ದೀಪ್ತಿದಾಯಕಂ ।
ತಸ್ಯ ದರ್ಶನಮಾತ್ರೇಣ ಕೃತಕೃತ್ಯೋ ಭವಿಷ್ಯಸಿ ॥ ೪೪ ॥
ಪುಣ್ಯಶ್ಚೈವ ಪವಿತ್ರೇಣ ದುರ್ಲಭಶ್ಚ ಭವಿಷ್ಯತಿ ।
ಅಕುಲೀನಃ ಕುಲೀನಸ್ತು ಸಮಲೋ ನಿರ್ಮಲೋ ನರಃ ॥ ೪೫ ॥
ವಿರೂಪೋ ರೂಪವಾಂಶ್ಚೈವ ತ್ವತ್ಪ್ರಸಾದಾದ್ಭವಿಷ್ಯತಿ ।
ದಾನಾನಿ ಪರಿಪೂರ್ಣಾನಿ ವ್ರತಾನಿ ನಿಯಮಾಸ್ತಥಾ ॥ ೪೬ ॥
ಯಜ್ಞಾಶ್ಚೈವೋಪವಾಸಾಶ್ಚ ತೀರ್ಥಂ ಪಿಂಡಾದಿಕಂ ತ್ವಯಾ ।
ಸುಸಂಪೂರ್ಣಾ ಭವಿಷ್ಯಂತಿ ತವ ದಾನೇನ ಸುವ್ರತ ॥ ೪೭ ॥
ಸರ್ವೇಷಾಂ ಚೈವ ರತ್ನಾನಾಮಾಧಿಪತ್ಯಂ ಕರಿಷ್ಯಸಿ ।
ಪ್ರಿಯಾಭೀಷ್ಟೋ ಹಿ ದೇವಾನಾಂ ಲೋಕಾನಾಂ ಚ ಭವಿಷ್ಯಸಿ ॥ ೪೮ ॥

---

೪೩. ಪವಿತ್ರವಾದ ಈ ಮಹಾಕಾಲವನಕ್ಷೇತ್ರವು ಪ್ರಳಯದಲ್ಲಿಯೂ ನಾಶವಾಗುವುದಿಲ್ಲ. ಅಲ್ಲಿಯೇ ಕರ್ಕೋಟಕೇಶ್ವರನಿಗೆ ದಕ್ಷಿಣದಲ್ಲಿ ಒಂದು ಲಿಂಗವಿರುವುದು.

೪೪. ಪುತ್ರ! ಅದು ಮಹಾಪಾಪಗಳನ್ನೂ ಪರಿಹರಿಸುವುದು. ನೋಡಿದವರಿಗೆ ತೇಜಸ್ಸನ್ನುಂಟುಮಾಡುವುದು. ಅದರ ದರ್ಶನದಿಂದಲೇ ನೀನು ಕೃತಕೃತ್ಯನಾಗುವೆ.

೪೫. ಪವಿತ್ರನಾದ ನಿನಗೆ ದುರ್ಲಭವಾದ ಪುಣ್ಯವೂ ಲಭಿಸುವುದು. ನಿನ್ನಿಂದ ನೀಚಕುಲದಲ್ಲಿ ಹುಟ್ಟಿದವನೂ ಕುಲೀನನಾಗುವನು. ಮಲಸಹಿತನಾದವನು ಪರಿಶುದ್ಧನಾಗುವನು.

೪೬. ರೂಪಹೀನನಾದರೂ ಸುಂದರನೆನಿಸುವನು. ನಿನ್ನ ಅನುಗ್ರಹವೇ ಅಂತಹುದಾಗಿರುವುದು. ದಾನಗಳೂ, ವ್ರತಗಳೂ, ನಿಯಮಗಳೂ ನಿನ್ನಿಂದಲೇ ಪೂರ್ಣಫಲದಾಯಕಗಳೆನಿಸುವುವು.

೪೭. ಯಜ್ಞಗಳು, ಉಪವಾಸಗಳು, ತೀರ್ಥಸೇವೆಗಳು, ಪಿಂಡದಾನಾದಿ ಪಿತೃಕಾರ್ಯಗಳೂ ನಿನ್ನ (ಸುವರ್ಣದ) ದಾನದಿಂದಲೇ ಪರಿಪೂರ್ಣಗಳಾಗವುವು.

೪೮. ಸಕಲ ರತ್ನಗಳಲ್ಲಿಯೂ ನೀನು ಆಧಿಪತ್ಯವನ್ನು ಪಡೆಯುವೆ. ದೇವತೆಗಳಿಗೂ, ಸಕಲ ಲೋಕ ನಿವಾಸಿಗಳಿಗೂ ನೀನು ಪ್ರಿಯನೂ ಇಷ್ಟಪ್ರದನೂ ಆಗುವೆ.”

ಇತ್ಯುಕ್ತೋಽಸೌ ಮಹಾದೇವಿ ದಿವ್ಯರೂಪೋ ವರಾನನೇ ।
ಜ್ವಾಲಾಮಾಲಾವೃತಃ ಪುಣ್ಯೋ ನಿರ್ಮಲೋ ಹಿ ಬಭೂವ ಹ ॥ ೪೯ ॥
ಲಿಂಗೇನೋಕ್ತಃ ಸುವರ್ಣಸ್ತು ದಿಷ್ಟ್ಯಾ ದಿಷ್ಟ್ಯೇತಿ ಕಾಂಚನಂ ।
ಅದ್ಯ ಪ್ರಭೃತಿ ನಾಮ್ನಾ ವೈ ಖ್ಯಾತಿಂ ಯಾಸ್ಯಸಿ ಭೂತಲೇ ॥ ೫೦ ॥
ಸ್ಥಾತವ್ಯಂ ಮತ್ಸಮೀಪೇ ತು ವಹ್ನಿ ಪುತ್ರ ತ್ವಯಾ ಸದಾ ।
ಅಕ್ಷಯಾ ಭವಿತಾ ಕೀರ್ತಿಸ್ತ್ವದೀಯಾ ಭುವನತ್ರಯೇ ॥ ೫೧ ॥
ಇತ್ಯುಕ್ತೋ ದೇವಿ ಲಿಂಗೇನ ವಹ್ನಿಪುತ್ರೋಽತಿನಿರ್ಮಲಃ ।
ಜ್ವಾಲಾಽಽವೃತತನುರ್ಜಾತಃ ಸೂರ್ಯಕೋಟಿಸಮಪ್ರಭಃ ॥ ೫೨ ॥
ದೀಪ್ತಿರ್ಲಬ್ಧಾ ಸುವರ್ಣೇನ ಜ್ವಾಲಾಮಾಲಾಕುಲಾ ತದಾ ।
ಅತೋ ದೇವಿ ಸುವಿಖ್ಯಾತಃ ಸ್ವರ್ಣಜ್ವಾಲೇಶ್ವರಃ ಶಿವಃ ॥ ೫೩ ॥
ಯಸ್ತಮರ್ಚಯತೇ ಭಕ್ತ್ಯಾ ಸ್ವರ್ಣಜ್ವಾಲೇಶ್ವರಂ ಶಿವಂ ।
ತಸ್ಯ ಸಂಜಾಯತೇ ದೇವಿ ವಿಜಯೋ ರಾಜ್ಯಮೂರ್ಜಿತಂ ।
ಐಶ್ವರ್ಯಂ ದಾನಶಕ್ತಿಶ್ಚ ಪುತ್ರಪೌತ್ರಮನಂತಕಂ ॥ ೫೪ ॥

---

೪೯. ಮಹೇಶ್ವರಿಯೆ! ಇಂತು ನಾನು ಹೇಳಲು ಆ ಪುಣ್ಯಪುರುಷನು ದಿವ್ಯರೂಪವನ್ನು ತಾಳಿ ಜ್ವಾಲಾಮಾಲೆಗಳಿಂದ ಆವೃತನಾಗಿ ಪರಿಶುದ್ಧನಾದನು.

೫೦. ಪುನಃ ಆ ಲಿಂಗವು ಸುವರ್ಣವನ್ನು ಕುರಿತು ಇಂತೆಂದಿತು. "ಈಗ ನೀನು ಬಹುವಾಗಿ ಪ್ರಕಾಶಿಸುತ್ತಿರುವೆ. ಆದುದರಿಂದ ಇಂದುಮೊದಲು ನೀನು ಕಾಂಚನವೆಂಬ ಹೆಸರಿನಿಂದ ಲೋಕದಲ್ಲಿ ಪ್ರಖ್ಯಾತಿಯನ್ನು ಪಡೆಯುವೆ.

೫೧. ಎಲೈ ಅಗ್ನಿಪುತ್ರನೆ! ನೀನು ಮಾತ್ರ ನನ್ನ ಸಮೀಪದಲ್ಲಿಯೇ ಯಾವಾಗಲೂ ನಿಂತಿರಬೇಕು. ನಿನ್ನ ಕೀರ್ತಿಯು ಮೂರು ಲೋಕಗಳಲ್ಲಿಯೂ ಶಾಶ್ವತವಾಗಿ ನೆಲಸಿರುವುದು."

೫೨. ದೇವಿಯೆ! ಇಂತು ಆ ಶಿವಲಿಂಗವು ಹೇಳಲು ಅತ್ಯಂತಪರಿಶುದ್ಧನಾದ ಆ ಅಗ್ನಿಪುತ್ರನು ಜ್ವಾಲೆಗಳಿಂದಾವೃತವಾದ ದೇಹವುಳ್ಳವನಾಗಿ ಕೋಟಿಸೂರ್ಯರಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿದ್ದನು.

೫೩. ಸುವರ್ಣಕ್ಕೆ ಅಲ್ಲಿ ಜ್ವಾಲಾಮಾಲೆಗಳ ಆವರಣದಿಂದ ಅಧಿಕದೀಪ್ತಿಯುಂಟಾಯಿತು. ಆದುದರಿಂದಲೇ ಆ ಶಿವಲಿಂಗಕ್ಕೆ ಸ್ವರ್ಣಜ್ವಾಲೇಶ್ವರನೆಂಬ ಹೆಸರು ಪ್ರಖ್ಯಾತವಾಯಿತು.

೫೪. ಪಾರ್ವತಿಯೆ! ಯಾವ ಮನುಷ್ಯನು ಈ ಸ್ವರ್ಣಜ್ವಾಲೇಶ್ವರ ಮಹಾಲಿಂಗವನ್ನು ಭಕ್ತಿಯಿಂದ ಪೂಜಿಸುವನೊ, ಅವನಿಗೆ ಜಯವೂ, ರಾಜ್ಯಾಭಿವೃದ್ಧಿಯೂ, ಐಶ್ವರ್ಯವೂ, ದಾನಮಾಡುವ ಶಕ್ತಿಯೂ, ಅಕ್ಷಯವಾದ ಪುತ್ರಪೌತ್ರಾದಿ ಸಂತಾನವೂ ಲಭಿಸುವುವು.

ಜ್ಞಾನತೋಽಜ್ಞಾನತೋ ವಾಽಪಿ ಯತ್ಪಾಪಂ ಕುರುತೇ ನರಃ ।
ತತ್ಕ್ಷಾಲಯತಿ ದೇಹೋತ್ಥಂ ದರ್ಶನಾನ್ನಾಽತ್ರ ಸಂಶಯಃ ॥ ೫೫ ॥
ಯತ್ಫಲಂ ಪಿಂಡದಾನೇನ ಗಯಾಯಾಂ ಲಭತೇ ನರಃ ।
ತತ್ಫಲಂ ದ್ವಿಗುಣಂ ಪ್ರೋಕ್ತಂ ಪೂಜಯಾ ನಾಽತ್ರ ಸಂಶಯಃ ॥ ೫೬ ॥
ಗಾಯತ್ರ್ಯಾಃ ಶತಸಾಹಸ್ರೈಃ ಸಮ್ಯಗ್ಜಪ್ತೈಶ್ಚ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಸ್ವರ್ಣಜ್ವಾಲೇಶ್ವರಸ್ತುತೇಃ ॥ ೫೭ ॥
ಯತ್ಪುಣ್ಯಂ ಸರ್ವದಾನೇನ ದತ್ತೇನ ವಿಧಿಪೂರ್ವಕಂ ।
ತತ್ಫಲಂ ಸಮವಾಪ್ನೋತಿ ಕೀರ್ತನಾನ್ನಾಽತ್ರ ಸಂಶಯಃ ॥ ೫೮ ॥
ಪೂಜಯಂತಿ ಚತುರ್ದಶ್ಯಾಂ ಸ್ವರ್ಣಜ್ವಾಲೇಶ್ವರಂ ತು ಯೇ ।
ಪೂಜ್ಯಂತೇ ತೇ ಸದಾ ಲಕ್ಷ್ಮ್ಯಾ ಪೂರಯಂತ್ಯಾ ಮನೋರಥಾನ್॥ ೫೯ ॥
ರಕ್ಷಿತಂ ತ್ರಿದಶೈರ್ದೇವಿ ಗಣೈರ್ನಾನಾವಿಧೈಸ್ತಥಾ ।
ಲಿಂಗಂ ಕಶ್ಚಿನ್ನ ಜಾನಾತಿ ಮಮ ಮಾಯಾವಿಮೋಹಿತಃ ॥ ೬೦ ॥

---

೫೫. ತಿಳಿದಾಗಲಿ ತಿಳಿಯದಂತಾಗಲಿ ನರನು ಯಾವ ಪಾತಕಗಳನ್ನು ಮಾಡುವನೊ, ದೇಹದಲ್ಲಿರುವ ಆ ಪಾತಕಗಳನ್ನೆಲ್ಲ ಈ ಲಿಂಗದ ದರ್ಶನವು ತೊಳೆದು ಹಾಕುವುದು.

೫೬. ಗಯಾಕ್ಷೇತ್ರದಲ್ಲಿ ಪಿಂಡದಾನದಿಂದ ಯಾವ ಫಲವು ಶಾಸ್ತ್ರಪ್ರೋಕ್ತವಾಗಿದೆಯೊ, ಅದರ ಎರಡರಷ್ಟು ಪುಣ್ಯವು ಈ ಮಹಾಲಿಂಗದ ಪೂಜೆಯಿಂದ ಲಭಿಸುವುದರಲ್ಲಿ ಸಂದೇಹವಿಲ್ಲ.

೫೭. ವಿಧಿವಿಹಿತರೀತಿಯಿಂದ ಒಂದು ಲಕ್ಷ ಗಾಯತ್ರೀ ಮಂತ್ರಜಪದಿಂದ ಯಾವ ಫಲವುಂಟೊ, ಆ ಫಲವನ್ನೇ ಮಾನವನು ಸ್ವರ್ಣಜ್ವಾಲೇಶ್ವರನ ಒಂದು ಸ್ತೋತ್ರದಿಂದ ಪಡೆಯುವನು.

೫೮. ವಿಧಿಪೂರ್ವಕವಾಗಿ ಸರ್ವಸ್ವದಾನವನ್ನು ಮಾಡಿದವನಿಗೆ ಯಾವ ಪುಣ್ಯವು ಹೇಳಲ್ಪಟ್ಟಿರುವುದೊ, ಈ ಲಿಂಗದ ಸ್ತೋತ್ರದಿಂದಲೂ ಅದನ್ನೇ ಮನುಷ್ಯನು ಪಡೆಯುವುದರಲ್ಲಿ ಸಂದೇಹವಿಲ್ಲ.

೫೯. ಯಾರು ಚತುರ್ದಶಿಯ ತಿಥಿಯಲ್ಲಿ ಸ್ವರ್ಣಜ್ವಾಲೇಶ್ವರನ ಪೂಜೆಯನ್ನು ಮಾಡುವರೊ, ಅವರ ಮನೋರಥಗಳನ್ನೆಲ್ಲ ಈಡೇರಿಸಿ ಮಹಾಲಕ್ಷ್ಮಿಯು ಅವರನ್ನು ಪೂಜಿಸುತ್ತಿರುವಳು.

೬೦. ಎಲೌ ದೇವಿಯೆ! ಈ ಮಹಾಲಿಂಗವು ದೇವತೆಗಳಿಂದಲೂ ಬಹುವಿಧಗಳಾದ ನನ್ನ ಗಣಗಳಿಂದಲೂ ರಕ್ಷಿಸಲ್ಪಡುತ್ತಿರುವುದು. ನನ್ನ ಮಾಯೆಯಿಂದ ಮೋಹಿತನಾದ ಸಾಮಾನ್ಯ ಮಾನವನು ಈ ಲಿಂಗವನ್ನು ತಿಳಿಯಲಾರನು.

ಮಮ ಪ್ರಸಾದಾತ್ತದ್ದೇವಿ ದೃಶ್ಯತೇ ಲಿಂಗಮುತ್ತಮಂ ।
ಏತತ್ತೇ ಕಥಿತಂ ಸಮ್ಯಗನ್ಯಚ್ಛೃಣು ವರಾನನೇ ॥ ೬೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಸ್ವರ್ಣಜ್ವಾಲೇಶ್ವರಮಾಹಾತ್ಮ್ಯವರ್ಣನಂ" ನಾಮ ಷಷ್ಠೋಽಧ್ಯಾಯಃ

---

೬೧. ನನ್ನ ಅನುಗ್ರಹ ವಿಶೇಷದಿಂದಲೇ ಈ ಉತ್ತಮಲಿಂಗವು ಜನರಿಗೆ ಕಾಣಿಸುವುದು. ಎಲೌ ಶುಚಿಸ್ಮಿತೆಯೆ! ಇಂತು ಸ್ವರ್ಣಜ್ವಾಲೇಶ್ವರನ ಮಹಿಮೆಯನ್ನು ತಿಳಿಸಿದೆನು. ಇನ್ನು ಮತ್ತೊಂದು ಲಿಂಗದ ವಿಷಯವನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಸ್ವರ್ಣಜ್ವಾಲೇಶ್ವರಮಾಹಾತ್ಮ್ಯವರ್ಣನ"ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಮೋಽಧ್ಯಾಯಃ

### ತ್ರಿವಿಷ್ಟಪೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ತ್ರಿವಿಷ್ಟಪೇಶ್ವರಂ ದೇವಿ ಸಪ್ತಮಂ ಪರ್ವತಾತ್ಮಜೇ ।
ಯಸ್ಯ ದರ್ಶನಮಾತ್ರೇಣ ಲಭ್ಯತೇ ತತ್ತ್ರಿವಿಷ್ಟಪಂ ॥ ೧ ॥
ಪುರಾ ವಾರಾಹಕಲ್ಪೇ ತು ದೇವರ್ಷಿರ್ನಾರದೋಽಮಲಃ ।
ತ್ರಿವಿಷ್ಟಪಂ ಗತೋ ದೇವಿ ದ್ರಷ್ಟುಕಾಮಃ ಶತಕ್ರತುಂ ॥ ೨ ॥
ತತ್ರೋದ್ಯಾನವನೇ ರಮ್ಯೇ ಕಲ್ಪವೃಕ್ಷೈರ್ವಿರಾಜಿತೇ ।
ಸರ್ವತ್ರಕುಸುಮಾಮೋದಸುಖಸ್ಪರ್ಶಾನಿಲಾಕುಲೇ ॥ ೩ ॥
ವೀಣಾವೇಣುರವೈರ್ಘುಷ್ಟೇ ದೇವಗಂಧರ್ವಸೇವಿತೇ ।
ವಜ್ರೇಂದ್ರನೀಲವೈಡೂರ್ಯಚಂದ್ರಕಾಂತಾದಿದೀಪಿತೇ ॥ ೪ ॥
ಬ್ರಹ್ಮಲೋಕಾದಿಭಿರ್ಲೋಕೈರನೌಪಮ್ಯಗುಣೇ ಶುಭೇ ।
ದದರ್ಶ ತತ್ರ ದೇವೇಶಮುಪವಿಷ್ಟಂ ಶತಕ್ರತುಂ ।
ಸ್ತೂಯಮಾನಂ ಮುದಾ ದೇವೈಃ ಸಿದ್ಧಚಾರಣಕಿನ್ನರೈಃ ॥ ೫ ॥

---

### ಕನ್ನಡದ ಅನುವಾದ

#### ತ್ರಿವಿಷ್ಟಪೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಎಲೌ ಪರ್ವತಕುಮಾರಿಯೆ! ತ್ರಿವಿಷ್ಟಪೇಶ್ವರವೆಂಬುವೇ ಏಳನೆಯ ಮಹಾಲಿಂಗವು. ಅದರ ದರ್ಶನಮಾತ್ರದಿಂದಲೇ ಮನುಜನಿಗೆ ಸ್ವರ್ಗವು ಲಭಿಸುವುದು.

೨. ದೇವಿಯೆ! ಹಿಂದೆ ವರಾಹಕಲ್ಪದ ಆದಿಯಲ್ಲೊಮ್ಮೆ ಪರಶುದ್ಧನಾದ ನಾರದಮಹರ್ಷಿಯು ಮಹೇಂದ್ರನನ್ನು ನೋಡಲು ಸ್ವರ್ಗಲೋಕಕ್ಕೆ ಹೋದನು.

೩–೫. ಅಲ್ಲಿ ಕಲ್ಪವೃಕ್ಷಗಳಿಂದ ನಿಬಿಡವಾದುದೂ, ಹೂವುಗಳ ಸುವಾಸನೆಯುಳ್ಳ ಎಲ್ಲೆಡೆಗಳಲ್ಲಿಯೂ ಸುಖಸ್ಪರ್ಶವಾದ ವಾಯುವುಳ್ಳದುದೂ, ವೀಣಾವೇಣುಗಳ ನಾದಗಳಿಂದ ಕೂಡಿದುದೂ, ದೇವತೆಗಳಿಂದಲೂ, ಗಂಧರ್ವರಿಂದಲೂ ಸೇವಿತವೂ, ವಜ್ರ, ಇಂದ್ರನೀಲ, ವೈಡೂರ್ಯ, ಚಂದ್ರಕಾಂತಗಳೇ ಮೊದಲಾದ ನವರತ್ನಗಳಿಂದಲಂಕೃತವೂ ಆದ ಸತ್ಯಲೋಕವೇ ಮುಂತಾದ ಯಾವ ಲೋಕಗಳೂ ಯಾವುದಕ್ಕೆ ಸರಿದೂಗಲಾರವೊ, ಅಂತಹ ಉದ್ಯಾನವನದಲ್ಲಿ ಮನೋಹರವಾದ ಆಸನದಲ್ಲಿ ಕುಳಿತಿದ್ದ ಮಹೇಂದ್ರನನ್ನು ನಾರದನು ಕಂಡನು. ದೇವತೆಗಳೂ, ಸಿದ್ಧರೂ, ಚಾರಣರೂ, ಕಿನ್ನರರೂ, ಆತನನ್ನು ಸಂತೋಷದಿಂದ ಸ್ತೋತ್ರಮಾಡುತ್ತಿದ್ದರು.

ಪೃಷ್ಟಸ್ತು ನಾರದೋ ದೇವಿ ವಾಸವೇನ ಮಹಾಮುನಿಃ ।
ಕಥಯಾಮಾಸ ಮಾಹಾತ್ಮ್ಯಂ ಮಹಾಕಾಲವನಸ್ಯ ಚ ॥ ೬ ॥
ಮಹಾಕಾಲವನಂ ರಮ್ಯಂ ಸದಾನಂದಕರಂ ಶುಭಂ ।
ಸೇವ್ಯಂ ಪುಣ್ಯಂ ಪವಿತ್ರಂ ಚ ತೀರ್ಥಾನಾಮುತ್ತಮೋತ್ತಮಂ ॥ ೭ ॥
ಪುಣ್ಯಂ ಪಶ್ಯಂತಿ ಯೇ ಲೋಕಾ ಮಹಾಕಾಲವನಂ ಶುಭಂ ।
ಬ್ರಹ್ಮಹತ್ಯಾದಿಕಂ ಪಾಪಂ ತೇಷಾಂ ನಶ್ಯತಿ ನಿಶ್ಚಿತಂ ॥ ೮ ॥
ಸ್ವಯಂ ತಿಷ್ಠತಿ ದೇವೋಽತ್ರ ಸರ್ವಭೂತಗಣೈರ್ವೃತಃ ।
ತಸ್ಮಾತ್ತತ್ತೀರ್ಥಮುಖ್ಯಾನಾಂ ಪ್ರವರಂ ಕಥ್ಯತೇ ಬುಧೈಃ ॥ ೯ ॥
ಪೃಥಿವ್ಯಾಂ ನೈಮಿಷಂ ಪುಣ್ಯಂ ಸರ್ವಪಾಪಪ್ರಣಾಶನಂ ।
ತಸ್ಮಾದ್ದಶಗುಣಂ ಪ್ರೋಕ್ತಂ ಪುಷ್ಕರಂ ತೀರ್ಥಮುತ್ತಮಂ ॥ ೧೦ ॥
ತತೋ ದಶಗುಣಂ ಪ್ರೋಕ್ತಂ ಪ್ರಯಾಗಂ ಸರ್ವಕಾಮಿಕಂ ।
ತಸ್ಮಾದ್ದಶಗುಣಂ ಪ್ರೋಕ್ತಂ ವಿಖ್ಯಾತಮಮರೇಶ್ವರಂ ॥ ೧೧ ॥

---

೬. ದೇವಿಯೆ! ನಾರದಮಹಾಮುನಿಯು ಮಹೇಂದ್ರನಿಂದ ಪ್ರಶ್ನೆಮಾಡಲ್ಪಟ್ಟವನಾಗಿ ಮಹಾಕಾಲವನಕ್ಷೇತ್ರದ ಮಾಹಾತ್ಮ್ಯವನ್ನು ವಿಸ್ತಾರವಾಗಿ ನಿರೂಪಿಸಿದನು.

೭. ಮಹಾಕಾಲವನವು ರಮ್ಯವೂ, ಆನಂದವನ್ನುಂಟುಮಾಡುವುದೂ, ಪವಿತ್ರಪ್ರದೇಶವೂ, ಪುಣ್ಯಪ್ರಾಪಕವೂ, ತೀರ್ಥಗಳಲ್ಲಿ ಸರ್ವೋತ್ತಮವಾದುದೂ ಎನಿಸಿ ಸಕಲಜನಸಂಸೇವ್ಯವಾಗಿರುವುದು.

೮. ಯಾವ ಜನರು ಈ ಪವಿತ್ರಕ್ಷೇತ್ರವಾದ ಮಹಾಕಾಲವನವನ್ನು ನೋಡುವರೊ, ಅವರೇ ಪುಣ್ಯವಂತರು. ಅವರ ಬ್ರಹ್ಮಹತ್ಯಾದಿ ಮಹಾಪಾತಕಗಳೂ ಕಳೆದುಹೋಗುವುದು ನಿಶ್ಚಯವು.

೯. ಅಲ್ಲಿ ಮಹಾದೇವನು ತಾನೇ ಸಕಲ ಭೂತಗಣಗಳಿಂದಾವೃತನಾಗಿ ನೆಲಸಿರುವನು. ಆದುದರಿಂದಲೇ ಮುಖ್ಯವಾದ ಸಕಲ ತೀರ್ಥಗಳಲ್ಲಿಯೂ ಇದೇ ಸರ್ವಶ್ರೇಷ್ಠವೆಂದು ಪ್ರಾಜ್ಞರು ಹೇಳುತ್ತಿರುವರು.

೧೦. ಭೂಲೋಕದಲ್ಲೆಲ್ಲ ನೈಮಿಷಾರಣ್ಯವೇ ಸಕಲ ಪಾಪಕ್ಷಯಕರವಾದ ಪುಣ್ಯಭೂಮಿಯಾಗಿರುವುದು. ಅದಕ್ಕಿಂತಲೂ ಹತ್ತರಷ್ಟು ಫಲದಾಯಕವೆಂದು ಪುಷ್ಕರತೀರ್ಥವು ಪ್ರಸಿದ್ಧವು.

೧೧. ಅದಕ್ಕಿಂತಲೂ ಸಕಲಾಭೀಷ್ಟದಾಯಕವಾದ ಪ್ರಯಾಗವು ಶ್ರೇಷ್ಠವಾದುದು. ಅದಕ್ಕಿಂತಲೂ ಪ್ರಖ್ಯಾತವಾದ ಅಮರೇಶ್ವರ ಕ್ಷೇತ್ರವು ಹತ್ತರಷ್ಟು ಫಲದಾಯಕವು.

ಪ್ರಾಚೀ ಸರಸ್ವತೀ ಪುಣ್ಯಾ ತಸ್ಮಾದ್ದಶಗುಣಾ ಸ್ಮೃತಾ ।
ತಸ್ಮಾದ್ದಶಗುಣಂ ಪ್ರೋಕ್ತಂ ಗಯಾಕೂಪಂ ವಿಶಿಷ್ಯತೇ ॥ ೧೨ ॥
ತಸ್ಮಾದ್ದಶಗುಣಂ ದೇವ ಕುರುಕ್ಷೇತ್ರಂ ವಿಶಿಷ್ಯತೇ ।
ಕುರುಕ್ಷೇತ್ರಾದ್ದಶಗುಣಾ ಪುಣ್ಯಾ ವಾರಾಣಸೀ ತಥಾ ॥ ೧೩ ॥
ತಸ್ಯಾ ದಶಗುಣಂ ಶ್ರೇಷ್ಠಂ ಮಹಾಕಾಲಂ ವಿಶಿಷ್ಯತೇ ।
ಮಹಾಕಾಲವನಂ ಶಕ್ರ ಕಿಲ ತ್ರೈಲೋಕ್ಯಭೂಷಣಂ ॥ ೧೪ ॥
ಷಷ್ಠಿಕೋಟಿಸಹಸ್ರಾಣಿ ಷಷ್ಠಿಕೋಟಿಶತಾನಿ ಚ ।
ಲಿಂಗಾನಿ ತತ್ರ ವಿದ್ಯಂತೇ ಭುಕ್ತಿಮುಕ್ತಿಕರಾಣಿ ಚ ॥ ೧೫ ॥
ಶಕ್ತಯೋ ನವಕೋಟ್ಯಸ್ತು ತಸ್ಮಿನ್ ಕ್ಷೇತ್ರೇ ವಸಂತಿ ಹಿ ।
ಕೃಮಿಕೀಟಪತಂಗಾಶ್ಚ ಮೃತಾ ಯತ್ರ ತತಃ ಕ್ರತೌ ।
ಯಾಂತಿ ದಿವ್ಯೈರ್ವಿಮಾನೈಶ್ಚ ರುದ್ರಲೋಕಂ ಸನಾತನಂ ॥ ೧೬ ॥
ಮಾಹಾತ್ಮ್ಯಮದ್ಭುತಂ ಶ್ರುತ್ವಾ ನಾರದಾತ್ಸುರಸತ್ತಮಃ
ಸರ್ವದೇವಗಣೈಃ ಸಾರ್ಧಮಾಜಗಾಮ ತ್ವರಾನ್ವಿತಃ । ॥ ೧೭ ॥

---

೧೨. ಅದಕ್ಕಿಂತಲೂ ಪೂರ್ವವಾಹಿನಿಯಾದ ಸರಸ್ವತಿಯು ಹತ್ತುಪಾಲು ಪುಣ್ಯಪ್ರದೆಯು. ಆ ನದಿಗಿಂತಲೂ ಗಯಾಕೂಪವು ಹತ್ತರಷ್ಟು ಫಲದಾಯಕವೆಂದು ವಿಶೇಷವಾಗಿ ಖ್ಯಾತಿಗೊಂಡಿರುವುದು.

೧೩. ದೇವ! ಕುರುಕ್ಷೇತ್ರವು ಗಯಾಕೂಪಕ್ಕೂ ಹತ್ತುಪಾಲು ಮಿಗಿಲೆನಿಸಿರುವುದು. ಕುರುಕ್ಷೇತ್ರಕ್ಕಿಂತಲೂ ವಾರಾಣಸೀನಗರಿಯು ಹತ್ತುಪಾಲು ಪುಣ್ಯಪ್ರದವಾದುದು.

೧೪. ಮಹೇಂದ್ರನೆ! ಈ ಮಹಾಕಾಲವನವು ಆ ಕಾಶಿಗೂ ಹತ್ತರಷ್ಟು ಶ್ರೇಷ್ಠವೆಂದು ಹೆಸರಾಗಿರುವುದು. ಈ ಮಹಾಕಾಲಕ್ಷೇತ್ರವು ಸಕಲಬ್ರಹ್ಮಾಂಡಕ್ಕೇ ಒಂದು ಭೂಷಣವಾಗಿರುವುದು.

೧೫-೧೬. ಆ ಮಹಾಕ್ಷೇತ್ರದಲ್ಲಿ ಭಜಕರಿಗೆ ಭೋಗಮೋಕ್ಷಗಳನ್ನೀಯುವ ಮಹಿಮೆಯುಳ್ಳ ಅರುವತ್ತಾರು ಸಾವಿರ ಕೋಟಿ ಸಂಖ್ಯೆಯ ಲಿಂಗಗಳು ಪ್ರತಿಷ್ಠಿತಗಳಾಗಿರುವುವು. ಆ ಕ್ಷೇತ್ರದಲ್ಲಿ ಒಂಬತ್ತುಕೋಟಿ ಶಕ್ತಿದೇವಿಯರು ವಾಸಮಾಡುತ್ತಿರುವರು. ಅಲ್ಲಿ ಯಜ್ಞಯಾಗಾದಿಗಳಲ್ಲಿ ಆಕಸ್ಮಾತ್ತಾಗಿ ಸಾಯುವ ಕ್ರಿಮಿ ಕೀಟ ಪತಂಗಗಳೂ ಸಹ ದಿವ್ಯವಿಮಾನಗಳಲ್ಲಿ ಕುಳಿತು ಅನಾದಿನಿಧನವಾದ ರುದ್ರಲೋಕವನ್ನು ಸೇರುವುವು.

೧೭. ಇಂತೆಂಬ ಅದ್ಭುತವಾದ ಕ್ಷೇತ್ರಮಾಹಾತ್ಮ್ಯವನ್ನು ನಾರದ ಮುನಿಯಿಂದ ಕೇಳಿ ಮಹೇಂದ್ರನು ಸಕಲ ದೇವತೆಗಳಿಂದ ಪರಿವೃತನಾಗಿ ಸಂಭ್ರಮದಿಂದ ಆ ಕ್ಷೇತ್ರಕ್ಕೆ ಬಂದನು.

ವಾಸವಃ ಶ್ರೀ ಮಹಾಕಾಲವನಂ ಹರ್ಷಸಮನ್ವಿತಃ
ದೃಷ್ಟ್ವಾ ತಥಾವಿಧಂ ರಮ್ಯಂ ಮಹಾಕಾಲವನಂ ಶುಭಂ । ॥ ೧೮ ॥
ತ್ರಿವಿಷ್ಟಪಾದಪ್ಯಧಿಕಂ ಪ್ರಲಯೇಽಪ್ಯಕ್ಷಯಂ ಸ್ಮೃತಂ
ವಿಚಿತ್ರಾಣಿ ಚ ಹರ್ಮ್ಯಾಣಿ ಕಾಂಚನಾನಿ ಶುಭಾನಿ ಚ । ॥ ೧೯ ॥
ಪ್ರಾಸಾದಾಃ ಶತಶೋ ಭೌಮಮಣಿವಿದ್ರುಮಭೂಷಿತಾಃ
ವಜ್ರೇಂದ್ರನೀಲರಚಿತಾಃ ಶುದ್ಧಸ್ಫಟಿಕಸನ್ನಿಭಾಃ । ॥ ೨೦ ॥
ತೋರಣಾನಿ ವಿಚಿತ್ರಾಣಿ ಮಾಣಿಕ್ಯರಚಿತಾನಿ ಚ ।
ದೃಷ್ಟ್ವಾ ತಥಾವಿಧಂ ರಮ್ಯಂ ಮಹಾಕಾಲವನೋತ್ತಮಂ ॥ ೨೧ ॥
ನಾರದಂ ಪ್ರಶಶಂಸುಸ್ತೇ ಸರ್ವೇ ದೇವಾ ಮುದಾನ್ವಿತಾಃ ।
ದೇವರ್ಷೀಣಾಂ ಮಹಾಪ್ರಾಜ್ಞಾ ಯೇನೇಯಂ ಕಥಿತಾ ಕಥಾ ॥ ೨೨ ॥
ನ ಕೈಲಾಸಂ ಗಮಿಷ್ಯಾಮೋ ನ ಚ ಮೇರುಂ ತಥಾವಿಧಂ ।
ನ ಮಂದರಂ ಗಮಿಷ್ಯಾಮೋ ನ ಯಾಸ್ಯಾಮಸ್ತ್ರಿವಿಷ್ಟಪಂ ॥ ೨೩ ॥

---

೧೮. ಶ್ರೀ ಮಹಾಕಾಲವನವು ಆ ಮಹರ್ಷಿಯು ಹೇಳಿದಂತೆಯೇ ಮನೋಹರವೂ, ಪವಿತ್ರವೂ ಆಗಿದ್ದುದನ್ನು ಕಂಡು ಮಹೇಂದ್ರನು ಅತ್ಯಂತ ಸಂತುಷ್ಟ ಮನಸ್ಕನಾದನು.

೧೯. ಈ ಲೋಕವು ಸ್ವರ್ಗಲೋಕಕ್ಕೂ ಮಿಗಿಲೆನಿಸಿ ಪ್ರಳಯದಲ್ಲಿಯೂ ನಾಶವಿಲ್ಲದ ಪ್ರದೇಶವಾಗಿರುವುದು. ಇಲ್ಲಿನ ದೇವಾಲಯಗಳು ಕಾಂಚನಮಯಗಳೂ, ವಿಚಿತ್ರಗಳೂ, ಶುಭಪ್ರದಗಳೂ ಆಗಿರುವುವು.

೨೦. ನೂರಾರು ಉಪ್ಪರಿಗೆಗಳು ವಜ್ರ, ಮಣಿ, ವಿದ್ರುಮಗಳಿಂದಲಂಕೃತಗಳಾಗಿರುವುವು. ಗೋಡೆಗಳು ವಜ್ರಗಳಿಂದಲೂ, ಇಂದ್ರನೀಲಗಳಿಂದಲೂ ಖಚಿತಗಳಾಗಿ ಶುದ್ಧವಾದ ಸ್ಫಟಿಕದಂತೆ ತೋರುತ್ತಿರುವುವು.

೨೧. ಬಾಗಿಲುವಾಡಗಳು ವಿಚಿತ್ರಾಕೃತಿಯುಳ್ಳವುಗಳಾಗಿ ಮಾಣಿಕ್ಯಗಳಿಂದ ಮಾಡಲ್ಪಟ್ಟಿರುವುವು. ಇಂತಹ ಸಂಪತ್ತಿನಿಂದ ಕೂಡಿ ಮನೋಹರವಾದ ಮಹಾಕಾಲವನವೆಂಬ ಉತ್ತಮಕ್ಷೇತ್ರವನ್ನು ದೇವತೆಗಳು ನೋಡಿದರು.

೨೨. ದೇವರ್ಷಿಸತ್ತಮರಿರಾ! ಅವರೆಲ್ಲರೂ ಅಮಿತಾನಂದಭರಿತರಾಗಿ ಈ ಕ್ಷೇತ್ರಮಾಹಾತ್ಮ್ಯವನ್ನು ಮೊದಲು ನಿರೂಪಿಸಿದ ನಾರದ ಮುನಿಯನ್ನು ಬಹುವಿಧವಾಗಿ ಪ್ರಶಂಸಿಸಿದರು.

೨೩. ಈ ವನವನ್ನು ಹೋಲುವ ಪ್ರದೇಶವು ಮತ್ತೊಂದಿಲ್ಲ. ಇನ್ನು ನಾವು ಕೈಲಾಸಕ್ಕಾಗಲಿ, ಮೇರು ಪರ್ವತಕ್ಕಾಗಲಿ, ಮಂದರಾಚಲಕ್ಕಾಗಲಿ, ಸ್ವರ್ಗಲೋಕಕ್ಕಾಗಲಿ ಹೋಗಬೇಕಾದುದಿಲ್ಲ.

ಏಷಾಽಮರಾವತೀ ಶ್ರೇಷ್ಠಾ ಹ್ಯೇಷಾ ಭೋಗವತೀ ಶುಭಾ ।
ಏಷಾ ಪೈತಾಮಹೋ ಲೋಕೋ ವಿಷ್ಣುಲೋಕಸ್ತಥೈವ ಚ ॥ ೨೪ ॥
ಏತಸ್ಮಿನ್ನಂತರೇ ದೇವಿ ಶೂನ್ಯಂ ಜಾತಂ ತ್ರಿವಿಷ್ಟಪಂ ।
ಜ್ಞಾತ್ವಾ ಶೂನ್ಯಮಥಾತ್ಮಾನಂ ಚಿಂತಯಿತ್ವಾ ಪುನಃ ಪುನಃ ।
ಗಮನಾಯ ಮತಿಂ ಚಕ್ರೇ ಕೃತ್ವಾ ದೇಹಮಥಾತ್ಮನಃ ॥ ೨೫ ॥
ತ್ಯಕ್ತ್ವಾ ಮಾಂ ತ್ರಿದಶಾಃ ಸರ್ವೇ ಮಹಾಕಾಲವನಂ ಗತಾಃ ।
ಅಹಂ ತತ್ರೈವ ಯಾಸ್ಯಾಮಿ ಯತ್ರ ತೇ ತ್ರಿದಶಾ ಗತಾಃ ॥ ೨೬ ॥
ಇತ್ಯುಕ್ತ್ವಾ ತತ್ಕ್ಷಣಂ ಪ್ರಾಪ್ತೋ ಮಹಾಕಾಲವನೋತ್ತಮೇ ।
ಕೌತುಕಾತ್ಸೋಽಥ ವೈ ಶ್ರೇಷ್ಠಂ ತೀರ್ಥಂ ತತ್ರಾಽಪಿ ಭೂತಲೇ ।
ದದರ್ಶ ರಮಣೀಯಂ ತೈರ್ದೇವೈಃ ಪರಿವೃತಂ ತದಾ ॥ ೨೭ ॥
ಏತಸ್ಮಿನ್ನೇವ ಕಾಲೇ ತು ವಾಗುವಾಚಾಽಶರೀರಿಣೀ ।
ಭೋ ಭೋಸ್ತ್ರಿವಿಷ್ಟಪಾಽತ್ರೈವ ಸ್ವನಾಮ್ನಾ ಸ್ಥಾಪಯಸ್ವ ಮಾಂ ।
ಕರ್ಕೋಟಕಸ್ಯ ಪೂರ್ವೇ ತು ಮಾಯಾಯಾಶ್ಚ ತು ದಕ್ಷಿಣೇ ॥ ೨೮ ॥
ಇತ್ಯುಕ್ತೋ ದೇವದೇವೇನ ಹೃಷ್ಟಸ್ತದ್ಗತಚೇತಸಾ ।
ಸ್ವನಾಮ್ನಾ ಸ್ಥಾಪಯಾಮಾಸ ದೇವಂ ತ್ರಿವಿಷ್ಟಪೇಶ್ವರಂ ॥ ೨೯ ॥

---

೨೪. ಇದೇ ಶ್ರೇಷ್ಠವಾದ ಅಮರಾವತಿಯೂ, ಭೋಗವತಿಯೂ, ಬ್ರಹ್ಮಲೋಕವೂ, ವಿಷ್ಣುಲೋಕವೂ ಆಗಿರುವುದು.

೨೫. ಎಲೌ ಪಾರ್ವತಿಯೆ! ಇಷ್ಟರಲ್ಲಿ ಸ್ವರ್ಗಲೋಕವು ಜನಶೂನ್ಯವಾಯಿತು. ಆ ಲೋಕವಾದರೊ, ತಾನು ನಿರ್ಜನವಾದುದನ್ನು ಕಂಡು ಮತ್ತೆ ಮತ್ತೆ ಚಿಂತಿಸುತ್ತ ಕಡೆಗೆ ತಾನೇ ಆ ಕ್ಷೇತ್ರಕ್ಕೂ ಹೊರಡಲು ಮನಸ್ಸನ್ನು ಮಾಡಿತು.

೨೬. "ದೇವತೆಗಳೆಲ್ಲರೂ ನನ್ನನ್ನು ಬಿಟ್ಟು ಮಹಾಕಾಲವನಕ್ಕೆ ಹೊರಟು ಹೋದರು. ನಾನೂ ಅವರು ಹೋಗಿರುವ ಸ್ಥಳಕ್ಕೇ ಹೋಗುತ್ತೇನೆ."

೨೭. ಇಂತೆಂದು ಕ್ಷಣಮಾತ್ರದಲ್ಲಿಯೇ ಆ ಸ್ವರ್ಗವೂ ಮಹಾಕಾಲವನಕ್ಕೆ ಪ್ರಾಪ್ತವಾಯಿತು. ಮತ್ತು ಅಲ್ಲಿ ರಮಣೀಯವೂ ಪರಮೋತ್ಕೃಷ್ಟವೂ ಆದ ಒಂದು ತೀರ್ಥದ ಸುತ್ತಲೂ ದೇವತೆಗಳು ನೆರೆದಿದ್ದುದನ್ನು ಕಂಡಿತು.

೨೮. ಇಷ್ಟರಲ್ಲಿಯೇ ಅಶರೀರವಾಣಿಯು ನುಡಿಯಿತು. "ಎಲೈ ತ್ರಿವಿಷ್ಟಪವೆ! ನಿನ್ನ ಹೆಸರಿನಿಂದಲೇ ಇಲ್ಲಿ ನನ್ನ ಒಂದು ಲಿಂಗವನ್ನು ಸ್ಥಾಪಿಸು. ಅದು ಕರ್ಕೋಟಕೇಶ್ವರನಿಗೆ ಪೂರ್ವದಲ್ಲಿಯೂ ಮಹಾಮಾಯೆಗೆ ದಕ್ಷಿಣದಲ್ಲಿಯೂ ಇರಲಿ."

೨೯. ಇಂತೆಂದ ಮಹಾದೇವನ ಅನುಜ್ಞೆಯನ್ನು ಕೇಳಿ ಅತ್ಯಂತ ಸಂತೋಷಭರಿತವಾಗಿ ಅದು ತನ್ನ ಹೆಸರಿನಿಂದ ತ್ರಿವಿಷ್ಟಪೇಶ್ವರನೆಂಬ ಮಹಾಲಿಂಗವನ್ನು ಸ್ಥಾಪನೆಮಾಡಿತು.

ಪೂಜಯಿತ್ವಾ ಶುಭೈಃ ಪುಷ್ಪೈರುವಾಚೇದಂ ವರಾನನೇ ।
ಅದ್ಯ ಪ್ರಭೃತಿ ಭೂರ್ಲೋಕೋ ನಾಮ್ನಾ ಖ್ಯಾತಿಂ ಗಮಿಷ್ಯತಿ ॥ ೩೦ ॥
ಯೇ ತ್ವಾಂ ಪಶ್ಯಂತಿ ಯತ್ನೇನ ಅಪಿ ದುಷ್ಕೃತಕಾರಿಣಃ ।
ತೇ ಯಾಸ್ಯಂತಿ ಪರಂ ಸ್ಥಾನಂ ದಿವ್ಯಾಲಂಕಾರಭೂಷಿತಾಃ ॥ ೩೧ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ಸಂಕ್ರಾಂತೌ ವಾ ವಿಶೇಷತಃ ।
ಯಃ ಕರಿಷ್ಯತಿ ಪೂಜಾಂ ಚ ಭಕ್ತಿಯುಕ್ತೋ ಹಿ ಮಾನವಃ ॥ ೩೨ ॥
ವಿಮಾನವರಮಾಸ್ಥಾಯ ಕಾಮಗಂ ರತ್ನಭೂಷಿತಂ ।
ಉದಿತಾದಿತ್ಯಸಂಕಾಶಂ ಮತ್ಸಮೀಪೇ ವಸಿಷ್ಯತಿ ॥ ೩೩ ॥
ಕಿಂ ದಾನೈರ್ವಿವಿಧೈರ್ದತ್ತೈಃ ಕಿಂ ಯಜ್ಞೈರ್ವಿವಿಧೈಃ ಕೃತೈಃ ।
ತೇ ಪ್ರಾಪ್ಸ್ಯಂತಿ ಫಲಂ ಸರ್ವಂ ಯೇ ತ್ವಾಂ ದ್ರಕ್ಷ್ಯಂತಿ ಭಕ್ತಿತಃ ॥ ೩೪ ॥
ಯಂ ಯಂ ಕಾಮಮಭಿಧ್ಯಾಯ ಪೂಜಯಿಷ್ಯಂತಿ ಮಾನವಾಃ ।
ತತ್ತನ್ಮನೋರಥಪ್ರಾಪ್ತಿರ್ಭವಿಷ್ಯತಿ ನ ಸಂಶಯಃ ॥ ೩೫ ॥

---

೩೦. ಮಂಗಳಾಂಗಿಯೆ! ಬಳಿಕ ಶುಭ್ರಪುಷ್ಪಗಳಿಂದ ಆ ಶಿವಲಿಂಗವನ್ನು ಪೂಜಿಸಿ ಇಂತೆಂದಿತು. "ಇಂದು ಮೊದಲಾಗಿ ಭೂಲೋಕವೂ ಸಹ ಈ ಲಿಂಗದ ಇರುವಿಕೆಯಿಂದಲೇ ಪ್ರಖ್ಯಾತಿಯನ್ನು ಪಡೆಯುವುದು.

೩೧. ಯಾರು ಪ್ರಯತ್ನಪೂರ್ವಕವಾಗಿ ನಿನ್ನನ್ನು ದರ್ಶನಮಾಡುವರೊ, ಅವರು ದುಷ್ಕಾರ್ಯಗಳನ್ನು ಮಾಡಿದವರಾದರೂ ದಿವ್ಯಾಲಂಕಾರಭೂಷಿತರಾಗಿ ಉತ್ತಮಲೋಕಗಳನ್ನು ಪಡೆಯುವರು.

೩೨. ಅಷ್ಟಮಿ ಚತುರ್ದಶೀ ದಿನಗಳಲ್ಲಿಯೂ, ವಿಶೇಷವಾಗಿ ಸಂಕ್ರಾಂತಿಯ ದಿವಸಗಳಲ್ಲಿಯೂ ಭಕ್ತಿಯುಕ್ತನಾಗಿ ಮಾನವನು ಈ ತ್ರಿವಿಷ್ಟಪೇಶ್ವರನ ಪೂಜೆಯನ್ನು ಮಾಡಬೇಕು.

೩೩. ಅವನು ಸ್ವೇಚ್ಛಾಮಾತ್ರಗಮವೂ, ನವರತ್ನಾಲಂಕೃತವೂ, ಹೊಸ ಸೂರ್ಯನನ್ನು ಹೋಲುವುದೂ ಆದ ಉತ್ತಮ ವಿಮಾನವನ್ನೇರಿ, ನನ್ನ ಸಮೀಪದಲ್ಲಿಯೇ ವಾಸಿಸುವನು.

೩೪. ಅನೇಕ ದಾನಗಳನ್ನು ಮಾಡುವುದರಿಂದೇನು? ಬಹುವಿಧಗಳಾದ ಯಜ್ಞಗಳನ್ನಾಚರಿಸುವುದರಿಂದೇನು? ಯಾರು ನಿನ್ನ ದರ್ಶನವನ್ನು ಭಕ್ತಿಭಾವಭರಿತರಾಗಿ ಮಾಡುವರೊ, ಅವರಿಗೆ ಮಾತ್ರವೇ ಸಮಸ್ತ ದಾನಗಳ ಮತ್ತು ಸಕಲಯಜ್ಞಗಳ ಫಲಗಳೂ ಒಮ್ಮೆಯೇ ಕೈಗೂಡುವುವು.

೩೫. ಯಾವ ಮನುಷ್ಯನು ಯಾವ ಯಾವ ಕೋರಿಕೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ನಿನ್ನ ದರ್ಶನವನ್ನು ಮಾಡುವನೊ, ಆಯಾ ಅಭಿಲಾಷೆಗಳೆಲ್ಲವೂ ಅವನಿಗೆ ನೆರವೇರುವುವು, ಇದರಲ್ಲಿ ಸಂದೇಹವಿಲ್ಲ.

ತ್ರಿದಶೈಶ್ಚ ಪುನಃ ಪ್ರೋಕ್ತಂ ದೃಷ್ಟ್ವಾ ಮಲ್ಲಿಂಗಮುತ್ತಮಂ ।
ತ್ರಿವಿಷ್ಟಪೇನ ಧನ್ಯೇನ ಸ್ಥಾಪಿತಂ ದೇವಮೀಶ್ವರಂ ॥ ೩೬ ॥
ಪೂಜಯಿಷ್ಯಂತಿ ಯೇ ಧನ್ಯಾ ದೇವಂ ತ್ರಿವಿಷ್ಟಪೇಶ್ವರಂ ।
ತೇಷಾಂ ವಾಸೋಽಕ್ಷಯೋ ದಿವ್ಯೋ ಭವಿಷ್ಯತಿ ತ್ರಿವಿಷ್ಟಪೇ ॥ ೩೭ ॥
ಇತ್ಯುಕ್ತ್ವಾ ಪೂಜಯಾಮಾಸ ಭೂಯೋ ಲಿಂಗಂ ತ್ರಿವಿಷ್ಟಪಂ ।
ಸಾರ್ಧಂ ತ್ರಿವಿಷ್ಟಪೇನೈವ ಪುನಃ ಸ್ಥಾನಂ ಸ್ವಕಂ ಗತಃ ॥ ೩೮ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಶ್ರವಣಾತ್ಕೀರ್ತನಾದ್ವಾಽಪಿ ಸ್ವರ್ಗಲೋಕೋಽಕ್ಷಯೋ ಭವೇತ್ ॥ ೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ತ್ರಿವಿಷ್ಟಪೇಶ್ವರಮಾಹಾತ್ಮ್ಯವರ್ಣನಂ"
ನಾಮ ಸಪ್ತಮೋಽಧ್ಯಾಯಃ

---

೩೬. ಮತ್ತು ಪರಮ ಧನ್ಯನಾದ ಈ ತ್ರಿವಿಷ್ಟಪನಿಂದ ಪ್ರತಿಷ್ಠಿತವಾಗಿರುವ ಈ ನನ್ನ ಉತ್ತಮವಾದ ಮಾಹೇಶ್ವರಲಿಂಗವನ್ನು ಕಂಡು ದೇವತೆಗಳು ಪುನಃ ಇಂತೆಂದು ಹೇಳಿದರು.

೩೭. "ಯಾವ ಧನ್ಯಪುರುಷರು ಈ ತ್ರಿವಿಷ್ಟಪೇಶ್ವರ ಮಹಾದೇವನನ್ನು ಪೂಜಿಸುವರೊ, ಅವರಿಗೆ ಸ್ವರ್ಗಲೋಕದಲ್ಲಿ ದಿವ್ಯ ಭೋಗಗಳಿಂದೊಡಗೂಡಿದ ವಾಸವೇ ಶಾಶ್ವತವಾಗಿರುವುದು."

೩೮. ಇಂತೆಂದು ಮಹೇಂದ್ರನು ಮತ್ತೆ ತ್ರಿವಿಷ್ಟಪೇಶ್ವರನ ಪೂಜೆಯನ್ನು ಮಾಡಿ ನಾಕಲೋಕದೊಡನೆ ಪುನಃ ತನ್ನ ಸ್ಥಾನವನ್ನು ಸೇರಿದನು.

೩೯. ದೇವಿಯೆ! ಇಂತು ನಿನಗೆ ತ್ರಿವಿಷ್ಟಪೇಶ್ವರಲಿಂಗದ ಪಾಪಪರಿಹಾರಕವಾದ ಪ್ರಭಾವವನ್ನು ತಿಳಿಸಿರುವೆನು. ಈ ಚರಿತ್ರೆಯನ್ನು ಕೇಳುವವರಿಗೂ, ಹೇಳುವವರಿಗೂ ಅಕ್ಷಯವಾದ ಸ್ವರ್ಗವಾಸವು ಲಭಿಸುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ತ್ರಿವಿಷ್ಟಪೇಶ್ವರಮಾಹಾತ್ಮ್ಯವರ್ಣನ"ವೆಂಬ
ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಮೋಽಧ್ಯಾಯಃ

## ಕಪಾಲೇಶ್ವರಮಾಹಾತ್ಮ್ಯವರ್ಣನಂ

ಶ್ರೀ ರುದ್ರ ಉವಾಚ :—

ಕಪಾಲೇಶ್ವರಸಂಜ್ಞಂ ಚ ಹ್ಯಷ್ಟಮಂ ವಿದ್ಧಿ ಪಾರ್ವತಿ ।
ಯಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾ ಪ್ರಣಶ್ಯತಿ ॥ ೧ ॥
ಪುರಾ ವೈವಸ್ವತೇ ಕಲ್ಪೇ ತ್ರೇತಾಕಾಲೇ ಸಮಾಗತೇ ।
ಮಹಾಕಾಲವನೇ ದಿವ್ಯೇ ಯಜ್ಞೇ ಹ್ಯೈತಾಮಹೇ ಪ್ರಿಯೇ ॥ ೨ ॥
ಉಪವಿಷ್ಟೇಷು ವಿಪ್ರೇಷು ಹೂಯಮಾನೇ ಹುತಾಶನೇ ।
ವೇಷಂ ಕಾಪಾಲಿಕಂ ಕೃತ್ವಾ ಗತೋಽಹಂ ತತ್ರ ಸಂಸದಿ ॥ ೩ ॥
ಜೀರ್ಣಕಂಥಾವೃತೋ ದೇವಿ ಮುಂಡಃ ಖಟ್ವಾಂಗಧಾರಕಃ ।
ಚಿತಾಭಸ್ಮವಿಲಿಪ್ತಾಂಗೋ ವಿಕೃತೋ ವಿಕೃತಾನನಃ ।
ಕಪಾಲಂ ಚ ಕರೇ ಕೃತ್ವಾ ಕಪಾಲಕೃತಭೂಷಣಃ ॥ ೪ ॥

---

## ಕನ್ನಡದ ಅನುವಾದ

### ಕಪಾಲೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಪಾರ್ವತಿಯು ! ಎಂಟನೆಯ ಮಹಾಲಿಂಗವೇ ಕಪಾಲೇಶ್ವರವೆಂದು ತಿಳಿ. ಇದರ ದರ್ಶನಮಾತ್ರದಿಂದ ಬ್ರಹ್ಮಹತ್ಯೆಯ ಪಾತಕವೂ ನಾಶವಾಗುವುದು.

೨. ದೇವಿಯೆ ! ಈ ವೈವಸ್ವತ ಮನ್ವಂತರದಲ್ಲಿಯೇ ಕಳೆದ ತ್ರೇತಾಯುಗದಲ್ಲಿ ಒಮ್ಮೆ ಈ ಮಹಾಕಾಲವನದಲ್ಲಿಯೇ ಚತುರ್ಮುಖನು ಒಂದು ಮಹಾಯಜ್ಞವನ್ನು ನೆರವೇರಿಸಿದನು.

೩. ಬ್ರಾಹ್ಮಣೋತ್ತಮರೆಲ್ಲ ಕುಳಿತು ಅಗ್ನಿಯಲ್ಲಿ ಹೋಮಗಳನ್ನು ಮಾಡುತ್ತಿರಲು ನಾನು ಕಾಪಾಲಿಕನ ವೇಷವನ್ನು ತಾಳಿ ಆ ಸಭೆಯ ಮಧ್ಯದಲ್ಲಿ ಪ್ರವೇಶಿಸಿದೆನು.

೪. ಪ್ರಿಯೆ ! ನಾನು ಒಂದು ಚಿಂದಿಬಟ್ಟೆಯನ್ನುಟ್ಟು, ಬೋಳುತಲೆಯುಳ್ಳವನಾಗಿ, ಖಟ್ವಾಂಗವನ್ನು ಹಿಡಿದು, ಚಿತೆಯ ಭಸ್ಮವನ್ನು ಮೈಗೆ ಲೇಪಿಸಿಕೊಂಡ ವಿಕಾರಸ್ವರೂಪನೂ, ವಿಕಾರಮುಖವುಳ್ಳವನೂ ಆಗಿ ಒಂದು ಕಪಾಲವನ್ನು ಕೈಯಲ್ಲಿ ಹಿಡಿದು ಕಪಾಲಗಳ ಹಾರವನ್ನೇ ಕೊರಳಲ್ಲಿ ಧರಿಸಿದ್ದೆನು.

ಬ್ರಾಹ್ಮಣಾಶ್ಚ ತತಃ ಕ್ರುದ್ಧಾ ದೃಷ್ಟ್ವಾ ಮಾಂ ಜಾಲ್ಮರೂಪಿಣಂ ।
ಕಪಾಲಧಾರಿಣಂ ಸರ್ವೇ ಧಿಕ್ಕೃದ್ಭಿಶ್ಚ ಜಗರ್ಹಿರೇ ॥ ೫ ॥
ಅಸಕೃತ್ಪಾಪಪಾಪೇತಿ ಗಚ್ಛ ಗಚ್ಛ ವಿಡಂಬಿತಾಃ ।
ಕಥಂ ಚ ಹೋಮಃ ಕ್ರಿಯತೇ ಪ್ರಾಪ್ತೇ ಕಾಪಾಲಿಕೇ ಪುರಃ ॥ ೬ ॥
ಅಕಪಾಲಾನಿ ಶೌಚಾನಿ ಇತಿ ವೇದೇಷು ಗೀಯತೇ ।
ಯಜ್ಞವೇದಿರ್ನ ತೇಽರ್ಹಾ ತು ಮನುಷ್ಯಾಽಸ್ಥಿಧರಸ್ಯ ವೈ ॥ ೭ ॥
ಮಯಾ ಪ್ರೋಕ್ತಾಸ್ತು ತೇ ವಿಪ್ರಾಃ ಶ್ರೂಯತಾಂ ದ್ವಿಜಸತ್ತಮಾಃ ।
ಯೂಯಂ ಕಾರುಣಿಕಾಃ ಸರ್ವೇ ಪರದುಃಖೇನ ದುಃಖಿತಾಃ ॥ ೮ ॥
ಕರ್ತವ್ಯಾ ಚ ದಯಾ ಸದ್ಭಿಃ ಸರ್ವದಾ ಸರ್ವದೇಹಿನಾಂ ।
ಸರ್ವೇಷಾಮೇವ ಜಂತೂನಾಂ ಮಿತ್ರಂ ಬ್ರಾಹ್ಮಣ ಉಚ್ಯತೇ ॥ ೯ ॥
ಅಹಂ ಕಾಪಾಲಿಕೋ ವಿಪ್ರೋ ಭಸ್ಮಭೂಷಿತವಿಗ್ರಹಃ ।
ಕಾಪಾಲವ್ರತಮಾಸ್ಥಾಯ ಚರಾಮಿ ಪೃಥಿವೀತಲೇ ॥ ೧೦ ॥

---

೫. ಕಪಾಲಧಾರಿಯಾದ ನನ್ನನ್ನು ಕಂಡೊಡನೆಯೇ ಅಲ್ಲಿದ್ದ ಬ್ರಾಹ್ಮಣರೆಲ್ಲರೂ ನೀಚರೂಪಿಯಾದ ನನ್ನಲ್ಲಿ ಕೋಪಕೊಂಡು ಧಿಕ್ಕಾರಗಳಿಂದ ನನ್ನನ್ನು ಬಹುವಾಗಿ ನಿಂದಿಸಿದರು.

೬. ಮತ್ತು ತಮ್ಮ ಶೌಚಾದಿಗಳನ್ನು ವಿಡಂಬನಮಾಡುತ್ತ ಮತ್ತೆ ಮತ್ತೆ ಇಂತೆಂದರು. "ಎಲೈ ಪಾಪಿಯೆ! ಇಲ್ಲಿಂದ ಹೊರಡು. ಕಾಪಾಲಿಕನು ಬಂದು ನಿಂತಿರಲು ಅವನ ಎದುರಿನಲ್ಲಿ ಹೋಮವನ್ನು ಹೇಗೆ ಮಾಡುವುದು?

೭. ಶುದ್ಧಿವೃದ್ಧಿಕರ್ಮಗಳೆಲ್ಲವೂ ಕಪಾಲಾದ್ಯಸ್ಥಿ ಸಹಿತಗಳಾಗಿರಬಾರದೆಂದು ವೇದಗಳು ಹೇಳುತ್ತಿರುವುವು. ಮನುಷ್ಯಾಸ್ಥಿಗಳನ್ನು ಧರಿಸಿರುವ ನಿನಗೆ ಈ ಯಜ್ಞಮಂಟಪವು ಉಚಿತಸ್ಥಾನವಲ್ಲ."

೮. ಆಗ ನಾನು ಆ ವಿಪ್ರೋತ್ತಮರಿಗಿಂತೆಂದೆನು. "ದ್ವಿಜಸತ್ತಮರಿರಾ! ಕೇಳಿರಿ. ನೀವೆಲ್ಲರೂ ಕರುಣಾಮೂರ್ತಿಗಳು. ಪರರ ದುಃಖಗಳಲ್ಲಿ ಸಹಭಾಗಿಗಳಂತೆ ದುಃಖಿಸುವವರು.

೯. ಸಜ್ಜನರು ಯಾವಾಗಲೂ ಯಾವ ಪ್ರಾಣಿಗಳಲ್ಲಿಯೂ ದಯೆಯನ್ನು ತೋರಿಸಬೇಕು. ಬ್ರಾಹ್ಮಣನು ಸಕಲ ಜಂತುಗಳಲ್ಲಿಯೂ ಮಿತ್ರನೆಂದು ಶಾಸ್ತ್ರಗಳಲ್ಲಿ ಹೇಳಿರುವುದು.

೧೦. ನಾನೂ ಬ್ರಾಹ್ಮಣನೇ ಆಗಿರುವೆನು. ಕಾಪಾಲಿಕನಾದುದರಿಂದ ಭಸ್ಮಲೇಪಿತನಾದ ದೇಹವುಳ್ಳವನಾಗಿರುವೆನು. ಕಪಾಲವ್ರತವನ್ನು ಸ್ವೀಕರಿಸಿ ಭೂಲೋಕದಲ್ಲಿ ಸಂಚರಿಸುತ್ತಿರುವೆನು.

ಆರಾಧಯಾಮಿ ಸತತಂ ಮಹಾದೇವಂ ಜಗತ್ಪತಿಂ ।
ಬ್ರಹ್ಮಹತ್ಯಾವಿನಾಶಾಯ ವ್ರತಂ ದ್ವಾದಶವಾರ್ಷಿಕಂ ॥ ೧೧ ॥
ಅಘುಘ್ನಂ ವಿಶ್ರುತಂ ಲೋಕೇ ಪ್ರಾರಬ್ಧಂ ಹಿ ಮಯಾ ದ್ವಿಜಾಃ ।
ಪ್ರಾಯಶ್ಚಿತ್ತನಿಮಿತ್ತಂ ತು ಶುದ್ಧೋ ಯಾಸ್ಯಾಮಿ ಸದ್ಗತಿಂ ॥ ೧೨ ॥
ಮದೀಯಂ ವಚನಂ ಶ್ರುತ್ವಾ ತೈಃ ಪ್ರೋಕ್ತಂ ದ್ವಿಜಸತ್ತಮೈಃ ।
ಅತೀವ ಪಾಪಿಷ್ಠತರೋ ಯೋ ಹ್ಯೇವಂ ಭಾಷಸೇಽಧಮ ॥ ೧೩ ॥
ಕಪಾಲೈರ್ಭೂಷಿತೋ ನಿಂದ್ಯೋ ವಿಶೇಷೇಣ ತು ವಿಪ್ರಹಃ ।
ನಾಕಾರಿತೋ ಮಹಾದೇವಃ ದಕ್ಷಯಜ್ಞಮಹೋತ್ಸವೇ ॥ ೧೪ ॥
ಯಸ್ಮಿನ್ಯಜ್ಞೇ ಸಮಾಯಾತಾ ಆದಿತ್ಯಾ ವಸವಸ್ತಥಾ ।
ವಿಶ್ವೇದೇವಾಶ್ಚ ಮರುತೋ ಗಂಧರ್ವಾಃ ಕಿನ್ನರಾಸ್ತಥಾ ॥ ೧೫ ॥
ಬ್ರಹ್ಮಾವಿಷ್ಣುಃ ಸಹಸ್ರಾಕ್ಷೋ ವರುಣೋ ವಾಯುರೇವ ಚ ।
ಧನದಃ ಸಾಗರಾ ನದ್ಯಃ ಸರಾಂಸಿ ಸಕಲಾನಿ ಚ ॥ ೧೬ ॥

---

೧೧. ಸರ್ವಕಾಲಗಳಲ್ಲಿಯೂ ಲೋಕೇಶ್ವರನಾದ ಮಹಾದೇವನನ್ನು ಪೂಜಿಸುತ್ತಿರುವೆನು. ಬ್ರಹ್ಮಹತ್ಯೆಯನ್ನು ಕಳೆದುಕೊಳ್ಳಲು ಹನ್ನೆರಡು ವರ್ಷಗಳ ಈ ವ್ರತವನ್ನು ಕೈಗೊಂಡಿರುವೆನು.

೧೨. ಬ್ರಾಹ್ಮಣರಿರಾ! ಸಕಲ ಪಾಪಹರವೆಂದು ಲೋಕದಲ್ಲಿ ಪ್ರಸಿದ್ಧವಾಗಿರುವ ಈ ವ್ರತವನ್ನು ನಾನು ಪ್ರಾರಂಭಿಸಿರುವೆನು. ಪ್ರಾಯಶ್ಚಿತ್ತರೂಪದಿಂದ ನಡೆಸುತ್ತಿರುವ ಈ ವ್ರತದಿಂದ ಪರಿಶುದ್ಧನಾಗಿ ನಾನು ಸದ್ಗತಿಯನ್ನು ಹೊಂದಲೆಳಸುತ್ತಿರುವೆನು.''

೧೩. ನನ್ನ ಮಾತನ್ನು ಕೇಳಿ ಆ ಬ್ರಾಹ್ಮಣಶ್ರೇಷ್ಠರು ಮತ್ತೆ ಹೇಳಲು ಪಕ್ರಮಿಸಿದರು. ''ನೀಚನೆ! ನೀನು ಮಹಾಪಾಪಿಯು. ಆದುದರಿಂದಲೇ ಈ ರೀತಿಯಾಗಿ ಮಾತನಾಡುತ್ತಿರುವೆ.

೧೪. ಕಪಾಲಗಳಿಂದಲಂಕೃತನಾದ ನೀನು ಸರ್ವಥಾ ನಿಂದಾರ್ಹನು. ಮೇಲಾಗಿ ವಿಪ್ರಘಾತಕನಾಗಿರುವೆ. ದಕ್ಷಬ್ರಹ್ಮನ ಯಜ್ಞ ಮಹೋತ್ಸವದಲ್ಲಿ ಮಹೇಶ್ವರನೂ ಸತ್ಕರಿಸಲ್ಪಡಲಿಲ್ಲ.

೧೫. ಆ ಯಜ್ಞಮಂಟಪದಲ್ಲಿ ಆದಿತ್ಯರೂ, ವಸುಗಳೂ, ವಿಶ್ವೇದೇವತೆಗಳೂ, ಮರುತರೂ, ಗಂಧರ್ವರೂ, ಕಿನ್ನರರೂ ನೆರೆದಿದ್ದರು.

೧೬. ಬ್ರಹ್ಮ, ಮಹಾವಿಷ್ಣು, ಮಹೇಂದ್ರ, ವರುಣ, ವಾಯುದೇವ, ಕುಬೇರ, ಸಮುದ್ರಗಳು, ನದಿಗಳು, ಸಕಲ ಸರೋವರಾಧಿ ದೇವತೆಗಳೂ ಸೇರಿದ್ದರು.

**ಸುಪರ್ಣಾ ಗಿರಯೋ ನಾಗಾಃ ಸರ್ವೇ ಚಾಕಾರಿತಾಃ ಕೃತಾ ।**
**ಸಾನುಗಾಸ್ತೇ ಸಭಾರ್ಯಾಶ್ಚ ಬ್ರಾಹ್ಮಣಾ ವೇದಪಾರಗಾಃ ॥ ೧೭ ॥**
**ಬ್ರಹ್ಮರ್ಷಯೋ ಮಹಾಭಾಗಾಸ್ತಥಾ ದೇವರ್ಷಯೋಽಮಲಾಃ ।**
**ಏವಮುಕ್ತ್ವಾ ಮಹಾದೇವಂ ಮಾನುಷಾಽಸ್ಥಿವಿಭೂಷಿತಂ ॥ ೧೮ ॥**
**ಅಪವಿತ್ರಮಿತಿ ಜ್ಞಾತ್ವಾ ಕಥಂ ತ್ವಂ ವಕ್ತುಮರ್ಹಸಿ ।**
**ಪ್ರವೇಶೋ ದೀಯತಾಂ ಮಹ್ಯಂ ವಿಶೇಷೇಣಾಽಸಿ ಬ್ರಹ್ಮಹಾ ॥ ೧೯ ॥**
**ಇತ್ಯುಕ್ತೋಽಹಂ ಯದಾ ವಿಪ್ರೈರ್ಮಯಾ ಪ್ರೋಕ್ತಂ ವಚಸ್ತದಾ ।**
**ಪ್ರತೀಕ್ಷ್ಯತಾಂ ಮುಹೂರ್ತಂ ತು ಭುಕ್ತ್ವಾ ಯಾಸ್ಯಾಮ್ಯಹಂ ಪುನಃ ॥**
**ಇತ್ಯುಕ್ತೇ ವಚನೇ ದೇವಿ ತಾಡಿತೋಽಹಂ ಭೃಶಂ ತದಾ ।**
**ಲೋಷ್ಟೈರ್ಲಗುಡಕೈಃ ಪಾದೈರ್ಮುಷ್ಟಿಭಿಶ್ಚ ಪುನಃ ಪುನಃ ॥ ೨೧ ॥**
**ಅಥ ಪ್ರಹಸ್ಯ ತತ್ಕ್ಷಿಪ್ತ್ವಾ ತಾಂ ವೇದಿಂ ದರ್ಭಸಂಸ್ತೃತಾಂ ।**
**ಕಪಾಲದೀಪವನ್ನಷ್ಟೋ ನ ಜ್ಞಾತೋಽಹಂ ದ್ವಿಜೋತ್ತಮೈಃ ॥ ೨೨ ॥**

---

೧೭. ಪಕ್ಷಿಗಳು, ಪರ್ವತಗಳು, ನಾಗರು ಮುಂತಾದ ಸಕಲರೂ ಆ ಯಜ್ಞದಲ್ಲಿ ಪುರಸ್ಕಾರವನ್ನು ಹೊಂದಿದರು. ವೇದಪಾರಂಗತರಾದ ಬ್ರಾಹ್ಮಣೋತ್ತಮರೂ ಭಾರ್ಯಾಶಿಷ್ಯಾದಿಗಳೊಡನೆ ಬಂದಿದ್ದರು.

೧೮–೧೯. ಮಹಾಭಾಗ್ಯಶಾಲಿಗಳಾದ ಬ್ರಹ್ಮರ್ಷಿಗಳೂ, ಪರಿಶುದ್ಧರಾದ ದೇವರ್ಷಿಗಳೂ ಆಗಮಿಸಿದ್ದರು. ಮಹಾದೇವನು ಮಾತ್ರ ಮನುಷ್ಯರ ಮೂಳೆಗಳಿಂದಲೂ ಚಿತೆಯ ಭಸ್ಮದಿಂದಲೂ ಅಲಂಕೃತನಾದುದರಿಂದ ಈ ಕರ್ಮವು ನಡೆಯುವಲ್ಲಿ ಅಪವಿತ್ರನೆಂಬುದನ್ನು ತಿಳಿದೂ ಸಹ ನೀನು 'ನನಗೆ ಪ್ರವೇಶವನ್ನು ಕೊಡಿರಿ' ಎಂದು ಹೇಗೆ ಕೇಳುವೆ? ಅಲ್ಲದೆ ನೀನು ಬ್ರಹ್ಮಘಾತಕನೂ ಆಗಿರುವೆ.''

೨೦. ಇಂತೆಂದು ಆ ಬ್ರಾಹ್ಮಣರು ನನಗೆ ಹೇಳುತ್ತಿರಲು ನಾನು ಅವರನ್ನು ಕುರಿತು ''ಒಂದು ಮುಹೂರ್ತಕಾಲ ಕ್ಷಮಿಸಿರಿ; ಊಟಮಾಡಿಕೊಂಡು ಮತ್ತೆ ಹೊರಟುಹೋಗುವೆನು'' ಎಂದೆನು.

೨೧. ದೇವಿಯೆ! ಇಂತೆಂದು ನಾನು ಹೇಳಲು ಅವರು ನನ್ನನ್ನು ಲೋಹದ ಕೋಲುಗಳಿಂದಲೂ, ದೊಣ್ಣೆಗಳಿಂದಲೂ, ಒದೆಗಳಿಂದಲೂ, ಮುಷ್ಟಿಗಳಿಂದಲೂ ಮತ್ತೆ ಮತ್ತೆ ಹಿಂಸಿಸಿದರು.

೨೨. ಆಗ ನಾನು ಗಟ್ಟಿಯಾಗಿ ನಕ್ಕು ದರ್ಭಾಸ್ತೀರ್ಣವಾದ ಆ ವೇದಿಕೆಯಲ್ಲಿ ಕೈಯೊಳಗಿನ ಕಪಾಲವನ್ನು ಹಾಕಿ ಕಪಾಲದೀಪದಂತೆ ಅದೃಶ್ಯನಾದೆನು. ಆ ಬ್ರಾಹ್ಮಣೋತ್ತಮರು ನನ್ನನ್ನು ಗುರುತಿಸಲಿಲ್ಲ.

ಮಯಿ ನಷ್ಟೇ ಕಪಾಲಂ ತತ್ಕ್ಷಿಪ್ತಂ ಮಂಡಪಬಾಹ್ಯತಃ ।
ಅಥಾಽನ್ಯತ್ತತ್ರ ಸಂಜಾತಂ ತಾದೃಗ್ರೂಪಂ ಯಶಸ್ವಿನಿ ॥ ೨೩ ॥
ಏವಂ ಶತಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ।
ತತ್ರ ಕ್ಷಿಪ್ತಾನಿ ಜಾತಾನಿ ತತಸ್ತೇ ವಿಸ್ಮಯಾನ್ವಿತಾಃ ॥ ೨೪ ॥
ಅಥಾಽಽಹುರ್ಜ್ಞಾನಿನಃ ಸರ್ವೇ ನೇದಮನ್ಯತ್ರ ಚೇಷ್ಟಿತಂ ।
ಋತೇ ದೇವಾನ್ಮಹಾದೇವಾದ್ಗಂಗಾಚಂದ್ರಾರ್ಧಶೇಖರಾತ್ ॥ ೨೫ ॥
ತತೋಽಹಂ ವಿವಿಧೈಃ ಸ್ತೋತ್ರೈಃ ಸ್ತುತೋ ವಿಪ್ರೈಃ ಪೃಥಕ್ಪೃಥಕ್ ।
ಹೋಮಂ ಚಕ್ರುಶ್ಚ ತೇ ವಹ್ನೌ ಮಂತ್ರೈಶ್ಚ ಶತರುದ್ರಿಯೈಃ ॥ ೨೬ ॥
ಅಹಂ ತುಷ್ಟಸ್ತದಾ ದೇವಿ ದ್ವಿಜಾನಾಮನುಕಂಪಯಾ ।
ವ್ರಿಯತಾಂ ಬ್ರಾಹ್ಮಣಾಃ ಸರ್ವೇ ವರಂ ಯನ್ಮನಸೇಪ್ಸಿತಂ ॥ ೨೭ ॥
ತದಾ ತೇ ಬ್ರಾಹ್ಮಣಾಃ ಪ್ರೋಚುರ್ಯದಜ್ಞಾನಾದ್ವಧಸ್ತವ ।
ಕೃತಸ್ತೇನ ಕೃತಾಽಸ್ಮಾಭಿರ್ಬ್ರಹ್ಮಹತ್ಯಾ ಜಗತ್ಪ್ರಭೋ ॥ ೨೮ ॥

೨೩. ಸುಮಂಗಳೆಯೆ! ಹೀಗೆ ನಾನು ಅದೃಶ್ಯನಾಗಲು ಅವರು ಆ ಕಪಾಲವನ್ನು ಮಂಟಪದ ಹೊರಗೆ ಎಸೆದರು. ಆದರೆ ಮತ್ತೊಂದು ಅದೇ ಸ್ವರೂಪದ ಕಪಾಲವು ವೇದಿಯಲ್ಲಿ ಕಂಡಿತು.

೨೪. ಇಂತು ನೂರು, ಸಾವಿರ, ಪ್ರಯುತ, ಅರ್ಬುದ ಸಂಖ್ಯೆಯ ಕಪಾಲಗಳನ್ನೆತ್ತಿಹಾಕುತ್ತಿದ್ದರೂ ವೇದಿಯಲ್ಲಿ ಒಂದು ಕಪಾಲವಿದ್ದೇ ಇದ್ದಿತು. ಅದನ್ನು ಕಂಡು ಕಡೆಗೆ ಅವರು ವಿಸ್ಮಯಾವಿಷ್ಟರಾದರು.

೨೫. ಆಗ ಸಕಲಜ್ಞಾನಿಗಳೂ, "ದೇವದೇವನೂ, ಗಂಗೆ ಮತ್ತು ಅರ್ಧಚಂದ್ರರನ್ನು ತಲೆಯಲ್ಲಿ ಧರಿಸಿದವನೂ ಆದ ಮಹಾದೇವನ ಕಾರ್ಯವಲ್ಲದೆ ಇದು ಮತ್ತೊಬ್ಬನದಲ್ಲ" ಎಂದು ನಿಶ್ಚಯಿಸಿ ಹೇಳಿದರು.

೨೬. ಆಗ ಆ ವಿಪ್ರರು ಒಬ್ಬೊಬ್ಬರಾಗಿ ವಿವಿಧ ಸ್ತೋತ್ರಗಳಿಂದ ನನ್ನನ್ನು ಸ್ತುತಿಸಿದರು. ಮತ್ತು ಅಗ್ನಿಯಲ್ಲಿ ಶತರುದ್ರೀಯದ ಮಂತ್ರಗಳಿಂದ ಹೋಮವನ್ನು ಮಾಡಿದರು.

೨೭. ದೇವಿಯೆ! ಅದರಿಂದ ನಾನು ತೃಪ್ತನಾಗಿ ಬ್ರಾಹ್ಮಣರಲ್ಲಿ ಅನುಕಂಪವುಳ್ಳವನಾದೆನು. ಮತ್ತು "ದ್ವಿಜೋತ್ತಮರಿರಾ! ನೀವೆಲ್ಲರೂ ನಿಮ್ಮ ಮನಸ್ಸಿನಲ್ಲಿರುವ ಕೋರಿಕೆಗಳನ್ನು ಕೇಳಿರಿ" ಎಂದೆನು.

೨೮. ಆಗ ಬ್ರಾಹ್ಮಣರಿಂತೆಂದರು. "ಲೋಕೇಶ್ವರನೆ! ನಾವು ಅಜ್ಞಾನದಿಂದ ನಿನ್ನನ್ನು ಹಿಂಸೆಮಾಡಿದೆವು. ಅದರಿಂದ ನಾವು ಬ್ರಹ್ಮಹತ್ಯೆಯನ್ನು ಮಾಡಿದಂತೆಯೇ ಆಯಿತು.

ಬ್ರಹ್ಮಹತ್ಯಾವಿನಾಶಾಯ ಪ್ರಸಾದಂ ಕುರು ನಃ ಪ್ರಭೋ ।
ವರಯಾಮೋ ವರಂ ಹ್ಯೇನಂ ನಾಽನ್ಯಂ ವರಮಭೀಪ್ಸಿತಂ ॥ ೨೯ ॥
ದ್ವಿಜಾನಾಂ ಚ ತದಾ ತೇಷಾಮುಗ್ರೇ ಕಥಿತವಾನಿದಂ ।
ಯತ್ರ ರಾಶಿಃ ಕಪಾಲಾನಾಂ ಭವದ್ಭಿರ್ವಿಹಿತೋ ಭುವಿ ॥ ೩೦ ॥
ಅನಾದಿಲಿಂಗಂ ತತ್ರಾಽಽಸೀಚ್ಛನ್ನಂ ಕಾಲವಿಪರ್ಯಯೇ ।
ಪಶ್ಯಂತು ವಿಪ್ರಾಸ್ತಲ್ಲಿಂಗಂ ಬ್ರಹ್ಮಹತ್ಯಾವಿಮೋಚನಂ ॥ ೩೧ ॥
ಕೃತಾ ಮಯಾಽಪಿ ವಿಪ್ರೇಂದ್ರಾ ಬ್ರಹ್ಮಹತ್ಯಾ ಸ್ವಯಂ ಪುರಾ ।
ಛಿಂದತಾ ಬ್ರಹ್ಮಣಃ ಶೀರ್ಷಂ ಪಂಚಮಂ ತೇಜಸೋತ್ಕಟಂ ॥ ೩೨ ॥
ಬ್ರಹ್ಮಹತ್ಯಾ ತತೋ ಜಾತಾ ಮಮಾಽತೀವ ಸುದುಃಸಹಾ ।
ಕಪಾಲಂ ಚ ಕರೇ ಲಗ್ನಂ ತಥಾ ಚಾಽತೀವ ದುಃಸಹಂ ॥ ೩೩ ॥
ದಹ್ಯಮಾನಸ್ತತಶ್ಚಾಽಹಂ ವ್ಯಾಪ್ತೋ ವೈ ಬ್ರಹ್ಮಹತ್ಯಯಾ ।
ನಾಶಾಯ ಸತ್ವರಂ ತಸ್ಯಾಸ್ತೀರ್ಥಯಾತ್ರಾಮಹಂ ಗತಃ ॥ ೩೪ ॥
ಗತಃ ಸರ್ವೇಷು ತೀರ್ಥೇಷು ನೈವ ಮುಕ್ತಸ್ತು ಹತ್ಯಯಾ ।
ತತೋ ದುಃಖೀ ಸುಸಂತಪ್ತೋ ನೈವ ಲೇಭೇ ಸುಖಂ ಕ್ವಚಿತ್ ॥ ೩೫ ॥

---

೨೯. ಸ್ವಾಮಿಯೆ! ಈ ಬ್ರಹ್ಮಹತ್ಯೆಯು ಕಳೆಯುವಂತೆ ನಮಗೆ ವರವನ್ನು ಅನುಗ್ರಹಿಸುವವನಾಗು. ಈ ವರವೊಂದನ್ನು ಬೇಡುವೆವು. ಬೇರೆ ಯಾವ ಅಭಿಲಾಷೆಯೂ ನಮಗಿರುವುದಿಲ್ಲ.''

೩೦–೩೧. ಆಗ ಆ ಬ್ರಾಹ್ಮಣೋತ್ತಮರ ಮಧ್ಯದಲ್ಲಿ ನಾನು ಹೇಳಿದೆನು. ನೀವು ಈ ಕಪಾಲಗಳ ರಾಶಿಯನ್ನು ಭೂಮಿಯಲ್ಲಿ ಹಾಕಿರುವಿರಷ್ಟೆ. ಅಲ್ಲಿಯೇ ಅನಾದಿಕಾಲದಿಂದ ಲಿಂಗವೊಂದು ನೆಲಸಿರುವುದು. ಕಾಲವೈಪರೀತ್ಯದಿಂದ ಅದು ಈಗ ಅಡಗಿರುವುದು. ಬಾಹ್ಮಣರಿರಾ! ನೀವು ಬ್ರಹ್ಮಹತ್ಯಾಮೋಚಕವಾದ ಆ ಲಿಂಗದ ದರ್ಶನವನ್ನು ಪಡೆಯಿರಿ.

೩೨. ಎಲೈ ವಿಪ್ರೇಂದ್ರರಿರಾ! ಅತಿ ತೇಜಸ್ಸಿನಿಂದ ಕೂಡಿದ್ದ ಬ್ರಹ್ಮದೇವನ ಐದನೆಯ ತಲೆಯನ್ನು ಕತ್ತರಿಸಿದ ನಾನೂ ಬ್ರಹ್ಮಹತ್ಯೆಯನ್ನು ಮಾಡಿದ್ದೆನು.

೩೩. ಆಗ ನನಗೆ ಸಹಿಸಲಶಕ್ಯವಾದ ಬ್ರಹ್ಮಹತ್ಯೆಯು ಅಂಟಿಕೊಂಡಿತು. ಮತ್ತು ಅತಿ ತೇಜೋಯುಕ್ತವಾದ ಆ ಬ್ರಹ್ಮಕಪಾಲವು ನನ್ನ ಕೈಯಲ್ಲಿಯೇ ಹತ್ತಿಕೊಂಡಿತು.

೩೪–೩೫. ಅದರಿಂದ ಸುಡಲ್ಪಟ್ಟವನೂ ಬ್ರಹ್ಮಹತ್ಯೆಯಿಂದ ಲಿಪ್ತನೂ ಆಗಿ ನಾನು ಅದರ ನಾಶವನ್ನು ಮಾಡಲೆಳಸಿ ಅದಕ್ಕಾಗಿ ತೀರ್ಥಯಾತ್ರೆಯನ್ನು ಕೈಕೊಂಡು ಹೊರಟೆನು. ಸಕಲತೀರ್ಥಗಳನ್ನು ಸೇವಿಸಿದರೂ ಬ್ರಹ್ಮಹತ್ತೆಯು ಕಳೆದುಹೋಗಲಿಲ್ಲ. ಅದರಿಂದ ನಾನು ದುಃಖಿಗೊಂಡು ಸಂತಾಪದಿಂದ ಎಳ್ಳಷ್ಟು ಸುಖವನ್ನೂ ಕಾಣಲಾರದಾದೆನು.

ಏತಸ್ಮಿನ್ನಂತರೇ ದೈವೀ ವಾಗುವಾಚಾಽಶರೀರಿಣೀ ।
ಗಚ್ಛಾಽವಂತೀಂ ಸ್ವಯಂ ನಾಥ ಕಿಮರ್ಥಂ ಖಿದ್ಯತೇ ವೃಥಾ ॥ ೩೬ ॥
ಮಹಾಕಾಲವನಂ ಪುಣ್ಯಂ ತ್ವಯಾ ನಾಥ ವಿನಿರ್ಮಿತಂ ।
ಕಪಾಲಕರಸಂಸ್ಥಾನಂ ರುದ್ರಮದ್ಭುತದರ್ಶನಂ ।
ನ ಜಾನಾಸಿ ಕಥಂ ಕ್ಷೇತ್ರಂ ಮಹಾಪಾತಕನಾಶನಂ ॥ ೩೭ ॥
ತಸ್ಮಿನ್ಕ್ಷೇತ್ರೇ ಮಹಲ್ಲಿಂಗಂ ಗಜರೂಪಸ್ಯ ಸನ್ನಿಧೌ ।
ವಿದ್ಯತೇ ಪಶ್ಯ ದೇವೇಶ ಬ್ರಹ್ಮಹತ್ಯಾ ಪ್ರಣಶ್ಯತಿ ॥ ೩೮ ॥
ತತೋಽಹಮಾಗತಸ್ತೂರ್ಣಂ ವಾಕ್ಯಂ ಶ್ರುತ್ವಾ ತದೋತ್ತಮಂ ।
ಮಹಲ್ಲಿಂಗಂ ಮಯಾ ದೃಷ್ಟಂ ಕಪಾಲಕರಸಂಸ್ಥಿತಂ ॥ ೩೯ ॥
ಮಮ ಹಸ್ತಾತ್ತದಾ ವಿಪ್ರಾಃ ಕಪಾಲಮಪತದ್ಭುವಿ ।
ಕಪಾಲೇಶ್ವರದೇವೋಽಯಮಿತಿ ನಾಮ ಮಯಾ ಕೃತಂ ॥ ೪೦ ॥
ಪಶ್ಯಂತು ವಿಪ್ರಾಸ್ತಂ ದೇವಂ ಕಪಾಲೇಶ್ವರಸಂಜ್ಞಕಂ ।
ಯಸ್ಯ ದರ್ಶನಮಾತ್ರೇಣ ನಿಷ್ಕಲಂಕಾ ಭವಿಷ್ಯಥ ॥ ೪೧ ॥

೩೬. ಇಷ್ಟರಲ್ಲಿ ನನಗೆ ಅಶರೀರವಾಣಿಯೊಂದು ನುಡಿಯಿತು. ನಾಥನೆ! ನಿಷ್ಕಾರಣವಾಗಿ ಏಕೆ ವ್ಯಥೆಗೊಳ್ಳುತ್ತಿರುವೆ? ನೀನೀಗ ನೇರವಾಗಿ ಅವಂತೀ ಕ್ಷೇತ್ರಕ್ಕೆ ಹೋಗು.

೩೭. ಮಹೇಶ್ವರ! ಪರಮ ಪವಿತ್ರವಾದ ಮಹಾಕಾಲವನವೆಂಬ ಕ್ಷೇತ್ರವನ್ನು ನೀನೇ ನಿರ್ಮಿಸಿರುವೆಯಲ್ಲವೆ. ಕಪಾಲವನ್ನು ಕೈಯಲ್ಲಿ ಹಿಡಿದಿರುವ ಅದ್ಭುತಸ್ವರೂಪನಾದ ಮಹಾರುದ್ರನಿಗೆ ಅದೇ ತಕ್ಕ ನಿವಾಸಸ್ಥಾನವಾಗಿರುವುದು. ಮಹಾಪಾತಕಗಳನ್ನೂ ನಾಶಗೊಳಿಸುವ ಆ ಮಹಾಕ್ಷೇತ್ರವು ನಿನಗೆ ತಿಳಿಯದಿರುವ ಪ್ರದೇಶವೆ?

೩೮. ಆ ಕ್ಷೇತ್ರದಲ್ಲಿ ಗಜರೂಪನ ಸಮ್ಮುಖದಲ್ಲಿ ಒಂದು ಮಹಾಲಿಂಗವು ಕಾಣುತ್ತಿರುವುದು. ದೇವೇಶ್ವರನೆ! ಅದನ್ನು ನೋಡಲು ನಿನ್ನ ಬ್ರಹ್ಮಹತ್ಯೆಯ ಪಾಪವು ಕಳೆದುಹೋಗುವುದು.''

೩೯. ಈ ಉತ್ತಮವಾಕ್ಯವನ್ನು ಕೇಳಿ ನಾನು ತಡಮಾಡದೆ ಆ ಮಹಾಕ್ಷೇತ್ರವನ್ನು ಸೇರಿ ಕಪಾಲವನ್ನು ಕೈಯಲ್ಲಿ ಧರಿಸಿ ನಿಂತಿರುವಂತಿದ್ದ ಆ ಮಹಾಲಿಂಗವನ್ನು ನೋಡಿದೆನು.

೪೦. ವಿಪ್ರರಿರಾ! ನನ್ನ ಕೈಯಲ್ಲಿದ್ದ ಕಪಾಲವು ಆ ಕ್ಷಣದಲ್ಲಿಯೇ ನೆಲಕ್ಕೆ ಬಿದ್ದಿತು. ಆದುದರಿಂದ ಆ ಲಿಂಗಕ್ಕೆ ನಾನು ಕಪಾಲೇಶ್ವರನೆಂಬ ಹೆಸರನ್ನು ಇಟ್ಟೆನು.

೪೧. ಬ್ರಾಹ್ಮಣರಿರಾ! ಆ ಕಪಾಲೇಶ್ವರನಾಮಕವಾದ ಮಹಾಲಿಂಗವನ್ನು ನೋಡಿರಿ. ಅದರ ದರ್ಶನಮಾತ್ರದಿಂದಲೇ ನಿಮ್ಮ ಬ್ರಹ್ಮಹತ್ಯಾಪಾತಕವು ನಾಶವಾಗುವುದು.

ಲಿಂಗಂ ದೃಷ್ಟಂ ತದಾ ತೈಸ್ತು ಕಪಾಲೈರ್ಬಹುಭಿರ್ವೃತಂ ।
ಕೃತಾರ್ಥಾಸ್ತೇ ತದಾ ಜಾತಾಸ್ತಸ್ಯ ಲಿಂಗಸ್ಯ ದರ್ಶನಾತ್ ।
ಅತೋಽಸೌ ಭುವಿ ವಿಖ್ಯಾತಃ ಕಪಾಲೇಶ್ವರಸಂಜ್ಞಕಃ ॥ ೪೨ ॥
ಯೇಽರ್ಚಯಂತಿ ಮಹಾದೇವಿ ಕಪಾಲೇಶ್ವರಸಂಜ್ಞಕಂ ।
ಕೃತಪುಣ್ಯಾ ನರಾ ದೇವಿ ತೇ ಯಾಂತಿ ಪರಮಂ ಪದಂ ॥ ೪೩ ॥
ಕೃತ್ವಾಽಪಿ ಪಾತಕಂ ಘೋರಂ ಬ್ರಹ್ಮಹತ್ಯಾದಿಕಂ ನರಃ ।
ತತ್ಪಾಪಂ ವಿಲಯಂ ಯಾತಿ ಲಿಂಗಸ್ಯಾಽಸ್ಯ ಚ ದರ್ಶನಾತ್ ॥ ೪೪ ॥
ಕರ್ಮಣಾ ಮನಸಾ ವಾಚಾ ಯತ್ಪಾಪಂ ಸಮುಪಾರ್ಜಿತಂ ।
ತತ್ಕ್ಷಪಯತಿ ದೇವೋಽಯಂ ಚತುರ್ದಶ್ಯಾಂ ಸಮರ್ಚಿತಃ ॥ ೪೫ ॥
ಪ್ರಸಂಗಾದಪಿ ಯೇ ಪೂಜಾಂ ಕರಿಷ್ಯಂತಿ ವರಾನನೇ ।
ತೇಽಪಿ ಕಾಮಾನವಾಪ್ಸ್ಯಂತಿ ಯಾಂಶ್ಚ ಕಾಂಕ್ಷಿತ್ಸುದುರ್ಲಭಾನ್ ॥ ೪೬ ॥
ಐಶ್ವರ್ಯಂ ಧರ್ಮಮತುಲಂ ದೀರ್ಘಮಾಯುರರೋಗತಾಂ ।
ನಿಃಸಪತ್ನತ್ವಮತುಲಂ ಯಚ್ಚಾಽನ್ಯತ್ತದವಾಪ್ನುಯಾತ್ ॥ ೪೭ ॥

---

೪೨. ಇದನ್ನು ಕೇಳಿ ಆ ವಿಪ್ರರು ಮಹಾಕಾಲವನದಲ್ಲಿ ಅನೇಕ ಕಪಾಲಗಳಿಂದಾವೃತವಾಗಿದ್ದ ಆ ಲಿಂಗವನ್ನು ನೋಡಿದರು. ಮತ್ತು ಅದರ ದರ್ಶನದಿಂದ ಕೃತಕೃತ್ಯರಾದರು. ಆದುದರಿಂದಲೂ ಅದು ಭೂಲೋಕದಲ್ಲಿ ಕಪಾಲೇಶ್ವರನೆಂಬ ಹೆಸರಿನಿಂದ ವಿಖ್ಯಾತವಾಗಿರುವುದು.

೪೩. ಎಲೌ ಮಹೇಶ್ವರಿಯೇ! ಯಾವ ಪುಣ್ಯವಂತರಾದ ಮಾನವರು ಈ ಕಪಾಲೇಶ್ವರಮಹಾಲಿಂಗದ ಪೂಜೆಯನ್ನು ಮಾಡುವರೊ, ಅವರು ಪರಮಪದವನ್ನು ಸೇರುವರು.

೪೪. ಬ್ರಹ್ಮಹತ್ಯೆಯೇ ಮುಂತಾದ ಘೋರಪಾತಕಗಳನ್ನು ಮಾಡಿದವನಾದರೂ ಈ ಮಹಾಲಿಂಗದ ದರ್ಶನದಿಂದ ಅವನ ಪಾಪವು ನಾಶವನ್ನು ಹೊಂದುವುದು.

೪೫. ದೇಹದಿಂದಾಗಲಿ, ಮನಸ್ಸಿನಿಂದಾಗಲಿ, ಮಾತುಗಳಿಂದಾಗಲಿ ಯಾವ ಪಾಪಗಳನ್ನು ಸಂಪಾದಿಸಿರುವೆವೊ, ಅವುಗಳನ್ನೆಲ್ಲ ಚತುರ್ದಶಿಯ ದಿನದ ಪೂಜೆಯಿಂದ ಈ ದೇವದೇವನು ನಾಶಗೊಳಿಸುವನು.

೪೬. ಸುಂದರಾಂಗಿಯೆ! ಪ್ರಸಂಗವಶದಿಂದಾದರೂ ಯಾರು ಈ ಲಿಂಗದ ಪೂಜೆಯನ್ನು ಮಾಡುವರೊ, ಅವರೂ ಸಹ ಅತ್ಯಂತ ದುರ್ಲಭಗಳಾದ ಮನೋಭೀಷ್ಟಗಳನ್ನೂ ಪಡೆಯುವರು.

೪೭. ಅಲ್ಲದೆ ಅವರ ಐಶ್ವರ್ಯ, ಅಪಾರವಾದ ಧರ್ಮಸಂಚಯ, ದೀರ್ಘಾಯುಷ್ಯ, ಆರೋಗ್ಯ, ದಾಯಾದಿಗಳ ಹಿಂಸೆಯಿಂದ ಬಿಡುಗಡೆ, ಮತ್ತು ಇತರ ಎಲ್ಲವಿಧಗಳಾದ ಅಭಿಲಾಷೆಗಳೂ ನೆರವೇರುವುವು.

ಅತೀವ ಪಾಪಿನೋ ಯೇ ಚ ಕ್ರೂರಕರ್ಮರತಾ ನರಾಃ ।
ವಿಪಾಪ್ಮಾನೋ ಭವಿಷ್ಯಂತಿ ಗಣೇಶಾಶ್ಚ ಮಮ ಪ್ರಿಯೇ ॥ ೪೮ ॥
ನಿಯಮೇನ ಪ್ರಪಶ್ಯಂತಿ ಯೇ ದೇವಂ ವತ್ಸರಂ ಪ್ರಿಯೇ ।
ಪಶ್ಯಂತಿ ತನುಂ ತ್ಯಕ್ತ್ವಾ ಮದೀಯಂ ಭವನಂ ಪ್ರಿಯಂ ॥ ೪೯ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕಪಾಲೇಶ್ವರದೇವಸ್ಯ ಸ್ವರ್ಗದ್ವಾರೇಶ್ವರಂ ಶೃಣು ॥ ೫೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕಪಾಲೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟಮೋಽಧ್ಯಾಯಃ

೪೮. ಪ್ರಿಯಳೆ, ಅತ್ಯಂತ ಪಾಪಿಗಳೂ, ಕ್ರೂರಕರ್ಮನಿರತರಾದವರೂ ಕಪಾಲೇಶ್ವರನ ಪೂಜೆಯಿಂದ ತಮ್ಮ ಸಕಲ ಪಾಪಗಳನ್ನೂ ಕಳೆದುಕೊಂಡು ನನ್ನ ಗಣಗಳಲ್ಲಿ ಅಗ್ರೇಸರರಾಗುವರು.

೪೯. ನಿಯಮದಿಂದ ಒಂದು ವರ್ಷದವರೆಗೆ ಯಾರು ನಿತ್ಯವೂ ಈ ಮಹಾಲಿಂಗದ ದರ್ಶನವನ್ನು ಮಾಡುವರೊ, ಅವರು ದೇಹವನ್ನು ಬಿಡಲು ಸರ್ವಾಪೇಕ್ಷಿತವಾದ ನನ್ನ ಲೋಕವನ್ನು ನೋಡುವರು.

೫೦. ಎಲೌ ದೇವಿಯೆ! ಇಂತು ಕಪಾಲೇಶ್ವರ ಮಹಾದೇವನ ಪಾಪನಾಶಕವಾದ ಮಹಾಮಹಿಮೆಯನ್ನು ನಿನಗಾಗಿ ವಿಸ್ತರಿಸಿ ಹೇಳಿರುವೆನು. ಇನ್ನು ಸ್ವರ್ಗದ್ವಾರೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕಪಾಲೇಶ್ವರಮಾಹಾತ್ಮ್ಯವರ್ಣನ"ವೆಂಬ
ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ಸ್ವರ್ಗದ್ವಾರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ರುದ್ರ ಉವಾಚ:—

ಸ್ವರ್ಗದ್ವಾರೇಶ್ವರಂ ಲಿಂಗಂ ನವಮಂ ವಿದ್ಧಿ ಪಾರ್ವತಿ ।
ಸರ್ವಪಾಪಹರಂ ದೇವಿ ಸ್ವರ್ಗಮೋಕ್ಷಫಲಪ್ರದಂ ॥ ೧ ॥
ಯದಾ ದೇವಿ ಸಮಾಯಾತಾಃ ಕೈಲಾಸೇ ಪರ್ವತೋತ್ತಮೇ ।
ಅಶ್ವಿನ್ಯಾದ್ಯಾ ಭಗಿನ್ಯಸ್ತಾಸ್ತ್ವಾಂ ದೃಷ್ಟ್ವಾ ವಿಸ್ಮಯಾನ್ವಿತಾಃ ॥ ೨ ॥
ನಿಮಂತ್ರಿತಾ ವಯಂ ಯಜ್ಞೇ ಸಕಾಂತಾಃ ಸಪರಿಗ್ರಹಾಃ ।
ಸ್ನೇಹೇನ ದೇವಿ ತಾತೇನ ಬಹುಮಾನಪುರಃಸರಂ ॥ ೩ ॥
ಕಚ್ಚಿತ್ಸ್ಮೃತಾ ವಿಶಾಲಾಕ್ಷಿ ಕಿಂ ವಾ ತಾತಸ್ಯ ವಿಸ್ಮೃತಿಃ ।
ಕಾರಣಂ ಕಿಂ ಸಮುದ್ದಿಶ್ಯ ತಾತೇನ ನ ನಿಮಂತ್ರಿತಾ ॥ ೪ ॥
ತಾಸಾಂ ತದ್ವಚನಂ ಶ್ರುತ್ವಾ ಅವಮಾನಾತ್ತದಾ ತ್ವಯಾ ।
ಪ್ರಾಣಾ ಮುಕ್ತಾಸ್ತು ಯೋಗೇನ ಪುರತಸ್ತಾಸು ಪಾರ್ವತಿ ॥ ೫ ॥

---

### ಕನ್ನಡದ ಅನುವಾದ

#### ಸ್ವರ್ಗದ್ವಾರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪರ್ವತಕುಮಾರಿಯೆ! ಒಂಬತ್ತನೆಯ ಮಹಾಲಿಂಗವೇ ಸ್ವರ್ಗದ್ವಾರೇಶ್ವರವೆಂದು ತಿಳಿ. ಇದು ಸಕಲ ಪಾಪಗಳನ್ನು ಪರಿಹರಿಸುವುದೂ ಸ್ವರ್ಗಮೋಕ್ಷಗಳನ್ನು ಕೊಡುವುದೂ ಆಗಿರುವುದು.

೨. ದೇವಿಯೆ! ಅಶ್ವಿನಿಯೇ ಮೊದಲಾದ ನಿನ್ನ ಸಹೋದರಿಯರು ದಕ್ಷಯಜ್ಞದ ಕಾಲದಲ್ಲಿ ಒಮ್ಮೆ ಕೈಲಾಸಪರ್ವತಕ್ಕೆ ಬಂದು ನಿನ್ನನ್ನು ಕಂಡು ವಿಸ್ಮಯಗೊಂಡು ಇಂತೆಂದರು.

೩. "ತಂಗಿಯೆ! ತಂದೆಯು ವಾತ್ಸಲ್ಯದಿಂದ ನಮಗೆ ಉಡುಗೊರೆಗಳನ್ನಿತ್ತು ಗಂಡಂದಿರು ಪರಿವಾರದೊಡನೆ ತನ್ನ ಯಜ್ಞಮಹೋತ್ಸವಕ್ಕೆ ಬರುವಂತೆ ಹೇಳಿಕಳುಹಿಸಿದನು.

೪. ಸತಿಯೆ! ನಮ್ಮ ತಂದೆಯು ನಿನ್ನನ್ನು ನೆನೆಸಿಕೊಂಡನೊ? ಅಥವಾ ಮರೆತೇಹೋದನೊ? ಯಾವ ಕಾರಣದಿಂದ ತಂದೆಯು ನಿನ್ನನ್ನು ಕರೆಯಬಯಸಲಿಲ್ಲ?"

೫. ಅವರ ಆ ಮಾತುಗಳನ್ನು ಕೇಳಿ ನೀನು ಅವಮಾನವನ್ನು ಸಹಿಸಲಾರದೆ ಯೋಗವನ್ನು ಧಾರಣೆಮಾಡಿ ಅವರೆದುರಿನಲ್ಲಿಯೇ ಪ್ರಾಣವನ್ನು ತ್ಯಜಿಸಿದೆ.

ಅಥ ತಾಃ ಶೋಕಸಂತಪ್ತಾ ಗತಾ ಯತ್ರ ಪ್ರಜಾಪತಿಃ ।
ಆಚಖ್ಯುಃ ಸಕಲಂ ವೃತ್ತಂ ದಕ್ಷಸ್ಯಾಗ್ರೇ ಯಥಾತಥಂ ॥ ೬ ॥
ತಚ್ಛ್ರುತ್ವಾ ದಾರುಣಂ ವಾಕ್ಯಂ ದಕ್ಷೋ ನೋವಾಚ ಕಿಂಚನ ॥ ೭ ॥
ಮಯಾ ದೃಷ್ಟ್ವಾ ಯದಾ ದೇವಿ ಭೂಮೌ ಪಂಚತ್ವಮಾಗತಾ ।
ಯಜ್ಞಪ್ರಧ್ವಂಸನಾರ್ಥಾಯ ತದಾ ವೈ ಪ್ರೇರಿತಾ ಗಣಾಃ ॥ ೮ ॥
ತೇ ಗತ್ವಾಽಥ ಗಣಾ ರೌದ್ರಾಃ ಶತಶೋಽಥ ಸಹಸ್ರಶಃ ।
ವಿರೂಪಾ ಭೀಷಣಾ ರೌದ್ರಾ ನಾನಾಶಸ್ತ್ರಾ ಮಹಾಬಲಾಃ ।
ಮುಮುಚುಃ ಶರವರ್ಷಾಣಿ ಕುರ್ವಂತೋ ಭೈರವಾನ್ರವಾನ್ ॥ ೯ ॥
ತತೋ ದೇವಗಣಾಃ ಸರ್ವೇ ವಸವಃ ಸಹ ಭಾಸ್ಕರೈಃ ।
ವಿಶ್ವೇದೇವಾಶ್ಚ ಸಾಧ್ಯಾಶ್ಚ ಧನುರ್ಹಸ್ತಾ ಮಹಾಬಲಾಃ ॥ ೧೦ ॥
ಯುದ್ಧಾಯ ಚ ವಿನಿಷ್ಕ್ರಾಂತಾ ಮುಮುಚುಃ ಸಾಯಕಾನ್ ಶಿತಾನ್ ।
ತೇ ಸಮೇತ್ಯಾಽಥ ಯುಯುಧುಃ ಪ್ರಮಥಾ ವಿಬುಧೈಃ ಸಹ ।
ಮುಮುಚುಃ ಶರವರ್ಷಾಣಿ ವಾರಿಧಾರಾ ಯಥಾ ಘನಾಃ ॥ ೧೧ ॥

---

೬. ಆದರಿಂದ ಶೋಕಸಂತಪ್ತರಾದ ಅವರೆಲ್ಲರೂ ದಕ್ಷಪ್ರಜಾಪತಿಯಲ್ಲಿಗೆ ಹೋಗಿ ನಡೆದ ವಿಚಾರವನ್ನೆಲ್ಲ ಸಮಗ್ರವಾಗಿ ಅವನಲ್ಲಿ ಹೇಳಿಕೊಂಡರು.

೭. ದಕ್ಷಬ್ರಹ್ಮನು ಕಠೋರವಾದ ಈ ವಾಕ್ಯಗಳನ್ನು ಕೇಳಿದರೂ ಏನನ್ನೂ ಹೇಳಲಿಲ್ಲ.

೮. ಪಾರ್ವತಿಯೆ! ನೀನು ಪ್ರಾಣವನ್ನುಳಿದು ಭೂಮಿಯಲ್ಲಿ ಬಿದ್ದಿದ್ದುದನ್ನು ನೋಡಿದೊಡನೆಯೇ ನಾನು ಆ ಯಜ್ಞವನ್ನು ಧ್ವಂಸಗೊಳಿಸಲು ನನ್ನ ಗಣಗಳನ್ನು ಕಳುಹಿಸಿಕೊಟ್ಟೆನು.

೯. ವಿಕಾರಸ್ವರೂಪರೂ, ಭಯಂಕರರೂ, ಅನೇಕ ಆಯುಧಗಳನ್ನು ಹಿಡಿದವರೂ, ಮಹಾಬಲಶಾಲಿಗಳೂ ಆದ ಆ ಮಾಹೇಶ್ವರಗಣಗಳು ನೂರಾರು ಸಾವಿರಾರು ಸಂಖ್ಯೆಯಿಂದ ಯಜ್ಞಮಂಟಪವನ್ನು ಸೇರಿ ಭೀಕರವಾದ ಸಿಂಹನಾದವನ್ನು ಮಾಡುತ್ತ ಬಾಣಗಳ ಮಳೆಗಳನ್ನೇ ಕರೆದರು.

೧೦. ಆಗ ಸಕಲದೇವತಾಗಣಗಳೂ, ವಸುಗಳೂ, ಆದಿತ್ಯರೂ, ವಿಶ್ವೇದೇವತೆಗಳೂ, ಸಾಧ್ಯರೂ ಮಹಾಪರಾಕ್ರಮಿಗಳಾಗಿ ಬಿಲ್ಲುಗಳನ್ನು ಕೈಗಳಲ್ಲಿ ಹಿಡಿದು ಯುದ್ಧಸನ್ನದ್ಧರಾದರು.

೧೧. ಅವರೆಲ್ಲರೂ ರಣರಂಗಕ್ಕೆ ನುಗ್ಗಿಬಂದು ತೀಕ್ಷ್ಣಗಳಾದ ಬಾಣಗಳನ್ನು ಸುರಿಸಿದರು. ಪ್ರಮಥಗಣಗಳೂ ದೇವತೆಗಳೊಡನೆ ಕಲೆತು ಮಳೆಯನ್ನು ಸುರಿಸುವ ಮೇಘಗಳಂತೆ ಬಾಣಗಳನ್ನು ಕರೆಯುತ್ತ ಯುದ್ಧವನ್ನು ಮಾಡಿದರು.

ತೇಷಾಂ ಮಧ್ಯೇ ಗಣೋ ನಾಮ ವೀರಭದ್ರೋ ಮಹಾಬಲಃ ।
ಸ ಶಕ್ರಂ ತಾಡಯಾಮಾಸ ಶೂಲೇನ ಹೃದಯೇ ತಥಾ ॥ ೧೨ ॥
ಸ ತು ತೇನ ಪ್ರಹಾರೇಣ ವಿಸಂಜ್ಞೋ ನಿಷಸಾದ ಹ ।
ಅಥ ಮುಷ್ಟ್ಯಾ ಹತಃ ಕುಂಭೇ ನಾಗ ಐರಾವತಸ್ತಥಾ ॥ ೧೩ ॥
ಸ ಹತಃ ಸಹಸಾ ತೇನ ಗಜೇಂದ್ರೋ ಭೈರವಾನ್ರವಾನ್ ।
ವಿಸದನ್ಭಯಮಾಸ್ಥಾಯ ಯಜ್ಞವಾಟಮುಪಾದ್ರವತ್ ॥ ೧೪ ॥
ಏತಸ್ಮಿನ್ನಂತರೇ ದೇವಾಃ ಕೃತಾಸ್ತೇನ ಪರಾಙ್ಮುಖಾಃ ।
ತತಸ್ತೇ ಶರಣಂ ಜಗ್ಮುರ್ವಿಷ್ಣುಂ ವಿಶ್ವೈಕನಾಯಕಂ ॥ ೧೫ ॥
ತತಃ ಕೋಪಸಮಾವಿಷ್ಟೋ ವಿಷ್ಣುರ್ದೃಷ್ಟ್ವಾ ದಿವಾಲಯಾನ್ ।
ಗಣೈರ್ವಿದ್ರಾವಿತಾನ್ಸರ್ವಾನ್ಮುಮೋಚಾಽಽಶು ಸುದರ್ಶನಂ ॥ ೧೬ ॥
ತದಾಪತತ್ತು ವೇಗೇನ ಚಕ್ರಂ ವಿಷ್ಣೋಃ ಸುದರ್ಶನಂ ।
ಪ್ರಸಾರ್ಯ ವಕ್ತ್ರಂ ಸಹಸಾ ಹ್ಯುದರಸ್ಥಂ ಚಕಾರ ಹ ॥ ೧೭ ॥

---

೧೨. ಅವರ ಮಧ್ಯದಲ್ಲಿ ವೀರಭದ್ರನೆಂಬ ಗಣನಾಯಕನು ಮಹಾ ಪರಾಕ್ರಮದಿಂದ ತ್ರಿಶೂಲವನ್ನು ತಿರುವಿ ಮಹೇಂದ್ರನನ್ನು ಹೃದಯಪ್ರದೇಶದಲ್ಲಿ ಹೊಡೆದನು.

೧೩. ಆ ಪ್ರಹಾರದಿಂದ ಇಂದ್ರನು ಮೈಮರೆತು ಕುಳಿತನು. ಆಗ ವೀರಭದ್ರನು ಅವನ ವಾಹನವಾದ ಐರಾವತದ ಕುಂಭಸ್ಥಳದ ಮೇಲೆ ಒಂದು ಮುಷ್ಟಿಪ್ರಹಾರವನ್ನು ಮಾಡಿದನು.

೧೪. ಹೀಗೆ ಪೆಟ್ಟುತಿಂದು ಆ ಮಹಾಗಜವು ಭಯಂಕರವಾಗಿ ಘೀಳಿಡುತ್ತ ಭಯಭ್ರಾಂತವಾಗಿ ಆ ಯಜ್ಞಮಂಟಪದ ಕಡೆಗೇ ಓಡಿ ಹೋಯಿತು.

೧೫. ಇಷ್ಟರಲ್ಲಿಯೇ ವೀರಭದ್ರನು ದೇವತೆಗಳ ಸೈನ್ಯವನ್ನೂ ಪರಾಜಯಗೊಳಿಸಿದನು. ಆಗ ಅವರೆಲ್ಲರೂ ಲೋಕಪಾಲನದಲ್ಲಿ ದಕ್ಷನಾದ ಶ್ರೀಮನ್ನಾರಾಯಣನನ್ನು ಶರಣುಹೊಂದಿದರು.

೧೬. ಮಹಾವಿಷ್ಣುವೂ ಪ್ರಮಥಗಣಗಳು ದೇವತೆಗಳನ್ನು ಸೋಲಿಸಿದುದನ್ನು ಕಂಡು ಕುಪಿತನಾಗಿ ಅವರ ಸಂರಕ್ಷಣೆಗಾಗಿ ತನ್ನ ಸುದರ್ಶನ ಚಕ್ರವನ್ನು ಕಳುಹಿಸಿದನು.

೧೭. ವಿಷ್ಣುವಿನ ಆ ಸುದರ್ಶನಚಕ್ರವು ವೇಗವಾಗಿ ಬಂದೆರಗುತ್ತಿರಲು ವೀರಭದ್ರಗಣನಾಥನು ತನ್ನ ಬಾಯಿಯನ್ನು ತೆರೆದು ನಿಮಿಷಮಾತ್ರದಲ್ಲಿ ಅದನ್ನು ನುಂಗಿ ತನ್ನ ಹೊಟ್ಟೆಯಲ್ಲಿ ಅಡಗಿಸಿಕೊಂಡನು.

ತಸ್ಮಿಂಶ್ಚಕ್ರೇ ತದಾ ಗ್ರಸ್ತೇ ಹ್ಯಮೋಘೇ ದೈತ್ಯಸೂದನೇ ।
ಕ್ರುದ್ಧೋ ನಾರಾಯಣೋ ದೇವಿ ವೀರಭದ್ರಮುಪಾದ್ರವತ್ ॥ ೧೮ ॥
ಗೃಹೀತ್ವಾ ಪಾದಯೋರ್ಭೂಮೌ ನಿಜಘಾನಾತಿದೂರತಃ ।
ಹನ್ಯಮಾನಸ್ಯಾಥ ಭೂಮೌ ಗದಯಾ ಚ ಸುದರ್ಶನಂ ।
ರುಧಿರೋದ್ಗಾರಸಂಯುಕ್ತಂ ವಕ್ತ್ರಾತ್ತಚ್ಚ ವಿನಿರ್ಗತಂ ॥ ೧೯ ॥
ಮತ್ತೋ ಲಬ್ಧವರೋ ದೇವಿ ವೀರಭದ್ರೋ ಗಣೋತ್ತಮಃ ।
ನ ತು ಪಂಚತ್ವಮಾಪನ್ನೋ ಗದಯಾ ತಾಡಿತೋಽಪಿ ಸಃ ॥ ೨೦ ॥
ತತಸ್ತು ಪ್ರಮಥಾಃ ಸರ್ವೇ ವಿಷ್ಣುವೀರ್ಯಬಲಾರ್ದಿತಾಃ ।
ಕೃಚ್ಛ್ರೇಣ ಸಹಸಾ ಪ್ರಾಪ್ತಾ ಯತ್ರಾಽಹಂ ದೇವಿ ಸಂಸ್ಥಿತಃ ॥ ೨೧ ॥
ಮಾಂ ದೃಷ್ಟ್ವಾ ಶೂಲಹಸ್ತಂ ತು ವಿಷ್ಣುಶ್ಚಾಂತರಧೀಯತ ॥ ೨೨ ॥
ಇಂದ್ರೋಽಪಿ ತ್ರಿದಶೈಃ ಸಾರ್ಧಂ ಪಿತೃಭಿರ್ಬ್ರಾಹ್ಮಣೈಃ ಸಹ ।
ಮತ್ತ್ರಾಸಪರೀತಾತ್ಮಾ ತತಶ್ಚಾದರ್ಶನಂ ಗತಃ ॥ ೨೩ ॥
ಏವಂ ವಿಧ್ವಂಸಿತೇ ಯಜ್ಞೇ ನಷ್ಟೋ ದೇವಗಣೋ ಯದಾ ।
ಮಯಾ ನಿರೂಪಿತೋ ದೇವಿ ಸ್ವರ್ಗದ್ವಾರೇ ಗಣಸ್ತದಾ ॥ ೨೪ ॥

---

೧೮. ರಾಕ್ಷಸನಾಶಕವೂ ಅಮೋಘವೂ ಆದ ತನ್ನ ಚಕ್ರವು ಇಂತು ವೀರಭದ್ರನ ಹೊಟ್ಟೆಯನ್ನು ಸೇರಿ ಪ್ರಶಾಂತವಾಗಲು ಮಹಾವಿಷ್ಣುವು ಕೋಪಗೊಂಡು ವೀರಭದ್ರನ ಬಳಿಗೆ ಓಡಿದನು.

೧೯. ಅವನ ಕಾಲುಗಳನ್ನು ಹಿಡಿದು ತಿರುಗಿಸಿ ಭೂಮಿಯಲ್ಲಿ ದೂರವಾಗಿ ಅಪ್ಪಳಿಸಿದನು. ಇಂತು ಭೂಮಿಯಲ್ಲಿ ಬಿದ್ದವನನ್ನು ಮತ್ತೆ ಗದೆಯಿಂದ ಹೊಡೆಯಲು ಆವನ ಹೊಟ್ಟೆಯೊಳಗಿನಿಂದ ರಕ್ತವನ್ನು ಕಾರಿಸುತ್ತ ಆ ಸುದರ್ಶನ ಚಕ್ರವು ಬಾಯಿಯಿಂದ ಹೊರಬಿದ್ದಿತು.

೨೦. ದೇವಿ! ನನ್ನಿಂದ ವರವನ್ನು ಹೊಂದಿದ್ದನಾದುದರಿಂದ ಗಣೋತ್ತಮನಾದ ವೀರಭದ್ರನು ಗದೆಯ ಪೆಟ್ಟನ್ನು ತಿಂದರೂ ಪ್ರಾಣವನ್ನು ಬಿಡಲಿಲ್ಲ.

೨೧. ಬಳಿಕ ಪ್ರಮಥಗಣಗಳೆಲ್ಲರೂ ಶ್ರೀಮನ್ನಾರಾಯಣನ ಪರಾಕ್ರಮದಿಂದ ಪೆಟ್ಟುತಿಂದು ಕಷ್ಟದಿಂದ ತಪ್ಪಿಸಿಕೊಂಡು ನಾನಿದ್ದಲ್ಲಿಗೆ ಓಡಿಬಂದರು.

೨೨. ಅವರ ಸಹಾಯಕ್ಕೆ ತ್ರಿಶೂಲವನ್ನು ಕೈಯಲ್ಲಿ ಹಿಡಿದು ಬಂದ ನನ್ನನ್ನು ಕಂಡು ವಿಷ್ಣುವು ಅಲ್ಲಿಯೇ ಅಂತರ್ಹಿತನಾದನು.

೨೩. ನನ್ನ ಕೋಪಕ್ಕೆ ಭಯಗೊಂಡು ನಡುಗುತ್ತ ಮಹೇಂದ್ರನೂ, ದೇವತೆಗಳು, ಪಿತೃಗಳು, ಬ್ರಾಹ್ಮಣರು ಮುಂತಾದವರಿಂದೊಡಗೂಡಿ ತಾನೂ ಕಾಣಿಸದೆ ಹೊರಟುಹೋದನು.

೨೪. ಇಂತು ಯಜ್ಞವು ಧ್ವಂಸಿತವಾಗಿ ದೇವತೆಗಳು ಅದೃಶ್ಯರಾಗಲು

ಪ್ರವೇಶೋ ನೈವ ದಾತವ್ಯಸ್ತ್ರಿದಶಾನಾಂ ಗಣೇಶ್ವರ ।
ದ್ವಾರಾಽವರೋಧಃ ಕರ್ತವ್ಯೋ ಯತ್ನತಃ ಶಾಶನಾನ್ಮಮ ॥ ೨೫ ॥
ಯಃ ಕೋಽಪಿ ದೃಶ್ಯತೇ ದೇವಃ ಸ ಹಂತವ್ಯೋ ನ ಸಂಶಯಃ ।
ಉದ್ವಾಸಶ್ಚ ತತೋ ಜಾತಃ ಸ್ವರ್ಗೋ ದೇವಾ ವಿನಿರ್ಜಿತಾಃ ॥ ೨೬ ॥
ಸ್ವರ್ಗದ್ವಾರೇ ನಿರುದ್ಧೇತು ಶಕ್ರಾದ್ಯಾ ಭಯವಿಹ್ವಲಾಃ ।
ಬ್ರಹ್ಮಲೋಕಂ ಗತಾ ದೇವಾ ಮಂತ್ರಯಿತ್ವಾ ಪುನಃ ಪುನಃ ॥ ೨೭ ॥
ತಸ್ಯಾಽಗ್ರೇ ಕಥಿತಂ ಸರ್ವಂ ಸ್ವರ್ಗದ್ವಾರಾಽವರೋಧನಂ ।
ಮಹೇಶ್ವರಗಣೈರ್ವ್ಯಾಪ್ತಂ ಸ್ವರ್ಗದ್ವಾರಂ ಪಿತಾಮಹ ॥ ೨೮ ॥
ಪ್ರವೇಶೋ ದುರ್ಲಭೋ ಜಾತಃ ಕೃತೇ ದ್ವಾರಾಽವರೋಧನೇ ।
ಕೇನೋಪಾಯೇನ ಯಾಸ್ಯಾಮಃ ಸ್ವರ್ಗಲೋಕಂ ತಥಾವಿಧಂ ॥ ೨೯ ॥
ನಾಽಸ್ಮಾಕಂ ಜಾಯತೇ ಪ್ರೀತಿರ್ವಿನಾ ಸ್ವರ್ಗಂ ಪಿತಾಮಹ ॥ ೩೦ ॥

---

ನಾನು ಒಂದು ಪ್ರಮಥಸಮೂಹವನ್ನು ಕರೆದು ಸ್ವರ್ಗದ ಬಾಗಿಲನ್ನು ಕಾಯುವುದಕ್ಕಾಗಿ ಕಳುಹಿಸಿ ಇಂತೆಂದೆನು.

೨೫. ಅಯ್ಯಾ ಗಣನಾಯಕ! ಇಲ್ಲಿ ಯಾವ ದೇವತೆಗಳೂ ಒಳಹೋಗಲು ಬಿಡಕೂಡದು. ನನ್ನ ಅಪ್ಪಣೆಯನ್ನು ಬಹು ಪ್ರಯತ್ನದಿಂದಲಾದರೂ ಪಾಲಿಸಿ ಬಾಗಿಲನ್ನು ತಡೆಯಬೇಕು.

೨೬. ಯಾವ ದೇವತೆಯು ಒಳಗೆ ಹೋಗುವವನಂತೆ ಕಂಡರೂ ಅವನನ್ನು ನಿರ್ವಿಚಾರವಾಗಿ ಕೊಲ್ಲಬೇಕು. ಇಂತು ಸ್ವರ್ಗವು ಅವರಿಗೆ ಲಭಿಸದಂತಾಗಲು ಆ ದೇವತೆಗಳನ್ನು ಗೆಲ್ಲುವುದು ಸುಲಭಸಾಧ್ಯವಾಯಿತು.

೨೭. ಸ್ವರ್ಗದ ಬಾಗಿಲು ರುದ್ರಗಣಗಳಿಂದ ಬಂಧಿತವಾಗಲು ಇಂದ್ರಾದಿಗಳು ದಿಗಿಲುಗೊಂಡು ಭ್ರಾಂತರಾಗಿ ಪುನಃಪುನಃ ತಮ್ಮ ತಮ್ಮಲ್ಲಿಯೇ ಮಂತ್ರಾಲೋಚನೆಗಳನ್ನು ಮಾಡಿ ಬ್ರಹ್ಮಲೋಕಕ್ಕೆ ಹೋದರು.

೨೮. ಸ್ವರ್ಗದ ಬಾಗಿಲು ಗಣಗಳಿಂದ ಬಂಧಿತವಾಗಿರುವುದನ್ನು ವಿಸ್ತಾರವಾಗಿ ಬ್ರಹ್ಮನಲ್ಲಿ ವಿಜ್ಞಾಪಿಸಿಕೊಂಡರು. "ಎಲೈ ಪಿತಾಮಹನೆ! ಸ್ವರ್ಗದ ದ್ವಾರವು ಮಾಹೇಶ್ವರಗಣಗಳಿಂದ ತುಂಬಿಹೋಗಿರುವುದು.

೨೯. ದ್ವಾರಬಂಧನವುಂಟಾಗಲು ನಾವು ಸ್ವರ್ಗಕ್ಕೆ ಪ್ರವೇಶಮಾಡುವುದೇ ದುಸ್ಸಾಧ್ಯವಾಗಿರುವುದು. ಇಂತಹ ಸ್ವರ್ಗಲೋಕವನ್ನು ಯಾವ ಉಪಾಯದಿಂದ ಪ್ರವೇಶಮಾಡೋಣ?

೩೦. ಲೋಕೇಶ್ವರ! ಸ್ವರ್ಗದಲ್ಲಿ ವಾಸಮಾಡಿದಲ್ಲದೆ ನಮಗೆ ಮನಶ್ಶಾಂತಿಯೆಂಬುದಿಲ್ಲ."

ಇತಿ ತೇಷಾಂ ವಚಃ ಶ್ರುತ್ವಾ ಪ್ರೋಕ್ತಂ ತು ಬ್ರಹ್ಮಣಾ ತದಾ ।
ಆರಾಧ್ಯಃ ಶಂಕರೋ ದೇವೋ ಮಹಾದೇವೋ ಜಗತ್ಪತಿಃ ॥ ೩೧ ॥
ಸ್ತುತ್ಯೋ ವಂದ್ಯೋ ನಮಸ್ಕಾರ್ಯಃ ಸೃಷ್ಟಿಸಂಹಾರಕಾರಕಃ ।
ದುರ್ಲಭಸ್ತು ಸುರಾಃ ಸ್ವರ್ಗೋ ವಿನಾ ತಸ್ಯ ಪ್ರಸಾದತಃ ॥ ೩೨ ॥
ಗೋಪ್ತಾ ಸ್ರಷ್ಟಾ ಸಮರ್ಥಶ್ಚ ಸ ಚಾಽಸ್ಮಾಕಂ ಪರಾ ಗತಿಃ ।
ಸ ಏವಾಽಽರಾಧನೀಯಸ್ತು ಸ ಚ ಪೂಜ್ಯತಮೋ ಮತಃ ॥ ೩೩ ॥
ತಸ್ಮಾತ್ಸರ್ವಪ್ರಯತ್ನೇನ ಗಮ್ಯತಾಂ ಶರಣಂ ಶಿವಃ ।
ಉಪಾಯಂ ಕಥಯಿಷ್ಯಾಮಿ ಶ್ರೂಯತಾಂ ಸಾವಧಾನತಃ ॥ ೩೪ ॥
ತ್ರಿದಶೈಃ ಸಹಿತಃ ಶಕ್ರ ತೂರ್ಣಂ ಗಚ್ಛ ಮಮಾಜ್ಞಯಾ ।
ಮಹಾಕಾಲವನೇ ರಮ್ಯೇ ಕಪಾಲೇಶ್ವರಪೂರ್ವತಃ ।
ಸ್ವರ್ಗದ್ವಾರಪರಂ ಲಿಂಗಂ ವಿದ್ಯತೇ ತತ್ತು ವಾಸವ ॥ ೩೫ ॥
ಲೋಕಾನಾಮನುಕಂಪಾರ್ಥಂ ಮಹಾದೇವೇನ ನಿರ್ಮಿತಂ ।
ತಮಾರಾಧಯತ ಕ್ಷಿಪ್ರಂ ಸ ವಃ ಕಾಮಂ ಪ್ರದಾಸ್ಯತಿ ॥ ೩೬ ॥

---

೩೧. ಇಂತೆಂದ ದೇವತೆಗಳ ಮಾತುಗಳನ್ನು ಕೇಳಿ ಚತುರ್ಮುಖನು ಹೇಳತೊಡಗಿದನು. "ನೀವೆಲ್ಲರೂ ದೇವೋತ್ತಮನೂ, ಮಹಾದೇವನೂ, ಲೋಕನಾಯಕನೂ ಆದ ಶಂಕರನನ್ನು ಆರಾಧಿಸಬೇಕು.

೩೨. ಬ್ರಹ್ಮಾಂಡದ ಸೃಷ್ಟಿ ಸಂಹಾರಗಳನ್ನುಮಾಡುವ ಆತನೇ ಸ್ತೋತ್ರಾರ್ಹನು. ವಂದನೀಯನು. ನಮಸ್ಕರಿಸಲ್ಪಡತಕ್ಕವನು. ದೇವತೆಗಳಿರಾ! ಆತನ ಅನುಗ್ರಹವಿಲ್ಲದೆ ನೀವು ಸ್ವರ್ಗವನ್ನು ಪ್ರವೇಶಿಸುವುದು ದುರ್ಲಭವು.

೩೩. ಆತನೇ ಜಗದ್ರಕ್ಷಕನು. ಸೃಜಿಸುವವನು. ಸರ್ವಸಮರ್ಥನು. ನಮಗೆ ಏಕೈಕಗತಿಯು. ಆತನನ್ನೇ ಪೂಜಿಸಬೇಕು. ಸಕಲದೇವತೆಗಳಲ್ಲಿಯೂ ಆತನೇ ಪರಮಪೂಜ್ಯನು.

೩೪. ಆದುದರಿಂದ ನೀವು ಸರ್ವಪ್ರಕಾರದಿಂದಲೂ ಆ ಪರಮಶಿವನನ್ನೇ ಶರಣುಹೊಗಬೇಕು. ನಿಮಗೊಂದುಪಾಯವನ್ನು ಹೇಳುವೆನು. ಸಾವಧಾನ ಮನಸ್ಕರಾಗಿ ಕೇಳಿರಿ.

೩೫. ಮಹೇಂದ್ರನೆ! ನೀನು ಸಕಲದೇವತೆಗಳೊಡನೆ ಈ ಕ್ಷಣವೇ ಹೊರಡು. ಇದು ನನ್ನ ಅಪ್ಪಣೆಯೆಂದು ತಿಳಿ. ಪರಮಮನೋಹರವಾದ ಮಹಾಕಾಲವನದಲ್ಲಿ ಕಪಾಲೇಶ್ವರನಿಗೆ ಪೂರ್ವದಿಗ್ಭಾಗದಲ್ಲಿ ಸ್ವರ್ಗದ್ವಾರೇಶ್ವರನೆಂಬ ಉತ್ತಮಲಿಂಗವೊಂದು ಪ್ರತಿಷ್ಠಿತವಾಗಿರುವುದು.

೩೬. ಮೂರು ಲೋಕಗಳ ಅನುಗ್ರಹಕ್ಕಾಗಿಯೇ ಮಹಾದೇವನು ಅದನ್ನು ನಿರ್ಮಿಸಿರುವನು. ಆ ಲಿಂಗವನ್ನು ನೀವು ಕ್ಷಿಪ್ರವಾಗಿ ಆರಾಧಿಸಿರಿ. ಆ ಮಹಾದೇವನೇ ನಿಮ್ಮ ಅಭೀಷ್ಟವನ್ನು ನೆರವೇರಿಸುವನು.

ಬ್ರಹ್ಮಣೋ ವಚನಂ ಶ್ರುತ್ವಾ ತ್ರಿದಶಾ ಮುದಿತಾ ಭೃಶಂ ।
ಸಮಾಯಾತಾ ಮಹಾದೇವಿ ಮಹಾಕಾಲವನಂ ತದಾ ॥ ೩೭ ॥
ಸ್ವರ್ಗದ್ವಾರಪ್ರದಂ ಪುಣ್ಯಂ ದದೃಶುರ್ಲಿಂಗಮುತ್ತಮಂ ।
ತಸ್ಯ ದರ್ಶನಮಾತ್ರೇಣ ಸ್ವರ್ಗದ್ವಾರಮಪಾವೃತಂ ॥ ೩೮ ॥
ಸ್ವರ್ಗಲೋಕಂ ಗತಾಃ ಸರ್ವೇ ಯಥಾಪೂರ್ವಂ ಯಶಸ್ವಿನಿ ।
ನಿಃಶಂಕಾಂಸ್ತ್ರಿದಶಾನ್ದೃಷ್ಟ್ವಾ ವಿಜ್ಞಪ್ತೋಽಹಂ ಗಣೈಸ್ತದಾ ॥ ೩೯ ॥
ಮಯಾಽಜ್ಞಪ್ತಾಶ್ಚ ತೇ ಸರ್ವೇ ನಿವರ್ತಧ್ವಂ ಗಣೋತ್ತಮಾಃ ।
ಸ್ವಯಮೇವ ಪ್ರತಿಜ್ಞಾತಂ ಕಥಂ ಮಿಥ್ಯಾ ಭವಿಷ್ಯತಿ ॥ ೪೦ ॥
ಸ್ವರ್ಗದ್ವಾರಪ್ರದೋ ದೇವೋ ದೃಷ್ಟೋ ದೇವೈರ್ನ ಸಂಶಯಃ ।
ಮಹಾಕಾಲವನೇ ರಮ್ಯೇ ಕಥಿತೋ ಹಿ ವಿರಂಚಿನಾ ॥ ೪೧ ॥
ಸ್ವರ್ಗದ್ವಾರಂ ಗತಾಃ ಸದ್ಯಃ ಶಕ್ರಾದ್ಯಾಸ್ತ್ರಿದಶಾ ಗಣಾಃ ॥ ೪೨ ॥

---

೩೭. ದೇವಿಯೆ! ಬ್ರಹ್ಮದೇವನ ವಚನಗಳನ್ನು ಕೇಳಿ ದೇವತೆಗಳೆಲ್ಲರೂ ಬಹಳವಾಗಿ ಸಂತೋಷಗೊಂಡರು. ಅವರೆಲ್ಲರೂ ನಿಮಿಷಮಾತ್ರದಲ್ಲಿಯೇ ಮಹಾಕಾಲವನಕ್ಕೆ ಬಂದು ಸೇರಿದರು.

೩೮. ಸ್ವರ್ಗದ್ವಾರದ ದರ್ಶನವನ್ನು ಕೊಡಿಸುವ ಆ ಉತ್ತಮ ಲಿಂಗದ ದರ್ಶನವನ್ನೂ ಮಾಡಿದರು. ಆ ಸಂದರ್ಶನಮಾತ್ರದಿಂದಲೇ ದೇವತೆಗಳಿಗೆಲ್ಲರಿಗೂ ಸ್ವರ್ಗದ್ವಾರವು ಅಪಾವೃತವಾಯಿತು.

೩೯. ಮಂಗಳಾಂಗಿಯೆ! ಅವರೆಲ್ಲರೂ ಮುನ್ನಿನಂತೆಯೇ ಸ್ವರ್ಗಲೋಕದಲ್ಲಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು. ದೇವತೆಗಳು ನಿರ್ಭಯರಾಗಿ ಸ್ವರ್ಗನಿವಾಸಿಗಳಾದುದನ್ನು ಕಂಡು ಗಣಗಳೆಲ್ಲರೂ ನನ್ನಲ್ಲಿ ವಿಜ್ಞಾಪಿಸಿಕೊಂಡರು.

೪೦. ನಾನು ಅವರಿಗೆಲ್ಲ ಇಂತೆಂದು ಆಜ್ಞಾಪಿಸಿದೆನು. "ಗಣೋತ್ತಮರಿರಾ! ನೀವಿನ್ನು ಹಿಂದಿರುಗಿ ಬನ್ನಿರಿ. ಸ್ವರ್ಗದ್ವಾರೇಶ್ವರನನ್ನು ನೋಡಿದವನಿಗೆ ಸ್ವರ್ಗಲಾಭವಾಗುವುದೆಂದು ನಾನೇ ಪ್ರತಿಜ್ಞೆಯನ್ನು ಮಾಡಿರುವೆನು. ಅದು ಹೇಗೆ ಸುಳ್ಳಾದೀತು?

೪೧. ಸ್ವರ್ಗದ್ವಾರವನ್ನು ತೋರಿಸುವ ಆ ಮಹಾಲಿಂಗವನ್ನು ಅವರು ನೋಡಿಯೇ ಇರಬೇಕು, ಸಂದೇಹವಿಲ್ಲ. ರಮ್ಯವಾದ ಮಹಾಕಾಲವನದಲ್ಲಿರುವ ಈ ಲಿಂಗವನ್ನು ಬ್ರಹ್ಮದೇವನೇ ಅವರಿಗೆ ತಿಳಿಸಿರಬೇಕು.

೪೨. ಗಣಗಳಿರಾ! ಆದುದರಿಂದಲೇ ಇಂದ್ರಾದಿ ದೇವತೆಗಳೆಲ್ಲರೂ ಸ್ವರ್ಗದ್ವಾರಕ್ಕೆ ಹೋಗಲು ಸಾಧ್ಯವಾಯಿತು.

ಅತಃ ಪ್ರಭೃತಿ ವಿಖ್ಯಾತಃ ಸ್ವರ್ಗದ್ವಾರೇಶ್ವರಃ ಶಿವಃ ।
ಖ್ಯಾತಿಂ ಯಾಸ್ಯತಿ ಭೂಲೋಕೇ ಸ್ವರ್ಗಲೋಕಪ್ರದಾಯಕಃ ॥ ೪೩ ॥
ಯೇ ಪಶ್ಯಂತಿ ನರಾ ಲೋಕೇ ಸ್ವರ್ಗದ್ವಾರೇಶ್ವರಂ ಶಿವಂ ।
ತೇ ಯಾಂತಿ ಸ್ವರ್ಗಲೋಕಂ ಹಿ ಸ್ವರ್ಗದ್ವಾರೇಶ್ವರಾಽರ್ಚನಾತ್ ॥ ೪೪ ॥
ಸ್ವರ್ಗದ್ವಾರೇಶ್ವರಂ ದೇವಂ ಯೇ ಪಶ್ಯಂತಿ ಪ್ರಸಂಗತಃ ।
ನ ತೇಷಾಂ ಭಯಮಸ್ತೀತಿ ಕಲ್ಪಕೋಟಿಶತೈರಪಿ ॥ ೪೫ ॥
ಅಶ್ವಮೇಧಸಹಸ್ರೇಣ ಯತ್ಪುಣ್ಯಂ ಸಮುದಾಹೃತಂ ।
ತತ್ಪುಣ್ಯಮಧಿಕಂ ದೇವಿ ಸ್ವರ್ಗದ್ವಾರೇಶ್ವರಾಽರ್ಚನಾತ್ ॥ ೪೬ ॥
ಜನ್ಮಾಂತರಸಹಸ್ರೇಣ ಯತ್ಪಾಪಂ ಪೂರ್ವಸಂಚಿತಂ ।
ತತ್ಪಾಪಂ ವಿಲಯಂ ಯಾಂತಿ ಲಿಂಗಸ್ಯಾಸ್ಯ ಚ ಕೀರ್ತನಾತ್ ॥ ೪೭ ॥
ಅಷ್ಟಮ್ಯಾಂ ವಾ ಚತುರ್ದಶ್ಯಾಮಥವಾ ಚಂದ್ರವಾಸರೇ ।
ಯೇ ಪಶ್ಯಂತಿ ನರಾ ಭಕ್ತ್ಯಾ ಸ್ವರ್ಗದ್ವಾರೇಶ್ವರಂ ಶಿವಂ ।
ತೇ ದೇವಿ ಮೇ ಶರೀರಂ ತು ಪ್ರವಿಷ್ಟಾಸ್ತ್ವಪುನರ್ಭವಾಃ ॥ ೪೮ ॥

---

೪೩. ಆ ದಿನದ ಮೊದಲುಗೊಂಡು ಸ್ವರ್ಗದ್ವಾರೇಶ್ವರ ಮಹಾದೇವನು ಬಹಳ ಪ್ರಖ್ಯಾತಿಯನ್ನು ಪಡೆಯುವನು. ಸ್ವರ್ಗಲೋಕವನ್ನು ಕೊಡಿಸುವವನೆಂದು ಭೂಮಂಡಲದಲ್ಲಿ ಖ್ಯಾತಿಯನ್ನು ತಾಳುವನು.

೪೪. ಸ್ವರ್ಗದ್ವಾರೇಶ್ವರ ಮಹಾಲಿಂಗವನ್ನು ನೋಡಿ ಯಾರು ಭಕ್ತಿಯಿಂದ ಪೂಜೆಯನ್ನು ಮಾಡುತ್ತಾರೆಯೊ, ಅವರು ಆ ಸೇವೆಯ ಫಲವಾಗಿ ಸ್ವರ್ಗಲೋಕವನ್ನೇ ಸೇರುವರು.

೪೫. ಉದ್ದೇಶವಿಲ್ಲದೆ ಪ್ರಸಂಗವಶದಿಂದಾದರೂ ಯಾರು ಈ ಮಹಾಲಿಂಗವನ್ನು ನೋಡುವರೊ, ಅವರಿಗೆ ನೂರು ಕೋಟಿ ಕಲ್ಪಗಳಾದರೂ ಯಾವ ಭಯವೂ ಉಂಟಾಗುವುದಿಲ್ಲ.''

೪೬. ಪಾರ್ವತಿಯೆ! ಒಂದುಸಾವಿರ ಅಶ್ವಮೇಧಯಜ್ಞಗಳಿಂದ ಯಾವ ಪುಣ್ಯವುಂಟೆಂದು ಶಾಸ್ತ್ರಗಳು ಹೇಳುತ್ತಿವೆಯೊ, ಅದಕ್ಕಿಂತಲೂ ಹೆಚ್ಚಿನದನ್ನೇ ಸ್ವರ್ಗದ್ವಾರೇಶ್ವರನ ಪೂಜೆಯಿಂದ ಪಡೆಯಬಹುದು.

೪೭. ಹಿಂದಿನ ಸಾವಿರಾರು ಜನ್ಮಗಳಲ್ಲಿ ಎಷ್ಟು ಪಾಪವನ್ನು ಮನುಷ್ಯರು ಗಳಿಸಿರಬಹುದೊ, ಅದೆಲ್ಲವೂ ಈ ಲಿಂಗದ ಹೆಸರಿನ ಕೀರ್ತನದಿಂದಲೇ ನಾಶವನ್ನು ಹೊಂದುವುದು.

೪೮. ದೇವಿಯೆ! ಸೋಮವಾರದ ದಿನ ಅಷ್ಟಮಿ ಅಥವಾ ಚತುರ್ದಶಿಯ ತಿಥಿಯು ಬರಲು ಆ ಶುಭದಿನದಲ್ಲಿ ಯಾವ ನರರು ಭಕ್ತಿಯುಕ್ತರಾಗಿ ಸ್ವರ್ಗದ್ವಾರೇಶ್ವರಲಿಂಗವನ್ನು ನೋಡುವರೊ, ಅವರು ನನ್ನ ಶರೀರದಲ್ಲಿ ಐಕ್ಯವನ್ನು ಹೊಂದುವುದರಿಂದ ಮತ್ತೆ ಜನ್ಮಗಳನ್ನು ತಾಳುವುದಿಲ್ಲ.

ದಶಕೋಟಿಸಹಸ್ರಾಣಿ ತಸ್ಮಿಂಲ್ಲಿಂಗೇ ತು ಪೂಜಿತೇ ।
ಪೂಜಿತಾನಿ ಭವಂತೀಹ ಲಿಂಗಾನ್ಯಂತಃಸ್ಥಿತಾನಿ ತು ॥ ೪೯ ॥
ಸ್ಪರ್ಶನಾತ್ತಸ್ಯ ಲಿಂಗಸ್ಯ ಕೀರ್ತನಾದ್ಯಜನಾತ್ತಥಾ ।
ಸುಖೇನ ಸ್ವರ್ಗಮಾಯಾಂತಿ ಯಥಾಕಾಮಾನವಾಪ್ನುಯಾತ್ ॥ ೫೦ ॥
ಅಕಾಮಾ ವಾ ಸಕಾಮಾ ವಾ ಯೇ ಪಶ್ಯಂತಿ ದಿನೇ ದಿನೇ ।
ತೇಽಪಿ ಪುಣ್ಯಾ ಮಹಾಭಾಗಾಃ ಸ್ವರ್ಗಲೋಕಂ ಪ್ರಯಾಂತಿ ವೈ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಸ್ವರ್ಗದ್ವಾರೇಶ್ವರಮಾಹಾತ್ಮ್ಯವರ್ಣನಂ"
ನಾಮ ನವಮೋಽಧ್ಯಾಯಃ

---

೪೯. ಈ ಒಂದು ಮಹಾಲಿಂಗವನ್ನು ಪೂಜಿಸುವುದರಿಂದ ಇದರಲ್ಲಿ ಅಡಗಿರುವ ಪತ್ತುಸಾವಿರ ಕೋಟಿ ಇತರ ಲಿಂಗಗಳಿಗೂ ಪೂಜೆಮಾಡಿದಂತಾಗುವುದು.

೫೦. ಈ ಮಹಾಲಿಂಗವನ್ನು ಮುಟ್ಟುವುದರಿಂದಲೂ, ಸ್ತೋತ್ರಮಾಡುವುದರಿಂದಲೂ, ಪೂಜಿಸುವುದರಿಂದಲೂ ಮನುಷ್ಯರು ಸುಖವಾಗಿ ಸ್ವರ್ಗಲೋಕಕ್ಕೆ ಹೋಗುವರು. ಇಲ್ಲಿಯೂ ಯಥೇಷ್ಟಭೋಗಗಳನ್ನನುಭವಿಸುವರು.

೫೧. ಅಭೀಷ್ಟಸಿದ್ಧಿಗಳಿಗಾಗಲಿ, ನಿಷ್ಕಾಮದಿಂದಲೇ ಆಗಲಿ ಯಾರು ಪ್ರತಿನಿತ್ಯವೂ ಇದರ ದರ್ಶನವನ್ನು ಪಡೆಯುವರೊ, ಆ ಮಹಾಭಾಗ್ಯಶಾಲಿಗಳು ಸಹ ಸ್ವರ್ಗಲೋಕವನ್ನು ಸೇರುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಸ್ವರ್ಗದ್ವಾರೇಶ್ವರಮಾಹಾತ್ಮ್ಯವರ್ಣನ"ವೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

# ಅಥ ದಶಮೋಽಧ್ಯಾಯಃ

## ಕರ್ಕೋಟೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಕರ್ಕೋಟೇಶ್ವರಸಂಜ್ಞಂ ಚ ದಶಮಂ ವಿದ್ಧಿ ಪಾರ್ವತಿ ।
ಯಸ್ಯ ದರ್ಶನಮಾತ್ರೇಣ ವಿಷೈರ್ನೈವಾಽಭಿಭೂಯತೇ ॥ ೧ ॥
ಮಾತ್ರಾ ಚ ಭುಜಗಾಃ ಶಪ್ತಾಃ ಸ್ವವಚೋಭಂಗಕಾರಣಾತ್ ।
ಮದ್ವಚೋ ನ ಕೃತಂ ಯಸ್ಮಾದ್ಭವದ್ಭಿಃ ಪಾಪಕರ್ಮಣಿ ॥ ೨ ॥
ವಹ್ನಿರ್ಧಕ್ಷ್ಯತೇ ಯುಷ್ಮಾನ್ ಸತ್ರೇ ಜನ್ಮೇಜಯಸ್ಯ ಹಿ ।
ಶ್ರುತ್ವಾ ಶಾಪಂ ತತೋ ಮಾತುರ್ಮೃತ್ಯುಭೀತಾಶ್ಚ ಪನ್ನಗಾಃ
ಗತಾಃ ಸರ್ವೇ ಯಥಾಸ್ಥಾನಂ ಜೀವನಾರ್ಥಂ ಯಶಸ್ವಿನಿ ॥ ೩ ॥
ಹಿಮಶೈಲಂ ಗತಃ ಶೇಷಸ್ತಪಃ ಕರ್ತುಂ ತತಃ ಪ್ರಿಯೇ ।
ಸರ್ಪಶ್ಚ ಕಂಬಲೋ ನಾಮ ಲೋಕಂ ಪೈತಾಮಹಂ ಗತಃ ॥ ೪ ॥
ಶಂಖಚೂಡೋಽಥ ನಾಗೇಂದ್ರೋ ಮಣಿಪೂರಂ ಗತಸ್ತತಃ ।
ಯಮುನಾಂಭಸಿ ಸಂಲೀನಃ ಕಾಲಿಯೋ ಭಯವಿಹ್ವಲಃ ॥ ೫ ॥

---

## ಕನ್ನಡದ ಅನುವಾದ

### ಕರ್ಕೋಟೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪಾರ್ವತಿಯೇ! ಹತ್ತನೆಯ ಮಹಾಲಿಂಗವೇ ಕರ್ಕೋಟೇಶ್ವರವೆಂಬುದು. ಅದನ್ನು ನೋಡಿದ ಮಾತ್ರದಿಂದ ಮನುಜರಿಗೆ ಯಾವ ವಿಷಗಳೂ ಬಾಧೆಗೊಳಿಸುವುದಿಲ್ಲ.

೨. ಹಿಂದೆ ಕದ್ರೂದೇವಿಯು ತನ್ನ ಮಕ್ಕಳಾದ ನಾಗರನ್ನು ತನ್ನ ಮಾತನ್ನು ಮೀರಿದುದಕ್ಕಾಗಿ ಶಪಿಸಿದಳು. ಸವತಿಯೊಡನೆ ನನ್ನ ಮತ್ಸರವನ್ನು ಗೆಲ್ಲುವುದರಲ್ಲಿ ನೀವು ನನ್ನ ಮಾತನ್ನು ಕೇಳಲಿಲ್ಲ.

೩. ಆದುದರಿಂದ ಮುಂದೆ ಜನಮೇಜಯನು ಮಾಡುವ ಯಜ್ಞದಲ್ಲಿ ಅಗ್ನಿಯು ನಿಮ್ಮನ್ನೆಲ್ಲ ಸುಟ್ಟುಹಾಕುವನು. ತಾಯಿಯ ಈ ಶಾಪವನ್ನು ಕೇಳಿ ಮರಣಕ್ಕೆ ಅಂಜಿ ಆ ಪನ್ನಗರೆಲ್ಲರೂ ತಮ್ಮ ಜೀವನಗಳ ಭದ್ರತೆಗಾಗಿ ತಮ ತಮಗೆ ತೋರಿದ ಸ್ಥಳಗಳಿಗೆ ಹೊರಟುಹೋದರು.

೪. ಪ್ರಿಯಳೆ! ಆದಿಶೇಷನು ತಪಸ್ಸನ್ನು ಮಾಡಲು ಹಿಮಾಚಲಕ್ಕೆ ಹೋದನು. ಕಂಬಳನೆಂಬ ನಾಗನು ಬ್ರಹ್ಮಲೋಕವನ್ನು ಸೇರಿದನು.

೫. ಶಂಖಚೂಡನೆಂಬ ನಾಗೇಂದ್ರನು ಮಣಿಪೂರನಗರಕ್ಕೆ ಹೋದನು. ಭಯಭ್ರಾಂತನಾದ ಕಾಳಿಯನು ಯಮುನಾನದಿಯ ಮಡುವಿನಲ್ಲಿಯೇ ಮುಳುಗಿದನು.

ಏವಂ ತೇ ಸರ್ಪರಾಜಾನೋ ನಾಗಾಃ ಸುಸ್ಮಿತಶೋಭನೇ ॥ ೬ ॥
ಕುರುಕ್ಷೇತ್ರೇ ಗತಾಃ ಸರ್ವೇ ತಪಶ್ಚರ್ತುಂ ಯಶಸ್ವಿನಿ ।
ಧೃತರಾಷ್ಟ್ರಸ್ತಥಾ ನಾಗಃ ಪ್ರಯಾಗಮಗಮತ್ಪ್ರಿಯೇ ॥ ೭ ॥
ಏಲಾಪುತ್ರಸ್ತು ನಾಗೇಂದ್ರೋ ಬ್ರಹ್ಮಲೋಕಂ ಜಗಾಮ ಹ ।
ಪ್ರಣಮ್ಯ ತಮುವಾಚ ಮಾತುರುತ್ಸಂಗಸಂಸ್ಥಿತಾಃ ॥ ೮ ॥
ಮಾತ್ರಾ ಶಪ್ತಾ ವಯಂ ದೇವ ಕ್ರುದ್ಧಯಾ ತವ ಸನ್ನಿಧೌ ।
ಸಾ ಕಥಂ ಶಾಪಕಾಲೇ ತು ಭವತಾ ನ ನಿವಾರಿತಾ ॥ ೯ ॥

ಬ್ರಹ್ಮೋವಾಚ :—

ನಿಷಿದ್ಧಾ ನೈವ ತೇ ಮಾತಾ ಭಾವಿಕಾರ್ಯಬಲಾನ್ಮಮ ।
ಸರ್ಪಸತ್ರೇ ಹಿ ಭವಿತಾ ರಾಜ್ಞೋ ಜನ್ಮೇಜಯಸ್ಯ ಚ ॥ ೧೦ ॥
ತ್ವಂ ಚ ವತ್ಸ ಮಮಾದೇಶಾನ್ಮಹಾಕಾಲವನಂ ವ್ರಜ ।
ಶಾಂತ್ಯರ್ಥಂ ಸರ್ವನಾಗಾನಾಂ ಭಕ್ತ್ಯಾ ಯುಕ್ತಸ್ತು ಸತ್ವರಂ ॥ ೧೧ ॥
ಸಮಾರಾಧಯ ದೇವೇಶಂ ಮಹಾಮಾಯಾಸಮೀಪತಃ ।
ಭವಿತಾ ತತ್ರ ತೇ ಸಿದ್ಧಿರ್ದೇವದೇವಪ್ರಸಾದತಃ ॥ ೧೨ ॥

---

೬–೭. ಎಲೌ ಸ್ಮಿತವಕ್ತ್ರಳೆ! ಇಂತು ಸರ್ಪಕುಲದ ಅಗ್ರೇಸರರಾದ ನಾಗರೆಲ್ಲ ತಂತಮ್ಮ ಸ್ಥಾನಗಳನ್ನು ಕಲ್ಪಿಸಿಕೊಂಡು ತಪಸ್ಸನ್ನು ಮಾಡಲು ಕುರುಕ್ಷೇತ್ರಕ್ಕೆ ಬಂದು ಸೇರಿದರು. ಧೃತರಾಷ್ಟ್ರನೆಂಬ ನಾಗನು ಪ್ರಯಾಗಕ್ಷೇತ್ರವನ್ನು ಸೇರಿದನು.

೮. ಏಲಾಪುತ್ರನಾದ ಕರ್ಕೋಟನೆಂಬ ನಾಗೇಂದ್ರನು ಬ್ರಹ್ಮಲೋಕಕ್ಕೆ ಹೋಗಿ ಚತುರ್ಮುಖನಿಗೆ ಪ್ರಣಾಮವನ್ನುಮಾಡಿ ಇಂತೆಂದನು. "ದೇವ ದೇವನೆ! ನಾವೆಲ್ಲರೂ ತಾಯಿಯ ತೊಡೆಯಮೇಲೆಯೇ ಆಡುತ್ತಿದ್ದವರು.

೯. ನಿನ್ನ ಎದುರಿನಲ್ಲಿಯೇ ಆಕೆಯು ಕೋಪದಿಂದ ನಮಗೆ ಶಾಪವನ್ನಿತ್ತಳು. ಆ ಕಾಲದಲ್ಲಿ ನೀನು ಆಕೆಯನ್ನು ಶಪಿಸದಂತೆ ಏಕೆ ನಿವಾರಿಸಲಿಲ್ಲ?"

೧೦. ಬ್ರಹ್ಮನು ಹೇಳುತ್ತಾನೆ:—ಮುಂದಾಗಬೇಕಾಗಿರುವ ಕಾರ್ಯ ಗೌರವದ ದೆಸೆಯಿಂದಲೇ ನಾನು ನಿಮ್ಮ ತಾಯಿಯನ್ನು ತಡೆಯಲಿಲ್ಲ. ಮುಂದೆ ಜನಮೇಜಯಮಹಾರಾಜನು ಸರ್ಪಯಜ್ಞವನ್ನು ಮಾಡುವನು.

೧೧. ವತ್ಸನೆ! ನೀನು ನನ್ನ ಆಜ್ಞೆಯಂತೆ ಮಹಾಕಾಲವನಕ್ಕೆ ಹೊರಡು. ಸಕಲನಾಗರಿಗೂ ಶಾಂತಿಯನ್ನುಂಟುಮಾಡಲು ನೀನು ಭಕ್ತಿಯುಕ್ತನಾಗಿ ಬೇಗನೆ ಅಲ್ಲಿಗೆ ಹೋಗಬೇಕು.

೧೨. ಮಹಾಮಾಯೆಯ ಸಮೀಪದಲ್ಲಿರುವ ಮಹೇಶ್ವರನ ಲಿಂಗವನ್ನು ಚೆನ್ನಾಗಿ ಪೂಜೆಮಾಡು. ಆ ಮಹಾದೇವನು ಪ್ರಸನ್ನನಾದರೆ ಅಲ್ಲಿಯೇ ನಿನಗೆ ಕಾರ್ಯಸಿದ್ಧಿಯುಂಟಾಗುವುದು.

**ತತ್ರ ಗತ್ವಾಽಥ ಕರ್ಕೋಟಃ ಸ್ವಯಂ ದೇವಿ ಸಮಾಹಿತಃ ।**
**ದೇವಮಾರಾಧಯಾಮಾಸ ಮಹಾಮಾಯಾಪುರಃಸ್ಥಿತಃ ।**
**ತಸ್ಯ ತುಷ್ಟೋಽಥ ದೇವೇಶೋ ವರಂ ಪ್ರಾದಾದ್ಯಶಸ್ವಿನಿ ॥ ೧೩ ॥**
**ಯೇ ದಂದಶೂಕಾಃ ಕ್ರೂರಾಶ್ಚ ಪಾಪಾಚಾರಾ ವಿಷೋಲ್ಬಣಾಃ ।**
**ತೇಷಾಂ ವಿನಾಶೋ ಭವಿತಾ ನ ತು ಯೇ ಧರ್ಮಚಾರಿಣಃ ॥ ೧೪ ॥**
**ಭಕ್ತ್ಯಾ ತವಾಽದ್ಯ ತುಷ್ಟೋಽಸ್ಮಿ ತ್ವಂ ಮೇ ಸಾಯುಜ್ಯತಾಂ ವ್ರಜ ।**
**ದೇವೇ ತತ್ರ ವಿಲೀನೋಽಥ ನಾಗಃ ಕರ್ಕೋಟಕಃ ಪ್ರಿಯೇ ॥ ೧೫ ॥**
**ಕರ್ಕೋಟಕೇಶ್ವರಃ ಖ್ಯಾತಸ್ತತೋ ದೇವೋ ಮಹೇಶ್ವರಃ ।**
**ತಸ್ಯ ದರ್ಶನಮಾತ್ರೇಣ ವ್ಯಾಧಯೋ ಯಾಂತಿ ಸಂಕ್ಷಯಂ ॥ ೧೬ ॥**
**ಯಸ್ತಂ ಪೂಜಯತೇ ದೇವಂ ಭಕ್ತ್ಯಾ ಯುಕ್ತೋ ಹಿ ಮಾನವಃ ।**
**ಐಶ್ವರ್ಯಂ ಜಾಯತೇ ತಸ್ಯ ಕುಲಾನಾಂ ತಾರಯೇಚ್ಛತಂ ॥ ೧೭ ॥**
**ವ್ಯಾಧಿತೋಽವ್ಯಾಧಿತೋ ಮುಕ್ತೋ ದುಃಖೀ ದುಃಖಾತ್ಪ್ರಮುಚ್ಯತೇ ।**
**ದರ್ಶನಾತ್ತು ಭವೇತ್ಸದ್ಯಃ ಸರ್ವಪಾತಕವರ್ಜಿತಃ ॥ ೧೮ ॥**

---

೧೩. ದೇವಿಯೆ! ಕರ್ಕೋಟನು ಈ ಮಾತುಗಳಿಂದ ಪ್ರೇರಿತನಾಗಿ ಅಲ್ಲಿಗೆ ಹೋಗಿ ಮಹಾಮಾಯಾದೇವಿಯ ಮುಂದೆ ನಿಂತು ಏಕಾಗ್ರಚಿತ್ತದಿಂದ ಮಹಾದೇವನನ್ನಾರಾಧಿಸಿದನು. ಆತನ ಪೂಜೆಯಿಂದ ಸಂತೋಷಗೊಂಡು ಮಹೇಶ್ವರನು ಆತನಿಗೆ ವರವನ್ನು ಕೊಟ್ಟನು.

೧೪. "ಮುಂದಿನ ಸರ್ಪಯಜ್ಞದಲ್ಲಿ ಯಾವ ನಾಗರು ಕ್ರೂರರೂ, ಪಾಪಿಗಳೂ, ತೀಕ್ಷ್ಣವಿಷವುಳ್ಳವರೂ ಆಗಿರುವರೊ, ಅವರು ಮಾತ್ರ ಸಾಯುವರು. ಧರ್ಮನಿರತರಾದ ನಾಗರು ನಷ್ಟರಾಗುವುದಿಲ್ಲ.

೧೫. ನಿನ್ನ ಭಕ್ತಿಯಿಂದ ನಾನು ಪರಮ ಸಂತುಷ್ಟನಾಗಿರುವೆನು. ನೀನು ನನ್ನ ಸಾಯುಜ್ಯವನ್ನು ಪಡೆಯುವೆ." ಪ್ರಿಯಳೆ! ಬಳಿಕ ಆ ಕರ್ಕೋಟಕನು ಆ ಮಹಾಲಿಂಗದಲ್ಲಿಯೇ ಲಯವನ್ನು ಹೊಂದಿದನು.

೧೬. ಅಂದಿನಿಂದ ಆ ಮಹೇಶ್ವರಲಿಂಗವು ಕರ್ಕೋಟಕೇಶ್ವರನೆಂದು ಪ್ರಖ್ಯಾತಿಯನ್ನು ಪಡೆಯಿತು. ಅದನ್ನು ನೋಡುವ ಮಾತ್ರದಿಂದಲೇ ಸಕಲ ರೋಗಗಳೂ ನಾಶವನ್ನು ಹೊಂದುವುವು.

೧೭–೧೮. ಯಾವ ಮಾನವನು ಭಕ್ತಿಭರಿತನಾಗಿ ಆ ಮಹಾದೇವನನ್ನು ಪೂಜಿಸುವನೊ, ಅವನಿಗೆ ಅಷ್ಟೈಶ್ವರ್ಯಗಳು ಸಿದ್ಧಿಸುವುವು. ಅವನು ನೂರು ಕುಲದವರನ್ನು ಉದ್ಧರಿಸುವನು. ರೋಗಿಯಾದವನು ತನ್ನ ರೋಗದಿಂದ ಮುಕ್ತನಾಗುವನು. ಕಷ್ಟದಲ್ಲಿರುವವನು ತನ್ನ ಕಷ್ಟಗಳಿಂದ ಬಿಡುಗಡೆಯನ್ನು ಹೊಂದುವನು. ಯಾವ ಮನುಷ್ಯನೇ ಆದರೂ ಈ ಲಿಂಗದ ದರ್ಶನವನ್ನು ಮಾಡಿದ ಕ್ಷಣದಲ್ಲಿಯೇ ತನ್ನ ಸಕಲಪಾತಕಗಳನ್ನೂ ಕಳೆದುಕೊಳ್ಳುವನು.

ನಿಯಮೇನ ಪ್ರಪಶ್ಯಂತಿ ಯೇ ಚ ಕರ್ಕೋಟಕೇಶ್ವರಂ ।
ತೇ ಸರ್ವಕಾಮಾನಾಪ್ಸ್ಯಂತಿ ವಸಂತ್ಯಂತೇ ಚ ಮತ್ಪುರೇ ॥ ೧೯ ॥
ಪಂಚಮ್ಯಾಂ ಚ ಚತುರ್ದಶ್ಯಾಂ ಯೇ ಪಶ್ಯಂತಿ ರವೇರ್ದಿನೇ ।
ನ ತೇಷಾಂ ತು ಕುಲೇ ಸರ್ಪಾಃ ಪೀಡಾಂ ಕುರ್ವಂತಿ ಕರ್ಹಿಚಿತ್ ॥ ೨೦ ॥
ಯಾ ನಾರೀ ದುರ್ಭಗಾ ಸಾಽಪಿ ಸೌಭಾಗ್ಯಂ ಲಭತೇ ಸದಾ ।
ಗುರ್ವಿಣೀ ಲಭತೇ ಪುತ್ರಮರೋಗಂ ಕುಲಭೂಷಣಂ ।
ಶಿಶುಗ್ರಹಾಶ್ಚ ನಶ್ಯಂತಿ ನಾಽಪಮೃತ್ಯುಭಯಂ ಭವೇತ್ ॥ ೨೧ ॥
ಯಂ ಯಂ ಕಾಮಮಭಿಧ್ಯಾಯನ್ಮನಸಾ ಭಕ್ತಿಮಾನ್ನರಃ ।
ತಂ ತಂ ದುರ್ಲಭಮಾಪ್ನೋತಿ ಕರ್ಕೋಟೇಶ್ವರದರ್ಶನಾತ್ ॥ ೨೨ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕರ್ಕೋಟೇಶ್ವರದೇವಸ್ಯ ಶೃಣು ಸಿದ್ಧೇಶ್ವರಂ ಪರಂ ॥ ೨೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕರ್ಕೋಟೇಶ್ವರಮಾಹಾತ್ಮ್ಯವರ್ಣನಂ" ನಾಮ ದಶಮೋಽಧ್ಯಾಯಃ

---

೧೯. ಯಾರು ನಿಯಮದಿಂದ ಈ ಕರ್ಕೋಟಕೇಶ್ವರ ಲಿಂಗವನ್ನು ನಿತ್ಯವೂ ನೋಡುತ್ತಿರುವರೊ, ಅವರು ಇಹಲೋಕದಲ್ಲಿ ಸಕಲಾಭೀಷ್ಟಗಳನ್ನೂ ಪಡೆಯುವರಲ್ಲದೆ ಅಂತ್ಯದಲ್ಲಿ ನನ್ನ ನಗರದಲ್ಲಿ ವಾಸಮಾಡುವರು.

೨೦. ಪಂಚಮಿ ಮತ್ತು ಚತುರ್ದಶೀ ತಿಥಿಗಳು ಭಾನುವಾರದ ದಿನ ಬರಲು ಯಾರು ಈ ಲಿಂಗವನ್ನು ನೋಡುವರೊ, ಅವರ ಕುಲದಲ್ಲಿ ಯಾರಿಗೂ ಎಂದಿಗೂ ಸರ್ಪಗಳು ಹಿಂಸೆಮಾಡುವುದಿಲ್ಲ.

೨೧. ದೌರ್ಭಾಗ್ಯವತಿಯಾದ ಸ್ತ್ರೀಯಳೂ ಸಕಲೈಶ್ವರ್ಯಗಳನ್ನು ಪಡೆಯುವಳು. ಗರ್ಭಿಣಿಯಾದವಳು ಆರೋಗದೃಢಕಾಯನೂ, ಕುಲಕ್ಕೆ ಕೀರ್ತಿಯನ್ನು ತರುವವನೂ ಆದ ಪುತ್ರನನ್ನು ಹೆರುವಳು. ಆ ಮಗುವಿಗೆ ಶಿಶುಗ್ರಹಾದಿಗಳು ನಷ್ಟವಾಗುವುವಲ್ಲದೆ ಅಪಮೃತ್ಯುಭಯವೂ ತಪ್ಪುವುದು.

೨೨–೨೩. ಭಕ್ತಿಯುಕ್ತನಾದ ನರನು ಯಾವ ಯಾವ ಅಭಿಲಾಷೆಯನ್ನು ಮನಸ್ಸಿನಲ್ಲಿ ಬಯಸಿ ಕರ್ಕೋಟಕೇಶ್ವರನ ದರ್ಶನವನ್ನು ಮಾಡುವನೊ, ಆ ಅಭಿಲಾಷೆಗಳನ್ನೇ ಅಲ್ಲದೆ, ಅತ್ಯಂತ ದುರ್ಲಭಗಳಾದ ಇತರ ಮಹಾಕಾಂಕ್ಷೆಗಳನ್ನೂ ಪಡೆಯುವನು. ದೇವಿಯೆ! ಇಂತು ಪಾಪನಾಶಕವಾದ ಕರ್ಕೋಟಕೇಶ್ವರ ಮಹಾಲಿಂಗದ ಮಾಹಾತ್ಮ್ಯವನ್ನು ವಿವರಿಸಿರುವೆನು. ಇನ್ನು ಸಿದ್ಧೇಶ್ವರಲಿಂಗದ ಪ್ರಭಾವವನ್ನು ವರ್ಣಿಸುವೆನು, ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕರ್ಕೋಟೇಶ್ವರಮಾಹಾತ್ಮ್ಯವರ್ಣನ" ವೆಂಬ
ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋಽಧ್ಯಾಯಃ

## ಸಿದ್ಧೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಮಹಾದೇವ ಉವಾಚ :—**

**ಲಿಂಗಮೇಕಾದಶಂ ವಿದ್ಧಿ ದೇವಿ ಸಿದ್ಧೇಶ್ವರಂ ಶುಭಂ ।**
**ವೀರಭದ್ರಸಮೀಪೇ ತು ಸರ್ವಸಿದ್ಧಿಪ್ರದಾಯಕಂ ॥ ೧ ॥**
**ದೇವದಾರುವನೇ ಪೂರ್ವಂ ವಿಪ್ರಾ ಯೋಗಸಮನ್ವಿತಾಃ ।**
**ಸ್ಪರ್ಧಯಾ ಸಿದ್ಧಿಲಬ್ಧ್ಯರ್ಥಂ ತಪೋಽಕುರ್ವತ ಸಂಯುತಾಃ ॥ ೨ ॥**
**ಶಾಕಾಹಾರಾ ನಿರಾಹಾರಾ ಪರ್ಣಾಹಾರಾಸ್ತಥಾಽಪರೇ ।**
**ದಂತೋಲೂಖಲಿನಃ ಕೇಚಿದಶ್ಮಕುಟ್ಟಾಸ್ತಥಾಽಪರೇ ॥ ೩ ॥**
**ಕೇಚಿದ್ವೀರಾಸನರತಾ ಧೂಮ್ರಪಾನರತಾಃ ಪರೇ ।**
**ಪಾದೈರೂರ್ಧ್ವೈರಧೋವಕ್ತ್ರೈಃ ಕೇಚಿದಭ್ರಾಽವಕಾಶಿಕಾಃ ॥ ೪ ॥**

---

### ಕನ್ನಡದ ಅನುವಾದ

#### ಸಿದ್ಧೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಪವಿತ್ರವಾದ ಸಿದ್ಧೇಶ್ವರ ಮಹಾಲಿಂಗವೇ ಹನ್ನೊಂದನೆಯದೆಂದು ತಿಳಿ. ವೀರಭದ್ರೇಶ್ವರನ ಸಮೀಪದಲ್ಲಿರುವ ಇದು ಸರ್ವಸಿದ್ಧಿದಾಯಕವಾಗಿರುವುದು.

೨. ಹಿಂದೆ ದೇವದಾರುವನದಲ್ಲಿ ಬ್ರಾಹ್ಮಣೋತ್ತಮರು ಅಷ್ಟಸಿದ್ಧಿಗಳನ್ನು ಹೊಂದಲು ಪರಸ್ಪರಸ್ಪರ್ಧೆಯಿಂದ ಇಂದ್ರಿಯನಿಯಮವನ್ನು ಮಾಡಿ ಯೋಗಾಭ್ಯಾಸದೊಡನೆ ತಪಸ್ಸನ್ನು ಮಾಡುತ್ತಿದ್ದರು.

೩. ಕೆಲವರು ಸೊಪ್ಪುಗಳನ್ನು ತಿನ್ನುತ್ತಲೂ, ಕೆಲವರು ಉಪವಾಸಗಳಿಂದಲೂ, ಹಲವರು ತರಗೆಲೆಗಳ ಸೇವನೆಯಿಂದಲೂ ಕಾಲವನ್ನು ಕಳೆಯುತ್ತಿರುವವರು. ಕೆಲವರು ಹಸಿಯ ಧಾನ್ಯಗಳನ್ನೇ ಹಲ್ಲುಗಳಲ್ಲಿ ಅಗಿಯುವವರು. ಕೆಲವರು ಕಲ್ಲಿನಲ್ಲಿ ಕುಟ್ಟಿದ ಹಿಟ್ಟುಗಳನ್ನು ತಿನ್ನುವವರು.

೪. ಕೆಲವರು ವೀರಾಸನಗಳನ್ನು ಹಾಕಿದವರು. ಹಲವರು ಧೂಮ್ರಪಾನಗಳನ್ನು ಮಾಡುತ್ತಿರುವವರು. ಇತರರು ಆಕಾಶವನ್ನೇ ಮನೆಯನ್ನಾಗಿ ಮಾಡಿ ತಲೆಯನ್ನು ಕೆಳಗೂ ಕಾಲುಗಳನ್ನು ಮೇಲಕ್ಕೂ ಮಾಡಿ ತಪಸ್ಸನ್ನು ಮಾಡುತ್ತಿರುವವರು.

ಕೃಚ್ಛ್ರಚಾಂದ್ರಾಯಣಾದೀನಿ ಕುರ್ವಂತ್ಯನ್ಯೇ ಸಮಾಹಿತಾಃ ।
ನ ಚಾಽಪಿ ಪರಮಾ ಪ್ರಾಪ್ತಾ ಸಿದ್ಧಿರ್ವರ್ಷಶತೈರಪಿ ॥ ೫ ॥
ದುಃಖಾರ್ತಾಶ್ಚಿಂತಯಾಮಾಸುಃ ಕಥಂ ಸಿದ್ಧಿರ್ಭವಿಷ್ಯತಿ ।
ತಪಸಾ ದುಷ್ಕರೇಣೈವ ಸಿದ್ಧಿರ್ನೈವಾಽತ್ರ ಲಭ್ಯತೇ ॥ ೬ ॥
ವೃಥಾ ಶ್ರುತಿಸ್ತಥಾ ಜಾತಾ ಯಾ ಗೀತಾ ಮುನಿಭಿಃ ಪುರಾ ।
ತಪಸಾ ಲಭ್ಯತೇ ಸರ್ವಂ ತಪೋಮೂಲಮಿದಂ ಜಗತ್ ॥ ೭ ॥
ಅಂಜನಂ ಘುಟಿಕಾಚೈವ ಪಾದುಕಾಗಮನಂ ತಥಾ ।
ಖಡ್ಗಸಿದ್ಧಿರ್ಬಿಲೇ ವಾಸಶ್ಚಿಂತಾಮಣಿರಪೇಕ್ಷಿತಂ ॥ ೮ ॥
ಏವಂ ತೇಽಚಿಂತಯನ್ಸಿದ್ಧಾಃ ಪರಮಾಮರ್ಷಪೂರಿತಾಃ ।
ಉತ್ಸಾರ್ಯ ತತ್ತಪೋಧರ್ಮಂ ನಾಸ್ತಿಕ್ಯಂ ಭಾವಮಾಗತಾಃ ॥ ೯ ॥
ಏತಸ್ಮಿನ್ನೇವ ಕಾಲೇ ತು ವಾಗುವಾಚಾಽಶರೀರಿಣೀ ।
ಆಶ್ವಾಸಯಂತೀ ತಾನ್ ಸಿದ್ಧಾನ್ಮಾತಾ ಪುತ್ರಮಿವೌರಸಂ ॥ ೧೦ ॥

---

೫. ಇತರರು ಏಕಾಗ್ರಮನಸ್ಕರಾಗಿ ಕೃಚ್ಛ್ರ, ಚಾಂದ್ರಾಯಣಗಳೇ ಮುಂತಾದ ನಿಯಮಗಳನ್ನು ಪಾಲಿಸುತ್ತಿದ್ದರು. ಆದರೂ ನೂರಾರು ವರ್ಷಗಳು ಕಳೆದರೂ ಯಾರಿಗೂ ಉತ್ತಮಸಿದ್ಧಿಯು ಲಭಿಸಲಿಲ್ಲ.

೬. ಅವರೆಲ್ಲರೂ ಅತ್ಯಂತ ದುಃಖಭರಿತರಾಗಿ ತಮ್ಮಲ್ಲಿಯೇ ಯೋಚಿಸಿ ಕೊಂಡರು. "ನಮಗೆ ಸಿದ್ಧಿಯು ಹೇಗೆ ಲಭಿಸುವುದು? ಅತ್ಯಂತ ದುಷ್ಕರವಾದ ತಪಸ್ಸನ್ನಾಚರಿಸಿದರೂ ಇಲ್ಲಿ ನಮಗೆ ತಪಸ್ಸಿದ್ಧಿಯು ಲಭಿಸುವುದಿಲ್ಲ.

೭. 'ತಪಸ್ಸಿನಿಂದ ಸಕಲವೂ ಲಭಿಸುವುದು; ತಪಸ್ಸೇ ಈ ಜಗತ್ತಿಗೆ ಮೂಲಭೂತವಾಗಿರುವುದು' ಎಂದು ಮಹರ್ಷಿಗಳು ಹಿಂದೆ ಹೇಳುತ್ತಿದ್ದ ಮಾತುಗಳೆಲ್ಲವೂ ವ್ಯರ್ಥವಾಗಿರುವುವು.

೮. ಅಂಜನ, ಘುಟಿಕಾಸಿದ್ಧಿ, ಇಷ್ಟಬಂದೆಡೆಗೆ ತೆಗೆದುಕೊಂಡುಹೋಗುವ ಪಾದುಕೆಗಳು, ಖಡ್ಗಸಿದ್ಧಿ, ಅನ್ನಾಹಾರಗಳಿಲ್ಲದೆ ಬಿಲದಲ್ಲಿ ವಾಸಮಾಡುವುದು, ಚಿಂತಾಮಣಿಯ ಲಾಭ—ಇವುಗಳನ್ನು ನಾವು ಅಪೇಕ್ಷಿಸಿದೆವು."

೯. ಇಂತು ಆ ಸಿದ್ಧರು ಚಿಂತಾಭರಿತರಾಗಿ ಪರಮ ಕೋಪವನ್ನೂ ತಾಳಿದರು. ಮತ್ತು ತಮ್ಮ ತಪಶ್ಚರಣೆಗಳೆಲ್ಲವನ್ನೂ ಕೊನೆಗಾಣಿಸಿ ನಾಸ್ತಿಕ ವಾದಗಳನ್ನವಲಂಬಿಸಲುಪಕ್ರಮಿಸಿದರು.

೧೦. ಇಷ್ಟರಲ್ಲಿಯೇ ಒಂದು ಅಶರೀರವಾಣಿಯು ಅವರಿಗೆ ಹೇಳತೊಡ ಗಿತು. ಅದು ತಾಯಿಯು ಮಗುವನ್ನು ಸಮಾಧಾನಗೊಳಿಸುವಂತೆ ಅವರನ್ನು ಸಂತೈಸಿತು.

ಮಾಽವಮನ್ಯಧ್ವಮಾರ್ಯಾ ಹಿ ಶ್ರುತಿರ್ವ್ಯರ್ಥಾ ಮಹೀತಲೇ ।
ತಪೋ ನ ನಿಂದ್ಯಂ ಧರ್ಮೋ ವಾ ಶ್ರೂಯತಾಮಸ್ಯ ಕಾರಣಂ ॥ ೧೧ ॥
ಭವಿತಾ ಭವತಾಂ ಸಿದ್ಧಿರತ್ರ ನೈವ ತಪೋಧನಾಃ ।
ಸ್ಪರ್ಧಯಾ ಸಿದ್ಧಿಕಾಮೈಶ್ಚ ತಪಸ್ತದ್ಧಿ ಕೃತಂ ವೃಥಾ ॥ ೧೨ ॥
ಕಾಮಾಚ್ಚ ತಪಸೋ ಹಾನಿರಹಂಕಾರಾಚ್ಚ ವಿಸ್ಮಯಃ ।
ಕ್ರೋಧಾಲ್ಲೋಭಾತ್ತಥಾ ಮೋಹಾಜ್ಜಾಯತೇ ನಾಽತ್ರ ಸಂಶಯಃ ॥ ೧೩ ॥
ಸ್ಪರ್ಧಯಾ ರಹಿತೋ ಯಸ್ತು ಕಾಮಕ್ರೋಧವಿವರ್ಜಿತಃ ।
ಕರೋತಿ ಕರ್ಮ ಭಾವೇನ ಸ ತಪಃ ಫಲಮಶ್ನುತೇ ॥ ೧೪ ॥
ವಾಸನಾವಾಸಿತೋ ಯಸ್ತು ಏಕಚಿತ್ತಃ ಸಮಾಹಿತಃ ।
ಆಸ್ತಿಕಃ ಶ್ರದ್ಧಧಾನಶ್ಚ ಸ ತಪಃಫಲಮಶ್ನುತೇ ॥ ೧೫ ॥
ಮಾತೃವತ್ಪರದಾರಾಣಿ ಪರದ್ರವ್ಯಾಣಿ ಲೋಷ್ಟವತ್ ।
ಯಃ ಪಶ್ಯತಿ ನರೋ ನಿತ್ಯಂ ಸ ತಪಃಫಲಮಶ್ನುತೇ ॥ ೧೬ ॥

---

೧೧. "ಮುನಿಗಳಿರಾ! ಭೂಲೋಕದಲ್ಲಿ ಶ್ರುತಿಯು ವ್ಯರ್ಥವೆಂಬುದಾಗಿ ಅಲ್ಲಗಳೆಯಬೇಡಿರಿ. ತಪಸ್ಸನ್ನಾಗಲಿ ಧರ್ಮಾಚರಣೆಯನ್ನಾಗಲಿ ನಿಂದಿಸಬಾರದು. ನಿಮ್ಮ ತಪಸ್ಸು ಸಫಲವಾಗದಿರಲು ಕಾರಣವನ್ನು ಕೇಳಿರಿ.

೧೨. ತಪೋಧನರಿರಾ! ಇಲ್ಲಿ ನಿಮಗೆ ತಪಸ್ಸಿದ್ಧಿಯೆಂದಿಗೂ ಲಭಿಸುವುದಿಲ್ಲವು. ನೀವು ಪರಸ್ಪರ ಸ್ಪರ್ಧೆಯಿಂದ ಸಿದ್ಧಿಗಳನ್ನಪೇಕ್ಷಿಸಿದುದರಿಂದ ನಿಮ್ಮ ತಪಸ್ಸು ವ್ಯರ್ಥವಾಯಿತು.

೧೩. ಕಾಮದಿಂದಲೂ, ಅಹಂಕಾರದಿಂದಲೂ, ಕ್ರೋಧದಿಂದಲೂ, ಲೋಭದಿಂದಲೂ, ಮೋಹದಿಂದಲೂ ತಪಸ್ಸಿನ ಹಾನಿಯೂ ಬುದ್ಧಿಭ್ರಮಣೆಯೂ ಉಂಟಾಗುವುವು. ಇದರಲ್ಲಿ ಸಂಶಯವಿಲ್ಲ.

೧೪. ಯಾವನು ಸ್ಪರ್ಧೆ, ಕಾಮ ಮತ್ತು ಕ್ರೋಧಗಳನ್ನು ದೂರಮಾಡಿ ಏಕನಿಷ್ಠತೆಯಿಂದ ಕರ್ಮವನ್ನು ಮಾಡುವನೊ, ಅವನಿಗೆ ಮಾತ್ರ ತಪಸ್ಸಿನ ಫಲವು ದೊರಕುವುದು.

೧೫. ಪೂರ್ವಸತ್ಕರ್ಮಗಳ ವಾಸನೆಯುಳ್ಳವನೂ, ಏಕಮನಸ್ಕನೂ, ಪ್ರಶಾಂತಚಿತ್ತನೂ, ಆಸ್ತಿಕನೂ, ಶ್ರದ್ಧಾತತ್ಪರನೂ ಆದ ಮನುಷ್ಯನು ಮಾತ್ರ ತಪಸ್ಸಿನ ಸತ್ಫಲಕ್ಕೆ ಭಾಗಿಯಾಗುವನು.

೧೬. ಯಾವ ಮಾನವನು ಪರಸ್ತ್ರೀಯರನ್ನು ತಾಯಿಯಂತೆಯೂ, ಪರಸ್ವತ್ತುಗಳನ್ನು ಮಣ್ಣಿಗೆ ಸಮಾನವಾಗಿಯೂ ಕಾಣುತ್ತಿರುವನೊ, ಅವನು ಮಾತ್ರ ತಪಸ್ಸಿಗೆ ತಕ್ಕ ಫಲವನ್ನು ಪಡೆಯುವನು.

ಈದೃಶೇ ಪುರುಷೇ ವಿಪ್ರಾಸ್ತಪಃಸಿದ್ಧಿಶ್ಚ ದೃಶ್ಯತೇ ।
ಭವಂತಃ ಸ್ಪರ್ಧಯಾ ಚೈವ ಕೃತವಂತಶ್ಚ ದುಷ್ಕರಂ ॥ ೧೭ ॥
ತಸ್ಮಾದ್ವರ್ಷಸಹಸ್ರೇಣ ನೈವ ಸಿದ್ಧಿರ್ಭವಿಷ್ಯತಿ ।
ಯದಿ ಮದ್ವಚನಂ ಕಾರ್ಯಂ ನಿರ್ವಿಕಲ್ಪೇನ ಚೇತಸಾ ॥ ೧೮ ॥
ಮಹಾಕಾಲವನಂ ಗತ್ವಾ ಯೂಯಂ ಸರ್ವೇ ಸಮಾಹಿತಾಃ ।
ಆರಾಧಯಧ್ವಂ ದೇವೇಶಂ ಸದಾ ಸಿದ್ಧಿಪ್ರದಾಯಕಂ ॥ ೧೯ ॥
ದರ್ಶನಾತ್ತಸ್ಯ ದೇವಸ್ಯ ಲಭ್ಯತೇ ಸಿದ್ಧಿರುತ್ತಮಾ ।
ಸನಕಾದಯೋಽಪ್ಯೇವಮಾಸಾದ್ಯ ಯೋಗತತ್ಪರಾಃ ।
ಪೂಜಯಿತ್ವಾಽಪಿ ಭಾವೇನ ಸಂಸಿದ್ಧಿಂ ಪರಮಾಂ ಗತಾಃ ॥ ೨೦ ॥
ರಾಜ್ಞಾ ವಸುಮತಾ ಪೂರ್ವಂ ಖಡ್ಗಸಿದ್ಧಿಃ ಸುದುರ್ಲಭಾ ।
ಪ್ರಾಪ್ತಾ ದರ್ಶನಮಾತ್ರೇಣ ಲಿಂಗಸ್ಯಾಽಸ್ಯ ಪ್ರಭಾವತಃ ॥ ೨೧ ॥
ಪಾದುಕಾಗಮನಂ ಲಬ್ಧಂ ಹೈಹಯೇನ ಮಹಾತ್ಮನಾ ।
ಕೃತವೀರಾತ್ಮಜೇನೈವ ವಾಹಾನಾಂ ಚ ಸಹಸ್ರಕಂ ॥ ೨೨ ॥

---

೧೭. ಅಯ್ಯಾ ವಿಪ್ರರಿರಾ! ಇಂತಹ ಮನುಷ್ಯನಲ್ಲಿ ಮಾತ್ರ ತಪಸ್ಸಿದ್ಧಿಯು ಕಂಡುಬರುವುದು. ನೀವಾದರೊ ಒಬ್ಬರನ್ನೊಬ್ಬರು ಮೀರಿಸಬೇಕೆಂಬ ಸ್ಪರ್ಧೆಯಿಂದ ತಪಸ್ಸನ್ನು ಆಚರಿಸುತ್ತಿರುವಿರಿ.

೧೮. ಆದುದರಿಂದ ಸಾವಿರ ವರ್ಷಗಳಾದರೂ ನಿಮಗೆಂದಿಗೂ ತಪಸ್ಸಿದ್ಧಿಯು ಲಭಿಸುವುದಿಲ್ಲ. ನನ್ನ ಮಾತನ್ನು ಕೇಳುವಿರಾದರೆ ಭ್ರಾಂತಿಯಿಲ್ಲದ ಮನಸ್ಸಿನಿಂದ ತಪಸ್ಸನ್ನಾಚರಿಸಿರಿ.

೧೯. ನೀವೆಲ್ಲರೂ ಸಮಾಧಾನಚಿತ್ತದಿಂದ ಮಹಾಕಾಲವನಕ್ಷೇತ್ರಕ್ಕೆ ಹೋಗಿ ಅಲ್ಲಿರುವ ಸರ್ವಸಿದ್ಧಿಪ್ರದಾಯಕನಾದ ಮಹಾದೇವನನ್ನು ನಿತ್ಯವೂ ಪೂಜಿಸಿರಿ.

೨೦. ಯಾವ ದೇವನನ್ನು ಸಮೀಪಿಸಿ ಯೋಗಾಭ್ಯಾಸತತ್ಪರರಾದ ಸನಕಾದಿ ಮಹಾಮುನಿಗಳೂ ಸಹ ಭಕ್ತಿಭಾವದಿಂದ ಪೂಜಿಸಿ ಉತ್ತಮವಾದ ತಪಸ್ಸಿದ್ಧಿಯನ್ನು ಪಡೆದರೊ ಆ ದೇವದೇವನ ದರ್ಶನದಿಂದಲೇ ನಿಮಗೆ ಉತ್ತಮವಾದ ಸಿದ್ಧಿಯು ಲಭಿಸುವುದು.

೨೧. ಈ ಮಹಾಲಿಂಗವನ್ನು ನೋಡಿದ ಮಾತ್ರದಿಂದಲೇ ಇದರ ಪ್ರಭಾವದ ಫಲವಾಗಿ ವಸುಮಂತನೆಂಬ ಮಹಾರಾಜನು ಖಡ್ಗಸಿದ್ಧಿಯನ್ನು ಪಡೆದು ಕೃತಾರ್ಥನಾದನು.

೨೨. ಮಹಾತ್ಮನಾದ ಹೈಹಯನು ಇಲ್ಲಿ ಹಿಂದೆ ಪಾದುಕಾಗಮನಸಿದ್ಧಿಯನ್ನು ಪಡೆದನು. ಕೃತವೀರ್ಯನ ಮಗನಾದ ಕಾರ್ತವೀರ್ಯಾರ್ಜುನನು ಒಂದು ಸಾವಿರ ಕೈಗಳನ್ನು ಪಡೆದನು.

ಅದೃಶ್ಯಕರಣಂ ಚೈವ ಪ್ರಾಪ್ತಂ ಚಾನೂರುಣಾ ಪುರಾ ।
ಸ್ವರ್ಣಸಿದ್ಧಿಶ್ಚ ಸಿದ್ಧೇನ ಪಾದಲೇಪೋ ರಸಾಯನಂ ।
ಅಂಜನಂ ಚ ತಥಾ ಲಬ್ಧಂ ಲಿಂಗಸ್ಯಾಽಸ್ಯ ಚ ದರ್ಶನಾತ್ ॥ ೨೩ ॥
ಆಕಾಶವಚನಂ ಶ್ರುತ್ವಾ ತೇ ಸಿದ್ಧಾ ವಿಸ್ಮಯಾನ್ವಿತಾಃ ।
ಸಮಾಯಾತಾ ಮುದಾ ಯುಕ್ತಾ ಮಹಾಕಾಲವನೋತ್ತಮೇ ॥ ೨೪ ॥
ಸರ್ವಸಿದ್ಧಿಪ್ರದಂ ಚೈವ ದದೃಶುರ್ಲಿಂಗಮುತ್ತಮಂ ।
ದರ್ಶನಾತ್ತಸ್ಯ ಲಿಂಗಸ್ಯ ಸಂಸಿದ್ಧಿಂ ಪರಮಾಂ ಗತಾಃ ॥ ೨೫ ॥
ತತಃಪ್ರಭೃತಿ ವಿಖ್ಯಾತೋ ದೇವೈಃ ಸಿದ್ಧೇಶ್ವರಃ ಪರಃ ।
ಯೇ ಪಶ್ಯಂತಿ ನರಾ ದೇವಿ ದೇವಂ ಸಿದ್ಧೇಶ್ವರಂ ಪರಂ ।
ನ ತೇಷಾಂ ದುರ್ಲಭಾ ಸಿದ್ಧಿರ್ಭವಿಷ್ಯತಿ ಮಹೀತಲೇ ॥ ೨೬ ॥
ಸಿದ್ಧೇಶ್ವರಂ ಗಮಿಷ್ಯಂತಿ ಭಾವಹೀನಾಃ ಪ್ರಸಂಗತಃ ।
ಸಂಸಿದ್ಧಾಸ್ತೇ ಭವಿಷ್ಯಂತಿ ನಿಯತಾ ನಾಽತ್ರ ಸಂಶಯಃ ॥ ೨೭ ॥

---

೨೩. ಅರುಣದೇವನೂ ಅದೃಶ್ಯನಾಗುವ ಸಿದ್ಧಿಯನ್ನು ಇಲ್ಲಿಯೇ ಪಡೆದನು. ಸಿದ್ಧನೊಬ್ಬನು ಚಿನ್ನವನ್ನು ಮಾಡುವ ಉಪಾಯವನ್ನೂ, ಪಾದಲೇಪವನ್ನೂ, ರಸಾಯನಕಲ್ಪವನ್ನೂ, ಅಂಜನವನ್ನೂ ಈ ಮಹಾಲಿಂಗದ ದರ್ಶನದಿಂದ ಸಿದ್ಧಿ ಮಾಡಿಕೊಂಡು ಕೃತಕೃತ್ಯನಾದನು.''

೨೪. ಇಂತೆಂದ ಆಕಾಶವಾಣಿಯ ನುಡಿಯನ್ನು ಕೇಳಿ ಆ ಸಿದ್ಧರೆಲ್ಲರೂ ಅತ್ಯಂತ ವಿಸ್ಮಯಾವಿಷ್ಟರಾಗಿ ಪರಮ ಸಂತೋಷವನ್ನು ಹೊಂದಿ ಉತ್ತಮವಾದ ಮಹಾಕಾಲವನವನ್ನು ಸೇರಿದರು.

೨೫. ಸರ್ವಸಿದ್ಧಿಪ್ರದವೆನಿಸಿದ ಆ ಉತ್ತಮ ಲಿಂಗವನ್ನು ಆ ಬ್ರಾಹ್ಮಣ ಪುಂಗವರು ನೋಡಿದರು. ಆ ಲಿಂಗದ ದರ್ಶನಮಾತ್ರದಿಂದಲೇ ಅವರು ಸಕಲ ಸಿದ್ಧಿಗಳನ್ನೂ ಉತ್ತಮ ರೀತಿಯಿಂದ ವಶಗೊಳಿಸಿಕೊಂಡರು.

೨೬. ಅಂದು ಮೊದಲಾಗಿ ದೇವತೆಗಳಲ್ಲಿಯೂ ಆ ಲಿಂಗವು ಸಿದ್ಧೇಶ್ವರ ವೆಂಬುದಾಗಿ ಪ್ರಖ್ಯಾತವಾಗಿರುವುದು. ಪಾರ್ವತಿಯೆ! ಯಾವ ಮನುಜರು ಸರ್ವೋತ್ತಮವಾದ ಈ ಸಿದ್ಧೇಶ್ವರನ ದರ್ಶನವನ್ನು ತೆಗೆದುಕೊಳ್ಳುವರೊ, ಅವರಿಗೆ ಸಮಸ್ತ ಭೂಮಂಡಲದಲ್ಲಿಯೂ ವಶವಾಗದ ಸಿದ್ಧಿಯೇ ಇರುವುದಿಲ್ಲ.

೨೭. ಯಾರು ಭಕ್ತಿವಿಹೀನರಾಗಿದ್ದರೂ ಪ್ರಸಂಗವಶದಿಂದ ಸಿದ್ಧೇಶ್ವರನನ್ನು ನೋಡುವರೊ, ಅವರೂ ಖಂಡಿತವಾಗಿ ಅಭೀಷ್ಟಸಿದ್ಧಿಗಳನ್ನೂ ಪಡೆಯುವುದರಲ್ಲಿ ಸಂದೇಹವಿಲ್ಲ.

ಮಹಾಪಾತಕಸಂಯುಕ್ತೋ ಯಸ್ತು ಸಿದ್ಧೇಶ್ವರಂ ಸ್ಮರೇತ್ ।
ಸಂಸಿದ್ಧಸ್ತು ಭವೇನ್ನೂನಂ ಜ್ಞಾನೈಶ್ವರ್ಯಸಮನ್ವಿತಃ ॥ ೨೮ ॥
ನಿಯಮೇನ ತು ಯಃ ಪಶ್ಯೇದ್ದೇವಂ ಸಿದ್ಧೇಶ್ವರಂ ಪರಂ ।
ಷಣ್ಮಾಸಾಜ್ಜಾಯತೇ ಸಿದ್ಧಿರ್ವಾಂಛಿತಾ ಯಾ ಭವೇದ್ಧೃದಿ ॥ ೨೯ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ಕೃಷ್ಣಪಕ್ಷೇ ವಿಶೇಷತಃ ।
ಸಿದ್ಧೇಶ್ವರಂ ತು ಯಃ ಪಶ್ಯೇತ್ಸ ಪಶ್ಯೇನ್ಮಮ ಮಂದಿರಂ ॥ ೩೦ ॥
ಅಪುತ್ರೋ ಲಭತೇ ಪುತ್ರಂ ನಿರ್ಧನಸ್ತು ಧನಂ ಲಭೇತ್ ।
ವಿದ್ಯಾರ್ಥೀ ಲಭತೇ ವಿದ್ಯಾಂ ಭಾರ್ಯಾರ್ಥೀ ಲಭತೇ ಸ್ತ್ರಿಯಂ ॥ ೩೧ ॥
ಸಂಕ್ರಾಂತೌ ಸೋಮವಾರೇ ಚ ಗ್ರಹಣೇ ಚೈವ ಯೋಽರ್ಚಯೇತ್ ।
ಕುಲಾನಾಂ ಶತಮುದ್ಧೃತ್ಯ ಪೈತೃಕಂ ಸ್ವಾಧಿಕಂ ಪ್ರಿಯೇ ।
ಮೋದತೇ ಮಮ ಲೋಕೇ ಚ ಯಾವದಿಂದ್ರಾಶ್ಚತುರ್ದಶ ॥ ೩೨ ॥

---

೨೮. ಯಾವನು ಮಹಾಪಾತಕಗಳನ್ನೇ ಮಾಡಿದ್ದರೂ ಈ ಸಿದ್ಧೇಶ್ವರನನ್ನು ನಿತ್ಯವೂ ಸ್ಮರಿಸುತ್ತಿರುವನೊ, ಅವನು ಸಿದ್ಧಪುರುಷನೂ, ಜ್ಞಾನೈಶ್ವರ್ಯ ಭರಿತನೂ ಆಗುವನು.

೨೯. ಶೌಚಾದಿ ನಿಯಮಗಳಿಂದ ಕೂಡಿದವನಾಗಿ ಯಾವನು ನಿತ್ಯವೂ ಸರ್ವಶ್ರೇಷ್ಠನಾದ ಈ ಸಿದ್ಧೇಶ್ವರನನ್ನು ನೋಡುವನೊ, ಅವನಿಗೆ ಆರುತಿಂಗಳೊಳಗಾಗಿಯೇ ಮನಸ್ಸಿನಲ್ಲಿರುವ ಅಭಿಲಾಷೆಯು ಕೈಗೂಡುವುದು.

೩೦. ಪ್ರತಿಮಾಸದ ಕೃಷ್ಣಪಕ್ಷದ ಅಷ್ಟಮಿ ಮತ್ತು ಚತುರ್ದಶಿಯ ದಿನಗಳಲ್ಲಿ ಯಾರು ವಿಶೇಷವಾಗಿ ಈ ಸಿದ್ಧೇಶ್ವರನನ್ನು ನೋಡುವರೊ, ಅವರು ನನ್ನ ನಿವಾಸವನ್ನೇ ನೋಡುವರು.

೩೧. ಇದರ ದರ್ಶನದಿಂದ ಪುತ್ರಹೀನನಾದವನು ಸತ್ಪುತ್ರನನ್ನು ಪಡೆಯುವನು. ದರಿದ್ರನಾದವನು ಧನಲಾಭವನ್ನು ಪಡೆಯುವನು. ವಿದ್ಯಾರ್ಥಿಯು ಸಕಲ ವಿದ್ಯೆಗಳನ್ನೂ ಸ್ನಾತಕನು ಉತ್ತಮ ಪತ್ನಿಯನ್ನೂ ಪಡೆಯುವರು.

೩೨. ಸಂಕ್ರಮಣ, ಸೋಮವಾರ ಅಥವಾ ಗ್ರಹಣ— ಮುಂತಾದ ವಿಶೇಷ ದಿವಸಗಳಲ್ಲಿ ಯಾವನು ಈ ಮಹಾಲಿಂಗವನ್ನು ಪೂಜಿಸುವನೊ, ಅವನು ತನ್ನ ಪಿತೃಪಿತಾಮಹಾದಿಗಳ ನೂರು ಕುಲಗಳನ್ನುದ್ಧರಿಸುವನು. ಮೇಲಾಗಿ ಹದಿನಾಲ್ಕು ಮಹೇಂದ್ರಕಲ್ಪಗಳವರೆಗೂ ನನ್ನ ಲೋಕದಲ್ಲಿ ವಾಸಮಾಡುವನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಸಿದ್ಧೇಶ್ವರಸ್ಯ ದೇವಸ್ಯ ಲೋಕಪಾಲೇಶ್ವರಂ ಶೃಣು ॥ ೩೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಸಿದ್ಧೇಶ್ವರಮಾಹಾತ್ಮ್ಯವರ್ಣನಂ"
ನಾಮ್ನೈಕಾದಶೋಽಧ್ಯಾಯಃ

---

೩೩. ದೇವಿಯೇ! ಇಂತು ಸಿದ್ಧೇಶ್ವರಮಹಾಲಿಂಗದ ಮಹಿಮೆಯನ್ನು ನಿನಗೆ ಹೇಳಿರುವೆನು. ಈ ಚರಿತ್ರೆಯು ಪಾಪಾಪನೋದಕವು. ಇನ್ನು ಲೋಕಪಾಲೇಶ್ವರನ ಮಹಿಮೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಸಿದ್ಧೇಶ್ವರಮಾಹಾತ್ಮ್ಯವರ್ಣನ"ವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

### ಲೋಕಪಾಲೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ :—

**ದ್ವಾದಶಂ ವಿದ್ಧಿ ದೇವೇಶಿ ಲೋಕಪಾಲೇಶ್ವರಂ ಶಿವಂ ।**
**ಯಸ್ಯ ದರ್ಶನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೧ ॥**
**ಪುರಾ ದೈತ್ಯಗಣಾ ದೇವಿ ಪ್ರಾದುರ್ಭೂತಾಃ ಸಹಸ್ರಶಃ ।**
**ಹಿರಣ್ಯಕಶಿಪೋರ್ವಕ್ಷಃಸ್ಥಲಾದತಿಪರಾಕ್ರಮಾಃ ॥ ೨ ॥**
**ತೈರಿಯಂ ವಸುಧಾ ವ್ಯಾಪ್ತಾ ಸಶೈಲವನಕಾನನಾ ।**
**ವಿಧ್ವಸ್ತಾಃ ಸ್ವಾಶ್ರಮಾಃ ಸರ್ವೇ ಯಜ್ಞಾ ವಿಧ್ವಂಸಿತಾಸ್ತಥಾ ॥ ೩ ॥**
**ಬ್ರಾಹ್ಮಣಾ ಭಕ್ಷಿತಾಶ್ಚೈವ ವೇದವೇದಾಂಗಪಾರಗಾಃ ।**
**ಪೂರಿತಾನ್ಯಗ್ನಿಕುಂಡಾನಿ ಪಾಂಸುನಾ ಮಧುನಾ ತಥಾ ॥ ೪ ॥**
**ವಿಧ್ವಸ್ತಾಃ ಕಲಶಾಃ ಸರ್ವೇ ಮೃದ್ಭಾಂಡಾದಿ ಚ ಚೂರ್ಣಿತಂ ॥ ೫ ॥**

### ಕನ್ನಡದ ಅನುವಾದ

### ಲೋಕಪಾಲೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವನಾಯಕಿಯೆ! ಹನ್ನೆರಡನೆಯ ಮಹಾಲಿಂಗವೇ ಲೋಕಪಾಲೇಶ್ವರವೆಂದು ತಿಳಿ. ಅದರ ದರ್ಶನಮಾತ್ರದಿಂದ ಮನುಷ್ಯನು ಸಮಸ್ತ ಪಾತಕಗಳಿಂದಲೂ ವಿಮುಕ್ತನಾಗಿ ಪರಿಶುದ್ಧನಾಗುವನು.

೨. ದೇವಿ! ಹಿಂದೆ ಹಿರಣ್ಯಕಶಿಪುವೆಂಬ ರಾಕ್ಷಸೋತ್ತಮನ ಎದೆಯನ್ನು ಮಹಾವಿಷ್ಣುವು ಸೀಳಿದನಷ್ಟೆ. ಆಗ ಅವನ ವಕ್ಷಸ್ಥಳದಿಂದ ಮಹಾಬಲಶಾಲಿಗಳಾದ ಸಾವಿರಾರು ರಾಕ್ಷಸರು ಹುಟ್ಟಿದರು.

೩. ಅವರಿಂದ ಪರ್ವತಗಳು, ವನಗಳು, ಅರಣ್ಯಗಳು ಮುಂತಾದ ಸಕಲ ಪ್ರದೇಶಗಳನ್ನೊಳಗೊಂಡು ಭೂಲೋಕವೆಲ್ಲವೂ ವ್ಯಾಪ್ತವಾಯಿತು. ಮಹರ್ಷಿಗಳ ಆಶ್ರಮಗಳು ನಾಶವಾದುವು. ಯಜ್ಞಯಾಗಾದಿಗಳು ಕೊನೆಗಂಡುವು.

೪. ವೇದಶಾಸ್ತ್ರಗಳಲ್ಲಿ ನಿಷ್ಣಾತರಾದ ಬ್ರಾಹ್ಮಣರನ್ನು ಆ ರಾಕ್ಷಸರು ತಿನ್ನುತ್ತ ಅವರ ಅಗ್ನಿಕುಂಡಗಳೆಲ್ಲವನ್ನೂ ದೂಳಿನಿಂದಲೂ ಮದ್ಯದ್ರವ್ಯಗಳಿಂದಲೂ ತುಂಬಿ ಕೆಡಿಸಿದರು.

೫. ಕಳಶಗಳೆಲ್ಲವೂ ಧ್ವಂಸವಾದುವು. ಮಣ್ಣಿನ ಮಡಕೆಗಳೆಲ್ಲವೂ ಚೂರ್ಣಿತಗಳಾದುವು.

ನಿಃಸ್ವಾಧ್ಯಾಯವಷಟ್ಕಾರಾ ಸ್ವಧಾಸ್ವಾಹಾವಿವರ್ಜಿತಾ ।
ಕೃತಾ ಚ ಧರಣೀದೇವಿ ನಷ್ಟಯಜ್ಞೋತ್ಸವಾಽಭವತ್ ॥ ೬ ॥
ಲೋಕಪಾಲಾಸ್ತತೋ ಭೀತಾ ಮಾಧವಂ ಶರಣಂ ಗತಾಃ ।
ಊಚುಃ ಪ್ರಾಂಜಲಯಃ ಸರ್ವೇ ಕ್ಷುಧಾರ್ತಾ ದುಃಖಿತಾಃ ಕೃತಾಃ ॥ ೭ ॥
ವಯಂ ಗ್ಲಾನಿಂ ಗತಾ ದೇವ ಯಜ್ಞಭಾಗಂ ವಿನಾ ಕೃತಾಃ ।
ವಯಂ ತ್ರಾತಾಸ್ತ್ವಯಾ ಪೂರ್ವಂ ನಮುಚೇರ್ವೃಷಪರ್ವಣಃ ॥ ೮ ॥
ಹಿರಣ್ಯಕಶಿಪೋ ರೌದ್ರಾನ್ನರಕಾಚ್ಚ ಮುರೋಸ್ತಥಾ ।
ತಥಾ ರಕ್ಷ ಸುರಶ್ರೇಷ್ಠ ಭಯಂ ನಃ ಸಮುಪಸ್ಥಿತಂ ॥ ೯ ॥
ತೇಷಾಂ ತದ್ವಚನಂ ಶ್ರುತ್ವಾ ಶಂಖಚಕ್ರಗದಾಧರಃ ।
ಜಗಾಮ ಸ ತತೋ ದೈತ್ಯಾಃ ಪ್ರವಿಷ್ಟಾ ವರುಣಾಲಯಂ ॥ ೧೦ ॥
ತೇ ನಿಷ್ಕ್ರಮ್ಯ ತತೋ ರಾತ್ರೌ ನಿಘ್ನಂತಿ ದ್ವಿಜಸತ್ತಮಾನ್ ।
ತಾಪಸಾನ್ದೀಕ್ಷಿತಾನ್ದೇವಿ ಧರ್ಮವ್ರತಪರಾಯಣಾನ್ ॥ ೧೧ ॥

---

೬. ದೇವಿಯೆ! ಭೂಮಂಡಲದಲ್ಲೆಲ್ಲಿಯೂ ವೇದಾಧ್ಯಯನಗಳಾಗಲಿ, ವಷಟ್ಕಾರಗಳಾಗಲಿ, ಸ್ವಾಹಾಸ್ವಧಾಕಾರಗಳಾಗಲಿ ಕೇಳಬರುತ್ತಿರಲಿಲ್ಲ. ಯಜ್ಞಮಹೋತ್ಸವಗಳೂ ನಿಂತುಹೋದುವು.

೭. ಆಗ ಲೋಕಪಾಲಕರಾದ ದೇವತೆಗಳೆಲ್ಲರೂ ಭಯಗೊಂಡು ಶ್ರೀಮನ್ನಾರಾಯಣನಲ್ಲಿ ಶರಣು ಹೋಗಿ ಕೈಗಳನ್ನು ಮುಗಿದು ಇಂತೆಂದು ಕೇಳಿಕೊಂಡರು. "ನಾವೆಲ್ಲರೂ ಹಸಿವಿನಿಂದ ಆರ್ತರಾಗಿ ದುಃಖಿತರಾಗಿ ಮಾಡಲ್ಪಟ್ಟಿರುವೆವು.

೮. ಲೋಕೇಶ್ವರನೆ! ನಾವು ಬಹಳ ಕಷ್ಟವನ್ನು ಪಡುತ್ತಿರುವೆವು. ನಮ್ಮ ಯಜ್ಞಹವಿರ್ಭಾಗಗಳು ಇಲ್ಲದೆ ಹೋಗಿರುವುವು. ಹಿಂದೆ ನೀನೇ ನಮ್ಮನ್ನು ನಮುಚಿ, ವೃಷಪರ್ವರೆಂಬ ದೈತ್ಯರ ಉಪಟಳದಿಂದ ಕಾಪಾಡಿದೆ.

೯. ಭಯಂಕರನಾದ ಹಿರಣ್ಯಕಶಿಪುವಿನಿಂದಲೂ, ನರಕಾಸುರನಿಂದಲೂ ಮುರುದೈತ್ಯನಿಂದಲೂ ನಮ್ಮನ್ನು ಪೊರೆದೆ. ದೇವೋತ್ತಮನೆ! ಹಾಗೆಯೇ ಈಗಲೂ ನಮ್ಮನ್ನು ಕಾಪಾಡು. ನಮಗೆ ಮಹಾಭಯವು ಸಂಭವಿಸಿರುವುದು."

೧೦. ಅವರ ಈ ವಿಜ್ಞಾಪನೆಯನ್ನು ಕೇಳಿ ಶಂಖಚಕ್ರಗದಾಪಾಣಿಯಾಗಿ ಮಹಾವಿಷ್ಣುವು ದಿಗ್ವಿಜಯಕ್ಕಾಗಿ ಹೊರಟನು. ಅವನ ಭಯದಿಂದ ಆ ರಾಕ್ಷಸರೆಲ್ಲರೂ ಸಮುದ್ರದಲ್ಲಿ ಸೇರಿಕೊಂಡರು.

೧೧. ದೇವಿಯೆ! ಬಳಿಕ ರಾತ್ರಿಯ ವೇಳೆಗಳಲ್ಲಿ ಅವರೆಲ್ಲರೂ ಹೊರಕ್ಕೆ ಬಂದು ಧರ್ಮವ್ರತಗಳಲ್ಲಿ ನಿರತರಾಗಿರುವ ಬ್ರಾಹ್ಮಣರನ್ನೂ, ಯಜ್ಞದೀಕ್ಷಿತರನ್ನೂ, ತಪಸಿಗಳನ್ನೂ, ಕೊಲಲುಪಕ್ರಮಿಸಿದರು.

**ಅಥ ಸ್ವರ್ಗಂ ಗತಾಃ ಕಾಂತೇ ಜಿತಃ ಶಕ್ರೋ ಮರುತ್ಪತಿಃ ।**
**ತಥೈವ ದಕ್ಷಿಣಾಮಾಶಾಂ ಧರ್ಮರಾಜೋ ಜಿತಸ್ತತಃ ॥ ೧೨ ॥**
**ಗತ್ವಾಽಥ ಪಶ್ಚಿಮಾಮಾಶಾಂ ಜಲರಾಜೋ ವಿನಿರ್ಜಿತಃ ।**
**ಉತ್ತರೇ ಧನದೋ ದೇವಿ ತೈರ್ದೈತ್ಯೈಃ ಸ ವಿನಿರ್ಜಿತಃ ॥ ೧೩ ॥**
**ತತಸ್ತೇ ವ್ಯಾಕುಲಾ ಜಾತಾ ವಿಷ್ಣುಂ ಶರಣಮಾಗತಾಃ ।**
**ಉಪಾಯಃ ಕಥಿತೋ ದೇವಿ ದೇವೇಭ್ಯೋ ವಿಷ್ಣುನಾ ತದಾ ॥ ೧೪ ॥**
**ಮಹಾಕಾಲವನಂ ಗತ್ವಾ ದೇವಾ ಭಕ್ತ್ಯಾ ಸಮಾಹಿತಾಃ ।**
**ಆರಾಧಯತ ಸರ್ವೇಶಂ ಶಂಕರಂ ಲೋಕಶಂಕರಂ ॥ ೧೫ ॥**
**ಭವತಾಂ ಭವಿತಾ ಸಿದ್ಧಿಸ್ತತ್ರ ತಸ್ಯ ಪ್ರಸಾದತಃ ॥ ೧೬ ॥**
**ಇತಿ ತಸ್ಯ ವಚಃ ಶ್ರುತ್ವಾ ಕೃಷ್ಣಸ್ಯಾಽಮಿತತೇಜಸಃ ।**
**ಪ್ರಸ್ಥಿತಾ ಲೋಕಪಾಲಾಸ್ತೇ ಮಹಾಕಾಲವನೇ ಶುಭೇ ॥ ೧೭ ॥**
**ತಾವತ್ತತ್ರೈವ ಸಂರುದ್ಧಾ ದೈತ್ಯೈಃ ಶಸ್ತ್ರಧರೈಸ್ತದಾ ।**
**ಭೂಯೋ ನಷ್ಟಾಶ್ಚ ಸಂಪ್ರಾಪ್ತಾ ಯತ್ರ ದೇವೋ ಜನಾರ್ದನಃ ॥ ೧೮ ॥**

---

೧೨. ಪ್ರಿಯೆ! ಅವರು ಸ್ವರ್ಗಲೋಕಕ್ಕೆ ಹೋಗಿ ದೇವಾಧಿದೇವನಾದ ಮಹೇಂದ್ರನನ್ನೂ ಜಯಿಸಿದರು. ಅಂತೆಯೇ ದಕ್ಷಿಣ ದಿಕ್ಕಿಗೆ ಜೈತ್ರಯಾತ್ರೆಯನ್ನು ಮಾಡಿ ಯಮಧರ್ಮರಾಜನನ್ನು ಗೆದ್ದರು.

೧೩. ಬಳಿಕ ಪಶ್ಚಿಮದಿಕ್ಕಿಗೆ ಪ್ರಯಾಣಮಾಡಿ ಜಲಗಳಿಗೆ ಅಧಿದೇವತೆಯಾದ ವರುಣನನ್ನು ಸೋಲಿಸಿದರು. ಉತ್ತರದಲ್ಲಿ ದಿಗಧೀಶ್ವರನಾದ ಕುಬೇರನೂ ಅವರಿಂದ ಪರಾಜಿತನಾದನು.

೧೪. ಆಗ ಅವರೆಲ್ಲರೂ ಮನೋವ್ಯಾಕುಲದಿಂದ ಕೂಡಿ ಮಹಾವಿಷ್ಣುವನ್ನೇ ಶರಣುಹೊಕ್ಕರು. ಆಗ ನಾರಾಯಣನು ಅವರಿಗೆ ರಾಕ್ಷಸನಿಗ್ರಹಕ್ಕಾಗಿ ಒಂದು ಉಪಾಯವನ್ನುಪದೇಶಿಸಿದನು.

೧೫. "ದೇವತೆಗಳಿರಾ! ನೀವೆಲ್ಲರೂ ಮಹಾಕಾಲವನಕ್ಷೇತ್ರಕ್ಕೆ ಹೋಗಿ ಅಲ್ಲಿ ಸರ್ವೇಶ್ವರನೂ, ಲೋಕಗಳಿಗೆ ಕಲ್ಯಾಣಕಾರಕನೂ ಆದ ಪರಮೇಶ್ವರನನ್ನು ಭಕ್ತಿಭಾವದಿಂದಲೂ, ಚಿತ್ತೈಕಾಗ್ರತೆಯಿಂದಲೂ ಪೂಜಿಸಿರಿ.

೧೬. ಅಲ್ಲಿ ಆ ದೇವದೇವನ ಅನುಗ್ರಹದಿಂದ ನಿಮಗೆ ಕಾರ್ಯಸಿದ್ಧಿಯುಂಟಾಗುವುದು."

೧೭–೧೮. ಇಂತೆಂದ ಅಪ್ರಮೇಯತೇಜೋರೂಪನಾದ ಮಹಾವಿಷ್ಣುವಿನ ಮಾತುಗಳನ್ನು ಕೇಳಿ ಆ ಲೋಕಪಾಲಕರೆಲ್ಲರೂ ಶುಭಪ್ರದೇಶವಾದ ಮಹಾಕಾಲವನಕ್ಕೆ ಹೊರಟರು. ಅಲ್ಲಿಯೂ ಸಹ ಶಸ್ತ್ರಧಾರಿಗಳಾದ ದೈತ್ಯರು ತುಂಬಿದ್ದು ಅವರನ್ನು ತಡೆದು ಯುದ್ಧವನ್ನು ಮಾಡಿದರು. ಪುನಃ ಬಹುವಾಗಿ ನಷ್ಟವನ್ನು ಹೊಂದಿ ದೇವತೆಗಳೆಲ್ಲರೂ ಮಹಾವಿಷ್ಣುವಿದ್ದಲ್ಲಿಗೆ ಬಂದರು.

ಕಥಯಾಮಾಸುರತ್ಯುಗ್ರಂ ಯಥಾ ರುದ್ಧಂ ಜಗತ್ರಯಂ ।
ನಾರಾಯಣೇನ ತೇ ಪ್ರೋಕ್ತಾ ಲೋಕಪಾಲಾಃ ಪುನಃ ಪುನಃ ॥ ೧೯ ॥
ಯೂಯಂ ವ್ರತಧರಾ ಭೂತ್ವಾ ಕಪಾಲೈಶ್ಚ ವಿಭೂಷಿತಾಃ ।
ಖಟ್ವಾಂಗಧಾರಿಣಃ ಶಾಂತಾಃ ಪಂಚಮುದ್ರಾವಿಭೂಷಿತಾಃ ॥ ೨೦ ॥
ಭಸ್ಮಭೂಷಿತಸರ್ವಾಂಗಾಃ ಕ್ಷುದ್ರಘಂಟಾವಿರಾಜಿತಾಃ ।
ಮಹಾವ್ರತಧರಾ ಭೂತ್ವಾ ಮಹಾಕಾಲವನೋತ್ತಮಂ ।
ಗಚ್ಛಧ್ವಂ ಬ್ರಹ್ಮಣಾ ಸಾರ್ಧಂ ಪಾದಬದ್ಧೈಶ್ಚ ನೂಪುರೈಃ ॥ ೨೧ ॥
ಅಥ ತೇ ಲೋಕಪಾಲಾಶ್ಚ ಶ್ರುತ್ವಾ ಕೃಷ್ಣಸ್ಯ ಭಾಷಿತಂ ।
ಸಮಾಯಾತಾ ಮಹಾದೇವಿ ಕೃತ್ವಾ ಕಾಪಾಲಿಕಂ ವಪುಃ ॥ ೨೨ ॥
ತತ್ರ ದೃಷ್ಟಂ ಮಹಲ್ಲಿಂಗಂ ತೇಜಸಾಂ ರಾಶಿಮದ್ಭುತಂ ।
ಸ್ತುತಂ ಚ ವಿವಿಧೈಃ ಸ್ತೋತ್ರೈರ್ಲೋಕಪಾಲೈಃ ಪುನಃ ಪುನಃ ॥ ೨೩ ॥
ತತಸ್ತು ತಸ್ಯ ಲಿಂಗಸ್ಯ ವಹ್ನಿಜ್ವಾಲಾ ವಿನಿಃಸೃತಾ ।
ಯಯಾ ತೇ ದಾನವಾಃ ಸರ್ವೇ ದಗ್ಧಾ ಭಸ್ಮತ್ವಮಾಗತಾಃ ॥ ೨೪ ॥

---

೧೯. ಮತ್ತು ಮೂರು ಲೋಕಗಳೂ ಎಡೆಬಿಡದಂತೆ ರಾಕ್ಷಸರಿಂದ ತುಂಬಿ ಹೋಗಿರುವುದನ್ನು ಆತನಿಗೆ ಬಿನ್ನವಿಸಿದರು. ಆಗ ಮತ್ತೆ ಶ್ರೀಮನ್ನಾರಾಯಣನು ಲೋಕಪಾಲಕರಿಗೆ ಉಪಾಯಾಂತರವನ್ನು ಸೂಚಿಸಿದನು.

೨೦. "ನೀವೆಲ್ಲರೂ ಮಾಹೇಶ್ವರ ವ್ರತವನ್ನು ಕೈಗೊಳ್ಳಬೇಕು. ಕಪಾಲಗಳಿಂದಲಂಕೃತರಾಗಿ ಖಟ್ವಾಂಗಗಳನ್ನು ಧರಿಸಿ ಮನಸ್ಸಮಾಧಾನದಿಂದ ಪಂಚ ಮುದ್ರೆಗಳನ್ನು ಧರಿಸಿರಬೇಕು.

೨೧. ಸರ್ವಾಂಗಗಳಲ್ಲಿಯೂ ವಿಭೂತಿಲೇಪನವನ್ನು ತಳೆದು, ಕಿರುಗಂಟೆಗಳ ಸರಗಳನ್ನು ಕಟ್ಟಿಕೊಂಡು, ಮಹಾದೀಕ್ಷೆಯನ್ನು ಕೈಗೊಂಡು ಕಾಲುಗಳಿಗೆ ನೂಪುರಗಳನ್ನು ಧರಿಸಿ ಚತುರ್ಮುಖಸಮೇತರಾಗಿ ನೀವೆಲ್ಲರೂ ಉತ್ತಮ ಕ್ಷೇತ್ರವಾದ ಮಹಾಕಾಲವನಕ್ಕೆ ಹೋಗಿರಿ.

೨೨. ಮಹಾವಿಷ್ಣುವಿನ ಈ ಮಾತುಗಳನ್ನು ಕೇಳಿ ಲೋಕಪಾಲಕರೆಲ್ಲರೂ ಕಾಪಾಲಿಕರ ವೇಷಗಳನ್ನು ಧರಿಸಿಕೊಂಡು ಪುನಃ ಮಹಾಕಾಲವನಕ್ಕೆ ಬಂದು ಸೇರಿದರು.

೨೩. ಅಲ್ಲಿ ಅದ್ಭುತವಾದ ತೇಜಸ್ಸಿನ ರಾಶಿಯಂತೆ ಕಾಣುತ್ತಿದ್ದ ಒಂದು ಮಹಾಲಿಂಗವನ್ನು ಕಂಡು ಲೋಕಪಾಲಕರು ಅದನ್ನು ಬಹು ವಿಧಗಳಾದ ಸ್ತೋತ್ರಗಳಿಂದ ಸ್ತುತಿಸಿದರು.

೨೪. ಆಗ ಆ ಲಿಂಗದಿಂದ ಒಂದು ಮಹತ್ತರವಾದ ಬೆಂಕಿಯ ಜ್ವಾಲೆಯು ಹೊರಟಿತು. ಸಕಲರಾಕ್ಷಸರೂ ಅದಕ್ಕೆ ಸಿಕ್ಕಿ ಸುಟ್ಟು ನಿಮಿಷಮಾತ್ರದಲ್ಲಿಯೆ ಬೂದಿಯಾದರು.

ಜ್ಞಾತ್ವಾ ಲಿಂಗಸ್ಯ ಮಾಹಾತ್ಮ್ಯಂ ನಾಮ ಚಕ್ರುಃ ಸಮಾಹಿತಾಃ ।
ಸೇವಿತಂ ಲೋಕಪಾಲೈಸ್ತು ಲಿಂಗಂ ತೇಜೋಮಯಂ ಪರಂ ॥ ೨೫ ॥
ಲೋಕಪಾಲೇಶ್ವರೋ ನಾಮ ಖ್ಯಾತಿಂ ಯಾಸ್ಯತಿ ಭೂತಲೇ ।
ಇತ್ಯುಕ್ತ್ವಾ ತ್ರಿದಶಾಃ ಸರ್ವೇ ಲೋಕಪಾಲೈಃ ಸಮಾವೃತಾಃ ।
ಸ್ವಸ್ವಸ್ಥಾನಂ ಗತಾ ದಿವ್ಯಂ ಯಥಾಪೂರ್ವಂ ಮುದಾನ್ವಿತಾಃ ॥ ೨೬ ॥
ಯೇ ಪಶ್ಯಂತಿ ನರಾ ದೇವಿ ಲೋಕಪಾಲೇಶ್ವರಂ ಶಿವಂ ।
ಸಮೃದ್ಧಿಭಿಃ ಸುಸಂಪನ್ನಾ ಭವೇಯುರ್ಜನ್ಮಜನ್ಮಸು ॥ ೨೭ ॥
ನ ದಾರಿದ್ರ್ಯಂ ನ ಚ ವ್ಯಾಧಿರ್ನಾಽಕಾಲಮರಣಂ ತಥಾ ।
ಐಶ್ವರ್ಯಂ ಚಾಽತುಲಂ ತೇಷಾಂ ಜಾಯತೇ ದರ್ಶನಾತ್ಸದಾ ॥ ೨೮ ॥
ಯೋ ಯಮುದ್ದಿಶ್ಯ ವೈ ಕಾಮಂ ದರ್ಶನಂ ತು ಕರಿಷ್ಯತಿ ।
ತಸ್ಯ ತಜ್ಜಾಯತೇ ಸರ್ವಂ ಮೃತಸ್ಯ ಪರಮಾ ಗತಿಃ ॥ ೨೯ ॥
ಅಶ್ವಮೇಧಸ್ಯ ಯಜ್ಞಸ್ಯ ಸಮ್ಯಗಿಷ್ಟಸ್ಯ ಯತ್ಫಲಂ ।
ತತ್ಫಲಂ ಲಭತೇ ದೇವಿ ಲೋಕಪಾಲೇಶ್ವರಾಽರ್ಚನಾತ್ ॥ ೩೦ ॥

---

೨೫. ಲಿಂಗದ ಮಹಾಮಹಿಮೆಯನ್ನು ತಿಳಿದುಕೊಂಡು ಅವರು ಶಾಂತ ಮನಸ್ಕರಾಗಿ ಅದಕ್ಕೆ ಹೆಸರನ್ನುಕೊಟ್ಟರು. ''ತೇಜೋರಾಶಿಯೂ ಪರಮೋತ್ತಮವೂ ಆದ ಈ ಲಿಂಗವು ಲೋಕಪಾಲಕರಿಂದ ಸೇವಿತವಾಗಿರುವುದು. ಆ ಕಾರಣಕ್ಕಾಗಿ ಇದು ಲೋಕಪಾಲೇಶ್ವರನೆಂಬ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವುದು.''

೨೬. ಇಂತೆಂದು ಹೇಳಿ ದೇವತೆಗಳೆಲ್ಲರೂ ಲೋಕಪಾಲಕರೊಡಗೂಡಿ ಸಂತೋಷದಿಂದ ಮುನ್ನಿನಂತೆಯೇ ತಮ್ಮತಮ್ಮ ಲೋಕಗಳಿಗೆ ಹೋಗಿ ತಮ್ಮ ಸ್ಥಾನಗಳನ್ನು ಆಕ್ರಮಿಸಿಕೊಂಡರು.

೨೭. ಎಲೌ ಪಾರ್ವತಿಯೆ! ಯಾವ ಮಾನವರು ಲೋಕಪಾಲೇಶ್ವರ ವೆಂಬ ಈ ಮಹಾಲಿಂಗವನ್ನು ನೋಡುವರೊ, ಅವರು ಜನ್ಮಾಂತರಗಳಲ್ಲಿಯೂ ಸಕಲೈಶ್ವರ್ಯಗಳಿಂದ ಕೂಡಿದವರಾಗುವರು.

೨೮. ಈ ಲಿಂಗದ ದರ್ಶನವನ್ನು ಮಾಡಿದವರಿಗೆ ದಾರಿದ್ರ್ಯವಾಗಲಿ, ರೋಗ ಗಳಾಗಲಿ, ಅಕಾಲಮರಣವಾಗಲಿ ಎಂದಿಗೂ ಸಂಭವಿಸುವುದಿಲ್ಲ. ಅವರಿಗೆ ಅಪಾರವಾದ ಐಶ್ವರ್ಯವೂ ಲಭಿಸುವುದು.

೨೯. ಯಾವ ಮನುಷ್ಯನು ಯಾವ ಆಶೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಲಿಂಗವನ್ನು ನೋಡುವನೊ, ಅವನು ಆ ಇಷ್ಟಾರ್ಥವನ್ನು ಪಡೆಯುವನು. ಮತ್ತು ಸತ್ತಮೇಲೆ ಸದ್ಗತಿಯನ್ನೂ ಹೊಂದುವನು.

೩೦. ಈ ಲೋಕಪಾಲೇಶ್ವರನಿಗೆ ಅರ್ಚನೆಯನ್ನು ಮಾಡುವುದರಿಂದ ಒಂದು ಅಶ್ವಮೇಧಮಹಾಯಜ್ಞವನ್ನು ಸಾಂಗವಾಗಿ ನೆರವೇರಿಸಲು ಸಿಕ್ಕುವ ಫಲವೇ ಲಭಿಸುವುದು.

ಪ್ರಸಂಗೇನಾಽಪಿ ಯಃ ಪಶ್ಯೇಲ್ಲೋಕಪಾಲೇಶ್ವರಂ ಶಿವಂ ।
ಮೋದತೇ ಸ್ವರ್ಗಲೋಕೇ ಸ ಲೋಕಪಾಲೈಃ ಸಮಂ ಸದಾ ॥ ೩೧ ॥
ಸಂಕ್ರಾಂತೌ ಸೋಮವಾರೇ ಚ ಚತುರ್ದಶ್ಯಾಂ ವಿಶೇಷತಃ ।
ಯೇ ಪಶ್ಯಂತಿ ನರಾ ಭಕ್ತ್ಯಾ ಹ್ಯಷ್ಟಮ್ಯಾಮಯನದ್ವಯೇ ॥ ೩೨ ॥
ತೇ ದುರ್ಧರ್ಷಾ ಭವಂತೀಹ ಶತ್ರೂಣಾಂ ಸಂಗರೇ ತಥಾ ।
ಮೃತಾ ಯಾಂತಿ ವಿಮಾನೇನ ಶಕ್ರಲೋಕಂ ಸುದುರ್ಲಭಂ ॥ ೩೩ ॥
ಕ್ರಮೇಣ ವಾರುಣಂ ಲೋಕಂ ಧನದಸ್ಯ ಯಥಾಸುಖಂ ।
ಪುನಃ ಪೈತಾಮಹಂ ಯಾಂತಿ ಲೋಕಂ ದೇವೈಃ ಸುದುರ್ಲಭಂ ॥ ೩೪ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ದುರ್ಲಭಃ ಪರಮೋ ಗುಹ್ಯಂ ಕಾಮೇಶ್ವರಮಥೋ ಶೃಣು ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಲೋಕಪಾಲೇಶ್ವರಮಾಹಾತ್ಮ್ಯವರ್ಣನಂ"
ನಾಮ ದ್ವಾದಶೋಽಧ್ಯಾಯಃ

---

೩೧. ಯಾವನು ಯಾದೃಚ್ಛಿಕವಾಗಿಯಾದರೂ ಈ ಲೋಕಪಾಲೇಶ್ವರನನ್ನು ನೋಡುವನೊ, ಅವನು ಯಾವಾಗಲೂ ಸ್ವರ್ಗಲೋಕದಲ್ಲಿ ಲೋಕಪಾಲಕರ ವೈಭವದಿಂದ ಸಂತೋಷಿಸುವನು.

೩೨–೩೩. ವಿಶೇಷವಾಗಿ ಸಂಕ್ರಮಣದಿವಸಗಳಲ್ಲಿಯೂ, ಸೋಮವಾರಗಳಲ್ಲಿಯೂ, ಚತುರ್ದಶೀತಿಥಿಗಳಲ್ಲಿಯೂ, ಅಷ್ಟಮಿಗಳಲ್ಲಿಯೂ, ಉತ್ತರಾಯಣಪುಣ್ಯಕಾಲ, ದಕ್ಷಿಣಾಯನಪುಣ್ಯಕಾಲಗಳಲ್ಲಿಯೂ, ಯಾವ ಮನುಜರು ಈ ಲಿಂಗವನ್ನು ಭಕ್ತಿಯಿಂದ ನೋಡಿ ಪೂಜಿಸುವರೊ, ಅವರು ಯುದ್ಧಭೂಮಿಯಲ್ಲಿ ಶತ್ರುಗಳಿಗೆ ಅಜೇಯರಾಗಿರುವರು; ಮೃತರಾದರೆ ದಿವ್ಯವಿಮಾನಗಳಲ್ಲಿ ಅತಿದುರ್ಲಭವಾದ ಸ್ವರ್ಗಲೋಕವನ್ನು ಸೇರುವರು.

೩೪. ಬಳಿಕ ಕ್ರಮವಾಗಿ ವರುಣಲೋಕಕ್ಕೆ ಹೋಗಿ ಅಲ್ಲಿಂದ ಕುಬೇರಲೋಕದಲ್ಲಿ ಅನೇಕ ಭೋಗಗಳನ್ನನುಭವಿಸಿ ದೇವತೆಗಳಿಗೂ ದುರ್ಲಭವೆನಿಸಿದ ಬ್ರಹ್ಮಲೋಕದಲ್ಲಿ ಶಾಶ್ವತವಾಗಿ ನೆಲಸಿರುವರು.

೩೫. ದೇವಿ! ಇಂತು ನಿನಗೆ ಲೋಕಪಾಲೇಶ್ವರನ ಮಹಿಮೆಯನ್ನು ವಿವರಿಸಿರುವೆನು. ಈ ಕಥೆಯು ಪಾಪನಾಶಕವೂ, ಅತಿದುರ್ಲಭವೂ ಆಗಿರುವುದು. ಇದನ್ನು ಬಹಳ ಗೋಪ್ಯವಾಗಿಡಬೇಕು. ಇನ್ನು ಕಾಮೇಶ್ವರನ ಮಹಿಮೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಲೋಕಪಾಲೇಶ್ವರಮಾಹಾತ್ಮ್ಯವರ್ಣನ"ವೆಂಬ
ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ಕಾಮೇಶ್ವರಮಾಹಾತ್ಮ್ಯವರ್ಣನಂ

**ಹರ ಉವಾಚ :—**

**ವಿದ್ಧಿ ಕಾಮೇಶ್ವರಂ ದೇವಿ ತತ್ರ ಲಿಂಗಂ ತ್ರಯೋದಶಂ ।**
**ಯಸ್ಯ ದರ್ಶನಮಾತ್ರೇಣ ಸೌಭಾಗ್ಯಂ ಜಾಯತೇ ಶುಭಂ ॥ ೧ ॥**
**ಬ್ರಹ್ಮಣೋ ಧ್ಯಾಯಮಾನಸ್ಯ ಪ್ರಜಾಕಾಮಸ್ಯ ಪಾರ್ವತಿ ।**
**ಉತ್ಪನ್ನೋಽರ್ಕಪ್ರಭಾಕಾರೋ ಲಾವಣ್ಯನಿಚಯೋ ಮಹಾನ್ ।**
**ಅಲಂಕಾರಾವೃತಃ ಕಾಂತೋ ದಿವ್ಯಮಂಡನಮಂಡಿತಃ ॥ ೨ ॥**
**ತಂ ದೃಷ್ಟ್ವಾ ಪರಮಂ ದಿವ್ಯಂ ಕಾಂತಂ ಸೌಭಾಗ್ಯಶೋಭಿತಂ ।**
**ಅಪ್ರತರ್ಕ್ಯಮವಿಜ್ಞೇಯಂ ಬ್ರಹ್ಮಾ ಪ್ರೋವಾಚ ತಂ ತದಾ ॥ ೩ ॥**
**ಕೋ ಭವಾನ್ಕಿಂ ನಿಮಿತ್ತಂ ತು ಇಹ ವಾ ಕಿಮುಪಾಗತಃ ।**
**ವದ ತ್ವಂ ಮನ್ಮಥಾಕಾರ ಕಂದರ್ಪ ಇವ ಲಕ್ಷ್ಯಸೇ ॥ ೪ ॥**

---

## ಕನ್ನಡದ ಅನುವಾದ

### ಕಾಮೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಎಲೌ ದೇವಿಯೆ! ಹದಿಮೂರನೆಯ ಮಹಾಲಿಂಗವೇ ಕಾಮೇಶ್ವರವೆಂದು ತಿಳಿ. ಇದನ್ನು ನೋಡುವ ಮಾತ್ರದಿಂದಲೇ ಮನುಷ್ಯನಿಗೆ ಸೌಭಾಗ್ಯವೂ, ಮಂಗಳವೂ ಉಂಟಾಗುವುದು.

೨. ಪಾರ್ವತಿಯೆ! ಕಲ್ಪಾದಿಯಲ್ಲಿ ಬ್ರಹ್ಮನು ಜಗತ್ಸೃಷ್ಟಿಯನ್ನು ಮಾಡಲೆಳಸಿ ಯೋಚಿಸುತ್ತಿರಲು ಆತನ ಇದಿರಿನಲ್ಲಿ ಸೂರ್ಯನ ತೇಜಸ್ಸನ್ನು ತಳೆದು ಬೆಳಗುತ್ತಿರುವವನೂ, ಅತ್ಯಂತ ಸೌಂದರ್ಯಮೂರ್ತಿಯೂ, ಸಕಲಾಭರಣಭೂಷಿತನೂ, ಮನೋಹರನೂ, ದಿವ್ಯ ಗಂಧಾದ್ಯನುಲೇಪನಸಹಿತನೂ ಆದ ಪುರುಷನೊಬ್ಬನು ಕಾಣಿಸಿಕೊಂಡನು.

೩. ಇಂತು ಸರ್ವೋತ್ತಮನೂ, ಕಮನೀಯರೂಪನೂ, ಸಕಲ ಸೌಭಾಗ್ಯಸಹಿತನೂ, ಅಪ್ರತರ್ಕ್ಯನೂ, ಗುರುತಿಲ್ಲದವನೂ ಆದ ಆತನನ್ನು ಕಂಡು ಚತುರ್ಮುಖನು ಆತನನ್ನು ಕುರಿತು ಇಂತೆಂದನು.

೪. "ಅಯ್ಯಾ! ನೀನು ಯಾರು? ಯಾವ ಕಾರಣದಿಂದ ಇಲ್ಲಿಗೆ ಬಂದಿರುವೆ? ಮನ್ಮಥಸ್ವರೂಪನಾಗಿರುವ ನೀನು ನಿಜವಾಗಿಯೂ ಮನ್ಮಥನಂತೆಯೇ ತೋರುತ್ತಿರುವೆ. ನಿನ್ನ ವಿಷಯವನ್ನು ತಿಳಿಸು."

ಬ್ರಹ್ಮಣೋ ವಚನಂ ಶ್ರುತ್ವಾ ಪ್ರೋಕ್ತಂ ತೇನೈವ ಸಾದರಂ ।
ಅಹಂ ತೇ ಸೃಷ್ಟಿಕಾಮಸ್ಯ ಭಾವೇನ ವಿಹಿತೋಽಂಶಕಃ ।
ಪ್ರಜಾಪತೇ ಮಹಾಭಾಗ ಕಿಂ ಕರೋಮಿ ದಿಶಸ್ವ ಮಾಂ ॥ ೫ ॥

ಬ್ರಹ್ಮೋವಾಚ:—

ಮಯಾ ತು ಪುಷ್ಟಿಕಾಮೇನ ಯೇ ಪ್ರಜಾಪತಯಃ ಕೃತಾಃ ।
ನ ತೇ ಶಕ್ತಾಃ ಪ್ರಜಾಃ ಸ್ರಷ್ಟುಂ ಕಾಮ್ಯತೇ ಸುಖಮಾಪ್ನುಯುಃ ॥ ೬ ॥
ತ್ವಮಗ್ರಣೀಃ ಪ್ರಜಾಸರ್ಗೇ ತ್ವದಧೀನಮಿದಂ ಜಗತ್ ।
ಕುರು ಸೃಷ್ಟಿಂ ವಿಚಿತ್ರಾಂ ಚ ಕಂದರ್ಪ ಮಮ ಶಾಸನಾತ್ ॥ ೭ ॥
ಇತ್ಯುಕ್ತೋ ಬ್ರಹ್ಮಣಾ ದೇವಿ ಜಗಾಮಾದರ್ಶನಂ ಸ್ಮರಃ ।
ಕ್ರುದ್ಧೇನ ಬ್ರಹ್ಮಣಾ ಶಪ್ತೋ ವಿನಾಶಂ ಯಾಸ್ಯಸಿ ಧ್ರುವಂ ॥ ೮ ॥
ಮದ್ವಚೋ ನ ಕೃತಂ ಯಸ್ಮಾದ್ಭವನೇತ್ರೋದ್ಭವಾಗ್ನಿನಾ ।
ತಚ್ಛ್ರುತ್ವಾ ದಾರುಣಂ ಶಾಪಂ ಕಂದರ್ಪೋ ಭಯವಿಹ್ವಲಃ ।
ಬ್ರಹ್ಮಾಣಂ ಪ್ರಣತೋ ಭೂತ್ವಾ ಪ್ರಹ್ವಃ ಪ್ರಾಂಜಲಿರಬ್ರವೀತ್ ॥ ೯ ॥

---

೫. ಬ್ರಹ್ಮದೇವನ ಈ ಮಾತನ್ನು ಕೇಳಿ ಆತನು ಆದರದಿಂದ ಹೇಳಿದನು. ''ಸೃಷ್ಟಿಯನ್ನು ಮಾಡಲೆಳಸಿದ ನಿನ್ನ ಮನಸ್ಸಿನಿಂದ ಹೊರಟು ಬಂದ ಒಂದು ಅಂಶವೇ ನಾನು. ಮಹಾಭಾಗನಾದ ಪ್ರಜಾಪತಿಯೆ! ಈಗ ನಾನು ಏನು ಮಾಡಲಿ? ನನಗೆ ಅಪ್ಪಣೆಯನ್ನು ಕೊಡುವವನಾಗು.''

೬. ಬ್ರಹ್ಮನು ಹೇಳುತ್ತಾನೆ:—''ನಾನು ಮೊದಲು ಸೃಷ್ಟಿಮಾಡುವ ಆಶೆಯಿಂದ ಪ್ರಜಾಪತಿಗಳನ್ನು ಸೃಷ್ಟಿಮಾಡಿದೆನು. ಎಲೈ ಕಾಮನೆ! ಆದರೆ ಅವರೆಲ್ಲರೂ ಪ್ರಜೆಗಳನ್ನು ಪಡೆಯಲು ಶಕ್ತರಾಗಲಿಲ್ಲ. ಅವರು ಆತ್ಮಸುಖವನ್ನೇ ಕೋರುವವರಾದರು.

೭. ನೀನೇ ಈ ಪ್ರಜಾಸೃಷ್ಟಿಯ ಕಾರ್ಯದಲ್ಲಿ ಮೊದಲಿಗನು. ಈ ಜಗತ್ತೆಲ್ಲವೂ ನಿನ್ನ ಅಧೀನದಲ್ಲಿಯೇ ಇರುವುದು. ಎಲೈ ಮನ್ಮಥನೆ! ನೀನು ನನ್ನ ಆಜ್ಞೆಯನ್ನನುಸರಿಸಿ ವಿಚಿತ್ರವಾದ ಲೋಕಸೃಷ್ಟಿಯನ್ನು ಮಾಡು.''

೮. ದೇವಿಯೆ! ಇಂತೆಂದ ಬ್ರಹ್ಮನ ಆದೇಶವನ್ನು ಕೇಳಿ ಆ ಕಾಮನು ಅಲ್ಲಿಯೆ ಅದೃಶ್ಯನಾದನು. ಅದನ್ನು ಕಂಡು ಬ್ರಹ್ಮದೇವನು ಕೋಪಾವಿಷ್ಟನಾಗಿ ''ನೀನು ನನ್ನ ಮಾತಿನಂತೆ ನಡೆದುಕೊಳ್ಳಲಿಲ್ಲವಾದುದರಿಂದ ಮಹೇಶ್ವರನಹಣೆಗಣ್ಣಿನ ಬೆಂಕಿಯಿಂದ ಖಂಡಿತವಾಗಿ ನಾಶವನ್ನು ಹೊಂದುವೆ''ಎಂದು ಶಪಿಸಿದನು.

೯. ಭಯಂಕರವಾದ ಈ ಶಾಪವನ್ನು ಕೇಳಿ ಕಂದರ್ಪನು ಭಯದಿಂದ ನಡುಗುತ್ತ ಬ್ರಹ್ಮನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ವಿನೀತನಾಗಿ ಕೈಗಳನ್ನು ಜೋಡಿಸಿ ನಿಂತು ಬಿನ್ನವಿಸಿಕೊಂಡನು.

ಪ್ರಸೀದ ದೇವದೇವೇಶ ಅನನ್ಯಗತಿಕೇ ಮಯಿ ।
ನ ಹಿ ನಿರ್ಭರತಾಂ ಯಾಂತಿ ಪ್ರಭೂಣಾಮಾಶ್ರಿತೇ ರುಷಃ ॥ ೧೦ ॥
ಬ್ರಹ್ಮೋವಾಚ :—
ಯಸ್ಮಾತ್ತೇ ಭಕ್ತಿರತುಲಾ ಮಮೋಪರಿ ಮಹಾಮತೇ ।
ತಸ್ಮಾತ್ ಸ್ಥಾನಾನಿ ದತ್ತಾನಿ ತವ ದ್ವಾದಶ ಸಂಖ್ಯಯಾ ॥ ೧೧ ॥
ಕಾಮಿನೀನಾಂ ಕಟಾಕ್ಷೇಷು ಕೇಶಪಾಶೇಷು ಚೈವ ಹಿ ।
ಜಘನಸ್ತನನಾಭೌ ತು ದೋರ್ಮೂಲೇಽಧರಪಲ್ಲವೇ ॥ ೧೨ ॥
ವಸಂತೇ ಕೋಕಿಲಾಲಾಪೇ ಜ್ಯೋತ್ಸ್ನಾಯಾಂ ಜಲದಾಗಮೇ ।
ಕಾಮಾರ್ಥೇ ಚ ಮಯಾ ದತ್ತೌ ಸಬಲೌ ಮಧುಮಾಧವೌ ॥ ೧೩ ॥
ಸ್ತ್ರಿಯೋಽಮೃತಮಯಾ ಧನ್ಯಾಃ ಸಂಸಾರೇ ಸಾರಕಾರಣಂ ।
ರತೇಶ್ಚೈವ ನಿಧಾನಾನಿ ಸಂತಾನಾರ್ಥಂ ವಿನಿರ್ಮಿತಾಃ ॥ ೧೪ ॥
ಏತಾಭಿರ್ವರನಾರೀಭಿರ್ಜಗದೇವಂ ವಶೀಕೃತಂ ।
ಸ್ತ್ರೀಭಿರಾಸಕ್ತಮನಸಃ ಕುತಃ ಪುಂಸೋ ಮನಸ್ಥಿತಾ ॥ ೧೫ ॥

---

೧೦. ದೇವದೇವೋತ್ತಮನೆ! ಬೇರೆ ಗತಿಯನ್ನು ಕಾಣದಿರುವ ನನ್ನಲ್ಲಿ ನೀನು ಪ್ರಸನ್ನನಾಗಬೇಕು. ಸರ್ವಸ್ವತಂತ್ರರಾದ ನಿನ್ನಂತಹ ಪ್ರಭುಗಳಿಗೆ ಆಶ್ರಿತ ವರ್ಗದವರಲ್ಲಿ ಕೋಪವು ದೀರ್ಘಕಾಲವಿರುವುದಿಲ್ಲವಷ್ಟೆ.

೧೧. ಬ್ರಹ್ಮನು ಹೇಳುತ್ತಾನೆ :—"ಮಹಾಪ್ರಾಜ್ಞನೆ! ನಿನಗೆ ನನ್ನಲ್ಲಿ ಅಪರಿಮಿತವಾದ ಭಕ್ತಿಯಿರುವುದು. ಆದುದರಿಂದ ಅಶರೀರನಾದರೂ ನಿನಗೆ ಹನ್ನೆರಡು ಸ್ಥಾನಗಳನ್ನು ಮಾಡಿಕೊಟ್ಟಿರುವೆನು.

೧೨–೧೩. ಸ್ತ್ರೀಯರ ಕಡೆಗಣ್ಣುಗಳು, ನಿಡುಗೂದಲು, ಜಘನ, ಸ್ತನಗಳು, ನಾಭೀದೇಶ, ಬಾಹುಮೂಲ, ತುಟಿಗಳು, ವಸಂತಕಾಲ, ಕೋಗಿಲೆಗಳ ಧ್ವನಿ, ಬೆಳದಿಂಗಳು ಮತ್ತು ವರ್ಷಾಗಮಸಮಯ—ಇವುಗಳು ನಿನಗೆ ವಾಸಸ್ಥಾನಗಳಾಗಿರುವುವು. ನಿನ್ನ ವ್ಯಾಪಾರಕ್ಕಾಗಿ ಬಲಿಷ್ಠಗಳಾದ ಚೈತ್ರ ವೈಶಾಖಮಾಸಗಳನ್ನೂ ನಿರೂಪಿಸಿರುವೆನು.

೧೪. ಸ್ತ್ರೀಯರು ಅಮೃತಸಮಾನರು. ಧನ್ಯರು. ಸಂಸಾರದಲ್ಲಿ ಅವರೇ ಸುಖಕ್ಕೆ ಕಾರಣರು. ಸುರತಕ್ಕೆ ನಿಧಾನವಾದವರು. ಸಂತಾನವೃದ್ಧಿಗಾಗಿಯೇ ಅವರು ನಿರ್ಮಿತರಾಗಿರುವರು.

೧೫. ಇಂತಹ ಉತ್ತಮಸ್ತ್ರೀಯರಿಂದಲೇ ಈ ಜಗತ್ತೆಲ್ಲವೂ ವಶೀಕೃತವಾಗಿರುವುದು. ನಾರಿಯರಲ್ಲಿ ಆಸಕ್ತವಾದ ಮನಸ್ಸುಳ್ಳ ಮಾನವನಿಗೆ ಸ್ವೇಚ್ಛೆಯೆಂಬುದೆಲ್ಲಿಯದು?

ಕುತಶ್ಚಾಽಪಿ ಸ್ವವಶತಾ ಸ್ತ್ರೀಗೌರವಗತಸ್ಯ ಚ ।
ಸ್ತ್ರಿಯ ಏವ ವಿನಾಶಾಯ ಪೂರ್ವೇಷಾಮಸುರದ್ವಿಷಾಂ ॥ ೧೬ ॥
ಸ್ತ್ರಿಯ ಏವ ಹಿ ದೇವಾನಾಮಿಂದ್ರಾದೀನಾಂ ಭಯಾಶ್ರಯಾಃ ।
ನಾರೀಭಿರ್ಲಬ್ಧವೃತ್ತೇಶ್ಚ ಪುರುಷಸ್ಯಾಽಪಿ ಸರ್ವತಃ ॥ ೧೭ ॥
ಪರಾಭವಃ ಪ್ರಭವತಿ ವಿವಶತ್ವಂ ಚ ಭೀಷಣಂ ।
ಸ್ತ್ರೀಭಿರಾಜಿತಚಿತ್ತಸ್ಯ ಸುಲಭೋ ವಿಪದೋದಯಃ ॥ ೧೮ ॥
ಇತ್ಯುಕ್ತೋ ಮನ್ಮಥೋ ಭದ್ರೇ ಬ್ರಹ್ಮಣಾಚ ವಿಸರ್ಜಿತಃ ।
ದತ್ವಾ ವೈ ಪುಷ್ಪಕಂ ಚಾಪಂ ತಥಾ ವೈ ಬಾಣಪಂಚಕಂ ॥ ೧೯ ॥
ರತಿಪ್ರೀತಿಸಮಾಯುಕ್ತೋ ಝುಷಕೇತುರ್ಮನೋಭವಃ ।
ವಿಡಂಬಯತಿ ಲೋಕಾಂಸ್ತ್ರೀನ್ಸಹಸಾ ಯೋ ಧನುರ್ಧರಃ ॥ ೨೦ ॥
ಪಂಡಿತಾಂಸ್ತಾಪಸಾನ್ವೀರಾನ್ಸುಧಿಯಶ್ಚ ಜಿತೇಂದ್ರಿಯಾನ್ ।
ಕಾಲೇ ಕುಶಲಭಾವಜ್ಞಾನ್ದೇವಾನ್ಪಿತೃಗಣಾಂಸ್ತಥಾ ॥ ೨೧ ॥

---

೧೬. ಸ್ತ್ರೀಯ ಗೌರವಕ್ಕೆ ಸಿಕ್ಕಿದ ಮನುಷ್ಯನಿಗೆ ಆತ್ಮವಶ್ಯತೆಯು ತಾನೆ ಹೇಗೆ ಬರುವುದು? ಪೂರ್ವದಲ್ಲಿ ದೇವಶತ್ರುಗಳಾದ ರಾಕ್ಷಸರ ವಿನಾಶಕ್ಕೆ ಸ್ತ್ರೀಯರೇ ಕಾರಣರಾದರು.

೧೭–೧೮. ಇಂದ್ರನೇ ಮೊದಲಾದ ದೇವತೆಗಳ ಭಯಕ್ಕೂ ಸ್ತ್ರೀಯರೇ ಆಶ್ರಯರಾಗಿರುವರು. ಸ್ತ್ರೀಯರ ಮೂಲಕವಾಗಿ ವೃತ್ತಿಯನ್ನು ಪಡೆದಿರುವ ಮನುಷ್ಯನಿಗೆ ಎಲ್ಲೆಡೆಗಳಲ್ಲಿ ಪರಾಭವವೂ, ಪರವಶತೆಯೂ, ಭಯ ಪ್ರಾಪ್ತಿಯೂ ಉಂಟಾಗುತ್ತಿರುವುವು. ಸ್ತ್ರೀಯರಿಂದ ಯಾವನ ಚಿತ್ತವು ಕ್ಷುಬ್ಧವಾಗಿರುವುದೊ, ಅವನಿಗೆ ಅಡಿಗಡಿಗೂ ವಿಪತ್ತುಗಳೇ ಸಂಭವಿಸು ತ್ತಿರುವುವು.''

೧೯. ಎಲೌ ಪಾರ್ವತಿಯೆ! ಇಂತೆಂದು ನುಡಿದು ಆ ಬ್ರಹ್ಮದೇವನು ಮನ್ಮಥ ನಿಗೆ ಪುಷ್ಪಮಯವಾದ ಬಿಲ್ಲನ್ನೂ, ಐದು ಬಗೆಯ ಹೂಬಾಣಗಳನ್ನೂ ಆಯುಧ ಗಳಾಗಿ ಕೊಟ್ಟು ಕಳುಹಿಸಿದನು.

೨೦. ಅಂದಿನಿಂದ ಬ್ರಹ್ಮಮಾನಸಸಂಭೂತನಾದ ಮನ್ಮಥನು ರತಿ ಮತ್ತು ಪ್ರೀತಿಯರೆಂಬ ಪತ್ನಿಯರೊಡಗೂಡಿ, ಮೀನಿನ ಚಿಹ್ನೆಯ ಧ್ವಜವುಳ್ಳವನಾಗಿ, ಪುಷ್ಪಧನುಸ್ಸನ್ನು ಹಿಡಿದು ವಸಂತಮಾಧವಾದಿಗಳ ಸಹಾಯದಿಂದ ಮೂರು ಲೋಕಗಳನ್ನೂ ಮೋಹಗೊಳಿಸುತ್ತಿರುವನು.

೨೧. ಪಂಡಿತರನ್ನೂ, ತಪಸ್ವಿಗಳನ್ನೂ, ವೀರರನ್ನೂ, ಪ್ರಾಜ್ಞರನ್ನೂ, ಜಿತೇಂದ್ರಿಯರೆನಿಸಿದವರನ್ನೂ, ಕುಶಲಬುದ್ಧಿಗಳೆನಿಸಿದವರನ್ನೂ, ದೇವತೆಗಳನ್ನೂ, ಪಿತೃಗಣಗಳನ್ನೂ, ಕಾಲವರಿತು ಅವನು ಮೋಹಗೊಳಿಸುತ್ತಿರುವನು.

ಭೂತಪ್ರೇತಪಿಶಾಚಾಂಶ್ಚ ಯಕ್ಷಗಂಧರ್ವಕಿನ್ನರಾನ್ ।
ಕೃಮಿಕೀಟಪತಂಗಾಂಶ್ಚ ಭೂತಗ್ರಾಮಂ ಚತುರ್ವಿಧಂ ॥ ೨೨ ॥
ಮಮಾರ್ಥೇ ಚ ಕೃತೋ ಯತ್ನಶ್ಚಿಂತಯಿತ್ವಾ ಪುನಃ ಪುನಃ ।
ದುಃಸಾಧ್ಯಃ ಶಂಕರೋ ದೇವಃ ಶ್ರೂಯತೇ ಭುವನತ್ರಯೇ ।
ತಸ್ಯ ದೇವಸ್ಯ ಕಃ ಶಕ್ತಃ ಕ್ಷೋಭಣಾರ್ಥಂ ಮಯಾ ವಿನಾ ॥ ೨೩ ॥
ಇತ್ಯುಕ್ತ್ವಾ ತು ಸಮಾಯಾತೋ ಯತ್ರಾಽಹಂ ತಪಸಿ ಸ್ಥಿತಃ ।
ರತ್ಯಾ ಯುತಃ ಸ ಗರ್ವೇಣ ಸಖ್ಯಾಽಯಂ ಮಧುನಾಶ್ರಿತಃ ॥ ೨೪ ॥
ದೃಷ್ಟವಾನ್ಮಾಂ ತದಾ ಕಾಮಃ ಪಿಂಜಕೂಟಜಟಾಸಟಂ ।
ಕಿಂಚಿನ್ನಿಮಿತ್ತತೋಽನಿದ್ರಂ ಭೋಗೀಂದ್ರಕೃತಭೂಷಣಂ ॥ ೨೫ ॥
ಪ್ರೇಕ್ಷಮಾಣಮೃಜುಸ್ಥಾನಂ ನಾಽಸಾವಂಶಾಗ್ರಲೋಚನಂ ।
ತತೋಽವಮರಕಾಕಾರಮಾಲಂಬ್ಯಾಶ್ರಯಮಾತ್ರಕಂ ॥ ೨೬ ॥

---

೨೨. ಭೂತಗಳನ್ನೂ, ಪ್ರೇತಗಳನ್ನೂ, ಪಿಶಾಚಗಳನ್ನೂ, ಯಕ್ಷರನ್ನೂ, ಗಂಧರ್ವರನ್ನೂ, ಕಿನ್ನರರನ್ನೂ, ಕೃಮಿಗಳನ್ನೂ, ಕೀಟಗಳನ್ನೂ, ಪತಂಗಗಳನ್ನೂ—ಹೆಚ್ಚೇಕೆ, ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ವಿಧಗಳಾದ ಸಕಲ ಭೂತಸಮೂಹವನ್ನೂ ತನ್ನ ಮಾಯೆಯಲ್ಲಿ ಸಿಲುಕಿಸಿರುವನು.

೨೩. ಎಲೌ ಪಾರ್ವತಿಯೆ! ನನ್ನನ್ನೂ ತನ್ನ ವಶಮಾಡಿಕೊಳ್ಳಲು ಇವನು ಅನೇಕವೇಳೆ ಯೋಚಿಸಿದ್ದನು. ಮತ್ತು ಪ್ರಯತ್ನವನ್ನೂ ಮಾಡಿದನು. "ಮೂರು ಲೋಕಗಳಲ್ಲಿಯೂ ದೇವದೇವನಾದ ಶಂಕರನೇ ಅತ್ಯಂತ ದುಸ್ಸಾಧ್ಯನೆಂದು ಕೇಳಿರುವೆನು. ಅಂತಹ ದೇವನನ್ನು ಚಂಚಲಗೊಳಿಸಲು ನಾನಲ್ಲದೆ ಬೇರೆ ಯಾವನು ಶಕ್ತನಾದಾನು?"

೨೪. ಇಂತೆಂಬ ಅಹಂಕಾರದಿಂದ ಈ ಮನ್ಮಥನು ಪತ್ನಿಯಾದ ರತಿದೇವಿಯನ್ನೂ ಪರಮಸ್ನೇಹಿತನಾದ ವಸಂತನನ್ನೂ ಸಹಾಯಕ್ಕೆ ಕರೆದುಕೊಂಡು ನಾನು ತಪೋನಿರತನಾಗಿದ್ದಲ್ಲಿಗೆ ಪ್ರಾಪ್ತನಾದನು.

೨೫. ಕೆಂಪಾದ ದೂಳಿನಿಂದ ಧೂಸರಿತವಾದ ನಿಡುಜಡೆಗಳುಳ್ಳವನೂ, ಯಾವುದೋ ಕಾರಣದಿಂದ ನಿದ್ರೆಯನ್ನು ತ್ಯಜಿಸಿದವನೂ, ಮಹಾ ಸರ್ಪಗಳನ್ನೇ ಆಭರಣವನ್ನಾಗಿ ಧರಿಸಿಕೊಂಡಿರುವವನೂ ಆದ ನನ್ನನ್ನು ಕಂಡನು.

೨೬. ದರ್ಶನೀಯತಮನೂ, ಋಜುವಾದ ಆಸನದಲ್ಲಿ ಕುಳಿತಿರುವವನೂ, ಮೂಗಿನ ತುದಿಯಲ್ಲಿಯೇ ನೆಟ್ಟದೃಷ್ಟಿಯುಳ್ಳವನೂ ಆದ ನನ್ನನ್ನು ನೋಡಿ ಆ ಮನ್ಮಥನು ಅವಮರಕವೆಂಬ ಅತಿಸೂಕ್ಷ್ಮವಾದ ಕೃಮಿಯ ದೇಹವನ್ನು ಆಶ್ರಯವಾಗಿ ಮಾಡಿಕೊಂಡನು.

ಪ್ರವಿಷ್ಟಃ ಕರರಂಧ್ರೇಣ ಮದನೋ ಹೃದಯೇ ಮಮ ।
ರತ್ಯರ್ಥಂ ಕಾಮತಪ್ತೇನ ಸಂಸ್ಮೃತಾ ಭವತೀ ಮಯಾ ॥ ೨೭ ॥
ಸಮಾಧೇರ್ಭಾವನಾ ದಿವ್ಯಾ ಲಕ್ಷ್ಯಪ್ರತ್ಯಕ್ಷರೂಪಿಣೀ ।
ಗತಾ ಮಮ ವಿಮಲತಾ ತತ್ಕ್ಷಣಾದೇವ ಪಾರ್ವತಿ ॥ ೨೮ ॥
ಉನ್ಮತ್ತತಾಂ ಗತೋಽಹಂ ವೈ ವಿಕೃತಿಂ ಮದನಾತ್ಮಿಕಾಂ ।
ನಿರಾಕೃತಂ ಮಯಾ ದೇವಿ ಧೈರ್ಯಮಾಲಂಬ್ಯ ಯತ್ನತಃ ॥ ೨೯ ॥
ದೃಷ್ಟೋ ಮಯಾತ್ಮಹೃದಯೇ ಮನ್ಮಥೋಽಪಥ್ಯಕಾರಕಃ ।
ದೇಹಸ್ಥಂ ನಿರ್ದಹಿಷ್ಯಾಮಿ ಪ್ರತ್ಯಾಹಾರಪ್ರಯೋಗತಃ ॥ ೩೦ ॥
ಅಮಾನುಷೀಂ ವ್ರಜೇದ್ಯೋನಿಂ ಯೋಗಿನಂ ಪ್ರವಿಶೇದ್ಯದಿ ।
ಬಾಹ್ಯಾಽಗ್ನೌ ಧಾರಣಾಂ ಕೃತ್ವಾ ದೇಹಸಂಸ್ಥೇ ವಿನಿರ್ದಹೇತ್ ॥ ೩೧ ॥
ಏತಸ್ಮಿನ್ನಂತರೇ ಸೋಽಪಿ ಸಂತಪ್ತೋ ಮದನೋ ಭೃಶಂ ।
ಇಚ್ಛಾಶರೀರೋ ದುಜ್ಞೇಯೋ ನಿಃಸೃತೋ ವ್ಯಸನಾತ್ಮಕಃ ॥ ೩೨ ॥

---

೨೭. ಮದನನು ನನ್ನ ಕೈಯ ಒಂದು ಸೂಕ್ಷ್ಮರಂಧ್ರದಿಂದ ಪ್ರವೇಶಿಸಿ ಹೃದಯದಲ್ಲಿ ಬಂದು ನಿಂತನು. ಆಗ ನಾನು ಕಾಮಬಾಣಪೀಡಿತನಾಗಿ ಸುರತಕ್ಕಾಗಿ ನಿನ್ನನ್ನು ಸ್ಮರಿಸುವವನಾದೆನು.

೨೮. ಪಾರ್ವತಿಯೆ! ದಿವ್ಯವಾದ ಲಕ್ಷ್ಯವನ್ನು ಪ್ರತ್ಯಕ್ಷಗೊಳಿಸುವ ನನ್ನ ಸಮಾಧಿಯ ಶಕ್ತಿಯೂ, ಚಿತ್ತದ ನಿರ್ಮಲತೆಯೂ ಸಹ ಒಂದು ನಿಮಿಷಮಾತ್ರದಲ್ಲಿಯೇ ನಷ್ಟವಾದುವು.

೨೯. ದೇವಿಯೆ! ನಾನೂ ಮದನವಿಕಾರಗಳಿಗೆ ತುತ್ತಾಗಿ ಉನ್ಮಾದಾವಸ್ಥೆಯನ್ನು ಪಡೆದೆನು. ಆದರೂ ಧೈರ್ಯವನ್ನು ತಂದುಕೊಂಡು ಬಹಳ ಪ್ರಯತ್ನದಿಂದ ಈ ಮನೋವಿಕಾರವನ್ನು ದೂರಮಾಡಿದೆನು.

೩೦. ಆಗ ನನ್ನ ಹೃದಯದಲ್ಲಿ ಸೇರಿಕೊಂಡು ಈ ಅಪಥ್ಯವನ್ನೆಲ್ಲ ಮಾಡುತ್ತಿದ್ದ ಆ ಮನ್ಮಥನನ್ನು ಕಂಡೆನು. ಅಲ್ಲದೆ ಇಂತೆಂದು ಯೋಚಿಸಿದೆನು. "ಪ್ರತ್ಯಾಹಾರದ ಮಾರ್ಗವನ್ನನುಸರಿಸಿ ದೇಹದೊಳಗಿರುವ ಈ ಕಾಮನನ್ನು ಸುಟ್ಟುಬಿಡುವೆನು.

೩೧. ಯೋಗಿಯ ಹೃದಯವನ್ನು ಪ್ರವೇಶಮಾಡಲು ಶಕ್ತನಾದರೆ ಮನ್ಮಥನು ಮನುಷ್ಯೇತರರಾದ ದೇವತಾದಿಗಳಲ್ಲಿಯೂ ಪ್ರವೇಶಿಸುವನು. ಆದುದರಿಂದ ಬಾಹ್ಯಾಗ್ನಿಯಲ್ಲಿ ಇವನನ್ನು ಸುಡದೆ ಉಳಿಸಿದರೂ ದೇಹದೊಳಗೆ ಮಾತ್ರ ನಿರ್ಮೂಲಗೊಳಿಸಲೇ ಬೇಕು."

೩೨. ಇಷ್ಟರಲ್ಲಿಯೇ ಆ ಮನ್ಮಥನೂ ನನ್ನ ಮಾನಸಾಗ್ನಿಯಲ್ಲಿ ಬಹಳ ಸಂತಾಪವನ್ನು ಹೊಂದಿ ವ್ಯಸನಗೊಂಡು, ಸ್ವೇಚ್ಛಾಶರೀರಧಾರಿಯಾದುದರಿಂದ ನನಗೆ ತಿಳಿಯದಂತೆಯೇ ಹೊರಕ್ಕೆ ಹೋದನು.

ಸಹಕಾರತರೋರ್ಮೂಲೇ ಭೂತ್ವಾ ಮಧುಸಖಸ್ತದಾ ।
ಮುಮೋಚ ಮೋಹನಂ ನಾಮ ಮಾರ್ಗಣಂ ಮಕರಧ್ವಜಃ ॥ ೩೩ ॥
ಸ ಚಾಽಪಿ ಹೃದಯೇ ಪ್ರಾಪ್ತೋ ಮದೀಯೇ ಲೀಲಯಾ ಶಿರಃ ।
ತತೋಽಹಂ ಕುಪಿತೋ ದೇವಿ ನೇತ್ರಂ ಕೃತ್ವಾ ತೃತೀಯಕಂ ॥ ೩೪ ॥
ತನ್ನೇತ್ರವಿಸ್ಫುಲಿಂಗೇನ ಕ್ರೋಶತಾಂ ನಾಕವಾಸಿನಾಂ ।
ಗಮಿತೋ ಭಸ್ಮಸಾತ್ತೂರ್ಣಂ ಕಂದರ್ಪಃ ಕಾಮಿದರ್ಪಕಃ ॥ ೩೫ ॥
ತಸ್ಮಿನ್ದಗ್ಧೇ ತತಃ ಕಾಮೇ ರತಿಃ ಶೋಕಪರಾಯಣಾ ।
ವಿಲಲಾಪ ಸುದುಃಖಾರ್ತಾ ಪತಿಭಕ್ತಿಪರಾಯಣಾ ॥ ೩೬ ॥
ಹಾ ನಾಥ ಹಾ ಮಮ ಪ್ರಾಣ ಹಾ ಸ್ವಾಮಿನ್ಕಿಂ ಜಹಾಸಿ ಮಾಂ ।
ಪತಿವ್ರತಾಂ ಪತಿಪ್ರಾಣಾಂ ಕಸ್ಮಾನ್ಮಾಂ ತ್ಯಜಸಿ ಪ್ರಭೋ ॥ ೩೭ ॥
ಏವಂ ಚ ವಿಲಪಂತೀಂ ತಾಂ ವಾಗುವಾಚಾಽಶರೀರಿಣೀ ।
ಮಾ ತ್ವಂ ರುದ ವಿಶಾಲಾಕ್ಷಿ ಪುನರೇಷ ಪತಿಸ್ತವ ।
ಪ್ರಸಾದಾದ್ದೇವದೇವಸ್ಯ ಉತ್ಥಾಸ್ಯತಿ ಶಿವಸ್ಯ ಚ ॥ ೩೮ ॥

೩೩. ಮಕರಕೇತನನಾದ ಆತನು ವಸಂತನ ಸಹಾಯವನ್ನು ಪಡೆದು ಒಂದು ಮಾವಿನ ಮರದ ಬುಡವನ್ನಾಶ್ರಯಿಸಿ ನಿಂತು ಮೋಹನಾಸ್ತ್ರವನ್ನು ಮಂತ್ರಿಸಿ ನನ್ನ ಕಡೆಗೆ ಒಂದು ಬಾಣವನ್ನು ಬಿಟ್ಟನು.

೩೪. ಆ ಬಾಣವು ಲೀಲೆಯಿಂದಲೇ ನನ್ನ ಹೃದಯಕ್ಕೆ ಬಂದು ತಗಲಿತು. ದೇವಿಯೆ! ಆಗ ನಾನು ಮಹಾಕೋಪದಿಂದ ಹಣೆಯ ಮೂರನೆಯ ಕಣ್ಣನ್ನು ತೆರೆಯಲುದ್ಯುಕ್ತನಾದೆನು.

೩೫. ಕಾಮಿಗಳ ಗರ್ವಕ್ಕೆ ಕಾರಣನಾದ ಮನ್ಮಥನು, ಆ ನೇತ್ರದ ಅಗ್ನಿಯ ಜ್ವಾಲೆಗೆ ಸಿಲುಕಿ ಸಕಲ ದೇವತೆಗಳೂ ಹಾಹಾಕಾರಗಳನ್ನು ಮಾಡುತ್ತಿರಲು ನಿಮಿಷಮಾತ್ರದಲ್ಲಿ ಬೂದಿಯ ರಾಶಿಯಾಗಿ ಬಿದ್ದನು.

೩೬. ಆತನು ಸುಟ್ಟುಹೋಗಲು ಶೋಕಭರಿತಳೂ, ಅತ್ಯಂತದುಃಖಾರ್ತಳೂ, ಪತಿಭಕ್ತಿಪರಾಯಣೆಯೂ ಆದ ರತೀದೇವಿಯು ಬಹುವಿಧವಾಗಿ ಪ್ರಲಾಪಗಳನ್ನು ಮಾಡುತ್ತಿದ್ದಳು.

೩೭. "ಹಾ ನಾಥನೆ! ಓ ನನ್ನ ಪ್ರಾಣಪ್ರಿಯನೆ! ಸ್ವಾಮಿಯೆ! ನನ್ನನ್ನೇಕೆ ತೊರೆದಿರುವೆ? ಪತಿವ್ರತೆಯೂ, ಪತಿಯನ್ನೇ ಪ್ರಾಣವಾಗಿ ತಿಳಿದವಳೂ ಆದ ನನ್ನನ್ನು ಯಾವ ಕಾರಣದಿಂದ ತ್ಯಾಗಮಾಡಿದೆ?"

೩೮. ಇಂತು ಪ್ರಲಾಪಿಸುತ್ತಿರುವ ಆ ರತಿಯನ್ನು ಕುರಿತು ಅಶರೀರ ವಾಣಿಯು ಇಂತೆಂದಿತು. "ಎಲೌ ವಿಶಾಲನೇತ್ರೆಯೆ! ನೀನು ಶೋಕವಮಾಡ ಬೇಡ, ದೇವದೇವನಾದ ಮಹೇಶ್ವರನ ಅನುಗ್ರಹದಿಂದ ಈ ನಿನ್ನ ಪತಿಯು ಮತ್ತೆ ಸಜೀವನಾಗಿ ಬರುವನು."

ಪ್ರಾರ್ಥಿತೋಽಹಂ ತತೋ ದೇವಿ ತಸ್ಮಿನ್ನವಸರೇ ಪ್ರಿಯೇ ।
ಏಷ ಕಾಮಸ್ತ್ವಯಾ ದಗ್ಧಃ ಕ್ರೋಧೇನ ಪರಮೇಶ್ವರ ॥ ೩೯ ॥
ಯೇನಾಽನೇನ ಪ್ರಭೋ ನಷ್ಟಾ ಸೃಷ್ಟಿರ್ವೈ ಧರಣೀತಲೇ ।
ಕೃಪಾಂ ವಿಧೇಹಿ ದೇವೇಶ ದೀನಾಯೈ ದೇಹಿ ಮೇ ಪತಿಂ ॥ ೪೦ ॥
ತತೋಽಹಮಬ್ರುವಂ ದೇವಿ ತಾಂ ರತಿಂ ದೀನಭಾಷಿಣೀಂ ।
ಅನೇನ ಮದನೇನಾಽದ್ಯ ಕೃತಂ ತರಲಿತಂ ಮನಃ ॥ ೪೧ ॥
ತತೋ ದಗ್ಧಂ ಮಯಾಽಸ್ಯಾಂಗಂ ಜೀವಯೇ ತ್ವತ್ಪ್ರಸಾದತಃ ।
ಅಂಗಂ ದಗ್ಧಂ ಮಯಾಽಸ್ಯಾಽದ್ಯ ತೃತೀಯನೇತ್ರವಹ್ನಿನಾ ॥ ೪೨ ॥
ತಸ್ಮಾದನಂಗ ಏವೈಷ ಪ್ರಜಾಸು ವಿಚರಿಷ್ಯತಿ ।
ಅನಂಗೋಽಪಿ ಯದಾಽವಂತ್ಯಾಂ ಲಿಂಗಂ ಸಂಸೇವಯಿಷ್ಯತಿ ॥ ೪೩ ॥
ದೇವಾನಾಮನುಕಂಪಾರ್ಥಮನಂಗೋಽಸೌ ಕೃತೋ ಮಯಾ ।
ತ್ರಿದಶೈಶ್ಚ ಸಮಾದಿಷ್ಟಃ ಕಾಮೋಽವಂತ್ಯಾಂ ಜಗಾಮ ಹ ॥ ೪೪ ॥

---

೩೯. ಪ್ರಿಯಳೆ! ಆಗ ರತಿಯು ನನ್ನ ಬಳಿಗೆ ಬಂದು ಇಂತೆಂದು ಪ್ರಾರ್ಥಿಸಿಕೊಂಡಳು. "ಎಲೈ ಪರಮೇಶ್ವರನೆ! ನನ್ನ ಪತಿಯಾದ ಕಾಮದೇವನನ್ನು ನೀನು ಕೋಪದಿಂದ ಸುಟ್ಟೆಯಲ್ಲವೆ.

೪೦. ಲೋಕೇಶ್ವರ! ಈ ಕಾಮದಹನದಿಂದ ಸಕಲಪ್ರಪಂಚದಲ್ಲಿಯೂ ಸೃಷ್ಟಿಯ ಕ್ರಮವೇ ನಷ್ಟವಾಯಿತು. ದೇವಾಧಿದೇವನೆ! ನನ್ನಲ್ಲಿ ಕರುಣೆಯನ್ನು ತೋರು. ನನ್ನ ಪತಿಯನ್ನು ಬದುಕಿಸಿಕೊಡು."

೪೧. ದೇವಿಯೆ! ಆಗ ನಾನು ದೀನಧ್ವನಿಯಿಂದ ನುಡಿಯುತ್ತಿರುವ ಆ ರತಿಗೆ ಹೇಳಿದೆನು. "ಈ ಮನ್ಮಥನಿಂದ ಇಂದು ನನ್ನ ಮನಸ್ಸು ಚಂಚಲವಾಗಿಸಲ್ಪಟ್ಟಿತು.

೪೨. ಆದುದರಿಂದಲೇ ನಾನು ಇವನ ದೇಹವನ್ನು ಭಸ್ಮಮಾಡಿದೆನು. ಈಗ ನಿನ್ನಲ್ಲಿನ ಅನುಗ್ರಹದಿಂದ ಇವನನ್ನು ಪುನರುಜ್ಜೀವನಗೊಳಿಸುವೆನು. ನನ್ನ ಮೂರನೆಯ ಕಣ್ಣಿನ ಅಗ್ನಿಯಿಂದ ಇವನ ದೇಹವು ಸುಟ್ಟುಹೋಯಿತು.

೪೩. ಆದಕಾರಣ ಇವನು ದೇಹವಿಲ್ಲದೆಯೇ ಜನರೊಳಗೆ ಸಂಚರಿಸುತ್ತಿರುವನು. ಆದರೆ ಅಂಗರಹಿತನಾದರೂ ಇವನು ಮೊದಲು ಅವಂತೀಕ್ಷೇತ್ರದಲ್ಲಿರುವ ಲಿಂಗದ ಸೇವೆಯನ್ನು ಮಾಡಬೇಕು.

೪೪. ದೇವತೆಗಳಲ್ಲಿನ ಅನುಕಂಪದಿಂದಲೇ ನಾನು ಇವನನ್ನು ಅನಂಗನನ್ನಾಗಿ ಮಾಡಿರುವೆನು." ಇದನ್ನು ಕೇಳಿದ ದೇವತೆಗಳ ಆದೇಶವನ್ನು ಕೈಗೊಂಡು ಮನ್ಮಥನೂ ಸಹ ಅವಂತೀಕ್ಷೇತ್ರಕ್ಕೆ ಹೊರಟನು.

ತತ್ರ ಗತ್ವಾ ಹ್ಯನಂಗೋಽಪಿ ಭಕ್ತಿಭಾವಸಮನ್ವಿತಃ ।
ದದರ್ಶ ಪರಮಂ ಲಿಂಗಂ ಸಮಿಾಹಿತಫಲಪ್ರದಂ ॥ ೪೫ ॥
ಪ್ರೋಕ್ತಂ ತುಷ್ಟೇನ ಲಿಂಗೇನ ಕಾಮ ಕಾಮಮವಾಪ್ಸ್ಯಸಿ ।
ಅನಂಗೋಽಪಿ ಸಮರ್ಥಸ್ತ್ವಂ ಭವಿಷ್ಯಸಿ ನ ಸಂಶಯಃ ॥ ೪೬ ॥
ಜನ್ಮ ಪ್ರಾಪ್ಸ್ಯತಿ ರುಕ್ಮಿಣ್ಯಾ ಗರ್ಭೇ ಕೃಷ್ಣಸ್ಯ ಸಂಗಮಾತ್ ।
ಭವಿತಾ ವಿಶ್ರುತೋ ಲೋಕೇ ನಾಮ್ನಾ ಶಂಬರಸೂದನಃ ॥ ೪೭ ॥
ಅನಂಗೇನ ತ್ವಯಾ ಯಸ್ಮಾನ್ಮನಸಾ ತೋಷಿತೋಽಪಿ ಸನ್ ।
ತಸ್ಮಾತ್ ಖ್ಯಾತಿಂ ಗಮಿಷ್ಯಾಮಿ ತ್ವನ್ನಾಮ್ನಾ ಕಾಮ ಸರ್ವದಾ ॥ ೪೮ ॥
ಯೇ ತ್ವಾಂ ಪಶ್ಯಂತಿ ಕಂದರ್ಪಂ ಭಕ್ತ್ಯಾ ಪರಮಯಾ ಯುತಾಃ ।
ಪ್ರಾಪ್ನುವಂತಿ ಗತಿಂ ನಿತ್ಯಂ ತೇ ಸದಾನಂದದಾಯಿಕಾಂ ॥ ೪೯ ॥
ದೀರ್ಘಾಯುಷೋ ಭವಿಷ್ಯಂತಿ ರೂಪಂ ತೇಷಾಂ ಭವಿಷ್ಯತಿ ।
ಕುಲಂ ಚ ನಿರ್ಮಲಂ ತೇಷಾಂ ಯೇ ತ್ವಾಂ ಪಶ್ಯಂತಿ ಮನ್ಮಥ ॥ ೫೦ ॥

---

೪೫. ಅಲ್ಲಿಗೆ ಹೋಗಿ ಅನಂಗನೂ ಭಕ್ತಿಭಾವಗಳಿಂದ ಕೂಡಿದವನಾಗಿ ಸಕಲಾಭೀಷ್ಟಗಳನ್ನೂ ಕೈಗೂಡಿಸುವ ಸರ್ವೋತ್ತಮವಾದ ಮಹಾಲಿಂಗವನ್ನು ಸಂದರ್ಶಿಸಿದನು.

೪೬. ಅವನ ಸಪರ್ಯೆಯಿಂದ ಸಂತೋಷಗೊಂಡ ಆ ಶಿವಲಿಂಗವು ಅವನನ್ನು ಕುರಿತು ಹೇಳತೊಡಗಿತು: "ಎಲೈ ಕಾಮನೆ! ನೀನು ನಿನ್ನ ಅಭೀಷ್ಟವನ್ನು ಪಡೆಯುವೆ. ದೇಹರಹಿತನಾದರೂ ನೀನು ಮಹಾ ಸಮರ್ಥನಾಗುವೆ. ಇದರಲ್ಲಿ ಸಂದೇಹವಿಲ್ಲವು.

೪೭. ಮುಂದೆ ನೀನು ಶ್ರೀಕೃಷ್ಣನ ದೆಸೆಯಿಂದ ರುಕ್ಮಿಣೀದೇವಿಯ ಗರ್ಭದಲ್ಲಿ ಜನ್ಮವನ್ನು ತಾಳುವೆ. ಆಗ ಶಂಬರಾಸುರನನ್ನು ನಿಗ್ರಹಿಸಿ ಆ ಹೆಸರಿನಿಂದಲೇ ಲೋಕದಲ್ಲಿ ಪ್ರಖ್ಯಾತಿಯನ್ನು ಪಡೆಯುವೆ.

೪೮. ಅನಂಗನಾದರೂ ನೀನು ಈ ಸೇವೆಯಿಂದ ನನ್ನ ಮನಸ್ಸಿಗೆ ಸಂತೋಷವನ್ನುಂಟುಮಾಡಿರುವೆ. ಎಲೈ ಕಾಮನೆ! ಆದುದರಿಂದ ನಾನೂ ನಿನ್ನ ಹೆಸರಿನಿಂದಲೇ ಸರ್ವಕಾಲದಲ್ಲಿಯೂ ಕಾಮೇಶ್ವರನೆಂದು ಪ್ರಖ್ಯಾತನಾಗುವೆನು.

೪೯. ಯಾವ ಮಾನವರು ಪರಮಭಕ್ತಿಸಹಿತರಾಗಿ ಕಂದರ್ಪನಾದ ನಿನ್ನನ್ನು ನೋಡುವರೊ, ಅವರು ಯಾವಾಗಲೂ ಉತ್ತಮಾನಂದದಾಯಕವಾದ ಸದ್ಗತಿಯನ್ನೇ ಪಡೆಯುವರು.

೫೦. ಅಯ್ಯಾ ಮನ್ಮಥನೆ! ಯಾರು ನಿನ್ನ ದರ್ಶನವನ್ನು ಮಾಡುವರೊ, ಅವರು ದೀರ್ಘಾಯುಷ್ಯವಂತರಾಗುವರು. ಅವರಿಗೆ ಸರ್ವಾಂಗಸೌಂದರ್ಯವು ಲಭಿಸುವುದು. ಅವರ ಕುಲವೂ ಪವಿತ್ರವಾಗಿರುವುದು.

ಐಶ್ವರ್ಯಂ ಪರಮಾನ್ ಭೋಗಾನ್ ಸ್ತ್ರಿಯೋ ದಿವ್ಯಕಲಾನ್ವಿತಾಃ ।
ಅರೋಗಾ ಸಂತತಿಸ್ತೇಷಾಂ ಭವಿಷ್ಯತಿ ನ ಸಂಶಯಃ ॥ ೫೧ ॥
ಚೈತ್ರಶುಕ್ಲ ತ್ರಯೋದಶ್ಯಾಂ ಯೇ ಮಾಂ ಪಶ್ಯಂತಿ ಭಕ್ತಿತಃ ।
ದೇವಲೋಕಂ ಸಮಾಸಾದ್ಯ ಮೋದಿಷ್ಯಂತಿ ಹಿ ತೇ ನರಾಃ ॥ ೫೨ ॥
ಯಕ್ಷಾ ಗಣೇಶ್ವರಾಃ ಸಿದ್ಧಾಃ ಸಿದ್ಧಗಂಧರ್ವಸೇವಿತಾಃ ।
ರುದ್ರಲೋಕಂ ಗಮಿಷ್ಯಂತಿ ವಿಮಾನೈಃ ಸರ್ವಕಾಮಿಕೈಃ ॥ ೫೩ ॥
ಇತ್ಯುಕ್ತಃ ಕಾಮದೇವೋಽಪಿ ಲಿಂಗೇನ ಪರಮೇಶ್ವರಿ ।
ತತ್ರಾಶ್ರಮಪದಂ ಚಕ್ರೇ ತಸ್ಯ ಲಿಂಗಸ್ಯ ಸನ್ನಿಧೌ ॥ ೫೪ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕಾಮೇಶ್ವರಸ್ಯ ಶೃಣ್ವಗ್ರೇ ಕುಟುಂಬೇಶ್ವರವೈಭವಂ ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕಾಮೇಶ್ವರಮಾಹಾತ್ಮ್ಯವರ್ಣನಂ" ನಾಮ ತ್ರಯೋದಶೋಽಧ್ಯಾಯಃ

---

೫೧. ಅವರು ಐಶ್ವರ್ಯವನ್ನೂ, ಉತ್ತಮ ಭೋಗಗಳನ್ನೂ, ನಾನಾವಿದ್ಯೆಗಳಲ್ಲಿ ವಿಶಾರದರಾದ ಸ್ತ್ರೀಯರನ್ನೂ ಅನುಭವಿಸುವರು. ಅವರ ಸಂತತಿಯೆಲ್ಲವೂ ಆರೋಗ್ಯವಂತವಾಗಿರುವುದರಲ್ಲಿ ಸಂದೇಹವಿಲ್ಲ.

೫೨. ಯಾವ ಮನುಷ್ಯರು ಚೈತ್ರಶುಕ್ಲಚತುರ್ದಶಿಯಲ್ಲಿ ನನ್ನನ್ನು ಭಕ್ತಿಯಿಂದ ಸಂದರ್ಶಿಸಿ ಸೇವಿಸುವರೊ, ಅವರು ದೇವಲೋಕವನ್ನು ಸೇರಿ ಆನಂದಗೊಳ್ಳುವರು.

೫೩. ಅವರು ಯಕ್ಷರೂ, ಗಣಾಧಿಪತಿಗಳೂ, ಸಿದ್ಧರೂ ಆಗಿ ಇತರ ಸಿದ್ಧಗಂಧರ್ವರ ಸೇವೆಗಳನ್ನು ಕೈಕೊಳ್ಳುತ್ತ ಸರ್ವಕಾಮಗಳನ್ನೀಯುವ ವಿಮಾನಗಳಲ್ಲಿ ಕುಳಿತುಕೊಂಡು ರುದ್ರಲೋಕಕ್ಕೆ ಹೋಗುವರು."

೫೪. ಓ ಮಹೇಶ್ವರಿಯೆ! ಆ ಮಹಾಲಿಂಗವು ಇಂತು ನುಡಿಯಲು ಕಾಮದೇವನು ಸಹ ಆ ಲಿಂಗದ ಸಮೀಪದಲ್ಲಿಯೇ ಒಂದು ಆಶ್ರಮವನ್ನು ನಿರ್ಮಿಸಿಕೊಂಡು ನೆಲಸಿದನು.

೫೫. ದೇವಿಯೆ! ಇಂತು ನಿನಗೆ ಪಾತಕನಾಶಕವಾದ ಕಾಮೇಶ್ವರ ಮಹಾಲಿಂಗದ ಪ್ರಭಾವವು ವರ್ಣಿತವಾಗಿರುವುದು. ಮುಂದೆ ಕುಟುಂಬೇಶ್ವರಲಿಂಗದ ವೈಭವವನ್ನು ಹೇಳುತ್ತೇನೆ; ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕಾಮೇಶ್ವರಮಾಹಾತ್ಮ್ಯವರ್ಣನ"ವೆಂಬ
ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ದಶೋಽಧ್ಯಾಯಃ

### ಕುಟುಂಬೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಮಹಾದೇವ ಉವಾಚ :—**

**ಕುಟುಂಬೇಶ್ವರಸಂಜ್ಞಂ ತು ದೇವಂ ವಿದ್ಧಿ ಚತುರ್ದಶಂ ।**
**ಯಸ್ಯ ದರ್ಶನಮಾತ್ರೇಣ ಗೋತ್ರವೃದ್ಧಿಶ್ಚ ಜಾಯತೇ ॥ ೧ ॥**
**ಯದಾ ದೇವಾಽಸುರೈಃ ಪೂರ್ವಂ ಮಥಿತಃ ಕ್ಷೀರಸಾಗರಃ ।**
**ತದಾ ಚ ನಿರ್ಗತಂ ದೇವಿ ದುರ್ಧರಂ ದುಃಸಹಂ ವಿಷಂ ॥ ೨ ॥**
**ಕಾಲಕೂಟಮಯಂ ರೌದ್ರಂ ವಿಷಂ ಜ್ವಾಲಾವಿಭೀಷಣಂ ।**
**ದಹ್ಯತೇ ಚ ಜಗತ್ತೇನ ಸದೇವಾಽಸುರಮಾನುಷಂ ॥ ೩ ॥**
**ತತೋ ದೇವಗಣಾಃ ಸರ್ವೇ ಸಾಽಸುರಾ ಯಕ್ಷರಾಕ್ಷಸಾಃ ।**
**ವಿಷಜ್ವಾಲಾತಿಭೀತಾಶ್ಚ ಮಾಮೇವ ಶರಣಂ ಗತಾಃ ॥ ೪ ॥**
**ಸ್ತುತೋಽಹಂ ವಿವಿಧೈಃ ಸ್ತೋತ್ರೈರಿದಮುಕ್ತಂ ವರಾನನೇ ।**
**ಅಮೃತಾರ್ಥೇ ಕೃತೋ ಯತ್ನಃ ಸಂಪ್ರಾಪ್ತಂ ಮರಣಂ ವಿಭೋ ॥ ೫ ॥**

---

### ಕನ್ನಡದ ಅನುವಾದ

#### ಕುಟುಂಬೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಕುಟುಂಬೇಶ್ವರವೆಂಬ ಹೆಸರಿನದೇ ಹದಿನಾಲ್ಕನೆಯ ಮಹಾಲಿಂಗವು. ಅದನ್ನು ದರ್ಶನಮಾಡುವುದರಿಂದಲೇ ಭಕ್ತನು ಸಂತಾನ ವೃದ್ಧಿಯನ್ನು ಹೊಂದುವನು.

೨. ದೇವೀಶ್ವರಿಯೆ! ಒಂದೆ ದೇವತೆಗಳೂ ರಾಕ್ಷಸರೂ ಸೇರಿ ಕ್ಷೀರಸಾಗರವನ್ನು ಮಥನಮಾಡಿದರು. ಆಗ ಭಯಂಕರವೂ, ಸಹಿಸಲಾಧ್ಯವೂ ಆದ ಮಹಾ ವಿಷವು ಉದ್ಭವಿಸಿತು.

೩. ಆ ವಿಷವು ಕಾಲಕೂಟಮಯವೂ, ರೌದ್ರಾಕಾರವುಳ್ಳದುದೂ, ಭಯಂಕರಜ್ವಾಲೆಗಳನ್ನುಗುಳುತ್ತಿರುವುದೂ ಆಗಿದಿತು. ಅದರಿಂದ ದೇವತೆಗಳು, ರಾಕ್ಷಸರು, ಮನುಷ್ಯರು ಮುಂತಾದವರನ್ನೊಳಕೊಂಡ ಸಕಲ ಬ್ರಹ್ಮಾಂಡವೂ ದಹಿಸಲಾರಂಭಿಸಿತು.

೪. ಆಗ ದೇವತಾಗಣಗಳೆಲ್ಲರೂ ಅಸುರರು, ಯಕ್ಷರು, ರಾಕ್ಷಸರು ಮೊದಲಾದವರೊಡನೆ ವಿಷದ ಜ್ವಾಲೆಗಳಿಂದ ಭಯಭ್ರಾಂತರಾಗಿ ನನ್ನನ್ನೇ ಶರಣು ಬರುವವರಾದರು.

೫. ಮತ್ತು ನನ್ನನ್ನು ಬಹುವಿಧಗಳಾದ ಸ್ತೋತ್ರಗಳಿಂದ ಹೊಗಳಿ ಇಂತೆಂದು ವಿಜ್ಞಾಪಿಸಿಕೊಂಡರು. "ಎಲೈ ಲೋಕನಾಥನೆ! ನಾವು ಅಮೃತಲಾಭಕ್ಕಾಗಿ ಪ್ರಯತ್ನವನ್ನು ಮಾಡಿದೆವು. ಆದರೆ ನಮಗೆ ಈಗ ಮರಣವೇ ಸಂಪ್ರಾಪ್ತವಾಗಿರುವುದು.

ಅನ್ಯಥಾ ಚಿಂತಿತಂ ಕಾರ್ಯಂ ದೈವೇನ ಕೃತಮನ್ಯಥಾ ।
ಅತಿಮಥಿತುಮಾರಬ್ಧೇ ಲೋಭಾದ್ವೈ ಕ್ಷೀರಸಾಗರಂ ॥ ೬ ॥
ಉತ್ಪನ್ನಂ ಕಾಲಕೂಟಂ ತು ಯೇನ ದಗ್ಧಂ ಚರಾಽಚರಂ ।
ತತೋಽಸ್ಮಾಕಂ ಭಯಂ ಜಾತಂ ಕಾಲಕೂಟೋದ್ಭವಂ ಪ್ರಭೋ ॥ ೭ ॥
ರಕ್ಷಾಂ ಕುರು ಜಗನ್ನಾಥ ಶರಣಾಗತವತ್ಸಲ ।
ಹಿತಾರ್ಥಂ ಸರ್ವಲೋಕಾನಾಂ ಯಥಾ ನ ಪ್ರಲಯೋ ಭವೇತ್ ॥ ೮ ॥
ಮಯಾ ತೇಷಾಂ ವಚಃ ಶ್ರುತ್ವಾ ತ್ರಿದಶಾನಾಂ ಯಶಸ್ವಿನಿ ।
ಮಾಯೂರಂ ರೂಪಮಾಸ್ಥಾಯ ದೇವಾನಾಮನುಕಂಪಯಾ ।
ಕಂಠೇ ಧೃತಂ ಮಹಾರೌದ್ರಂ ಕಾಲಕೂಟಾಹ್ವಯಂ ತದಾ ॥ ೯ ॥
ತ್ವಂ ಭೀತಾ ಸಹಸಾ ನಷ್ಟಾ ರೂಪಂ ದೃಷ್ಟ್ವಾ ತು ಮಾಮಕಂ ।
ವಿಷವೃಕ್ಷಮಸೇವ್ಯಂ ತು ತತೋಽಹಂ ದುಃಖಿತೋಽಭವಂ ॥ ೧೦ ॥
ನದೀಸಂಘಸಮಾಯುಕ್ತಾ ಗಂಗಾ ದೃಷ್ಟ್ವಾ ಚ ಪಾರ್ಶ್ವತಃ ।
ಸಾ ಚ ಪ್ರೋಕ್ತಾ ಮಯಾ ದೇವಿ ಸಾದರಂ ಸ್ತುತಿಪೂರ್ವಕಂ ॥ ೧೧ ॥

---

೬. ಅಮೃತವನ್ನು ಪಾನಮಾಡಬೇಕೆಂಬ ಲೋಭದಿಂದ ನಾವು ಕ್ಷೀರಸಾಗರವನ್ನು ಬಹುವಾಗಿ ಕಡೆಯಲಾರಂಭಿಸಲು ನಾವು ಯೋಚಿಸಿದ ಕಾರ್ಯವೊಂದಾಯಿತು; ದೈವವು ಮಾಡಿದುದೇ ಬೇರೆಯಾಯಿತು.

೭. ಕಾಲಕೂಟಮಹಾವಿಷವು ಉತ್ಪನ್ನವಾಯಿತು. ಅದರಿಂದ ಸ್ಥಾವರಜಂಗಮಾತ್ಮಕವಾದ ಸಕಲ ಪ್ರಪಂಚವೂ ಸುಟ್ಟುಹೋಗುತ್ತಿರುವುದು. ಆ ಕಾಲಕೂಟದಿಂದ ನಮಗೆ ಮಹಾಭಯವುಂಟಾಗಿರುವುದು.

೮. ಜಗನ್ನಾಥನೆ! ಶರಣಾಗತರಲ್ಲಿ ಪ್ರೀತಿಯುಳ್ಳವನೆ! ನಮ್ಮನ್ನು ಕಾಪಾಡು. ಈಗಲೇ ಪ್ರಳಯವುಂಟಾಗದಂತೆ ಸಕಲಲೋಕಗಳ ಹಿತವು ಹೇಗೆ ಉಂಟಾಗುವುದೊ ಹಾಗೆ ಮಾಡು.''

೯. ಯಶಸ್ವಿನಿಯೆ! ನಾನು ಆ ದೇವತೆಗಳ ವಿಜ್ಞಾಪನೆಯನ್ನು ಕೇಳಿ ನವಿಲಿನ ರೂಪವನ್ನು ತಾಳಿದವನಾಗಿ ದೇವತೆಗಳಲ್ಲಿ ಕರುಣೆಯಿಂದ ಮಹಾಭಯಂಕರವಾದ ಆ ಕಾಲಕೂಟವಿಷವನ್ನು ನನ್ನ ಕಂಠದಲ್ಲಿ ಧರಿಸಿದೆನು.

೧೦. ವಿಷವೃಕ್ಷದಂತೆ ಸೇವೆಗೆ ಅಸಾಧ್ಯವಾದ ನನ್ನ ಆ ರೂಪವನ್ನು ಕಂಡು ನೀನು ಭಯಭರಿತಳಾಗಿ ತಕ್ಷಣದಲ್ಲಿಯೇ ಓಡಿಹೋದೆ. ಅದನ್ನು ಕಂಡು ನಾನು ದುಃಖಿತನಾದೆನು.

೧೧. ಅನೇಕ ನದಿಗಳನ್ನು ಸೇರಿಸಿಕೊಂಡು ಪ್ರವಹಿಸುತ್ತಿರುವ ಗಂಗಾನದಿಯನ್ನು ಸಮೀಪದಲ್ಲಿಯೆ ಕಂಡು ಆದರದಿಂದ ಸ್ತೋತ್ರಮಾಡಿ ನಾನು ಆ ನದಿಯನ್ನು ಕುರಿತು ಇಂತೆಂದನು.

ಕಾಲಕೂಟವಿಷಂ ಗಂಗೇ ವೇಗಾನ್ನಯ ಮಹೋದಧಿಂ ।
ನಾಽನ್ಯಾ ಶಕ್ತಾ ಸಮಾನೇತುಂ ತ್ವಾಂ ವಿನಾ ಲೋಕಪಾವನಿ ॥ ೧೨ ॥

ಗಂಗೋವಾಚ :—

ನಾಽಸ್ತಿ ಮೇ ಭಗವಂಛಕ್ತಿರ್ನಿರ್ವೋಢುಂ ಚ ಜಗತ್ಪತೇ ।
ರೌದ್ರರೂಪೀ ಚ ದುಃಸೇವ್ಯೋ ದಹತ್ಯೇವ ನ ಸಂಶಯಃ ॥ ೧೩ ॥
ತತಸ್ತು ಯಮುನಾ ಪ್ರೋಕ್ತಾ ನ ಸಮರ್ಥಾ ಸರಸ್ವತೀ ।
ಅನ್ಯಾಶ್ಚ ವಿವಿಧಾ ನದ್ಯೋ ಮಯಾಽಽಹೂತಾಃ ಪೃಥಕ್ ಪೃಥಕ್ ॥ ೧೪ ॥
ಅಶಕ್ತಾಸ್ತಾಃ ಸಮಾನೇತುಂ ಕಾಲಕೂಟಾಹ್ವಯಂ ವಿಷಂ ।
ತದಾಹೂತಾ ಮಯಾ ದೇವಿ ಶಿಪ್ರಾ ಬ್ರಹ್ಮಸಮುದ್ಭವಾ ॥ ೧೫ ॥
ಶಿಪ್ರೇ ಪುತ್ರಿ ಮಮಾದೇಶಾನ್ಮಹಾಕಾಲವನಂ ವ್ರಜ ।
ಗೃಹೀತ್ವಾ ಕಾಲಕೂಟಂ ತು ಪುರಃ ಕಾಮೇಶ್ವರಸ್ಯ ಹಿ ॥ ೧೬ ॥
ವಿದ್ಯತೇ ಪರಮಂ ಲಿಂಗಂ ತಸ್ಮಿನ್ ಲಿಂಗೇ ನಿಯೋಜಯ ।
ಮಯಾ ಪ್ರೋಕ್ತಾ ತದಾ ಪ್ರಾಹ ಬ್ರಹ್ಮಣಃ ಪರಮಾ ಕಲಾ ॥ ೧೭ ॥

---

೧೨. "ಎಲೌ ಗಂಗೆಯೆ! ಈ ಕಾಲಕೂಟವಿಷವನ್ನು ನೀನು ವೇಗವಾಗಿ ಮಹಾಸಮುದ್ರಕ್ಕೆ ತೆಗೆದುಕೊಂಡು ಹೋಗು. ಲೋಕಪಾವನೆಯಾದ ನೀನಲ್ಲದೆ ಬೇರಾರೂ ಇದನ್ನು ಧರಿಸಲು ಶಕ್ತರಲ್ಲ."

೧೩. ಗಂಗೆಯು ಹೇಳುತ್ತಾಳೆ:—"ಭಗವಂತನಾದ ಓ ಜಗನ್ನಾಯಕನೆ! ಇದನ್ನು ತೆಗೆದುಕೊಂಡು ಹೋಗಲು ನನಗೆ ಶಕ್ತಿಯಿಲ್ಲ. ಕರಾಳರೂಪವೂ, ದುಃಸೇವ್ಯವೂ ಆದ ಇದು ನಿಶ್ಚಯವಾಗಿಯೂ ನನ್ನನ್ನು ಸುಡುವುದು."

೧೪. ಬಳಿಕ ನಾನು ಯಮುನೆಯನ್ನು ಕೇಳಿದೆನು. ಆಕೆಯೂ ಒಪ್ಪಲಿಲ್ಲ. ಸರಸ್ವತಿಯೂ ಶಕ್ತಳಾಗಲಿಲ್ಲ. ಬಳಿಕ ಇತರ ವಿಧಗಳಾದ ಅನೇಕ ನದಿಗಳನ್ನೂ ಬೇರೆ ಬೇರೆಯಾಗಿ ಕರೆದು ಕೇಳಿದೆನು.

೧೫. ಕಾಲಕೂಟನಾಮಕವಾದ ಈ ವಿಷವನ್ನು ಧರಿಸಲು ಅವರಲ್ಲಿ ಯಾರೂ ಶಕ್ತರಾಗಿರಲಿಲ್ಲ. ದೇವಿಯೆ! ಕಡೆಯಲ್ಲಿ ನಾನು ಬ್ರಹ್ಮನಿಂದ ಹುಟ್ಟಿಬಂದ ಶಿಪ್ರಾನದಿಯನ್ನು ಕರೆದು ಹೇಳಿದೆನು.

೧೬. "ಮಗಳೇ! ಎಲೌ ಶಿಪ್ರೆಯೆ! ನನ್ನ ಅಪ್ಪಣೆಯಂತೆ ನೀನು ಈ ಕಾಲಕೂಟ ವಿಷವನ್ನು ತೆಗೆದುಕೊಂಡು ಮಹಾಕಾಲವನಕ್ಕೆ ಹೋಗಿ ಅಲ್ಲಿ ಕಾಮೇಶ್ವರನ ಮುಂದುಗಡೆಯ ಪ್ರದೇಶವನ್ನು ಸೇರಬೇಕು.

೧೭. ಅಲ್ಲಿ ಉತ್ತಮಲಿಂಗವೊಂದಿರುವುದು. ಈ ವಿಷವನ್ನು ಆ ಲಿಂಗದಲ್ಲಿ ಸೇರಿಸಿಬಿಡು." ನನ್ನ ಈ ಮಾತನ್ನು ಕೇಳಿ ಬ್ರಹ್ಮನ ಅಂಶದಿಂದುದ್ಭವಿಸಿದ ಆ ಶಿಪ್ರೆಯು ಇಂತೆಂದಳು.

ಏಷಾಽಸ್ಮಿ ಪ್ರಸ್ಥಿತಾ ದೇವ ತವ ವಾಕ್ಯಾದಸಂಶಯಂ ।
ದುಃಸ್ಪರ್ಶಃ ಕಾಲಕೂಟೋಽಯಂ ನೂನಂ ಮಾಂ ಭಕ್ಷಯಿಷ್ಯತಿ ॥ ೧೮ ॥
ಅಸೇವ್ಯಾಽಹಂ ಭವಿಷ್ಯಾಮಿ ದುಷ್ಟಸಂಪರ್ಕಯೋಗತಃ ।
ತತೋ ಮಯಾ ಪುನಃ ಪ್ರೋಕ್ತಾ ಶಿಪ್ರಾ ಪಾತಕನಾಶಿನೀ ॥ ೧೯ ॥
ಯಾನಿ ತೀರ್ಥಾನಿ ಭೂಲೋಕೇ ಪಾತಾಲೇ ಯಾನಿ ಸಂತಿ ವೈ ।
ಸ್ವರ್ಗಲೋಕೇ ಹ್ಯಂತರಿಕ್ಷೇ ಪುಣ್ಯಾನಿ ಚಾರುಹಾಸಿನಿ ॥ ೨೦ ॥
ತಾನಿ ಸರ್ವಾಣಿ ಸೇವಾರ್ಥಮಾಗತ್ಯ ಮಮ ವಾಕ್ಯತಃ ।
ಆಜ್ಞಾಂ ತವ ಕರಿಷ್ಯಂತಿ ಗಚ್ಛ ಪುತ್ರಿ ಮಮಾಜ್ಞಯಾ ॥ ೨೧ ॥
ಏವಮುಕ್ತಾ ತದಾ ಶಿಪ್ರಾ ಗೃಹೀತ್ವಾ ಕಾಲಕೂಟಕಂ ।
ಸಮಾಯಾತಾ ವರಾರೋಹೇ ಯತ್ರ ಲಿಂಗಮನುತ್ತಮಂ ॥ ೨೨ ॥
ತದ್ವಿಷಂ ಕಾಲಕೂಟಾಹ್ವಂ ನಿಕ್ಷಿಪ್ತಂ ಲಿಂಗಮೂರ್ಧನಿ ।
ವಿಷಲಿಂಗಸ್ತತೋ ಜಾತೋ ದೃಷ್ಟೋ ಮೃತ್ಯುಪ್ರದಾಯಕಃ ॥ ೨೩ ॥

---

೧೮. "ದೇವದೇವನೆ! ಇಗೊ, ನಿನ್ನ ಆಜ್ಞೆಯನ್ನನುಸರಿಸಿ ನಿಸ್ಸಂಕೋಚವಾಗಿ ಹೊರಡಲು ಸಿದ್ಧಳಾಗಿರುವೆನು. ಆದರೆ ಮುಟ್ಟುವುದಕ್ಕೂ ಬಾರದಂತಹ ಈ ಕಾಲಕೂಟವು ನಿಜವಾಗಿ ನನ್ನನ್ನು ಸುಡುವುದಿಲ್ಲವೆ?

೧೯. ಈ ದುಷ್ಟವಸ್ತುವಿನ ಸಂಪರ್ಕದಿಂದ ನಾನೂ ಮುಂದೆ ಜನರ ಸೇವನೆಗೆ ಅನರ್ಹಳಾಗುವೆನು.'' ಆಗ ನಾನು ಮತ್ತೆ ಸಕಲಕಲ್ಮಷನಾಶಿನಿಯಾದ ಶಿಪ್ರೆಗೆ ಹೇಳಿದೆನು.

೨೦. "ಮಂಗಳಸ್ಮಿತೆಯೆ! ಭೂಲೋಕದಲ್ಲಿಯೂ, ಪಾತಾಳದಲ್ಲಿಯೂ, ಸ್ವರ್ಗಲೋಕದಲ್ಲಿಯೂ. ಅಂತರಿಕ್ಷದಲ್ಲಿಯೂ ಪುಣ್ಯತಮಗಳಾದ ಅಸಂಖ್ಯಾತ ತೀರ್ಥಗಳಿರುವುವಷ್ಟೆ.

೨೧. ಮಗಳೆ! ನನ್ನ ಆಜ್ಞೆಯನ್ನನುಸರಿಸಿ ಅವುಗಳೆಲ್ಲವೂ ನಿನ್ನನ್ನು ಸೇವಿಸಲು ಇಲ್ಲಿಗೆ ಬಂದು ನಿನ್ನ ಅನುಜ್ಞೆಗಳನ್ನು ಪಾಲಿಸುತ್ತಿರುವುವು. ಇನ್ನು ನನ್ನ ಅಪ್ಪಣೆಯನ್ನು ಮಾಡಲು ಹೊರಡು.''

೨೨. ಮಂಗಳಾಂಗಿಯೆ! ಇಂತೆಂದು ನಾನು ಹೇಳಲು ಶಿಪ್ರೆಯು ಆ ಕಾಲಕೂಟ ವಿಷವನ್ನು ತೆಗೆದುಕೊಂಡು ಮಹಾಕಾಲವನದಲ್ಲಿ ಸರ್ವೋತ್ತಮವಾದ ಆ ಲಿಂಗವಿದ್ದಲ್ಲಿಗೆ ಪ್ರಾಪ್ತಳಾದಳು.

೨೩. ಕಾಲಕೂಟವೆಂಬ ಆ ಮಹಾವಿಷವನ್ನು ಆ ಲಿಂಗದ ತಲೆಯ ಮೇಲೆ ಹಾಕಿದಳು. ಅಂದಿನಿಂದ ಆ ಲಿಂಗವು ವಿಷಲಿಂಗವಾಗಿ ಪರಿಣಮಿಸಿ ನೋಡಿದವರನ್ನೆಲ್ಲ ಮೃತ್ಯುವಿಗೆ ಗುರಿಮಾಡುತ್ತಿದ್ದಿತು.

ಪಶುಃ ಪಕ್ಷೀ ನರೋ ವಾಽಪಿ ಯೋ ಹಿ ಪಶ್ಯತಿ ತಂ ಶಿವಂ ।
ಮ್ರಿಯತೇ ಸ ತದಾ ದೇವಿ ತಸ್ಯ ದೇವಸ್ಯ ದರ್ಶನಾತ್ ॥ ೨೪ ॥
ತೀರ್ಥಯಾತ್ರಾಂ ತತಃ ಕರ್ತುಂ ತತ್ರಾಯಾತಾಸ್ತಪೋಧನಾಃ ।
ತಂ ಚ ದೇವಂ ತತೋ ದೃಷ್ಟ್ವಾ ಮೃತಾಃ ಸರ್ವೇ ಚ ತತ್ಕ್ಷಣಾತ್ ॥೨೫॥
ತತೋ ಹಾಹಾಕೃತಂ ದೇವಿ ತ್ರೈಲೋಕ್ಯಂ ಸಚರಾಚರಂ ।
ಹಾಹಾಕಾರಂ ಮಹಚ್ಛ್ರುತ್ವಾ ಮಯಾ ತೇ ದ್ವಿಜಸತ್ತಮಾಃ ।
ಸಂಜೀವಿತಾಶ್ಚ ಮೈ ಸರ್ವೇ ದೃಷ್ಟಿಪಾತೇನ ಪಾರ್ವತಿ ॥ ೨೬ ॥
ತುಷ್ಟುವುಃ ಪ್ರಣತಾ ವಿಪ್ರಾ ಮಾಮತೋ ವಿವಿಧೈಃ ಸ್ತವೈಃ ।
ಮಯಾ ಪ್ರೋಕ್ತಾಸ್ತು ತೇ ವಿಪ್ರಾ ವೃಣುಧ್ವಂ ವರಮುತ್ತಮಂ ॥ ೨೭ ॥
ತೈರುಕ್ತಂ ಪ್ರಣತೈರ್ದೇವಿ ಲೋಕಾನಾಂ ಚ ಹಿತಾರ್ಥತಃ ।
ಸಂಮ್ರಿಯಂತೇ ಪ್ರಜಾ ದೇವ ಲಿಂಗೇನಾಽನೇನ ಶಂಕರ ॥ ೨೮ ॥
ತಾಃ ಸಂರಕ್ಷ ಜಗನ್ನಾಥ ಹ್ಯೇಷೋಽಸ್ಮಾಕಂ ವರಃ ಪ್ರಭೋ ।
ಪ್ರತಿಜ್ಞಾತಂ ಮಯಾ ದೇವಿ ಲೋಕಾನಾಮನುಕಂಪಯಾ ॥ ೨೯ ॥

---

೨೪. ದೇವಿಯು! ಆ ಲಿಂಗದ ದರ್ಶನವನ್ನುಮಾಡಿದ ಪಶುಗಳು, ಪಕ್ಷಿಗಳು, ಮನುಷ್ಯರು ಮುಂತಾಗಿ ಎಲ್ಲರೂ ಕ್ಷಣಮಾತ್ರದಲ್ಲಿಯೇ ಪ್ರಾಣಗಳನ್ನು ಕಳೆದುಕೊಳ್ಳುತ್ತಿದ್ದರು.

೨೫. ಒಮ್ಮೆ ಕೆಲವು ತಪೋನಿರತರು ತೀರ್ಥಯಾತ್ರೆಯ ಪ್ರಸಂಗದಿಂದ ಆ ಪ್ರದೇಶಕ್ಕೆ ಬಂದು ಆ ಮಹಾದೇವಲಿಂಗವನ್ನು ನೋಡಿದ ಕ್ಷಣದಲ್ಲಿಯೇ ಎಲ್ಲರೂ ಮೃತರಾದರು.

೨೬. ಇದನ್ನು ಕಂಡು ಚರಾಚರಾತ್ಮಕವಾದ ಜೀವರಿಂದೊಡಗೂಡಿದ ಮೂರು ಲೋಕಗಳೂ ಹಾಹಾಕಾರವನ್ನು ಮಾಡಿದುವು. ಮಹತ್ತರವಾದ ಈ ಆರ್ತಧ್ವನಿಯನ್ನು ಕೇಳಿ ಕಾರಣವನ್ನು ತಿಳಿದು ನಾನು ಆ ಬ್ರಾಹ್ಮಣೋತ್ತಮರೆಲ್ಲರನ್ನೂ ನನ್ನ ಕೃಪಾಕಟಾಕ್ಷವೀಕ್ಷಣದಿಂದ ಪುನರುಜ್ಜೀವಿತರನ್ನಾಗಿ ಮಾಡಿದೆನು.

೨೭. ಆಗ ಆ ಬ್ರಾಹ್ಮಣರು ವಿಧವಿಧಗಳಾದ ಸ್ತೋತ್ರಗಳಿಂದ ನನ್ನನ್ನು ಸ್ತುತಿಸಿದರು. ನಾನೂ ಸಹ ಅವರಿಗೆ "ನಿಮಗೆ ಬೇಕಾದ ಉತ್ತಮ ವರವನ್ನು ಕೇಳಿರಿ" ಎಂದೆನು.

೨೮. ಅವರು ಪ್ರಣಾಮಗಳನ್ನುಮಾಡಿ ಸಕಲಜೀವರಿಗೂ ಹಿತವನ್ನು ಮಾಡುವ ಇಚ್ಛೆಯುಳ್ಳವರಾಗಿ ಬೇಡಿಕೊಂಡರು. "ಶಂಕರನೆ! ಈ ಲಿಂಗದ ದೆಸೆಯಿಂದ ಸಕಲಜನರೂ ಮರಣವನ್ನು ಹೊಂದುತ್ತಿರುವರು.

೨೯. ಜಗದೀಶ್ವರ! ಅವರನ್ನೆಲ್ಲ ಕಾಪಾಡು. ಪ್ರಭುವೆ! ಇದೇ ನಮಗೆ ಬೇಕಾದ ವರವು." ದೇವಿಯೆ! ನಾನೂ ಸಹ ಲೋಕಾನುಗ್ರಹದೃಷ್ಟಿಯುಳ್ಳವನಾಗಿ ಆಗ ಪ್ರತಿಜ್ಞೆಯನ್ನು ಮಾಡಿದೆನು.

ಕ್ಷೇಮಾರೋಗ್ಯಕರಂ ಲಿಂಗಂ ಭವಿಷ್ಯತಿ ನ ಸಂಶಯಃ ।
ಕಾಯಾವರೋಹಣಾದ್ವಿಪ್ರಾಃ ಸ್ವಯಮತ್ರಾಗಮಿಷ್ಯತಿ ॥ ೩೦ ॥
ಲಕುಲೀಶಸ್ತದಾಚಾಯಂ ದೇವಃ ಸ್ಪೃಶ್ಯೋ ಭವಿಷ್ಯತಿ ।
ವೃದ್ಧಿಕಾರೀ ಕುಟುಂಬಸ್ಯ ಭವಿಷ್ಯತಿ ನ ಸಂಶಯಃ ॥ ೩೧ ॥
ಕುಟುಂಬೇಶ್ವರ ಇತಿ ನಾಮ್ನಾ ಲೋಕೇ ಖ್ಯಾತಿಂ ಗಮಿಷ್ಯತಿ ।
ಇತ್ಯುಕ್ತಾಸ್ತೇ ಮಯಾ ವಿಪ್ರಾಸ್ತತ್ರೈವ ತಪಸಿ ಸ್ಥಿತಾಃ ॥ ೩೨ ॥
ಲಕುಲೀಶೋಽಥ ತಲ್ಲಿಂಗಮಾರುರೋಹ ಮಮಾಜ್ಞಯಾ ।
ಜನಯನ್ವಿಸ್ಮಯಂ ಲೋಕೇ ಕೀರ್ತಿಂ ಜನಪದೇ ತಥಾ ॥ ೩೩ ॥
ಕುಟುಂಬೇಶ್ವರಸಂಜ್ಞಂ ತು ಯೇ ಪಶ್ಯಂತಿ ಯಶಸ್ವಿನಿ ।
ತೇಷಾಂ ಕುಲೇತು ವೃದ್ಧಿಃ ಸ್ಯಾತ್ಕುಟುಂಬಸ್ಯ ನ ಸಂಶಯಃ ॥ ೩೪ ॥
ಆಶ್ವಿನಾಸಿತಪಂಚಮ್ಯಾಂ ದರ್ಶನಂ ಯಃ ಕರಿಷ್ಯತಿ ।
ಬಹುಪುತ್ರೋ ಬಹುಧನೋ ಭವಿಷ್ಯತಿ ನ ಸಂಶಯಃ ॥ ೩೫ ॥

---

೩೦–೩೧. "ಈ ಲಿಂಗವು ಮುಂದೆ ಲೋಕದ ಜನರಿಗೆ ಕ್ಷೇಮವನ್ನೂ ಆರೋಗ್ಯವನ್ನೂ ಉಂಟುಮಾಡುವುದು. ಇದರಲ್ಲಿ ಸಂದೇಹವಿಲ್ಲ. ಅಯ್ಯಾ ಬ್ರಾಹ್ಮಣರಿರಾ! ಕಾಯಾವರೋಹಣಕ್ಷೇತ್ರದಿಂದ ಲಕುಲೀಶ್ವರನು ತಾನೇ ಇಲ್ಲಿಗೈತಂದು ಇದರಲ್ಲಿ ನೆಲಸುವನು. ಆಗ ಈ ಲಿಂಗವು ಮುಟ್ಟುವುದಕ್ಕೆ ಯೋಗ್ಯವಾಗುವುದು. ಮತ್ತು ಭಜಿಸಿದವರ ಕುಟುಂಬಗಳನ್ನು ಅಭಿವೃದ್ಧಿಗೊಳಿಸುವುದೂ ಆಗುವುದರಲ್ಲಿ ಸಂಶಯವಿಲ್ಲವು.

೩೨. ಇದು ಕುಟುಂಬೇಶ್ವರನೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆಯುವುದು." ಇಂತೆಂದ ನನ್ನ ಮಾತನ್ನು ಕೇಳಿ ಆ ಬ್ರಾಹ್ಮಣೋತ್ತಮರೆಲ್ಲರೂ ಅಲ್ಲಿಯೇ ತಪೋನಿರತರಾಗಿ ನಿಂತರು.

೩೩. ಬಳಿಕ ನನ್ನ ಆಜ್ಞೆಯಂತೆ ಲಕುಲೀಶನು ಆ ಲಿಂಗದಲ್ಲಿ ಆವಿರ್ಭೂತನಾದನು. ಜನರೆಲ್ಲರೂ ವಿಸ್ಮಿತರಾದರು. ಅದರ ಕೀರ್ತಿಯು ದೇಶವೆಲ್ಲೆಲ್ಲ ವಿಸ್ತಾರವಾಯಿತು.

೩೪. ಯಶಸ್ಸಂಪನ್ನಳೆ! ಈ ಕುಟುಂಬೇಶ್ವರನ ದರ್ಶನವನ್ನು ಯಾರು ಮಾಡುವರೊ, ಅವರ ಕುಲದಲ್ಲಿ ಪ್ರತಿಯೊಂದು ತಲೆಮಾರಿಗೂ ವಂಶವು ವೃದ್ಧಿಯನ್ನೈದುತ್ತಿರುವುದು. ಇದರಲ್ಲಿ ಸಂಶಯವಿಲ್ಲ.

೩೫–೩೬. ಆಶ್ವಯುಜಮಾಸದ ಕೃಷ್ಣಪಂಚಮಿಯ ದಿನ ಈ ಲಿಂಗವನ್ನು ಯಾವ ಮಾನವನು ನೋಡುವನೊ, ಅವನು ಬಹುಪುತ್ರವಂತನೂ, ಅತುಲೈಶ್ವರ್ಯಾನ್ವಿತನೂ ಆಗುವುದರಲ್ಲಿ ಸಂದೇಹವಿಲ್ಲ. ಮಹತ್ತರವಾದ ಸೌಭಾಗ್ಯವನ್ನೂ ಹೊಂದುವನು. ಸಕಲರೋಗಗಳಿಂದಲೂ ಮುಕ್ತನಾಗುವನು. ಈ ಲೋಕದಲ್ಲಿ

ಮಹತೀಂ ಶ್ರಿಯಮಾಪ್ನೋತಿ ರೋಗೈಶ್ಚಾಪಿ ಪ್ರಮುಚ್ಯತೇ ।
ಸರ್ವಕಾಮಸಮೃದ್ಧೋಽಸೌ ಮಮ ಲೋಕೇ ಸ ಮೋದತೇ ॥ ೩೬ ॥
ದರ್ಶನಂ ಯೇ ಕರಿಷ್ಯಂತಿ ಸ್ಪರ್ಶನಂ ಯಜನಂ ತಥಾ ।
ತೇ ಸರ್ವೇ ಕಾಮಸಂಪೂರ್ಣಾಃ ಪ್ರಯಾಂತಿ ಮಮ ಮಂದಿರಂ ॥ ೩೭ ॥
ಸಮೀಪೇತು ಸರಿಚ್ಛಿಪ್ರಾ ವಾಪೀಕೂಪೇನ ಸಂಯುತಾ ।
ಯಸ್ಯಾ ದರ್ಶನಮಾತ್ರೇಣ ನರಃ ಪಾಪಾತ್ಪ್ರಮುಚ್ಯತೇ ॥ ೩೮ ॥
ಸೋಮವಾರೇಽರ್ಕವಾರೇ ಚ ಸ್ನಾತ್ವಾ ತಸ್ಯಾಂ ಸಮಾಹಿತಃ ।
ಅಷ್ಟಮ್ಯಾಂ ವಾ ಚತುರ್ದಶ್ಯಾಂ ಯಃ ಪಶ್ಯೇತ್ಕುಟುಂಬೇಶ್ವರಂ ॥ ೩೯ ॥
ರಾಜಸೂಯಸಹಸ್ರಸ್ಯ ವಾಜಪೇಯಶತಸ್ಯ ಚ ।
ಫಲಂ ಸ ಲಭತೇ ದೇವಿ ಸತ್ಯಮೇತನ್ಮಯೋದಿತಂ ॥ ೪೦ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕುಟುಂಬೇಶ್ವರದೇವಸ್ಯ ತ್ವಿಂದ್ರದ್ಯುಮ್ನೇಶ್ವರಂ ಶೃಣು ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕುಟುಂಬೇಶ್ವರಮಾಹಾತ್ಮ್ಯವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

ಸಕಲ ಭೋಗಗಳನ್ನೂ ಯಥೇಚ್ಛವಾಗಿ ಅನುಭವಿಸಿ ಕಡೆಗೆ ನನ್ನ ಲೋಕದಲ್ಲಿ ಸುಖಪಡುವನು.

೩೭–೩೮. ಈ ಮಹಾಲಿಂಗದ ದರ್ಶನ, ಸ್ಪರ್ಶನ, ಪೂಜನಗಳನ್ನು ಯಾವ ಮನುಷ್ಯರು ಮಾಡುವರೊ, ಅವರೆಲ್ಲರೂ ಸರ್ವಾಭೀಷ್ಟಗಳನ್ನೂ ಪಡೆದು ನನ್ನ ಮಂದಿರಕ್ಕೆ ಬಂದು ಸೇರುವರು. ಈ ಲಿಂಗದ ಸಮೀಪದಲ್ಲಿಯೇ ಶಿಪ್ರಾನದಿಯು ವಾಪೀಕೂಪತೀರ್ಥದೊಡನೆ ಸೇರುವುದು. ಈ ಪುಣ್ಯತೀರ್ಥದ ದರ್ಶನಮಾತ್ರದಿಂದಲೇ ಮನುಷ್ಯನು ಸಕಲಪಾತಕಗಳಿಂದಲೂ ಮುಕ್ತನಾಗುವನು.

೩೯–೪೦. ಎಲೌ ದೇವಿಯೆ! ಸೋಮವಾರ ಭಾನುವಾರಗಳಲ್ಲಾಗಲಿ, ಅಷ್ಟಮೀ ಚತುರ್ದಶೀ ತಿಥಿಗಳಲ್ಲಾಗಲಿ ಈ ತೀರ್ಥದಲ್ಲಿ ಯಾವನು ಸ್ನಾನವನ್ನು ಮಾಡಿ ಕುಟುಂಬೇಶ್ವರನ ದರ್ಶನವನ್ನು ತೆಗೆದುಕೊಳ್ಳುವನೊ, ಅವನು ಒಂದು ಸಾವಿರ ರಾಜಸೂಯ ಯಜ್ಞಗಳನ್ನೂ, ಒಂದುನೂರು ವಾಜಪೇಯಗಳನ್ನೂ ಮಾಡಿದ ಪುಣ್ಯಕ್ಕೆ ಭಾಗಿಯಾಗುವನು. ಈ ನನ್ನ ಮಾತು ಸತ್ಯವೆಂದು ತಿಳಿ.

೪೧. ಪಾರ್ವತೀ! ಇಂತು ಕುಟುಂಬೇಶ್ವರನ ಪರಮಪಾವನವೂ ಪಾಪನಾಶಕವೂ ಆದ ಕಥೆಯನ್ನು ಹೇಳಿರುವೆನು. ಇನ್ನು ಇಂದ್ರದ್ಯುಮ್ನೇಶ್ವರ ಮಹಾಲಿಂಗದ ಮಹಿಮೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕುಟುಂಬೇಶ್ವರಮಾಹಾತ್ಮ್ಯವರ್ಣನ"ವೆಂಬ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ಇಂದ್ರದ್ಯುಮ್ನೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ:—

**ಇಂದ್ರದ್ಯುಮ್ನೇಶ್ವರಂ ವಿದ್ಧಿ ಶಿವಂ ಪಂಚದಶಂ ಪ್ರಿಯೇ ।**
**ಯಸ್ಯ ದರ್ಶನಮಾತ್ರೇಣ ಯಶಃ ಕೀರ್ತಿಶ್ಚ ಜಾಯತೇ ॥ ೧ ॥**
**ಆಸೀದ್ರಾಜಾ ಪುರಾ ದೇವಿ ಇಂದ್ರದ್ಯುಮ್ನೋ ಮಹೀಪತಿಃ ।**
**ಯೇನೇಯಂ ರಕ್ಷಿತಾ ಪೃಥ್ವೀ ಪಿತಾ ಪುತ್ರಮಿವೌರಸಂ ॥ ೨ ॥**
**ದೃಷ್ಟ್ವಾ ಸೋಽಥ ಬಹೂನ್ಯಜ್ಞಾನ್ಭುವಿ ಪ್ರಚುರದಕ್ಷಿಣಾನ್ ।**
**ಗತಃ ಸ್ವರ್ಗಂ ಮಹಾತ್ಮಾ ವೈ ಸರ್ವಕಾಮಫಲಪ್ರದಂ ॥ ೩ ॥**
**ಸ ಚಾಽಥ ಪ್ರಚ್ಯುತಃ ಸ್ವರ್ಗಾನ್ನಷ್ಟಕೀರ್ತಿರ್ಯದಾ ಕ್ಷಿತೌ ।**
**ಪಪಾತ ಭೂಮೌ ಸಹಸಾ ಗತಪುಣ್ಯೋ ನರಾಽಧಿಪಃ ।**
**ಪತಿತಶ್ಚಿಂತಯಾಮಾಸ ಭೃಶಂ ಕ್ಲೇಶಪರಿಪ್ಲುತಃ ॥ ೪ ॥**

---

## ಕನ್ನಡದ ಅನುವಾದ

### ಇಂದ್ರದ್ಯುಮ್ನೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ದರ್ಶನಮಾತ್ರದಿಂದ ಮನುಜರಿಗೆ ಯಶಸ್ಸನ್ನೂ ಕೀರ್ತಿಯನ್ನೂ ಗಳಿಸಿಕೊಡುವ ಇಂದ್ರದ್ಯುಮ್ನೇಶ್ವರ ಲಿಂಗವೇ ಹದಿನೈದನೆಯದೆಂದು ತಿಳಿ.

೨. ದೇವಿಯೆ! ಹಿಂದಿನ ಕಾಲದಲ್ಲಿ ಇಂದ್ರದ್ಯುಮ್ನನೆಂಬ ಚಕ್ರವರ್ತಿಯೊಬ್ಬನು ಆಳುತ್ತಿದ್ದನು. ತಂದೆಯು ಮಕ್ಕಳನ್ನು ಕಾಪಾಡುವಂತೆ ಆ ರಾಜನು ಸಮಸ್ತ ಭೂಮಂಡಲವನ್ನೂ ಪರಿಪಾಲಿಸುತ್ತಿದ್ದನು.

೩. ಭೂಲೋಕದಲ್ಲಿ ಅನೇಕ ದಕ್ಷಿಣೆಗಳಿಂದ ಕೂಡಿದ ಲೆಕ್ಕವಿಲ್ಲದಷ್ಟು ಯಜ್ಞಗಳನ್ನು ಮಾಡಿ ಆ ಮಹಾತ್ಮನು ಸರ್ವಕಾಮಫಲಗಳನ್ನೂ ಕೊಡುವ ಸ್ವರ್ಗಲೋಕಕ್ಕೆ ಹೊರಟು ಹೋದನು.

೪. ಕೀರ್ತಿಯು ನಶಿಸಿ ಪುಣ್ಯರಾಶಿಯೆಲ್ಲವೂ ಕಳೆದುಹೋಗಲು ಆ ಮಹಾರಾಜನು ಸ್ವರ್ಗಲೋಕದಿಂದ ನಿಮಿಷಮಾತ್ರದಲ್ಲಿಯೇ ಪುನಃ ಭೂಲೋಕಕ್ಕೆ ಬಿದ್ದನು. ಕ್ಷೀಣಪುಣ್ಯನಾಗಿ ಭೂಮಿಗೆ ಬಿದ್ದ ಆತನು ಅತ್ಯಂತ ಶೋಕಾಕುಲನಾಗಿ ತನ್ನಲ್ಲಿಯೇ ಬಹುವಾಗಿ ಆಲೋಚಿಸಿಕೊಂಡನು.

ಕೃತಸ್ಯ ಕರ್ಮಣಸ್ತ್ವತ್ರ ಭುಜ್ಯತೇ ಯತ್ಫಲಂ ದಿವಿ ।
ನ ಚಾಽನ್ಯತ್ಕ್ರಿಯತೇ ತದ್ಯದ್ಭೂತಲಸ್ಥೇನ ಭುಜ್ಯತೇ ॥ ೫ ॥
ಸೋಽತ್ರ ದೋಷೋ ಮತಸ್ತಸ್ಮಾನ್ಮತಸ್ತತ್ಪತನಂ ಚ ಯತ್ ।
ಪತನಾತ್ತು ಮಹದ್ದುಃಖಂ ಪರಿತಾಪಶ್ಚ ಜಾಯತೇ ॥ ೬ ॥
ಸ್ವರ್ಗಭಾಜೋ ಭವಂತೀಹ ಯಾವತ್ಕೀರ್ತಿಶ್ಚ ಜಾಯತೇ ।
ದಿವಂ ಸ್ಪೃಶತಿ ಭೂಮಿಂ ಚ ಶಬ್ದಃ ಪುಣ್ಯಸ್ಯ ಕರ್ಮಣಃ ।
ಯಾವತ್ಸ ಶಬ್ದೋ ಭವತಿ ತಾವತ್ಪುರುಷ ಉಚ್ಯತೇ ॥ ೭ ॥
ಅಕೀರ್ತಿಃ ಕೀರ್ತ್ಯತೇ ಯಸ್ಯ ಲೋಕೇ ಭೂತಸ್ಯ ಕಸ್ಯಚಿತ್ ।
ಸ ಪತತ್ಯಧಮಾಂಲ್ಲೋಕಾನ್ಯಾವಚ್ಛಬ್ದೋಽಸ್ಯ ಕೀರ್ತಿತಃ ॥ ೮ ॥
ತಸ್ಮಾತ್ಕಲ್ಯಾಣವೃತ್ತಃ ಸ್ಯಾದನ್ಯಥಾ ಪತನಂ ಭುವಿ ।
ವಿಧಾಯ ವೃತ್ತಂ ಪಾಪಿಷ್ಠಂ ಕೀರ್ತಿಮೇವಾಽಭಿವರ್ಧಯೇತ್ ॥ ೯ ॥
ಅತ್ಯಂತಂ ಶ್ಲಾಘಯಾಮ್ಯತ್ರ ಕೀರ್ತಿಂ ಸ್ವರ್ಗಕರಾಂ ಪರಾಂ ।
ದೇವೈರಪಿ ಹಿ ಸಾ ಕೀರ್ತಿಃ ಕಾಂಕ್ಷ್ಯತೇ ಪರಮಾ ಯತಃ ॥ ೧೦ ॥

---

೫. "ಇಲ್ಲಿ ಯಾವ ಕರ್ಮವನ್ನು ಮಾಡುವೆವೊ, ಅದರ ಫಲವನ್ನೇ ಸ್ವರ್ಗ ಲೋಕದಲ್ಲಿ ಅನುಭವಿಸುವೆವು. ಭೂಲೋಕದಲ್ಲಿ ಮಾಡಿದ ಕರ್ಮಫಲಗಳ ಭೋಗ ವೊಂದಲ್ಲದೆ ಬೇರೆ ಅಲ್ಲಿ ಯಾವ ಸ್ವತಂತ್ರ ಕರ್ಮವನ್ನೂ ಮಾಡಲಾಗುವುದಿಲ್ಲ.

೬. ಆದುದರಿಂದ ಸ್ವರ್ಗಭೋಗಗಳಲ್ಲಿ ಕ್ಷೀಣಪುಣ್ಯರಾಗಲು ಅಧಃಪತನ ವಾಗುವುದೆಂಬ ಭಯವು ಇದ್ದೇ ಇರುವುದು. ಪತನದಿಂದ ಬಹಳವಾದ ದುಃಖವೂ ಪರಿತಾಪವೂ ಉಂಟಾಗುವುದು.

೭. ಎಲ್ಲಿಯವರೆಗೆ ಇಲ್ಲಿ ಮನುಷ್ಯನ ಕೀರ್ತಿಯು ವ್ಯಾಪಿಸಿರುವುದೊ, ಆವರೆಗೆ ಮಾತ್ರ ಅವನು ಸ್ವರ್ಗಭಾಜನನಾಗುವನು. ಪುಣ್ಯಕರ್ಮದ ಕೀರ್ತಿಯು ಆಕಾಶವನ್ನೂ, ಭೂಮಿಯನ್ನೂ ಮುಟ್ಟುತ್ತಿರುವುದು. ಆ ಕೀರ್ತಿಯಿರುವವರೆಗೆ ಮಾತ್ರ ಅವನು ಪುರುಷನೆಂದು ಕರೆಯಲ್ಪಡುವನು.

೮-೯. ಯಾವೊಬ್ಬ ಮಾನವನ ಅಪಕೀರ್ತಿಯು ಲೋಕದಲ್ಲಿ ವಿಸ್ತಾರವಾಗಿ ರುವುದೊ, ಅವನ ಅಪಕೀರ್ತಿಯು ಇರುವವರೆಗೂ ಅವನು ಅಧೋಲೋಕ ಗಳಲ್ಲಿ ಬಿದ್ದಿರುವನು. ಆದುದರಿಂದ ಮಾನವನು ಯಾವಾಗಲೂ ಒಳ್ಳೆಯ ನಡತೆಯುಳ್ಳವನಾಗಿರಬೇಕು. ಇಲ್ಲದಿದ್ದರೆ ಅಧಃಪತನವು ನಿಶ್ಚಯವು. ಪಾಪಕೃತ್ಯ ಗಳಿಂದಾದರೂ ಕೀರ್ತಿಯನ್ನು ಗಳಿಸಬೇಕೆಂದಮೇಲೆ ಪುಣ್ಯಸಂಪಾದನೆಯ ವಿಷಯವನ್ನು ಹೇಳಲೇಕೆ?

೧೦. ಸ್ವರ್ಗಪ್ರಾಪ್ತಿಗೆ ಕಾರಣವಾದ ಉತ್ತಮ ಕೀರ್ತಿಯನ್ನೇ ಸಂಪಾದಿಸ ಬೇಕೆಂದು ಬಹುವಾಗಿ ಹೊಗಳುತ್ತಿರುವೆನು. ಏಕೆಂದರೆ ದೇವತೆಗಳಿಗೂ ಅಂತಹ ಕೀರ್ತಿಯು ಬಹಳ ಅಪೇಕ್ಷಣೀಯವಾಗಿರುವುದು.

ಯಾವತ್ಕೀರ್ತಿರ್ಮನುಷ್ಯಾಣಾಂ ವರ್ತತೇ ಭುವಿ ಚಾಽಕ್ಷಯಾ ।
ತೇಜಃಪುಂಜೇನ ಯುಕ್ತಾನಿ ಶರೀರಾಣಿ ಭವಂತಿ ಹಿ ॥ ೧೧ ॥
ನ ಸ್ವೇದೋ ನ ಚ ದೌರ್ಗಂಧ್ಯಂ ಪುರೀಷಂ ಮೂತ್ರಮೇವ ವಾ ।
ತೇಷಾಂ ನಿರ್ವಚನಂ ರಾಜಾ ವಿಧಾತಾ ಚ ತ್ರಿವಿಷ್ಟಪೇ ।
ಉಹ್ಯಂತೇ ತೇ ವಿಮಾನೈಶ್ಚ ನಾನಾಽಽಭರಣಭೂಷಿತಾಃ ॥ ೧೨ ॥
ಏವಂ ವಿಮೃಶ್ಯ ನೃಪತಿರಿಂದ್ರದ್ಯುಮ್ನೋ ವರಾಸನೇ ।
ಸ್ವರ್ಗಕಾಮೋ ಜಗಾಮಾಽಥ ಹಿಮವಂತಂ ನಗೋತ್ತಮಂ ॥ ೧೩ ॥
ಯತ್ರ ತೇಪೇ ತಪಸ್ತೀವ್ರಂ ಮಾರ್ಕಂಡೇಯೋ ಮಹಾಮುನಿಃ ।
ದೃಷ್ಟ್ವಾ ಪ್ರಣಮ್ಯ ಶಿರಸಾ ಸಾಷ್ಟಾಂಗಂ ಚ ಪುನಃ ಪುನಃ ।
ಪಪ್ರಚ್ಛ ವಿನಯೋಪೇತಸ್ತಮೃಷಿಂ ಶಂಸಿತವ್ರತಂ ॥ ೧೪ ॥
ವಿದಿತಾಸ್ತವ ಧರ್ಮಜ್ಞ ದೇವದಾನವರಾಕ್ಷಸಾಃ ।
ರಾಜವಂಶಾಶ್ಚ ವಿವಿಧಾ ಋಷಿವಂಶಾಶ್ಚ ಶಾಶ್ವತಾಃ ॥ ೧೫ ॥

---

೧೧. ಎಲ್ಲಿಯವರೆಗೆ ಮನುಷ್ಯನ ಅನಂತ ಕೀರ್ತಿಯು ಭೂಲೋಕದಲ್ಲಿ ಹರಡಿರುವುದೊ, ಅಲ್ಲಿಯವರೆಗೂ ಅವರಿಗೆ ಸ್ವರ್ಗಾದಿ ಭೋಗಸ್ಥಾನಗಳಲ್ಲಿ ತೇಜಃಪುಂಜಗಳಾದ ದೇಹಗಳಿರುವುವು.

೧೨. ಆ ದೇಹಗಳಲ್ಲಿ ಬೆವರಾಗಲಿ, ದುರ್ವಾಸನೆಯಾಗಲಿ, ಮಲಮೂತ್ರಗಳಾಗಲಿ ಇರುವುದಿಲ್ಲ. ಇವುಗಳಿಗೆ ಉದಾಹರಣೆಯೆಂದರೆ ಸ್ವರ್ಗಲೋಕದಲ್ಲಿರುವ ಲೋಕೇಶ್ವರನಾದ ಚತುರ್ಮುಖನೇ ಆಗಿರುವನು. ಆ ಲೋಕಗಳಲ್ಲಿ ಕೀರ್ತಿವಂತರು ನಾನಾ ಭೂಷಣಗಳಿಂದಲಂಕೃತರಾಗಿ ದಿವ್ಯವಿಮಾನಗಳಲ್ಲಿ ಕುಳಿತು ಸಂಚರಿಸುತ್ತಿರುವರು.''

೧೩. ಎಲೌ ಪಾರ್ವತಿಯೆ! ಇಂತು ಇಂದ್ರದ್ಯುಮ್ನ ರಾಜನು ತನ್ನಲ್ಲಿಯೇ ವಿಮರ್ಶಿಸಿಕೊಂಡು ಸ್ವರ್ಗದಲ್ಲಿಅಭಿಲಾಷೆಯುಳ್ಳವನಾಗಿ ಪರ್ವತೋತ್ತಮವೆನಿಸಿದ ಹಿಮಾಲಯಕ್ಕೆ ಹೊರಟನು.

೧೪. ಅಲ್ಲಿ ಮಹಾಮುನಿಯಾದ ಮಾರ್ಕಂಡೇಯನು ಉಗ್ರತಪಸ್ಸನ್ನು ಮಾಡುತ್ತಿದ್ದನು. ಆತನನ್ನು ಕಂಡು ಮತ್ತೆ ಮತ್ತೆ ಸಾಷ್ಟಾಂಗ ಪ್ರಣಾಮವನ್ನುಮಾಡಿ ಮಹಾವ್ರತನಿಯಮದಿಂದಿದ್ದ ಆ ಋಷಿವರ್ಯನನ್ನು ಅತ್ಯಂತ ವಿನಯದಿಂದ ಪ್ರಶ್ನೆಮಾಡಿದನು.

೧೫. ''ಧರ್ಮಗಳನ್ನರಿತ ಓ ಮಹರ್ಷಿಯೆ! ನಿನಗೆ ದೇವತೆಗಳೂ, ದಾನವರೂ, ರಾಕ್ಷಸರೂ, ಬಹುವಿಧಗಳಾದ ರಾಜವಂಶಗಳೂ ಶಾಶ್ವತವಾಗಿ ನಡೆದು ಬರುತ್ತಿರುವ ಋಷಿವಂಶಗಳೂ ತಿಳಿದಿರುವುವಷ್ಟೆ.

ನತೇಽಸ್ತ್ಯವಿದಿತಂ ಕಿಂಚಿದಸ್ಮಿಂಲ್ಲೋಕೇ ದ್ವಿಜೋತ್ತಮ ।
ಏತದಿಚ್ಛಾಮ್ಯಹಂ ಶ್ರೋತುಂ ತತ್ತ್ವೇನ ಕಥ್ಯತಾಂ ತ್ವಯಾ ।
ಕಥಂ ಕೀರ್ತಿರ್ಧ್ರುವಾ ಲೋಕೇ ಜಾಯತೇ ಕಿಂ ತಪಃ ಫಲಾತ್ ॥ ೧೬ ॥

ಮಾರ್ಕಂಡೇಯ ಉವಾಚ:—

ಹಂತ ತೇ ಕಥಯಿಷ್ಯಾಮಿ ಯಂತಃ ಕೀರ್ತಿಂ ಸಮೀಹಸೇ ।
ಯಾವತ್ಕೀರ್ತಿರ್ಭೂಮಿಸಂಸ್ಥಾ ತಾವದ್ವಸ ಸುರೈಃ ಸಹ ।
ತದ್ಗಚ್ಛ ಶೀಘ್ರಂ ಧರ್ಮಜ್ಞ ಮಹಾಕಾಲವನೋತ್ತಮಂ ॥ ೧೭ ॥
ಕಲ್ಕಲೇಶ್ವರದೇವಸ್ಯ ಸಮೀಪೇ ವಾಮಭಾಗತಃ ।
ಲಿಂಗಂ ಪಾಪಹರಂ ತತ್ರ ಸಮಾರಾಧಯ ಯತ್ನತಃ ॥ ೧೮ ॥
ತಸ್ಯಾಽಭ್ಯರ್ಚನಮಾತ್ರೇಣ ಲಪ್ಸ್ಯಸೇ ಕೀರ್ತಿಮುತ್ತಮಾಂ ।
ಸ್ವರ್ಗಂ ಸನಾತನಂ ಚೈವ ಯತ್ಸುರೈರಪಿ ದುರ್ಲಭಂ ॥ ೧೯ ॥
ಗತ್ವಾ ಸ ಪೂಜಯಾಮಾಸ ತಲ್ಲಿಂಗಂ ಕೀರ್ತಿತಂ ತ್ವಿದಂ ।
ತತೋ ದೇವಾಃ ಸ ಗಂಧರ್ವಾಃ ಪ್ರಶಸ್ಯ ಚ ಮುದಾನ್ವಿತಾಃ ॥ ೨೦ ॥

---

೧೬. ಅಯ್ಯಾ ಬ್ರಾಹ್ಮಣೋತ್ತಮನೆ! ಈ ಲೋಕದಲ್ಲಿ ನಿನಗೆ ತಿಳಿಯದ ವಸ್ತುವು ಯಾವುದೂ ಇಲ್ಲ. ಒಂದು ವಿಷಯವನ್ನು ನೀನು ನನಗೆ ತಿಳಿಸಬೇಕೆಂದು ಇಚ್ಛಿಸುತ್ತಿರುವೆನು. ನಿಜವಾಗಿ ಹೇಳು, ಮನುಷ್ಯನ ಕೀರ್ತಿಯು ಭೂಲೋಕದಲ್ಲಿ ಹೇಗೆ ಅಥವಾ ಯಾವ ತಪಸ್ಸಿನ ಫಲವಾಗಿ ಶಾಶ್ವತವಾಗಿ ನಿಲ್ಲುವುದು ?''

೧೭. ಮಾರ್ಕಂಡೇಯನು ಹೇಳುತ್ತಾನೆ:—'' ಒಳ್ಳೆಯದು. ನೀನು ಕೀರ್ತಿಯನ್ನು ಹೇಗೆ ಗಳಿಸಬಹುದೆಂಬುದನ್ನು ಹೇಳುವೆನು. ನಿನ್ನ ಕೀರ್ತಿಯು ಎಲ್ಲಿಯವರೆಗೆ ಭೂಮಿಯಲ್ಲಿರುವುದೊ, ಅಲ್ಲಿಯವರೆಗೂ ನೀನು ಸ್ವರ್ಗಲೋಕದಲ್ಲಿ ವಾಸಿಸುತ್ತಿರು. ಮಹಾರಾಜ! ಈಗ ಬೇಗನೆ ಉತ್ತಮವಾದ ಮಹಾಕಾಲವನವೆಂಬ ತೀರ್ಥವನ್ನು ಹೋಗಿ ಸೇರು.

೧೮. ಮಹಾದೇವನಾದ ಕಲ್ಕಲೇಶ್ವರನ ಸಮೀಪದಲ್ಲಿಯೇ ಎಡಗಡೆಯಲ್ಲಿ ಸಕಲ ಪಾತಕನಾಶಕವಾದ ಒಂದು ಲಿಂಗವಿರುವುದು. ಅದನ್ನು ಪ್ರಯತ್ನಪೂರ್ವಕವಾಗಿ ಆರಾಧಿಸು.

೧೯. ಅದನ್ನು ಪೂಜಿಸುವ ಮಾತ್ರದಿಂದಲೇ ನೀನು ಉತ್ತಮವಾದ ಸತ್ಕೀರ್ತಿಯನ್ನೂ, ದೇವತೆಗಳಿಗೂ ದುರ್ಲಭವಾದ ಅನಂತವಾದ ಸ್ವರ್ಗಲೋಕದ ವಾಸವನ್ನೂ ಪಡೆಯುವೆ.''

೨೦. ಇಂತು ಮಾರ್ಕಂಡೇಯನು ಪ್ರಶಂಸಿಸಿದ ಆ ಲಿಂಗದ ಬಳಿಗೆ ಹೋಗಿ ಇಂದ್ರದ್ಯುಮ್ನನು ಅದಕ್ಕೆ ಪೂಜೆಯನ್ನು ಮಾಡಿದನು. ಆಗ ದೇವತೆಗಳೂ ಗಂಧರ್ವರೂ ಸಂತೋಷಗೊಂಡವರಾಗಿ ಅವನ ಕಾರ್ಯವನ್ನು ಹೊಗಳಿದರು.

ಅಂತರಿಕ್ಷೇ ವಿಮಾನಸ್ಥಾಃ ಪ್ರೋಚುರ್ವಾಚಂ ನರಾಧಿಪಂ ।
ತ್ವತ್ಕೀರ್ತಿರ್ನಿರ್ಮಲಾ ಜಾತಾ ಲಿಂಗಸ್ಯಾಸ್ಯ ಸಮರ್ಚನಾತ್ ॥ ೨೧ ॥
ಅದ್ಯ ಪ್ರಭೃತಿ ರಾಜೇಂದ್ರ ಲಿಂಗಂ ತ್ವನ್ನಾಮನಾಮತಃ ।
ಖ್ಯಾತಿಂ ಯಾಸ್ಯತಿ ಲೋಕೇಽಸ್ಮಿನ್ನಿಂದ್ರದ್ಯುಮ್ನೇತಿ ನಿಶ್ಚಿತಂ ॥ ೨೨ ॥
ಇಂದ್ರದ್ಯುಮ್ನೇಶ್ವರಂ ದೇವಂ ಪೂಜಯಿಷ್ಯಂತಿ ಯೇ ನರಾಃ ।
ಸರ್ವಪಾಪವಿನಿರ್ಮುಕ್ತಾ ವಿಮಾನೈಃ ಸರ್ವಕಾಮಿಕೈಃ ॥ ೨೩ ॥
ಸ್ವರ್ಗಂ ಯಾಸ್ಯಂತಿ ತೇ ಹೃಷ್ಟಾಃ ಸ್ತೂಯಮಾನಾಃ ಸುರರ್ಷಿಭಿಃ ।
ಕಿಂಚಿಚ್ಚ ದುರ್ಲಭಂ ಲೋಕೇ ತೇಷಾಂ ನೈವ ಭವಿಷ್ಯತಿ ॥ ೨೪ ॥
ದರ್ಶನಂ ಯೇ ಕರಿಷ್ಯಂತಿ ಲೋಭಾದ್ವಾಽಪಿ ಪ್ರಸಂಗತಃ ।
ತೇಷಾಂ ಕೀರ್ತಿರ್ಯಶಃ ಪುಣ್ಯಂ ಧರ್ಮಶ್ಚೈವಂ ಭವಿಷ್ಯತಿ ।
ನ ಸ್ವರ್ಗಾತ್ಪತನಂ ತೇಷಾಂ ಯಾವದಿಂದ್ರಾಶ್ಚತುರ್ದಶ ॥ ೨೫ ॥
ಯೇ ಚ ಪೂಜಾಂ ಕರಿಷ್ಯಂತಿ ಚತುರ್ದಶ್ಯಾಂ ವಿಶೇಷತಃ ।
ತೇ ಕುಲಂ ತಾರಯಿಷ್ಯಂತಿ ಮಾತೃಕಂ ಪೈತೃಕಂ ಸದಾ ॥ ೨೬ ॥

---

೨೧. ಮತ್ತು ಅಂತರಿಕ್ಷದಲ್ಲಿ ದಿವ್ಯವಿಮಾನದಲ್ಲಿ ಕುಳಿತು ಆ ಮಹಾರಾಜ ನಿಗಿಂತೆಂದರು: "ಈ ಮಹಾಲಿಂಗಕ್ಕೆ ಅರ್ಚನೆಯನ್ನು ಮಾಡಿದುದರಿಂದ ನಿನ್ನ ಕೀರ್ತಿಯು ನಿರ್ಮಲವಾಯಿತು.

೨೨. ರಾಜೇಂದ್ರ! ಇಂದಿನಿಂದ ಈ ಲಿಂಗವು ನಿನ್ನ ಹೆಸರನ್ನೊಳಗೊಂಡು ಇಂದ್ರದ್ಯುಮ್ನೇಶ್ವರವೆಂಬ ಅಭಿಧಾನದಿಂದಲೇ ಪ್ರಖ್ಯಾತಿಯನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

೨೩. ಯಾವ ಮಾನವರು ಈ ಇಂದ್ರದ್ಯುಮ್ನೇಶ್ವರಲಿಂಗವನ್ನು ಪೂಜಿಸುವರೊ, ಅವರು ಸಕಲ ಪಾತಕಗಳಿಂದಲೂ ಪರಿಶುದ್ಧರಾಗಿ ಸರ್ವಾಭೀಷ್ಟದಾಯಕಗಳಾದ ವಿಮಾನಗಳನ್ನೇರಿ ಆನಂದದಿಂದ ಸ್ವರ್ಗಲೋಕವನ್ನು ಸೇರುವರು. ದೇವರ್ಷಿಗಳೂ ಸಹ ಅವರನ್ನು ಸ್ತುತಿಸುವರು.

೨೪–೨೫. ಅವರಿಗೆ ಲೋಕದಲ್ಲಿ ದುರ್ಲಭವೆಂಬುದು ಅತ್ಯಲ್ಪವಾದುದೂ ಇರುವುದಿಲ್ಲ. ಯಾವ ಜನರು ಲೋಭದಿಂದಾಗಲಿ, ಪ್ರಾಸಂಗಿಕವಾಗಿಯಾಗಲಿ ಇದರ ದರ್ಶನವನ್ನು ಮಾಡುವರೊ, ಅವರಿಗೆ ಕೀರ್ತಿಯೂ, ಯಶಸ್ಸೂ, ಪುಣ್ಯವೂ, ಧರ್ಮಸಂಚಯವೂ ಆಗುತ್ತವೆ. ಹದಿನಾಲ್ಕು ಇಂದ್ರರು ರಾಜ್ಯವಾಳುವವರೆಗೂ ಅವರಿಗೆ ಸ್ವರ್ಗಲೋಕದಿಂದ ಚ್ಯುತಿಯುಂಟಾಗುವುದಿಲ್ಲ.

೨೬. ಚತುರ್ದಶಿಯ ದಿನ ಈ ಮಹಾಲಿಂಗಕ್ಕೆ ವಿಶೇಷಪೂಜೆಯನ್ನು ಯಾರು ಮಾಡುವರೊ, ಅವರು ತಮ್ಮ ತಾಯಿಯ ಮತ್ತು ತಂದೆಯ ಕುಲಗಡೆರಡನ್ನೂ ಸಕಲಕಾಲಕ್ಕೂ ಉದ್ಧರಿಸುವರು.

ಇತ್ಯುಕ್ತ್ವಾ ತ್ರಿದಶಾಃ ಸರ್ವೇ ಲಿಂಗಂ ಸಂಪೂಜ್ಯ ಯತ್ನತಃ ।
ಇಂದ್ರದ್ಯುಮ್ನೇನ ಸಹಿತಾಃ ಪುನಃ ಸ್ವರ್ಗಂಗತಾಃ ಪ್ರಿಯೇ ॥ ೨೭ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಇಂದ್ರದ್ಯುಮ್ನೇಶದೇವಸ್ಯ ಶ್ರೂಯತಾಮಪರಃ ಪ್ರಿಯೇ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
" ಇಂದ್ರದ್ಯುಮ್ನೇಶ್ವರಮಾಹಾತ್ಮ್ಯವರ್ಣನಂ "
ನಾಮ ಪಂಚದಶೋಽಧ್ಯಾಯಃ

---

೨೭. ಪ್ರಿಯಳೆ! ಇಂತೆಂದು ವರವನ್ನಿತ್ತು ಸಕಲ ದೇವತೆಗಳೂ ಆ ಲಿಂಗಕ್ಕೆ ಪ್ರಯತ್ನದಿಂದ ಪೂಜೆಯನ್ನು ಮಾಡಿ ಇಂದ್ರದ್ಯುಮ್ನ ಮಹಾರಾಜನೊಡನೆ ಮತ್ತೆ ಸ್ವರ್ಗಕ್ಕೆ ಹೊರಟುಹೋದರು.

೨೮. ದೇವಿಯೆ! ಇಂತು ಇಂದ್ರದ್ಯುಮ್ನೇಶ್ವರನೆಂಬ ದೇವದೇವನ ಆ ಪವಿತ್ರಲಿಂಗದ ಪಾಪನಾಶಕವಾದ ಪ್ರಭಾವವನ್ನು ನಿನಗೆ ಹೇಳಿರುವೆನು. ಇನ್ನು ಬೇರೊಂದು ಲಿಂಗದ ಮಾಹಾತ್ಮ್ಯವನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಹಾತ್ಮ್ಯದಲ್ಲಿ " ಇಂದ್ರದ್ಯುಮ್ನೇಶ್ವರಮಾಹಾತ್ಮ್ಯವರ್ಣನ "ವೆಂಬ
ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷೋಡಶೋಽಧ್ಯಾಯಃ

## ಈಶಾನೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ:—

ಈಶಾನೇಶ್ವರಸಂಜ್ಞಂ ತು ಷೋಡಶಂ ವಿದ್ಧಿ ಪಾರ್ವತಿ ।
ಯಸ್ಯ ದರ್ಶನಮಾತ್ರೇಣ ಐಶ್ವರ್ಯಂ ಜಾಯತೇ ನೃಣಾಂ ॥ ೧ ॥
ತುಹುಂಡೇನ ಪುರಾ ದೇವಿ ಸರ್ವೇಽಪ್ಯುಪದ್ರುತಾಃ ಸುರಾಃ ।
ಋಷಯಶ್ಚ ಮಹಾಭಾಗಾ ಯಕ್ಷಗಂಧರ್ವಕಿನ್ನರಾಃ ॥ ೨ ॥
ನಂದನಾಖ್ಯಂ ವನಂ ಸರ್ವಂ ತದಧೀನಮಭೂತ್ಕಿಲ ।
ಐರಾವಣಂ ದ್ವಿಪೇಂದ್ರಂ ಚ ಜಿತ್ವಾ ದ್ವಾರಿ ಸಮಾದಧತ್ ॥ ೩ ॥
ಉಚ್ಚೈಃಶ್ರವಸಸಂಜ್ಞಂ ತು ಹೃತವಾನ್ದಾನವೇಶ್ವರಃ ।
ದೇವಾಂಗನಾನಾಂ ಸರ್ವಾಸಾಂ ವಿಧ್ವಂಸಂ ಕರ್ತುಮುದ್ಯತಃ ॥ ೪ ॥
ಸ್ವರ್ಗಮಾರ್ಗಃ ಖಿಲೀಭೂತಸ್ತದ್ಭಯೇನ ಹ್ಯಭೂತ್ಸತಿ ।
ಹೃತಾಧಿಕಾರಾ ದೇವಾಶ್ಚ ಮಂತ್ರಂ ಸಮುಪಚಕ್ರಮುಃ ॥ ೫ ॥

---

## ಕನ್ನಡದ ಅನುವಾದ

### ಈಶಾನೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪರ್ವತರಾಜಪುತ್ರಿಯೆ! ಈಶಾನೇಶ್ವರ ಲಿಂಗವೇ ಹದಿನಾರನೆಯದೆಂದು ತಿಳಿ. ಅದನ್ನು ನೋಡುವ ಮಾತ್ರದಿಂದಲೇ ಮನುಜರಿಗೆ ಸಂಪತ್ತು ಲಭಿಸುವುದು.

೨. ದೇವಿಯೆ! ಹಿಂದೊಮ್ಮೆ ತುಹುಂಡನೆಂಬ ರಾಕ್ಷಸೋತ್ತಮನಿಂದ ದೇವತೆಗಳೂ, ಮಹಾತ್ಮರಾದ ಋಷಿವರ್ಯರೂ, ಯಕ್ಷರೂ, ಗಂಧರ್ವರೂ, ಕಿನ್ನರರೂ ಬಹಳವಾಗಿ ಉಪದ್ರವಗೊಂಡರು.

೩. ನಂದನವೆಂಬ ದೇವಲೋಕದ ವನವು ಆದ್ಯಂತಸಹಿತವಾಗಿ ಅವನ ಅಧೀನವಾಯಿತು. ಐರಾವತವೆಂಬ ಇಂದ್ರನ ಆನೆಯನ್ನು ಅವನು ಗೆದ್ದು ತನ್ನ ಬಾಗಿಲಲ್ಲಿ ಕಟ್ಟಿದ್ದನು.

೪. ಆ ರಾಕ್ಷಸೇಶ್ವರನು ಉಚ್ಚೈಶ್ರವಸ್ಸೆಂಬ ಉತ್ತಮಾಶ್ವವನ್ನೂ ಅಪಹರಿಸಿದನು. ದೇವತಾಸ್ತ್ರೀಯರೆಲ್ಲರನ್ನೂ ಕೆಡಿಸುವ ಪ್ರಯತ್ನವನ್ನೂ ಮಾಡಿದನು.

೫. ಪ್ರಿಯೆ! ಆ ದೈತ್ಯನ ಭಯದಿಂದ ಸ್ವರ್ಗಲೋಕದ ಮಾರ್ಗವೇ ಉಪಯೋಗಕ್ಕೆ ಬಾರದೆ ಹಾಳುಬಿದ್ದಿತು. ಆಗ ದೇವತೆಗಳೆಲ್ಲರೂ ತಮ್ಮ ತಮ್ಮ ಅಧಿಕಾರಗಳನ್ನು ಕಳೆದುಕೊಂಡು ಮಂತ್ರಾಲೋಚನೆಯನ್ನು ಮಾಡಿದರು.

ತಸ್ಮಿನ್ಕಾಲೇ ಚ ಕಾಲಜ್ಞೋ ನಾರದೋಽಥ ಮಹಾಮುನಿಃ ।
ಆಜಗಾಮ ಮಹಾತೇಜಾ ಭ್ರಮಮಾಣಶ್ಚ ಮಂತ್ರಿಭಿಃ ॥ ೬ ॥
ದೇವೈರ್ನಮಸ್ಕೃತಃ ಸೋಽಥ ಪೂಜಿತಶ್ಚ ಯಥಾವಿಧಿ ।
ನಿವೇದಿತಂ ಯಥಾವೃತ್ತಂ ತುಹುಂಡಸ್ಯ ವಿಚೇಷ್ಟಿತಂ ॥ ೭ ॥
ಪಪ್ರಚ್ಛುರಥ ತೇ ಮಂತ್ರಂ ನಾರದಂ ಮುನಿಸತ್ತಮಂ ।
ಕಥಯಸ್ವ ಮಹಾಬುದ್ಧೇ ಸರ್ವಂ ಜಾನಾಸಿ ಸರ್ವತಃ ॥ ೮ ॥
ಈದೃಕ್ಕಾಲೇ ಸಮಾಯಾತೇ ಕಿಂ ಕರ್ತವ್ಯಂ ಮಹಾಮುನೇ ।
ನಾಽಜ್ಞಾತಂ ತ್ರಿಷು ಲೋಕೇಷು ಕಿಂಚಿದ್ದೇವರ್ಷಿಸತ್ತಮ ॥ ೯ ॥
ಮುಹೂರ್ತಂ ಧ್ಯಾನಮಾಲಂಬ್ಯ ಕಿಂಚಿನ್ಮೀಲ್ಯ ಚ ಲೋಚನೇ ।
ಉಪಾಯಂ ಕಥಯಾಮಾಸ ಸರ್ವದುಃಖವಿನಾಶನಂ ॥ ೧೦ ॥
ಮಹಾಕಾಲವನೇ ರಮ್ಯೇ ಶೀಘ್ರಂ ಗಚ್ಛಂತು ವಿಹ್ವಲಾಃ ।
ಇಂದ್ರದ್ಯುಮ್ನೇಶ್ವರಸ್ಯೈವ ಪಶ್ಚಾದ್ಭಾಗೇ ವ್ಯವಸ್ಥಿತಾಃ ।
ಸೇವಧ್ವಂ ಪರಮಂ ಲಿಂಗಮೀಶಾನೇಶ್ವರಸಂಜ್ಞಕಂ ॥ ೧೧ ॥

---

೬. ಇವರ ಮಂತ್ರಾಲೋಚನೆಯ ಸಮಯಕ್ಕೆ ಸರಿಯಾಗಿ ತ್ರಿಕಾಲ ದರ್ಶಿಯೂ, ಮಹಾತೇಜಸ್ಸಂಪನ್ನನೂ ಆದ ನಾರದಮಹಾಮುನಿಯು ಮೂರು ಲೋಕಗಳನ್ನೂ ಸುತ್ತುತ್ತ ಯಾದೃಚ್ಛಿಕವಾಗಿ ಅಲ್ಲಿಗೆ ಬಂದನು.

೭. ದೇವತೆಗಳು ಆತನನ್ನು ನಮಸ್ಕರಿಸಿ ವಿಧ್ಯುಕ್ತರೀತಿಯಿಂದ ಅತಿಥಿ ಪೂಜೆಯನ್ನು ಮಾಡಿ, ತುಹುಂಡನು ತಮಗೆ ಕೊಡುತ್ತಿರುವ ಕೋಟಲೆಗಳನ್ನು ಆತನಲ್ಲಿ ವಿಜ್ಞಾಪಿಸಿಕೊಂಡರು.

೮. ಮತ್ತು ಮುನಿಶ್ರೇಷ್ಠನಾದ ಆ ನಾರದನಲ್ಲಿಯೇ ಮಂತ್ರಾಲೋಚನೆಯನ್ನು ಮಾಡುವವರಾಗಿ ಹೀಗೆ ಬೆಸಗೊಂಡರು: "ಮಹಾಪ್ರಾಜ್ಞನೆ! ನೀನು ಸಕಲ ಲೋಕಗಳಲ್ಲಿ ನಡೆಯುವ ಸರ್ವವ್ಯಾಪಾರಗಳನ್ನೂ ತಿಳಿದಿರುವೆ.

೯. ಮಹಾಮುನಿಯೆ! ಇಂತಹ ಸಂಕಟಕಾಲಪ್ರಾಪ್ತವಾಗಲು ನಾವು ಏನನ್ನು ಮಾಡಬೇಕು? ದೇವರ್ಷಿಗಳಲ್ಲಿ ಅಗ್ರಗಣ್ಯನಾದ ನಿನಗೆ ತಿಳಿಯದಿರುವ ಅಂಶವು ಮೂರು ಲೋಕಗಳಲ್ಲಿ ಯಾವುದೂ ಇಲ್ಲವಷ್ಟೆ."

೧೦. ಇದನ್ನು ಕೇಳಿ ನಾರದಮುನಿಯು ಒಂದು ಮುಹೂರ್ತಕಾಲ ಕಣ್ಣುಗಳನ್ನು ಮುಚ್ಚಿಕೊಂಡು ಧ್ಯಾನನಿಷ್ಠನಾಗಿದ್ದು ಆ ಬಳಿಕ ದೇವತೆಗಳ ಸಮಸ್ತ ದುಃಖಗಳ ವಿನಾಶಕ್ಕಾಗಿ ಒಂದುಪಾಯವನ್ನು ಹೇಳಿದನು.

೧೧. "ಆರ್ತರಾದ ನೀವೆಲ್ಲರೂ ಶೀಘ್ರವಾಗಿ ರಮ್ಯವಾದ ಮಹಾಕಾಲ ವನಕ್ಕೆ ಹೋಗಿರಿ. ಅಲ್ಲಿ ಇಂದ್ರದ್ಯುಮ್ನೇಶ್ವರನ ಹಿಂಭಾಗದಲ್ಲಿರುವ ದಿವ್ಯಲಿಂಗದ ಬಳಿಯಲ್ಲಿ ನಿಲ್ಲಿರಿ.

ಪುರಾ ಚೇಶಾನಕಲ್ಪೇ ತು ಈಶಾನೇನ ಸುಖೇನ ಹಿ ।
ಮುನಿನಾ ಶ್ರೋತ್ರಿಯೇಣೈವ ವೇದಾಽಭ್ಯಾಸರತೇನ ವೈ ।
ಉತ್ತಮಾಂಗಪದಂ ಲಬ್ಧಂ ಶಂಕರಸ್ಯ ಚ ಮೂರ್ಧನಿ ॥ ೧೨ ॥
ತಸ್ಯಾರಾಧನಮಾತ್ರೇಣ ಮನೋಽಭೀಷ್ಟಂ ಹಿ ಲಭ್ಯತೇ ॥ ೧೩ ॥
ನಾರದಸ್ಯ ವಚಃ ಶ್ರುತ್ವಾ ದೇವಾ ಮುದಿತಮಾನಸಾಃ ।
ಜಗ್ಮುರ್ಯತ್ರ ಮಹಲ್ಲಿಂಗಂ ಸ್ತುತಿಂ ಸರ್ವೇಽಪ್ಯಕುರ್ವತ ॥ ೧೪ ॥
ಈಶಾನೇಶಾನ ಈಶಾನ ತತ್ಪುರುಷ ನಮೋಽಸ್ತು ತೇ ।
ನಮೋ ವಾಮ ಮಹಾಘೋರ ಸದ್ಯೋಮುಖ ನಮೋನಮಃ ॥ ೧೫ ॥
ತ್ರ್ಯಕ್ಷ ಭರ್ಗ ಮಹಾದೇವ ಉಮಾಕಾಂತ ನಮೋನಮಃ ।
ನಮಃ ಶಿವ ನಮೋ ಭೀಮ ನಮಃ ಸರ್ವ ನಮೋನಮಃ ॥ ೧೬ ॥
ನಮಃ ಶಂಭೋ ನಮೋ ರುದ್ರ ವಿರೂಪಾಕ್ಷ ನಮೋನಮಃ ।
ತ್ವಯಾ ದೇವ ಪ್ರಜಾಃ ಸರ್ವಾಃ ಸದೇವಾಽಸುರಮಾನುಷಾಃ ॥ ೧೭ ॥

---

೧೨. ಹಿಂದೆ ಈಶಾನಕಲ್ಪದಲ್ಲಿ ಶ್ರೋತ್ರಿಯನೂ, ವೇದಾಧ್ಯಯನನಿರತನೂ ಆದ ಮುನಿವರ್ಯನೊಬ್ಬನಿಗೆ ಮಹಾದೇವನು ಈ ಲಿಂಗದ ಪೂಜೆಯ ಫಲವಾಗಿ ಸುಲಭದಿಂದಲೇ ಪ್ರಸನ್ನನಾದನು. ಆ ಮುನಿಯು ಮಹೇಶ್ವರನ ಮೌಳಿಯಲ್ಲಿಯೇ ಸರ್ವೋತ್ತಮವಾದ ಸ್ಥಾನವನ್ನು ಪಡೆದನು.

೧೩. ಆ ಮಹಾಲಿಂಗದ ಆರಾಧನೆಯು ಮಾತ್ರದಿಂದಲೇ ನಿಮ್ಮ ಮನೋಭೀಷ್ಟವು ಸಿದ್ಧಿಸುವುದು.''

೧೪. ನಾರದಮಹರ್ಷಿಯ ಈ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ಸಂತುಷ್ಟಾಂತರಂಗರಾಗಿ ಆ ಮಹಾಲಿಂಗವಿದ್ದಲ್ಲಿಗೆ ಹೋಗಿ ಎಲ್ಲರೂ ಅದನ್ನು ಸ್ತೋತ್ರಮಾಡಿದರು.

೧೫. "ಲೋಕೇಶ್ವರರಿಗೂ ಪಾಲಕನಾದ ಓ ಮಹೇಶ್ವರನೆ! ಪರಮ ಪುರುಷನೆ! ನಿನಗೆ ನಮಸ್ಕಾರವು. ವಾಮದೇವನೂ, ಮಹಾಭಯಂಕರನೂ, ಸದ್ಯೋಜಾತಾದಿ ಪಂಚಮುಖಗಳುಳ್ಳವನೂ ಆದ ನಿನ್ನನ್ನು ನಮಸ್ಕರಿಸುವೆವು.

೧೬. ತ್ರಿಲೋಚನನೂ, ತೇಜೋರಾಶಿಯೂ, ದೇವಾಧಿದೇವನೂ, ಪಾರ್ವತೀಕಾಂತನೂ, ಮಂಗಳಪ್ರದನೂ, ಶತ್ರುಗಳಿಗೆ ಭಯವನ್ನುಂಟು ಮಾಡುವವನೂ, ಬ್ರಹ್ಮಾಂಡಕಾರನೂ ಆದ ನಿನಗೆ ನಮಸ್ಕಾರವು.

೧೭. ಶಂಭುವೂ, ರೌದ್ರಾಕಾರನೂ, ವಿರೂಪಾಕ್ಷನೂ ಆದ ನಿನಗೆ ನಮಸ್ಕಾರವಿರಲಿ. ಮಹಾದೇವ! ದೇವತೆಗಳು, ಮನುಷ್ಯರು, ರಾಕ್ಷಸರು ಮುಂತಾಗಿ ಸಕಲ ಪ್ರಜೆಗಳೂ ನಿನ್ನಿಂದಲೇ ಹುಟ್ಟಿ ಬಂದಿರುವರು.

ಸ್ಥಾವರಾಣಿ ಚ ಭೂತಾನಿ ಜಂಗಮಾನಿ ಚರಾಣಿ ಚ ।
ಬ್ರಹ್ಮ ವೇದಾಶ್ಚ ವೇದ್ಯಂ ಚ ತ್ವಯಾ ಸೃಷ್ಟಂ ಮಹೇಶ್ವರ ॥ ೧೮ ॥
ಶಿರಸ್ತೇ ಗಗನಂ ದೇವಾ ನೇತ್ರೇ ಶಶಿದಿವಾಕರೌ ।
ನಿಶ್ವಾಸಃ ಪವನಶ್ಚಾಽಪಿ ತೇಜೋಽಗ್ನಿಶ್ಚ ತವಾಽಚ್ಯುತಃ ॥ ೧೯ ॥
ಬಾಹವಸ್ತೇ ದಿಶಃ ಸರ್ವಾಃ ಕುಕ್ಷಿಶ್ಚೈವ ಮಹಾರ್ಣವಃ ।
ಊರೂ ತೇ ಪರ್ವತಾ ದೇವ ಚರಣೌ ಪೃಥಿವೀ ಮತಾ ॥ ೨೦ ॥
ಇಂದ್ರಸೋಮಾಽಗ್ನಿವರುಣಾ ದೇವಾಽಸುರಮಹೋರಗಾಃ ।
ಪ್ರಹ್ವಾಸ್ತ್ವಾಮನುತಿಷ್ಠಂತಿ ಸ್ತುವಂತೋ ವಿವಿಧೈಃಸ್ತವೈಃ ॥ ೨೧ ॥
ತ್ವಯಾ ವ್ಯಾಪ್ತಾನಿ ಭೂತಾನಿ ಸರ್ವಾಣಿ ಭುವನೇಶ್ವರ ।
ತ್ವಯಿ ತುಷ್ಟೇ ಜಗತ್ತುಷ್ಟಂ ತ್ವಯಿ ಕ್ರುದ್ಧೇ ಮಹದ್ಭಯಂ ॥ ೨೨ ॥
ಭಯಾನಾಮಪನೇತಾಽಸಿ ತ್ವಮೇಕಃ ಶತ್ರುಸೂದನಃ ।
ಅಸುರಾಣಾಂ ಸಮರ್ಥಾನಾಂ ವಿನಾಶಶ್ಚ ತ್ವಯಾ ಕೃತಃ ॥ ೨೩ ॥

---

೧೮. ಅಚಲಗಳಾದ ವೃಕ್ಷಾದಿ ಭೂತಗಳೂ, ಜಂಗಮಗಳಾದ ಪಿಪೀಲಿಕಾದಿ ಜೀವಕೋಟಿಗಳೂ, ಬ್ರಹ್ಮನೂ, ವೇದಗಳೂ, ಜ್ಞೇಯಪ್ರಪಂಚವೂ ಮಹೇಶ್ವರನಾದ ನಿನ್ನಿಂದಲೇ ಸೃಷ್ಟವಾಗಿರುವುದು.

೧೯. ಎಲೈ ದೇವೋತ್ತಮನೆ! ಆಕಾಶವೇ ನಿನ್ನ ತಲೆಯು. ಸೂರ್ಯಚಂದ್ರರೇ ನೇತ್ರಗಳು. ಉಸಿರೇ ವಾಯುದೇವನು. ನಾಶರಹಿತನಾದ ಅಗ್ನಿಯೇ ನಿನ್ನ ತೇಜಸ್ಸಾಗಿರುವುದು.

೨೦. ಸಕಲ ದಿಕ್ಕುಗಳೂ ನಿನ್ನ ಬಾಹುಗಳಾಗಿರುವುವು. ಮಹಾಸಮುದ್ರವೇ ನಿನ್ನ ಉದರವಾಗಿದೆ. ಪರ್ವತಗಳೇ ನಿನ್ನ ತೊಡೆಗಳು. ಪಾದಗಳೇ ಭೂಮಂಡಲವೆಂದು ಬಲ್ಲವರ ಮತವಾಗಿರುವುದು.

೨೧. ಇಂದ್ರ, ಚಂದ್ರ, ಅಗ್ನಿ, ವರುಣರೇ ಮುಂತಾದ ದೇವತೆಗಳೂ, ರಾಕ್ಷಸರೂ, ಮಹಾನಾಗರೂ ವಿನೀತಭಾವದಿಂದ ಅನೇಕ ವಿಧಗಳಾದ ಸ್ತೋತ್ರಗಳಿಂದ ನಿನ್ನನ್ನು ಹೊಗಳಿ ಬಳಿಸಾರಿರುವರು.

೨೨. ಲೋಕೇಶ್ವರನೆ! ಸಕಲ ಪ್ರಾಣಿಗಳೂ ನಿನ್ನಿಂದ ವ್ಯಾಪ್ತಗಳಾಗಿರುವುವು. ನೀನು ಸಂತುಷ್ಟನಾಗಿದ್ದರೆ ಲೋಕವೂ ಸುಖವಾಗಿರುವುದು. ನೀನು ಕೋಪಗೊಂಡರೆ ಲೋಕಕ್ಕೇ ಮಹಾಭಯಪ್ರಾಪ್ತಿಯು.

೨೩. ನೀನೊಬ್ಬನೇ ಭಕ್ತರ ಶತ್ರುಗಳನ್ನು ನಿಗ್ರಹಿಸಿ ಅವರ ಭಯಗಳನ್ನು ಕಳೆಯುವವನಾಗಿರುವೆ. ಮಹಾಸಮರ್ಥರಾದ ರಾಕ್ಷಸರ ಸಂಹಾರವೂ ನಿನ್ನಿಂದ ಅನೇಕವೇಳೆ ನಡೆದಿರುವುದು.

ನ ಚ ವಿಕ್ರಮಣ್ಯೈರ್ದೇವ ನಿರ್ವಾಣಮುಗಮುತ್ತಮಂ ।
ತ್ವಂ ಹಿ ಕರ್ತಾ ವಿಕರ್ತಾ ಚ ಭೂತಾನಾಮಿಹ ಸರ್ವಶಃ ॥ ೨೪ ॥
ಆರಾಧಯಿತ್ವಾ ಸರ್ವೇ ತೇ ನಮಸ್ಯಂತಿ ಚ ಸರ್ವಶಃ ।
ಏತಸ್ಮಿನ್ನಂತರೇ ದೇವಿ ಲಿಂಗಮಧ್ಯಾತ್ಸಮುತ್ಥಿತಾ ॥ ೨೫ ॥
ಧೂಮಾವೃತಾ ಮಹಾಜ್ವಾಲಾ ಯಯಾ ದಗ್ಧಃ ಸ ದಾನವಃ ।
ತುಹುಂಡೋ ಮುಂಡಪುತ್ರಸ್ತು ಸಸೈನ್ಯಪರಿವಾರಿತಃ ॥ ೨೬ ॥
ಸ್ವಾಧಿಕಾರಾಂಶ್ಚ ಸಂಪ್ರಾಪುರ್ಲಿಂಗಸ್ಯಾಽಸ್ಯ ಪ್ರಭಾವತಃ ।
ಸುರೈಶ್ಚಾಖ್ಯಾ ಸಮಾದಿಷ್ಟಾ ಲಿಂಗಸ್ಯಾಽಸ್ಯೈವ ಹರ್ಷಿತೈಃ ॥ ೨೭ ॥
ಐಶ್ವರ್ಯಶೀಲಮಸ್ಯಾಸ್ತೀತ್ಯಸ್ಮಾಕಂ ಚ ವಿನಿಶ್ಚಿತಂ ।
ಈಶಾನ ಇತಿ ವಿಖ್ಯಾತಸ್ತ್ರೈಲೋಕ್ಯೇ ಚ ಭವಿಷ್ಯತಿ ॥ ೨೮ ॥
ಈಶಾನೇಶ್ವರಸಂಜ್ಞಂ ತು ಯೇ ಸಮಾರಾಧಯಂತಿ ಚ ।
ಕೀರ್ತಿರ್ಲಕ್ಷ್ಮೀರ್ಧ್ರುವಾ ತೇಷಾಂ ಸಿದ್ಧಿಃ ಪ್ರೀತಿರ್ಭವಿಷ್ಯತಿ ॥ ೨೯ ॥
ಪೂಜ್ಯಮಾನಃ ಸದಾ ದೇವೈರ್ಗಂಧರ್ವಾಪ್ಸರಸಾಂ ಗಣೈಃ ।
ಸ್ವರ್ಗಲೋಕಂ ಗಮಿಷ್ಯಂತಿ ವಿಮಾನೈರುಜ್ಜ್ವಲೈರ್ಮುದಾ ॥ ೩೦ ॥

---

೨೪. ಮಹೇಶ್ವರನೇ! ಈ ಮಹಾಸುರನು ತನ್ನ ದಿಗ್ವಿಜಯಗಳಿಂದ ಉತ್ತಮಗಳಾದ ಸೌಖ್ಯಗಳನ್ನು ಪಡೆಯದಿರಲಿ. ಭೂತಗಳಿಗೆ ಸರ್ವಪ್ರಕಾರದಿಂದಲೂ ನೀನೇ ಕಾರ್ಯಗಳನ್ನು ಮಾಡಿಸುವವನೂ ಅವನ್ನು ಕೆಡಿಸುವವನೂ ಆಗಿರುವೆ.''

೨೫–೨೬. ಇಂತೆಂದು ಆ ದೇವತೆಗಳೆಲ್ಲರೂ ಆ ಮಹಾಲಿಂಗವನ್ನು ಆರಾಧಿಸಿ ನಮಸ್ಕರಿಸುತ್ತಿರಲು ಆ ಸಮಯದಲ್ಲಿಯೇ ಆ ಲಿಂಗದ ಮಧ್ಯದಿಂದ ಹೊಗೆ ಮುಸುಕಿದ್ದ ಮಹಾಜ್ವಾಲೆಯೊಂದು ಹೊರಟು ಬಂದಿತು. ಅದರಿಂದ ಮುಂಡಾಸುರನ ಪುತ್ರನಾದ ತುಹುಂಡನು ಸಮಸ್ತಸೈನ್ಯಪರಿವಾರ ಸಮೇತನಾಗಿ ಭಸ್ಮೀಭೂತನಾದನು.

೨೭. ದೇವತೆಗಳು ಈ ಮಹಾಲಿಂಗದ ಪ್ರಭಾವದಿಂದ ತಮ್ಮ ಅಧಿಕಾರಗಳನ್ನು ಪುನಃ ಪಡೆದರು. ಮತ್ತು ಸಂತೋಷದಿಂದ ಈ ಚರಿತ್ರೆಯನ್ನು ಎಲ್ಲೆಡೆಗಳಲ್ಲಿಯೂ ಹೇಳತೊಡಗಿದರು.

೨೮. ''ನಮಗೆ ಐಶ್ವರ್ಯವನ್ನು ಕೊಡುವ ಶಕ್ತಿಯು ಈ ಲಿಂಗಕ್ಕಿರುವುದೆಂದು ನಮಗೆ ನಿಶ್ಚಯವಾಗಿರುವುದು. ಆದುದರಿಂದ ಈ ಲಿಂಗವು ಈಶಾನೇಶ್ವರವೆಂದೇ ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆಯುವುದು.

೨೯. ಈ ಈಶಾನೇಶ್ವರಲಿಂಗವನ್ನು ಯಾರು ಪೂಜಿಸುವರೊ, ಅವರಿಗೆ ಸತ್ಕೀರ್ತಿಯೂ, ಐಶ್ವರ್ಯವೂ, ಕಾರ್ಯಸಿದ್ಧಿಯೂ, ಜನರ ಪ್ರೀತಿಯೂ ಖಂಡಿತವಾಗಿ ಲಭಿಸುವುವು.

೩೦. ಅವರು ಸರ್ವಕಾಲದಲ್ಲಿಯೂ ದೇವತೆಗಳು, ಗಂಧರ್ವರು, ಅಪ್ಸರೋ

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಃ ಸ್ತ್ರಿಯಃ ಕುಮಾರಿಕಾಃ ।
ಯಥಾಽಭಿಲಷಿತಾನ್ಕಾಮಾನಾಪ್ನುವಂತಿ ನ ಸಂಶಯಃ ॥ ೩೧ ॥
ಯಃ ಕರೋತಿ ನರಃ ಸಮ್ಯಗ್ದರ್ಶನಂ ನಿಯಮಸ್ಥಿತಃ ।
ನ ಕುತ್ರ ತಸ್ಯ ಹಾನಿಃ ಸ್ಯಾದ್ಯಾವಜ್ಜನ್ಮಶತಂ ಭವೇತ್ ॥ ೩೨ ॥
ಸರ್ವದಾ ಸರ್ವಕಾರ್ಯೇಷು ತೇ ಸಮರ್ಥಾ ಯಶಸ್ವಿನಿ ।
ಈಶಾನೇಶ್ವರಸಂಜ್ಞಂ ತು ಯೇ ಪಶ್ಯಂತಿ ದಿನೇದಿನೇ ॥ ೩೩ ॥
ಏವಂ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಈಶಾನೇಶ್ವರದೇವಸ್ಯ ಶ್ರೂಯತಾಮಪ್ಸರೇಶ್ವರಃ ॥ ೩೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಈಶಾನೇಶ್ವರಮಾಹಾತ್ಮ್ಯವರ್ಣನಂ"
ನಾಮ ಷೋಡಶೋಽಧ್ಯಾಯಃ

---

ಗಣಗಳು ಮುಂತಾದವರಿಂದ ಪೂಜೆಯನ್ನು ಕೈಕೊಳ್ಳುತ್ತ ಸಂತುಷ್ಟರಾಗಿ ಉಜ್ಜ್ವಲಗಳಾದ ವಿಮಾನಗಳನ್ನೇರಿ ಸ್ವರ್ಗಲೋಕಕ್ಕೆ ಹೋಗುವರು.

೩೧. ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ, ಹೆಂಗಸರೂ, ಮಕ್ಕಳೂ, ತಮ್ಮತಮ್ಮ ಮನಸ್ಸುಗಳಲ್ಲಿರುವ ಸಕಲಾಭಿಲಾಷೆಗಳನ್ನೂ ಪಡೆಯುವರು, ಇದರಲ್ಲಿ ಸಂದೇಹವಿಲ್ಲ.

೩೨. ಯಾವ ಮನುಜನು ನಿಯಮದಿಂದ ಕೂಡಿ ಈ ಮಹಾಲಿಂಗದ ದರ್ಶನವನ್ನು ಚೆನ್ನಾಗಿ ಮಾಡುವನೊ, ಅವನಿಗೆ ಮೂರು ಜನ್ಮಗಳಲ್ಲಿಯೂ ಎಲ್ಲಿಯೂ ಕಾರ್ಯನಾಶಗಳು ಸಂಭವಿಸುವುದಿಲ್ಲ.

೩೩. ಮಂಗಳಾಂಗಿಯೆ! ಯಾವ ಜನರು ಪ್ರತಿನಿತ್ಯದಲ್ಲಿಯೂ ಈಶಾನೇಶ್ವರನ ದರ್ಶನವನ್ನು ಮಾಡುತ್ತಿರುವರೊ, ಅವರಿಗೆ ಎಲ್ಲ ಕಾಲಗಳಲ್ಲಿಯೂ ಎಲ್ಲ ಕಾರ್ಯಗಳಲ್ಲಿಯೂ ಸಾಮರ್ಥ್ಯವುಂಟಾಗುವುದು.

೩೪. ದೇವಿಯೆ! ಇಂತು ನಿನಗೆ ಈಶಾನೇಶ್ವರ ಮಹಾದೇವನ ಪರಮ ಪಾವನವಾದ ಪ್ರಭಾವವನ್ನು ವಿಸ್ತರಿಸಿರುವೆನು. ಇನ್ನು ಅಪ್ಸರೇಶ್ವರಲಿಂಗದ ಕಥೆಯನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಈಶಾನೇಶ್ವರಮಾಹಾತ್ಮ್ಯವರ್ಣನ"ವೆಂಬ
ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ಅಪ್ಸರೇಶ್ವರಮಾಹಾತ್ಮ್ಯವರ್ಣನಂ

**ಈಶ್ವರ ಉವಾಚ :—**

**ದೇವಂ ಸಪ್ತದಶಂ ವಿದ್ಧಿ ವಿಖ್ಯಾತಮಪ್ಸರೇಶ್ವರಂ ।**
**ಯಸ್ಯ ದರ್ಶನಮಾತ್ರೇಣ ಲೋಕೋಽಭೀಷ್ಟಾನವಾಪ್ನುಯಾತ್ ॥ ೧ ॥**
**ನಂದನಾಖ್ಯೇ ವನೇ ದಿವ್ಯೇ ಸರ್ವಕಾಮಸಮನ್ವಿತೇ ।**
**ಸಿದ್ಧಚಾರಣಗಂಧರ್ವಕಿನ್ನರೋದ್ಗೀತನಾದಿತೇ ॥ ೨ ॥**
**ಶುಕಕೋಕಿಲಚಕ್ರಾಹ್ವ ಚಕೋರಕುರರಾವೃತೇ ।**
**ದಿವ್ಯಲೋಕೋಪಮಸ್ಥಾನೇ ತ್ರಿವಿಷ್ಟಪವಿಭೂಷಣೇ ॥ ೩ ॥**
**ತತ್ರೋಪವಿಷ್ಟೋ ವೃತ್ರಾರಿಃ ಸುರಜ್ಯೇಷ್ಠಶ್ಚ ಸೇವಿತಃ ।**
**ನನರ್ತ ರಂಭಾ ತಸ್ಯಾಗ್ರೇ ನೃತ್ಯಭಾವಾನ್ವಿವೃಣ್ವತೀ ॥ ೪ ॥**
**ತತೋಽನ್ಯಚಿತ್ತಾ ಸಂಜಾತಾ ಕಿಂಚಿತ್ ಸ್ಮೃತ್ವಾ ಪ್ರಮಾದತಃ ।**
**ಲಯತಾಲವಿಹೀನಾ ಚ ದೃಷ್ಟ್ವಾ ವೈ ವಾಸವೇನ ಸಾ ॥ ೫ ॥**

---

### ಕನ್ನಡದ ಅನುವಾದ

#### ಅಪ್ಸರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪಾರ್ವತಿಯೆ! ಹದಿನೇಳನೆಯದೇ ಪ್ರಖ್ಯಾತವಾದ ಅಪ್ಸರೇಶ್ವರಲಿಂಗವೆಂದು ತಿಳಿ. ಅದನ್ನು ನೋಡುವ ಮಾತ್ರದಿಂದಲೇ ಸಕಲರೂ ತಮ್ಮ ಮನೋಭೀಷ್ಟಗಳನ್ನು ಪಡೆಯುವರು.

೨. ಸ್ವರ್ಗಲೋಕದಲ್ಲಿ ಸಕಲ ಕಾಮ್ಯವಸ್ತುಗಳಿಂದೊಡಗೂಡಿದ ನಂದನವೆಂಬ ಉದ್ಯಾನವೊಂದಿರುವುದು. ಅದು ಸಿದ್ಧರು, ಚಾರಣರು, ಗಂಧರ್ವರು, ಕಿನ್ನರರು ಮೊದಲಾದವರ ಸಂಗೀತಗಳಿಂದ ಪ್ರತಿಧ್ವನಿತವಾಗುತ್ತಿರುವುದು.

೩. ಗಿಳಿಗಳು, ಕೋಗಿಲೆಗಳು, ಚಕ್ರವಾಕಗಳು, ಚಕೋರಗಳು ಮುಂತಾದ ಹಕ್ಕಿ ಮರಿಗಳು ಮರಗಳಲ್ಲಿ ತುಂಬಿರುವುವು. ಆ ಪ್ರದೇಶವು ದಿವ್ಯಲೋಕವೆಂಬಂತೆ ತೋರುತ್ತ ಸ್ವರ್ಗಕ್ಕೇ ಒಂದು ಭೂಷಣವಾಗಿರುವುದು.

೪. ಒಮ್ಮೆ ಅಲ್ಲಿ ವೃತ್ರಾಸುರವೈರಿಯೂ, ಸುರಜ್ಯೇಷ್ಠನೂ ಆದ ಮಹೇಂದ್ರನು ದೇವತೆಗಳ ಸೇವೆಗಳನ್ನು ಸ್ವೀಕರಿಸುತ್ತ ಕುಳಿತಿದ್ದನು. ಆತನ ಇದಿರಿನಲ್ಲಿ ರಂಭೆಯು ನಾಟ್ಯಶಾಸ್ತ್ರದ ವಿವಿಧಭಾವಗಳನ್ನು ಪ್ರದರ್ಶಿಸುತ್ತ ನರ್ತಿಸುತ್ತಿದ್ದಳು.

೫. ಆಗ ಏನನ್ನೋ ಜ್ಞಾಪಿಸಿಕೊಂಡು ಅವಳು ಪ್ರಮಾದವಶದಿಂದ ಅನ್ಯಮನಸ್ಕಳಾಗಿದ್ದುದರಿಂದ ಲಯತಾಳಗಳು ಕೆಟ್ಟುಹೋದುದನ್ನು ಮಹೇಂದ್ರನು ತನ್ನ ಮನಸ್ಸಿಗೆ ತಂದುಕೊಂಡನು.

ಚುಕೋಪ ಚ ಸುರಶ್ರೇಷ್ಠಸ್ತಸ್ಯಾಃ ಶಾಪಂ ದದೌ ಕಿಲ ।
ವಿಸ್ಮೃತಿರ್ಮಾನುಷಂ ಕರ್ಮ ನ ದಿವ್ಯಂ ಕ್ವಾಽಪಿ ದೃಶ್ಯತೇ ।
ತಸ್ಮಾತ್ತು ಮಾನುಷೇ ಲೋಕೇ ಗಚ್ಛ ತ್ವಂ ನಿಷ್ಪ್ರಭಾ ಸತೀ ॥ ೬ ॥
ಅಥೇಂದ್ರಕೋಪಸಂಕ್ಷೋಭಾತ್ಪತಿತಾ ಭುವಿ ಸಾಽಪ್ಸರಾಃ ।
ನಿಶ್ಚೇಷ್ಟಾ ವಿಕಲೀಭೂತಾ ರುದತೀ ವಿಸ್ವರಂ ಬಹು ॥ ೭ ॥
ಕರುಣಂ ವಿಲಪಂತೀ ಚ ಕಿಂ ಮಯಾ ದುಷ್ಕೃತಂ ಕೃತಂ ।
ನಿರ್ಮಲಂ ನ ತಪಸ್ತಪ್ತಂ ಕಥಂ ನಾಽಽರಾಧಿತಃ ಸುರಃ ॥ ೮ ॥
ಅಥಾಽಪ್ಸರೋಗಣಃ ಸರ್ವಃ ಸಖೀಗಣಸಮನ್ವಿತಃ ।
ರಂಭಾ ಯತ್ರೈವ ಪತಿತಾ ಸಮಾಯಾತೋ ವರಾನನೇ ।
ತಸ್ಯಾಃ ಶೋಕಾಽಗ್ನಿದಾಹೇನ ಸಂತಪ್ತೋಽಪ್ಸರಸಾಂ ಗಣಃ ॥ ೯ ॥
ಸುಸುಪ್ತಾ ಪದ್ಮಿನೀ ಸಾಽಭ್ರೇ ಯಥಾ ನೈವ ವಿರಾಜತೇ ।
ತಥಾ ಶಾಪೇನ ವಿಧ್ವಸ್ತಾ ರಂಭಾ ನೋ ರಾಜತೇ ಸದಾ ॥ ೧೦ ॥
ಸಖೀಗಣೈಃ ಪರಿವೃತಾ ರಂಭಾ ದೃಷ್ಟ್ವಾ ವರಾನನೇ ।
ದೇವರ್ಷಿಣಾ ನಾರದೇನ ವಿಸ್ಮಿತೇನಾಂತರಾತ್ಮನಾ ॥ ೧೧ ॥

---

೬. ಮತ್ತು ಕೋಪೋದ್ದೀಪಿತನಾಗಿ "ಅನ್ಯಮನಸ್ಕಳಾಗಿರುವ ನಿನ್ನ ನೃತ್ಯದಲ್ಲಿ ಕೇವಲ ಮಾನುಷಭಾವವು ಕಾಣುತ್ತಿರುವುದೇ ಹೊರತು ದಿವ್ಯಭಾವವೆಲ್ಲಿಯೂ ಕಾಣಬರಲಿಲ್ಲವಾದುದರಿಂದ ನೀನು ತೇಜೋಹೀನಳಾಗಿ ಮನುಷ್ಯಲೋಕದಲ್ಲಿ ಜನಿಸು" ಎಂದು ಶಾಪವನ್ನಿತ್ತನು.

೭. ಇಂದ್ರನ ಕೋಪದಿಂದ ಕ್ಷೋಭೆಗೊಂಡು ರಂಭೆಯು ನಿಶ್ಚೇಷ್ಟಳೂ, ಭ್ರಾಂತಳೂ ಆಗಿ ಭೂಮಿಯಲ್ಲಿ ಹೊರಳಾಡುತ್ತ ಆರ್ತಸ್ವರದಿಂದ ಬಹುವಾಗಿ ವಿಲಪಿಸುತ್ತಿದ್ದಳು.

೮. ಕರುಣಾಜನಕವಾದ ಸ್ವರದಿಂದ ಅವಳು, "ನಾನು ಯಾವ ಪಾತಕವನ್ನು ಮಾಡಿದೆನು ? ನಿರ್ಮಲವಾದ ತಪಸ್ಸನ್ನು ಮಾಡಲಿಲ್ಲವೆ? ದೇವೇಶ್ವರನಿಗೆ ಯಾವ ಸಪರ್ಯೆಯನ್ನು ಮಾಡಲಿಲ್ಲ?" ಎಂಬುದಾಗಿ ರೋದಿಸುತ್ತಿದ್ದಳು.

೯. ಸರ್ವಮಂಗಳೆಯೆ ! ಆಗ ಸಖೀಸಮೂಹಸಮೇತವಾಗಿ ಅಪ್ಸರೋಗಣವೆಲ್ಲವೂ ರಂಭೆಯು ಬಿದ್ದಿದ್ದಲ್ಲಿಗೆ ಆಕೆಯ ಆಶ್ವಾಸನಕ್ಕಾಗಿ ಬಂದು ಸೇರಿದರು. ಆದರೆ ಆ ಗಣವೆಲ್ಲವೂ ಅವಳ ಶೋಕಾಗ್ನಿಯ ಬೇಗೆಗೆ ಸಿಲುಕಿ ತಾನೂ ಪರಿತಾಪಕ್ಕೆ ತುತ್ತಾಯಿತು.

೧೦. ಆಕಾಶವು ಮೇಘಗಳಿಂದಾವೃತವಾಗಲು ಕಮಲವು ಮುಚ್ಚಿಕೊಂಡು ಹೇಗೆ ಕಳೆಗುಂದಿರುವುದೊ, ಹಾಗೆಯೇ ಇಂದ್ರನ ಶಾಪಕ್ಕೆ ಸಿಕ್ಕಿದ ರಂಭೆಯು ಕಾಂತಿಹೀನಳಾಗಿದ್ದಳು.

೧೧. ಪಾರ್ವತಿಯೆ ! ಹೀಗೆ ನಿಶ್ಚೇಷ್ಟವಾಗಿದ್ದ ಸಖೀಸಮೂಹದಿಂದ

ಕಸ್ಮಾದಪ್ಸರಸಃ ಸದ್ಯೋ ದೃಶ್ಯಂತೇ ಶೋಕವಿಹ್ವಲಾಃ ।
ಕಸ್ಮಾಚ್ಚ ಕರುಣಂ ರಂಭಾ ರೋದಿತ್ಯೇಷಾ ಮುಹುರ್ಮುಹುಃ ॥ ೧೨ ॥
ಪಪ್ರಚ್ಛ ಚ ಸಮಾಗತ್ಯ ಕಸ್ಮಾದಪ್ಸರಸೋ ವರಾಃ ।
ವಿಷಣ್ಣವದನಾ ದೀನಾಃ ಕಥ್ಯತಾಂ ಮಮ ಸಾದರಂ ॥ ೧೩ ॥
ವೃತ್ತಾಂತಂ ಕಥಯಾಮಾಸುಸ್ತಾಶ್ಚ ತಸ್ಮೈ ಪುರಾತನಂ ।
ಶ್ರುತ್ವಾ ಚ ನಾರದಸ್ತತ್ರ ಧ್ಯಾನಾಸಕ್ತೋಽಭವನ್ಮುನಿಃ ॥ ೧೪ ॥
ಉಪಾಯಂ ಕಥಯಾಮಾಸ ಹಿತಂ ತಾಸಾಂ ಪ್ರಯತ್ನತಃ ।
ಗಚ್ಛಂತ್ವಪ್ಸರಸಃ ಸರ್ವಾ ಮಹಾಕಾಲವನೋತ್ತಮೇ ॥ ೧೫ ॥
ಆರಾಧಯಧ್ವಂ ದೇವೇಶಂ ಲಿಂಗಂ ಸರ್ವಾರ್ಥಸಾಧಕಂ ।
ಪೃಚ್ಛಾದೇವ್ಯಾಸ್ತು ಪುರತಃ ಪುರಾ ಕಲ್ಪೇ ಪ್ರಪೂಜಿತಂ ॥ ೧೬ ॥
ಉರ್ವಶ್ಯಾ ಮಮ ವಾಕ್ಯೇನ ಭರ್ತಾ ಪ್ರಾಪ್ತಃ ಪುರೂರವಾಃ ।
ನಾರದಸ್ಯ ವಚಃ ಶ್ರುತ್ವಾ ಸಮಾಜಗ್ಮುರ್ಗಣಾಸ್ತಥಾ ॥ ೧೭ ॥

---

ಪರಿವೃತಳಾಗಿದ್ದ ರಂಭೆಯನ್ನು ದೇವರ್ಷಿಯಾದ ನಾರದನು ವಿಸ್ಮಯಾವಿಷ್ಟವಾದ ಮನಸ್ಸಿನಿಂದ ನೋಡುತ್ತಿದ್ದನು.

೧೨. "ಈ ಅಪ್ಸರಸ್ತ್ರೀಯರೆಲ್ಲರೂ ಅತ್ಯಂತ ಶೋಕಾಕುಲಿತರಾಗಿ ಕಾಣಲು ಕಾರಣವೇನು? ಈ ರಂಭೆಯು ಮತ್ತೆ ಮತ್ತೆ ದೀನಧ್ವನಿಯಿಂದ ರೋದಿಸಲು ಕಾರಣವೇನು?"

೧೩. ಇಂತೆಂದು ಯೋಚಿಸುತ್ತ ಅವರಿದ್ದಲ್ಲಿಗೆ ಬಂದು ಪ್ರಶ್ನೆಮಾಡಿದನು. "ಸುಂದರಿಯರಾದ ಅಪ್ಸರೆಯರಿರಾ! ನೀವೇತಕ್ಕೆ ಹೀಗೆ ಬಾಡಿದ ಮುಖವುಳ್ಳವರೂ ದೀನರೂ ಆಗಿರುವಿರಿ? ಬೇಗನೆ ತಿಳಿಸಿರಿ."

೧೪. ಆಗಲವರು ಹಿಂದೆ ನಡೆದ ವೃತ್ತಾಂತವೆಲ್ಲವನ್ನೂ ಆತನಿಗೆ ತಿಳಿಸಿದರು. ನಾರದಮುನಿಯು ಅದನ್ನೆಲ್ಲ ಕೇಳಿ ಧ್ಯಾನಾಸಕ್ತನಾದನು.

೧೫. ಮತ್ತು ಪ್ರಯತ್ನದಿಂದ ಅವರಿಗೆ ಹಿತವುಂಟಾಗಲು ಉಪಾಯವೊಂದನ್ನು ಹೇಳಿದನು. "ಅಪ್ಸರೆಯರಿರಾ! ನೀವೆಲ್ಲರೂ ಉತ್ತಮ ಕ್ಷೇತ್ರವಾದ ಮಹಾಕಾಲವನಕ್ಕೆ ಹೋಗಿರಿ.

೧೬. ಪೃಚ್ಛಾದೇವಿಯ ಮುಂದುಗಡೆಯಲ್ಲಿ ಹಿಂದಿನ ಕಲ್ಪದಲ್ಲಿ ಪೂಜೆಗೊಳ್ಳುತ್ತಿದ್ದ ಮಹಾಲಿಂಗವೊಂದಿರುವುದು. ಸರ್ವಾರ್ಥಪ್ರದವಾದ ಆ ಮಾಹೇಶ್ವರಲಿಂಗಕ್ಕೆ ಪೂಜೆಯನ್ನು ಮಾಡಿರಿ.

೧೭. ಹಿಂದೆ ನನ್ನ ಮಾತಿನಂತೆಯೇ ಅಲ್ಲಿ ಊರ್ವಶಿಯು ಪುರೂರವನನ್ನು ಪತಿಯಾಗಿ ಪಡೆದಳು." ನಾರದನ ಈ ಮಾತನ್ನು ಕೇಳಿ ಆ ಅಪ್ಸರಸಮೂಹವೆಲ್ಲವೂ ಆ ಕ್ಷೇತ್ರವನ್ನು ಸೇರಿದರು.

ಮಹಾಕಾಲವನೇ ರಮ್ಯೇ ಲಿಂಗಾರಾಧನಕಾಮ್ಯಯಾ ।
ತತಸ್ತುಷ್ಟಸ್ಸ್ವಯಂ ರುದ್ರಸ್ತಾಸಾಂ ಭಕ್ತ್ಯಾ ವರಂ ದದೌ ॥ ೧೮ ॥
ರಂಭೇ ಪ್ರಾಪ್ಸ್ಯಸಿ ಸೌಭಾಗ್ಯಂ ಸ್ವರ್ಗಲೋಕಂ ಯಶಸ್ವಿನಿ ।
ಭವಿಷ್ಯಸಿ ಮಹಾಭಾಗೇ ಜಿಷ್ಣೋಸ್ತ್ವಂ ವಲ್ಲಭಾ ಧ್ರುವಂ ॥ ೧೯ ॥
ತಸ್ಮಾತ್ತ್ರಿವಿಷ್ಟಪಂ ಗಚ್ಛ ಸಂಘೇನಾಽನೇನ ಪೂಜಿತಾ ।
ಆರಾಧಿತೋಽಪ್ಸರೋಭಿಶ್ಚ ಪುರಾ ಸರ್ಗಾರ್ಥಕಾಮ್ಯಯಾ ।
ಅತೋಽಪ್ಸರೇಶ್ವರಃ ಖ್ಯಾತೋ ಯಯೌ ಖ್ಯಾತಿಂ ಜಗತ್ತ್ರಯೇ ॥ ೨೦ ॥
ಯೇ ಸಮಾರಾಧಯಿಷ್ಯಂತಿ ಭಕ್ತ್ಯಾ ಚಾಽಪ್ಸರಸೇಶ್ವರಂ ।
ತೇ ಸರ್ವಕಾಮಸಂಪೂರ್ಣಾ ಭವಿಷ್ಯಂತಿ ಯುಗೇ ಯುಗೇ ॥ ೨೧ ॥
ಪ್ರೇರಯಿಷ್ಯಂತಿ ಯೇ ಲೋಕೇ ದರ್ಶನಾರ್ಥಂ ಯಶಸ್ವಿನಿ ।
ಸ್ಥಾನಭ್ರಂಶೋ ವಿಯೋಗಶ್ಚ ತೇಷಾಂ ಸ್ವಪ್ನೇ ನ ಜಾಯತೇ ॥ ೨೨ ॥
ಕಿಂ ದಾನೈಃ ಕಿಂ ತಪೋಭಿಶ್ಚ ಕಿಂ ಯಜ್ಞೈರ್ಬಹುದಕ್ಷಿಣೈಃ ।
ಸ್ಪರ್ಶನಾಲ್ಲಭತೇ ರಾಜ್ಯಂ ಸ್ವರ್ಗಂ ಮೋಕ್ಷಂ ಕ್ರಮೇಣ ತು ॥ ೨೩ ॥

---

೧೮. ಮಹಾಕಾಲವನದ ಮನೋಹರವಾದ ಪ್ರದೇಶದಲ್ಲಿ ಲಿಂಗದ ಪೂಜೆಯನ್ನು ಮಾಡುವ ಅಭಿಲಾಷೆಯಿಂದ ಬಂದ ಅವರಲ್ಲಿ ಮಹಾದೇವನು ಭಕ್ತಿಪರವಶನಾಗಿ ಅವರಿಗೆ ವರವನ್ನಿತ್ತನು.

೧೯. "ಯಶಸ್ವಿನಿಯಾದ ರಂಭೆಯೆ! ನೀನು ಸೌಭಾಗ್ಯವನ್ನೂ, ಪುನಃ ಸ್ವರ್ಗಲೋಕದ ವಾಸವನ್ನೂ ಪಡೆಯುವೆ. ಮಹಾಭಾಗಳಾದ ನೀನು ನಿಜವಾಗಿಯೂ ಪುನಃ ಮಹೇಂದ್ರನಿಗೆ ಪ್ರಿಯನರ್ತಕಿಯಾಗುವೆ.

೨೦. ಆದುದರಿಂದ ನೀನು ಅಪ್ಸರೋಗಣಗಳ ಪೂಜೆಯನ್ನು ಕೈಕೊಂಡು ಸ್ವರ್ಗಲೋಕಕ್ಕೆ ಹೊರಡು." ಎಲೌ ಪಾರ್ವತಿಯೆ! ಇಂತು ಆ ಅಪ್ಸರೆಯರು ಹಿಂದೆ ಸ್ವರ್ಗಲೋಕವನ್ನು ಮತ್ತೆ ಪಡೆಯಲು ಈ ಮಹಾಲಿಂಗದ ಪೂಜೆಯನ್ನು ಮಾಡಿದರು. ಆದುದರಿಂದ ಮಹೇಶ್ವರನು ಅಪ್ಸರೇಶ್ವರನೆಂದು ಇಲ್ಲಿ ಕರೆಯಲ್ಪಟ್ಟು ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾದನು.

೨೧. ಯಾವ ಮನುಜರು ಭಕ್ತಿಯಿಂದ ಈ ಅಪ್ಸರೇಶ್ವರನ ಪೂಜೆಯನ್ನು ಮಾಡುವರೊ, ಅವರು ಯುಗಯುಗಾಂತರಗಳಲ್ಲಿಯೂ ಸಕಲಾಭೀಷ್ಟಗಳನ್ನೂ ಪಡೆಯುವವರಾಗುವರು.

೨೨. ಮಂಗಳಾಂಗಿಯೆ! ಪ್ರಪಂಚದಲ್ಲಿ ಯಾರು ಈ ಮಹಾಲಿಂಗವನ್ನು ಸಂದರ್ಶಿಸುವಂತೆ ಇತರರನ್ನು ಪ್ರೇರಿಸುವರೊ, ಅವರಿಗೆ ಸ್ವಪ್ನದಲ್ಲಿಯೂ ಸ್ಥಾನಭ್ರಂಶವಾಗಲಿ ಪ್ರಿಯಾವಿಯೋಗವಾಗಲಿ ಸಂಭವಿಸುವುದಿಲ್ಲವು.

೨೩. ಅನೇಕ ದಾನಗಳಿಂದಲೂ, ತಪಸ್ಸುಗಳಿಂದಲೂ, ಬಹಳವಾದ ದಕ್ಷಿಣೆ

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ಅಪ್ಸರೇಶ್ವರದೇವಸ್ಯ ಶ್ರೂಯತಾಂ ಕಲ್ಕಲೇಶ್ವರಃ ॥ ೨೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ**
**"ಅಪ್ಸರೇಶ್ವರಮಾಹಾತ್ಮ್ಯವರ್ಣನಂ"**
**ನಾಮ ಸಪ್ತದಶೋಽಧ್ಯಾಯಃ**

---

ಗಳಿಂದೊಡಗೂಡಿದ ಯಜ್ಞಗಳಿಂದಲೂ ಪ್ರಯೋಜನವೇನು? ಈ ಒಂದು ಮಹಾ ಲಿಂಗದ ಸ್ಪರ್ಶಮಾತ್ರದಿಂದಲೇ ಮನುಷ್ಯನಿಗೆ ಇಹದಲ್ಲಿ ರಾಜ್ಯಾಧಿಕಾರವೂ, ಪರದಲ್ಲಿ ಸ್ವರ್ಗಮೋಕ್ಷಗಳೂ ಲಭಿಸುವುವು.

೨೪. ದೇವಿಯೆ! ಇಂತು ಅಪ್ಸರಸೇಶ್ವರನ ಪ್ರಭಾವವನ್ನು ನಿನಗೆ ಹೇಳಿರುವೆನು. ಪಾಪನಾಶಕವಾದ ಈ ಚರಿತ್ರೆಯನ್ನು ಕೇಳಿದಮೇಲೆ ಇನ್ನು ಕಲ್ಕಲೇಶ್ವರನ ಮಹಿಮೆಯನ್ನು ಕೇಳುವವಳಾಗು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ**
**ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ**
**ಮಾಹಾತ್ಮ್ಯದಲ್ಲಿ "ಅಪ್ಸರೇಶ್ವರಮಾಹಾತ್ಮ್ಯವರ್ಣನ"ವೆಂಬ**
**ಹದಿನೇಳನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥಾಽಷ್ಟಾದಶೋಽಧ್ಯಾಯಃ

## ಕಲ್ಕಲೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಶಿವ ಉವಾಚ :—**

**ದೇವಮಷ್ಟಾದಶಂ ವಿದ್ಧಿ ವಿಖ್ಯಾತಂ ಕಲ್ಕಲೇಶ್ವರಂ ।**
**ಯಸ್ಯ ದರ್ಶನಮಾತ್ರೇಣ ಕಲಹೋ ನೈವ ಜಾಯತೇ ॥ ೧ ॥**
**ಸರ್ವದುಃಖೋಪಶಮನಂ ಸರ್ವಪಾಪಪ್ರಮೋಚನಂ ।**
**ವ್ಯಾಧಿಸರ್ಪಾಽಗ್ನಿಚೌರಾಣಾಂ ಶಮನಂ ವಾಂಛಿತಪ್ರದಂ ॥ ೨ ॥**
**ಮಮ ದೇವಿ ತ್ವಯಾ ಸಾರ್ಧಂ ಕಲಹಃ ಸಮುಪದ್ಯತ ।**
**ಪುರಾ ವಿಸ್ತರತೋ ವಚ್ಮಿ ಶೃಣ್ವೇಕಾಗ್ರಮನಾಃ ಶುಭೇ ॥ ೩ ॥**
**ಯದಾ ತ್ವಂ ಹಿಮಶೈಲಸ್ಯ ದುಹಿತಾ ವರವರ್ಣಿನಿ ।**
**ತದಾ ವಿವಾಹಿತಂ ಕಾಂತೇ ಯಥೋಕ್ತವಿಧಿನಾ ಮಯಾ ॥ ೪ ॥**
**ವಿನಿವೃತ್ತೇ ವಿವಾಹೇ ಚ ತ್ವಯಾ ಸಾರ್ಧಂ ವರಾನನೇ ।**
**ಮಹಾಕಾಲೀತಿ ನಾಮ್ನಾ ವೈ ವರ್ಣೇನಾಽಪಿ ಚ ತಾದೃಶೀ ॥ ೫ ॥**

---

### ಕನ್ನಡದ ಅನುವಾದ

#### ಕಲ್ಕಲೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ.—ಪಾರ್ವತಿಯ ! ಹದಿನೆಂಟನೆಯದೇ ಕಲ್ಕಲೇಶ್ವರವೆಂಬ ಮಹಾಲಿಂಗವೆಂದು ತಿಳಿ. ಇದರ ದರ್ಶನಮಾತ್ರದಿಂದ ಜನರಲ್ಲಿ ಕಲಹವೇ ಉಂಟಾಗುವುದಿಲ್ಲ.

೨. ಈ ಲಿಂಗಸಂದರ್ಶನವು ಸಕಲದುಃಖಗಳಿಗೂ ಪ್ರಶಮನೋಪಾಯವು : ಸಮಸ್ತಪಾಪಗಳಿಗೆ ನಿವಾರಣೆಯು : ರೋಗಗಳು, ಸರ್ಪಗಳು, ಅಗ್ನಿ, ಚೋರರು ಮುಂತಾದುವುಗಳ ಬಾಧೆಗಳಿಗೆ ತಡೆಯು ; ಮತ್ತು ವಾಂಛಿತಪ್ರದಾಯಕವು.

೩. ಪರಮಮಂಗಳಾದೇವಿಯೆ ! ಹಿಂದೊಮ್ಮೆ ನಿನ್ನೊಡನೆ ನನಗೆ ಕಲಹವೊಂದು ಪ್ರಾಪ್ತವಾದ ವಿಚಾರವನ್ನು ವಿಸ್ತಾರವಾಗಿ ಹೇಳುವೆನು. ಏಕಾಗ್ರಚಿತ್ತದಿಂದ ಕೇಳುವವಳಾಗು.

೪. ಸುಂದರಾಂಗಿಯೆ ! ನೀನು ಹಿಮವಂತರಾಜನ ಮಗಳಾಗಿ ಹುಟ್ಟಿದೆಯಲ್ಲವೆ. ನಿನ್ನ ತಂದೆಯು ಶಾಸ್ತ್ರೋಕ್ತವಿಧಾನದಿಂದ ನಿನ್ನನ್ನು ನನಗೆ ಮದುವೆ ಮಾಡಿಕೊಟ್ಟನು.

೫. ಸುಮುಖಿಯೆ ! ವಿವಾಹಮಹೋತ್ಸವವು ಮುಗಿದಬಳಿಕ ನಿನ್ನೊಡನೆ ನಾನು ಹೊರಟುಬಂದೆನು. ಆಗ ನಿನಗೆ ಮಹಾಕಾಳಿಯೆಂಬ ಹೆಸರಿದ್ದಿತು. ಬಣ್ಣದಿಂದಲೂ ನೀನು ಹೆಸರಿಗೆ ತಕ್ಕಂತೆಯೇ ಇದ್ದೆ.

ನೀಲೋತ್ಪಲನಿಭಪ್ರಖ್ಯಾ ನೀಲಕುಂಚಿತಮೂರ್ಧಜಾ ।
ಅಪ್ಯೇಕಸ್ಮಿಂಸ್ತದಾ ತ್ವಂ ಹಿ ಮಾತೄಣಾಂ ಮಂಡಪೇ ಶುಭೇ ।
ಮಧ್ಯೇ ಸಮುಪವಿಷ್ಟಾಽಸಿ ಕೃಷ್ಣಾಂಜನಸಮಪ್ರಭಾ ॥ ೬ ॥
ಕಾಲಿ ಸುಂದರಿ ಮತ್ಪಾರ್ಶ್ವೇ ವಲ್ಲಭೇ ತ್ವಮುಪಾವಿಶ ।
ಶರೀರೇ ಮಮ ತನ್ವಂಗಿ ಸಿತೇ ಭಾಸ್ಯಸಿ ತದ್ದ್ಯುತಿಃ ॥ ೭ ॥
ಭುಜಂಗೀವಾಽಸಿತಾ ಶುಭ್ರೇ ಸಂಶ್ಲಿಷ್ಟಾ ಚಂದನೇ ತರೌ ।
ರಜನೀವಾಸಿತೇ ಪಕ್ಷೇ ದೃಷ್ಟಿದೋಷಹರಾಽಸಿ ಮೇ ॥ ೮ ॥
ಇತ್ಯುಕ್ತಾಽಸಿ ಮಯಾ ದೇವಿ ಗಿರಿಜೇ ಚಾರುಹಾಸಿನಿ ।
ತದಾ ಪ್ರೋಕ್ತಂ ತ್ವಯಾ ವಾಕ್ಯಂ ಮಾಮುದ್ದಿಶ್ಯ ಸಗದ್ಗದಂ ॥ ೯ ॥
ಯದಾ ತ್ವಯಾ ಮದರ್ಥೇ ಹಿ ಪ್ರೇರಿತಾ ವೇದಪಾರಗಾಃ ।
ಸಪ್ತರ್ಷಯೋ ಮಹಾಭಾಗಾಃ ಕಿಂಕೃತೇ ನ ತದಾತ್ಥ ಮಾಂ ॥ ೧೦ ॥
ತದಾ ತ್ವಯಾ ಮದರ್ಥೇಽಪಿ ಪ್ರಾರ್ಥಿತೋ ಜನಕೋ ಮಮ ।
ಹಿಮಾದ್ರಿರಾಜೋ ಯತ್ನೇನ ಕಿಂ ಕಾಲೀ ನ ತದಾತ್ಥ ಮಾಂ ॥ ೧೧ ॥

---

೬–೭. ನೀಲೋತ್ಪಲವನ್ನು ಹೋಲುವ ಮೈಬಣ್ಣವುಳ್ಳವಳೂ, ನೀಲವಾದ ಮುಂಗುರುಳಿನ ನಾಲುಳ್ಳವಳೂ, ಕಪ್ಪುಕಾಡಿಗೆಯಂತಿರುವವಳೂ ಆದ ನೀನು ಒಮ್ಮೆ ಪವಿತ್ರವಾದ ಸಪ್ತಮಾತೃಕೆಯರ ಮಂಟಪದಲ್ಲಿ ಅವರ ಮಧ್ಯದಲ್ಲಿ ಕುಳಿತಿದ್ದೆ. ಆಗ ನಾನು ಇಂತೆಂದೆನು. "ಕಾಳಿಯೆ! ಓ ಸುಂದರಿಯೆ! ಪ್ರಿಯಳೆ! ನನ್ನ ಪಾರ್ಶ್ವದಲ್ಲಿ ಕುಳಿತುಕೊ. ಸುಶ್ರೋಣಿಯೆ! ಭಸ್ಮದಿಂದ ಬೆಳ್ಳಗಿರುವ ನನ್ನ ದೇಹದ ಬಳಿ ನೀನು ಕರಿಯ ಬಣ್ಣದಿಂದ ಹೊಳೆಯುತ್ತಿರುವೆ.

೮. ಶುಭ್ರವಾದ ಚಂದನ ವೃಕ್ಷವನ್ನು ಸುತ್ತಿಕೊಂಡಿರುವ ಕರಿಯ ಹಾವಿನಂತೆ ನೀನು ನನ್ನ ದೇಹದಲ್ಲಿ ಹೊಳೆಯುತ್ತಿರುವೆ. ಕೃಷ್ಣಪಕ್ಷದ ರಾತ್ರಿಯಂತಿರುವ ನೀನು ನನ್ನ ವಿಷಯದಲ್ಲಿ ದೃಷ್ಟಿಪರಿಹಾರವನ್ನು ಮಾಡುತ್ತಿರುವೆ."

೯. ಗಿರಿರಾಜಪುತ್ರಿಯೆ! ಸುಸ್ಮಿತೆಯೆ! ಇಂತೆಂದು ನಾನು ಹಾಸ್ಯಕ್ಕಾಗಿ ನಿನ್ನನ್ನು ಮಾತನಾಡಿಸಿದೆನು. ಅದನ್ನು ಕೇಳಿ ನೀನು ಗದ್ಗದಸಹಿತವಾದ ಧ್ವನಿಯಿಂದ ನನಗೆ ಇಂತೆಂದು ಹೇಳಿದೆ.

೧೦. "ವೇದಪಾರಂಗತರೂ ಮಹಾಭಾಗ್ಯಶಾಲಿಗಳೂ ಆದ ಸಪ್ತರ್ಷಿಗಳನ್ನು ನನ್ನ ತಂದೆಯ ಬಳಿಗೆ ನನ್ನನ್ನು ಕೇಳಲು ಕಳುಹಿಸಿದಾಗ ಈ ವಿಷಯವನ್ನು ಏಕೆ ನನಗೆ ಹೇಳಲಿಲ್ಲ?

೧೧. ಆಗ ನೀನು ನನ್ನನ್ನೇ ಪಡೆಯಬೇಕೆಂದು ನನ್ನ ತಂದೆಯನ್ನು ಪ್ರಾರ್ಥಿಸಿದೆ. ಹಿಮವಂತರಾಜನನ್ನು ಪ್ರಸನ್ನೀಕರಿಸಿಕೊಂಡ ಆ ಸಮಯದಲ್ಲಿ ನನ್ನನ್ನು ಕಾಳಿಯೆಂದೇಕೆ ಕರೆಯಲಿಲ್ಲ?

ಯದಾಪ್ಯುಕ್ತಂ ತ್ವಯಾ ದೈನ್ಯಾನ್ಮದರ್ಥೇ ಗಚ್ಛ ನಾರದ ।
ಪ್ರಾರ್ಥ್ಯರ್ತಾಂ ಪಾರ್ವತೀ ಶೀಘ್ರಂ ಕಿಂ ಕಾಲೀ ನ ತದಾತ್ಥ ಮಾಂ ॥ ೧೨ ॥
ಸತ್ಯೇಯಂ ಲೌಕಿಕೀ ಗಾಥಾ ನ ವೃಥಾ ಪರಿಜಾಯತೇ ।
ಸ್ವಕೃತೇನ ಜನಃ ಸರ್ವೋ ಜಾಡ್ಯೇನ ಪರಿಭೂಯತೇ ॥ ೧೩ ॥
ಅವಶ್ಯಮರ್ಥೀ ಪ್ರಾಪ್ನೋತಿ ಖಂಡನಾಂ ತುಂಡಮುಂಡನಾಂ ।
ತಪೋಽತಿದೀರ್ಘಚಾರ್ಯೈರ್ಯತ್ತ್ವಾಂ ಪ್ರಾರ್ಥಿತವತ್ಯಹಂ ॥ ೧೪ ॥
ತಸ್ಯಾ ಮೇ ನಿಯತಸ್ತ್ವೇಷ ಹ್ಯವಮಾನಃ ಪದೇ ಪದೇ ।
ನೈವಾಽಸ್ಮಿ ಕುಟಿಲಾ ರೌದ್ರಾ ವಿಷಮಾ ನ ಚ ಧೂರ್ಜಟೇ ॥ ೧೫ ॥
ನಾಽಕುಲೀನಾ ವೃಥಾಚಾರಾ ನ ದುಷ್ಟಾ ನ ಚ ಮತ್ಸರಾ ।
ಸವಿಷಸ್ತ್ವಂ ಯತಃ ಖ್ಯಾತೋ ವ್ಯಕ್ತಂ ದೋಷಾಕರಾಶ್ರಯಃ ॥ ೧೬ ॥
ಅಕುಲೀನೋ ವೃಥಾಚಾರೋ ಮಾತ್ಸರ್ಯೇಣಾಶ್ರಿತಃ ಸದಾ ।
ನಾಽಹಂ ಮುಷ್ಣಾಮಿ ನಯನೇ ತತ್ರ ಹಂತಾ ತ್ವಮೇವ ಚ ॥ ೧೭ ॥

---

೧೨. ದೈನ್ಯದಿಂದ ನೀನು, 'ನಾರದನೆ! ನನಗೋಸ್ಕರ ನೀನು ಹೋಗಿ ಶೀಘ್ರವಾಗಿ ಪಾರ್ವತಿಯನ್ನು ಹಿಮವಂತರಾಜನಲ್ಲಿ ಯಾಚಿಸು' ಎಂದು ಹೇಳಿ ಕಳುಹಿಸಿದಾಗಲಾದರೂ ನೀನೇಕೆ ನನ್ನನ್ನು ಕಾಳಿಯೆಂದು ಕರೆಯಲಿಲ್ಲ?

೧೩. ಲೋಕದಲ್ಲಿ ಪ್ರಖ್ಯಾತನಾಗಿರುವ ಈ ಗಾದೆಯು ಸತ್ಯವಾದುದು. ನಿಷ್ಕಾರಣವಾಗಿ ಹುಟ್ಟಿದುದಲ್ಲ. ಸಕಲ ಜನರೂ ತಾವು ಮಾಡಿದ ಅಪರಾಧಗಳಿಂದಲೇ ಪರಿಭವವನ್ನು ಹೊಂದುವರು.

೧೪. ಖಂಡಿತವಾಗಿಯೂ ಯಾಚಕನು ಖಂಡನವನ್ನೂ, ಅವಹೇಳನಾದಿ ತಿರಸ್ಕಾರಗಳನ್ನೂ ಪಡೆಯುವನು. ಬಹುಕಾಲ ಆಚರಿಸಿದ ತಪಸ್ಸಿನಿಂದ ಕೂಡಿದವಳಾಗಿ ನಾನು ನಿನ್ನನ್ನು ವರನನ್ನಾಗಿ ಪ್ರಾರ್ಥಿಸಿದೆನಲ್ಲವೆ.

೧೫. ಅಂತಹ ನನಗೆ ಪದೇಪದೇ ಈ ಅವಮಾನಗಳಾಗುತ್ತಿರುವುದು ಸಹಜವಾಗಿಯೇ ಇರುವುದು. ಎಲೈ ಧೂರ್ಜಟಿಯೆ! ನಾನು ಕುಟಿಲೆಯಾಗಲಿ, ಭಯಂಕರಳಾಗಲಿ, ವಕ್ರರೂಪಳಾಗಲಿ ಆಗಿಲ್ಲ.

೧೬. ಮತ್ತು ಕುಲಹೀನಳಾಗಲಿ, ದಂಭಾಚಾರನಿರತಳಾಗಲಿ, ದುಷ್ಟಳಾಗಲಿ, ಮಾತ್ಸರ್ಯದವಳಾಗಲಿ ಅಲ್ಲವೇ ಅಲ್ಲ. ಆದರೆ ನೀನೇ ವಿಷಧರನೆಂದು ಪ್ರಖ್ಯಾತನಾಗಿರುವೆ. ದೋಷಾಕರನಿಗೆ (ಚಂದ್ರನಿಗೆ) ಆಶ್ರಯನಾಗಿರುವೆಯೆಂಬುದೂ ವ್ಯಕ್ತವಾಗಿಯೇ ಇದೆ.

೧೭. ನೀನು ಕುಲರಹಿತನು. ದಂಭಾಚಾರಿಯು. ಯಾವಾಗಲೂ ಮಾತ್ಸರ್ಯಗುಣಭರಿತನಾದವನು. ನಾನೆಂದಿಗೂ ಕಣ್ಣುಗಳನ್ನು ಮುಚ್ಚುವುದಿಲ್ಲ. ಕಣ್ಣುಗಳಿಂದಲೂ ಕೊಲ್ಲುವವನು ನೀನೇ ಆಗಿರುವೆ.

ಆದಿತ್ಯಸ್ತ್ವಾಂ ವಿಜಾನಾತು ಭಗವಾನ್ ದ್ವಾದಶಾತ್ಮಕಃ ।
ಮಯಾ ನೋತ್ಪಾಟಿತಾ ದಂತಾಃ ಕಸ್ಯಾಽಪಿ ನಿರಪತ್ರಪ ॥ ೧೮ ॥
ಪೂಷಾ ದೇವೋ ವಿಜಾನಾತಿ ದ್ವಾದಶಾತ್ಮಾ ದಿವಾಕರಃ ।
ಮೂರ್ಧ್ನಿ ಶೂಲಂ ತವ ಯತಃ ಸ್ವೈರ್ದೋಷೈರ್ಮಾಮಧಿಕ್ಷಿಪಃ ॥ ೧೯ ॥
ಯತ್ತ್ವಮಾಹ ಕೃಷ್ಣೇತಿ ಮಹಾಕಾಲೇತಿ ವಿಶ್ರುತಃ ॥ ೨೦ ॥
ಇತ್ಯಥಾಽಪಿ ಪ್ರವಾದೋಽಯಂ ಪ್ರವರಃ ಖ್ಯಾಮಿ ತೇ ಹರ ।
ನಿದರ್ಶನಾರ್ಥಂ ನ ದ್ವೇಷಾಚ್ಛ್ರುತ್ವಾ ತಂ ಕ್ಷಂತುಮರ್ಹಸಿ ॥ ೨೧ ॥
ವಿರೂಪೋ ಯಾವದಾದರ್ಶೇ ನಾಽಽತ್ಮನಃ ಪಶ್ಯತೇ ಮುಖಂ ।
ಮನ್ಯತೇ ತಾವದಾತ್ಮಾನಮನ್ಯೇಭ್ಯೋ ರೂಪವತ್ತಮಂ ॥ ೨೨ ॥
ಯದಾ ತು ಮುಖಮಾದರ್ಶೇ ವಿಕೃತಂ ಸೋಽಭಿವೀಕ್ಷತೇ ।
ತದೇತರಂ ವಿಜಾನಾತಿ ಹ್ಯಾತ್ಮಾನಂ ನೇತರಂ ಜನಂ ॥ ೨೩ ॥
ಸತ್ಯಧರ್ಮಚ್ಯುತಾತ್ಪುಂಸಃ ಕ್ರುದ್ಧಾದಾಶೀವಿಷಾದಿವ ।
ಸ ನಾಸ್ತಿಕೋಽಪ್ಯುದ್ವಿಜತೇ ಜನಃ ಕಿಂ ಪುನರಾಸ್ತಿಕಃ ॥ ೨೪ ॥

---

೧೮. ದ್ವಾದಶ ಮಾಸಗಳ ಅಧಿಪತಿಯಾದ ಸೂರ್ಯನೇ ನಿನ್ನನ್ನು ತಿಳಿದುಕೊಳ್ಳಲಿ. ಲಜ್ಜಾಹೀನನೆ! ನಾನು ಯಾರೊಬ್ಬರ ಹಲ್ಲುಗಳನ್ನೂ ಕಿತ್ತುಹಾಕಲಿಲ್ಲವಷ್ಟೆ.

೧೯–೨೦. ದೇವದೇವನೂ, ದ್ವಾದಶಾತ್ಮಕನೂ, ಹಗಲಿಗೆ ಕಾರಣನೂ ಆದ ಪೂಷನೇ ನಿನ್ನನ್ನು ಚೆನ್ನಾಗಿ ಬಲ್ಲನು. ಅವನ ತಲೆಯಲ್ಲಿ ನಿನ್ನ ಶೂಲವನ್ನು ಪ್ರಯೋಗಿಸಲಿಲ್ಲವೆ? ನಿನ್ನ ದೋಷಗಳನ್ನೆಲ್ಲ ನನ್ನಲ್ಲಿ ಎತ್ತಿ ಹೇಳುತ್ತಿರುವೆಯಲ್ಲವೆ? ಇನ್ನು ನನ್ನನ್ನು ಕಾಳಿಯೆಂದು ಕರೆದೆಯಲ್ಲವೆ. ನೀನೂ ಸಹ ಮಹಾಕಾಲನೆಂದು ಪ್ರಖ್ಯಾತನಾಗಿರುವುದು ಸುಳ್ಳೆ?

೨೧. ಪರಮೇಶ್ವರನೆ! ಇಂತು ಜನರಲ್ಲಿ ನಿನ್ನ ವಿಷಯದಲ್ಲಿರುವ ಪ್ರವಾದಗಳನ್ನು ವಿಸ್ತಾರವಾಗಿ ಹೇಳುತ್ತಿರುವೆನು. ಇವನ್ನೂ ನಿದರ್ಶನಕ್ಕಾಗಿ ಹೇಳುತ್ತಿರುವೆನೇ ಹೊರತು ದ್ವೇಷದಿಂದಲ್ಲ. ನನ್ನ ಈ ಮಾತುಗಳನ್ನು ಕ್ಷಮಿಸು.

೨೨. ಕುರೂಪಿಯಾದವನು ಎಲ್ಲಿಯವರೆಗೆ ಕನ್ನಡಿಯಲ್ಲಿ ತನ್ನ ಮುಖದ ಪ್ರತಿಬಿಂಬವನ್ನು ನೋಡಿಕೊಳ್ಳುವುದಿಲ್ಲವೊ, ಅಲ್ಲಿಯವರೆಗೂ ತಾನೇ ಇತರ ಎಲ್ಲರಿಗಿಂತಲೂ ಸುಂದರರೂಪನೆಂದು ತಿಳಿದುಕೊಳ್ಳುತ್ತಾನೆ.

೨೩. ಆದರೆ ವಿಕಾರವಾದ ತನ್ನ ಮುಖವನ್ನು ಯಾವಾಗ ಅವನು ಆದರ್ಶದಲ್ಲಿ ನೋಡಿಕೊಳ್ಳುವನೊ, ಆವಾಗ ತಾನೇ ಕುರೂಪಿಯೆಂದೂ ಇತರ ಜನರು ಹಾಗಲ್ಲವೆಂದೂ ತಿಳಿದುಕೊಳ್ಳುವನು.

೨೪. ಸತ್ಯ ಮತ್ತು ಧರ್ಮಗಳ ಸ್ಥಿತಿಯಿಂದ ಚ್ಯುತನಾದವನನ್ನು, ಕಂಡರೆ

ಇತ್ಯುಕ್ತೋಽಹಂ ತ್ವಯಾ ದೇವಿ ಮಯಾ ಕೋಲಾಹಲಃ ಕೃತಃ ।
ಅನಾತ್ಮಜ್ಞಾಽಸಿ ಗಿರಿಜೇ ಮೃಡೇ ಪಂಡಿತಮಾನಿನಿ ॥ ೨೫ ॥
ಸತ್ಯಂ ಸರ್ವೈರವಯವೈಃ ಸುತೋಽಪಿ ಸದೃಶಃ ಪಿತುಃ ।
ಕಾಠಿನ್ಯಂ ಕಷ್ಟಮಭ್ಯೇತಿ ಧಾತುಭ್ಯೋ ಬಹುಘಾತಿತಾ ॥ ೨೬ ॥
ಕುಟಿಲತ್ವಂ ಚ ಸರ್ವೇಭ್ಯೋಽಸೇವ್ಯತ್ವಂ ಹಿಮಾದಿವ ।
ಇತ್ಯುಕ್ತಾಽಸಿ ಮಯಾ ದೇವಿ ಪುನಃ ಪ್ರೋಕ್ತಂ ತ್ವಯಾ ವಚಃ ॥ ೨೭ ॥
ತಥಾಽಪಿ ದುಷ್ಟಸಂಸರ್ಗಾತ್ಸಂಕ್ರಾಂತಂ ಸರ್ವಮೇವ ಹಿ ।
ವ್ಯಾಲೇಭ್ಯೋಽನೇಕಜಿಹ್ವತ್ವಂ ಭಸ್ಮತಃ ಸ್ನೇಹವರ್ಜನಂ ॥ ೨೮ ॥
ಹೃತ್ಕಾಲುಷ್ಯಂ ಶಶಾಂಕಾದ್ವೈ ದುರ್ಬೋಧತ್ವಂ ವೃಷಾದಪಿ ।
ಸ್ಮಶಾನವಾಸಾದ್ಭೀರುತ್ವಂ ನಗ್ನತ್ವಂ ಚ ನ ಲಜ್ಜಯಾ ॥ ೨೯ ॥

---

ಮಹಾವಿಷವನ್ನು ಕಂಡಂತೆ ನಾಸ್ತಿಕನೂ ಸಹ ಉದ್ವೇಗಗೊಳ್ಳುವನೆಂದಮೇಲೆ ಆಸ್ತಿಕನ ವಿಷಯವನ್ನು ಹೇಳಬೇಕೆ?''

೨೫. ದೇವಿಯು! ಇಂತೆಂದು ನೀನು ಹೇಳಿದುದನ್ನು ಕೇಳಿ ನಾನು ನಿನ್ನನ್ನು ಸಂತೈಸಲು ಬಹಳ ಕೋಲಾಹಲವನ್ನು ಮಾಡಿದೆನು. ''ಎಲೌ ಗಿರಿಜಾತೆಯೆ! ಮೃಡಾಣಿಯೆ! ನೀನು ನಿಜವಾಗಿ ಆತ್ಮಜ್ಞಾನವಿಲ್ಲದವಳಾದರೂ ಪಂಡಿತಳೆಂಬ ಅಭಿಮಾನವುಳ್ಳವಳಾಗಿರುವೆ.

೨೬. ಸರ್ವಾವಯವಗಳಿಂದ ಸಲಕ್ಷಣನಾಗಿದ್ದರೂ ಮನುಷ್ಯನು ತನ್ನ ತಂದೆಯನ್ನು ಹೋಲುವನೆಂಬುದು ದಿಟವು. ನೀನು ಮಾತ್ರ ಹಾಗಿಲ್ಲ. ಏಕೆಂದರೆ ನಿನ್ನ ತಂದೆಯಾದ ಪರ್ವತದ ಧಾತುಗಳಿಂದ ಅಸಾಧ್ಯವಾದ ಕಾಠಿನ್ಯವನ್ನೂ ಬಹುಜನ ವಿರೋಧವನ್ನೂ ಹೊಂದಬೇಕಾಗಿದ್ದಿತು.

೨೭. ಹಾಗೆಯೇ ಹಿಮದ ರಾಶಿಯ ಸಂಪರ್ಕದಿಂದ ಸಕಲರಲ್ಲಿ ಕೌಟಿಲ್ಯವನ್ನೂ ಸೇವಾನರ್ಹತೆಯನ್ನೂ ತೋರಿಸಬೇಕಾಗಿತ್ತು.'' ಇಂತೆಂದು ನಾನು ಸಮಾಧಾನವನ್ನು ಹೇಳಿದರೂ ನೀನು ಪುನಃ ಹೇಳತೊಡಗಿದೆ.

೨೮. ''ಹಾಗಾದರೆ ನೀನೂ ದುಷ್ಟಸಂಪರ್ಕದಿಂದ ಎಲ್ಲ ದುರ್ಗುಣಗಳಿಗೂ ನಿಧಿಯಾಗಿರುವೆ. ಹಾವುಗಳಿಂದ ಎರಡು ನಾಲಿಗೆಯವನೂ, ಭಸ್ಮಲೇಪನದಿಂದ ಸ್ನೇಹವರ್ಜಿತನೂ ಆಗಿರುವೆ

೨೯. ಚಂದ್ರನ ಸಹವಾಸದಿಂದ ಮನಸ್ಸಿನಲ್ಲಿ ಕಳಂಕವುಳ್ಳವನೂ, ಮುದಿಯೆತ್ತಿನ ಪರಿಚರ್ಯೆಯಿಂದ ಅದರಂತೆಯೇ ತಿಳಿಗೇಡಿಯೂ, ಸ್ಮಶಾನದಲ್ಲಿ ವಾಸಮಾಡುವುದರಿಂದ ಭಯಂಕರನೂ, ದಿಗಂಬರತ್ವದಿಂದ ಲಜ್ಜಾಹೀನನೂ ಆಗಿರುವೆ.

ನಿರ್ಘೃಣತ್ವಂ ಕಪಾಲಾಚ್ಚ ದಯಾ ತೇ ವಿಗತಾ ಚಿರಂ ।
ಏವಂ ತದಾಽಭವದ್ರೌದ್ರಃ ಕಲಹೋ ಭಯಕೃಚ್ಛುಭೇ ।
ಏವಂ ಪ್ರವೃತ್ತೇ ತು ತದಾ ಕಂಪಿತಂ ಭುವನತ್ರಯಂ ॥ ೩೦ ॥
ಭೀತಾಶ್ಚ ದೇವಗಂಧರ್ವಾ ಯಕ್ಷಗಂಧರ್ವರಾಕ್ಷಸಾಃ ।
ತಸ್ಮಾತ್ಕೋಲಾಹಲೋ ಭೂಮಿಂ ಭಿತ್ವಾ ಲಿಂಗಮಭೂತ್ತದಾ ॥ ೩೧ ॥
ಲಿಂಗಮಧ್ಯಾತ್ಸಮುತ್ಪನ್ನಾ ವಾಣೀ ಸುಖಕರೀ ಶುಭಾ ।
ಆಶ್ವಾಸಯಂತೀ ದೇವಾನ್ಸ್ವೈ ತ್ರೈಲೋಕ್ಯಂ ಸಚರಾಚರಂ ॥ ೩೨ ॥
ನಾಮಾಽಸ್ಯ ಚಕ್ರುರ್ದೇವೇಶಾಸ್ತದಾ ಕಲಕಲೇಶ್ವರಂ ।
ಸ್ವರನಾಮಾಽಸೌ ತತೋಽಭೂಚ್ಛಂಕರೋ ಭುವಿ ವಿಶ್ರುತಃ ॥ ೩೩ ॥
ಯಸ್ತಮರ್ಚಯತೇ ಭಕ್ತ್ಯಾ ದೇವಂ ಕಲಕಲೇಶ್ವರಂ ।
ನ ರಾಕ್ಷಸಾಃ ಪಿಶಾಚಾಶ್ಚ ನ ಭೂತಾ ನ ವಿನಾಯಕಾಃ ।
ವಿಘ್ನಂ ಕುರ್ಯುರ್ವರಾರೋಹೇ ಕಲಹೋ ನ ಭವೇದ್ಗೃಹೇ ॥ ೩೪ ॥

---

೩೦. ಕೈಯಲ್ಲಿನ ಕಪಾಲದಿಂದ ಕನಿಕರವಿಲ್ಲದವನೂ ಆಗಿರುವೆ. ನಿನ್ನಲ್ಲಿ ದಯೆಯೆಂಬುದು ಬಹಳಕಾಲದ ಹಿಂದೆಯೇ ಮಾಯವಾಯಿತು.'' ಮಂಗಳೆಯೆ! ಇಂತು ನಮ್ಮನಮ್ಮಲ್ಲಿಯೇ ತೀವ್ರವಾದ ಕಲಹವುಂಟಾಗಿ ಲೋಕಗಳಿಗೆ ಭಯವನ್ನುಂಟುಮಾಡಿತು. ಈ ಕಲಹವು ಬಹಳವಾಗಿ ಬೆಳೆಯಲು ಮೂರು ಲೋಕಗಳೂ ನಡುಗಿದುವು.

೩೧. ದೇವತೆಗಳೂ, ಗಂಧರ್ವರೂ, ಯಕ್ಷರೂ, ರಾಕ್ಷಸರೂ ಭಯಭ್ರಾಂತರಾದರು. ಆ ಕಾಲದಲ್ಲಿ ಮಹಾಕೋಲಾಹಲವುಂಟಾಗಲು ಒಂದು ಲಿಂಗವು ಭೂಮಿಯನ್ನು ಭೇದಿಸಿಕೊಂಡು ಮೇಲಕ್ಕೆ ಬಂದಿತು.

೩೨. ಅದರ ಮಧ್ಯದಿಂದ ಸುಖಕರವೂ, ಮಂಗಳಪ್ರದವೂ ಆದ ವಾಣಿಯು ಹೊರಟು ದೇವತೆಗಳನ್ನೂ, ಚರಾಚರಗಳಿಂದ ಕೂಡಿದ ಮೂರು ಲೋಕಗಳನ್ನೂ ಸಮಾಧಾನಗೊಳಿಸಿ ಹೇಳಿತು.

೩೩. ದೇವೋತ್ತಮರೆಲ್ಲರೂ ಆಗ ಆ ಲಿಂಗಕ್ಕೆ ಕಲಕಲೇಶ್ವರನೆಂದು ಹೆಸರನ್ನಿಟ್ಟರು. ಆ ಮಹೇಶ್ವರನು ಸ್ವರೇಶ್ವರನೆಂದೂ ಕರೆಯಲ್ಪಟ್ಟು ಭೂಲೋಕದಲ್ಲಿ ಪ್ರಖ್ಯಾತನಾಗಿರುವನು.

೩೪. ಯಾವ ಮನುಷ್ಯನು ಈ ಕಲಕಲೇಶ್ವರ ಮಹಾದೇವನನ್ನು ಭಕ್ತಿಯಿಂದ ಪೂಜಿಸುವನೊ, ಅವನಿಗೆ ರಾಕ್ಷಸರಾಗಲಿ, ಪಿಶಾಚರಾಗಲಿ, ಭೂತಗಳಾಗಲಿ, ವಿನಾಯಕರಾಗಲಿ ಕಾರ್ಯವಿಘ್ನಗಳನ್ನು ಮಾಡುವುದಿಲ್ಲ. ಪಾರ್ವತಿಯೆ! ಅವನ ಮನೆಯಲ್ಲಿ ಕಲಹವೂ ಸಂಭವಿಸುವುದಿಲ್ಲ.

ಸುಶೀಲಾ ಗೃಹಿಣೀ ತಸ್ಯ ಸುರೂಪಾ ಸುಭಗಾ ಪ್ರಿಯೇ ।
ಬಹುಪುತ್ರಾ ಬಹುಧನಾ ಜಾಯತೇ ದರ್ಶನಾತ್ತಥಾ ॥ ೩೫ ॥
ಯೇ ಪಶ್ಯಂತಿ ಚತುರ್ದಶ್ಯಾಂ ದೇವಂ ಕಲಕಲೇಶ್ವರಂ ।
ನ ದುಃಖಂ ನ ಜರಾ ವ್ಯಾಧಿರ್ನಾಽಕಾಲಮರಣಂ ತಥಾ ॥ ೩೬ ॥
ನ ಚ ಶತ್ರುಭಯಂ ತೇಷಾಂ ಜಾಯತೇ ಗಿರಿಪುತ್ರಿಕೇ ।
ಲೋಕೋಽಕ್ಷಯೋ ಭವೇದ್ದೇವಿ ಯಾವದಿಂದ್ರಾಶ್ಚತುರ್ದಶ ॥ ೩೭ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಯಸ್ಯ ಶ್ರವಣಮಾತ್ರೇಣ ಕ್ಷೇಮಮತ್ರ ಪರತ್ರ ಚ ॥ ೩೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕಲ್ಕಲೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟಾದಶೋಽಧ್ಯಾಯಃ

---

೩೫. ಪ್ರಿಯಳೆ! ಈ ಲಿಂಗದ ದರ್ಶನವನ್ನು ಮಾಡುವುದರಿಂದ ಆತನ ಮಡದಿಯು ಸೌಶೀಲ್ಯವಂತೆಯೂ, ಸುಂದರಿಯೂ, ಸೌಭಾಗ್ಯವತಿಯೂ, ಬಹುಪುತ್ರವತಿಯೂ, ಧನಾಢ್ಯಳೂ ಆಗುವಳು.

೩೬. ಚತುರ್ದಶಿಯ ದಿನದಲ್ಲಿ ಯಾರು ಈ ಕಲಕಲೇಶ್ವರನನ್ನು ನೋಡುವರೊ, ಅವರಿಗೆ ದುಃಖವಾಗಲಿ, ಮುಪ್ಪಾಗಲಿ, ರೋಗವಾಗಲಿ, ಅಕಾಲಮರಣವಾಗಲಿ ಸಂಭವಿಸುವುದಿಲ್ಲ.

೩೭. ಎಲೌ ಗಿರಿರಾಜಕುಮಾರಿಯೆ! ಅವರಿಗೆಂದಿಗೂ ಶತ್ರುಭಯವೂ ಉಂಟಾಗುವುದಿಲ್ಲ. ಅವರ ಕೀರ್ತಿಯು ಹದಿನಾಲ್ಕು ಮಹೇಂದ್ರಕಲ್ಪಗಳವರೆವಿಗೂ ಭೂಲೋಕದಲ್ಲಿ ಅಕ್ಷಯವಾಗಿರುವುದು.

೩೮. ದೇವಿಯೆ! ಇಂತು ನಿನಗೆ ಕಲಕಲೇಶ್ವರನ ಮಹಿಮೆಯನ್ನೊಳಗೊಂಡ ಪಾಪನಾಶಕವಾದ ಕಥೆಯನ್ನು ಹೇಳಿರುವೆನು. ಇದನ್ನು ಕೇಳುವುದರಿಂದಲೇ ಇಹಲೋಕದಲ್ಲಿಯೂ ಪರದಲ್ಲಿಯೂ ಕ್ಷೇಮವುಂಟಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕಲ್ಕಲೇಶ್ವರಮಾಹಾತ್ಮ್ಯವರ್ಣನ" ವೆಂಬ
ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕೋನವಿಂಶೋಽಧ್ಯಾಯಃ

## ನಾಗಚಂಡೇಶ್ವರಮಾಹಾತ್ಮ್ಯವರ್ಣನಂ

**ಈಶ್ವರ ಉವಾಚ :—**

**ಏಕೋನವಿಂಶತಿತಮಂ ನಾಗಚಂಡೇಶ್ವರಂ ಪ್ರಿಯೇ ।**
**ನಿರ್ಮಾಲ್ಯಲಂಘನಾತ್ಪಾಪಾನ್ಮುಚ್ಯತೇ ಯಸ್ಯ ದರ್ಶನಾತ್ ॥ ೧ ॥**
**ತಸ್ಯ ಪ್ರಭಾವಂ ಸುಭಗಂ ಕಥಯಾಮ್ಯಥ ವಿಸ್ತರಾತ್ ।**
**ಶೃಣ್ವೇಕಾಗ್ರಮನಾ ದೇವಿ ಸರ್ವಪಾಪಪ್ರಣಾಶನಂ ॥ ೨ ॥**
**ಪುರಾ ದೇವರ್ಷಿಗಂಧರ್ವಾಶ್ಚಾರಣಾ ಗುಹ್ಯಕಾಸ್ತಥಾ ।**
**ಉಪವಿಷ್ಟಾಃ ಸುಧರ್ಮಾಯಾಂ ಕಥಯಂತಃ ಶುಭಾಂ ಕಥಾಂ ॥ ೩ ॥**
**ಏತಸ್ಮಿನ್ನಂತರೇ ಶಕ್ರೋ ದೇವರ್ಷಿಂ ನಾರದಂ ಮುನಿಂ ।**
**ಪಪ್ರಚ್ಛ ಸಾದರಂ ದೇವಿ ಸಮಾಯಾತಂ ಶುಚಿವ್ರತಂ ॥ ೪ ॥**
**ದೃಷ್ಟ್ವಾ ವಿನಯಸಂಪನ್ನಂ ಬ್ರಹ್ಮಚರ್ಯಪರಾಯಣಂ ।**
**ಮೇಖಲಾಜಿನಕೌಪೀನಂ ವೀಣಾದಂಡವಿಭೂಷಿತಂ ॥ ೫ ॥**

---

### ಕನ್ನಡದ ಅನುವಾದ

#### ನಾಗಚಂಡೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಹತ್ತೊಂಬತ್ತನೆಯ ಲಿಂಗವೇ ನಾಗಚಂಡೇಶ್ವರವೆಂಬುದು. ಇದರ ದರ್ಶನದಿಂದ ಶಿವನಿರ್ಮಾಲ್ಯವನ್ನು ಕಡೆಗಂಡ ಪಾತಕವು ದೂರವಾಗುವುದು.

೨. ಅದರ ಮಂಗಳಪ್ರದವಾದ ಪ್ರಭಾವವನ್ನು ವಿಸ್ತಾರವಾಗಿ ವರ್ಣಿಸುವೆನು. ದೇವಿಯೆ! ಸಕಲ ಪಾಪಪ್ರಣಾಶಕವಾದ ಈ ಕಥೆಯನ್ನು ತವೇಕಚಿತ್ತಳಾಗಿ ಕೇಳು.

೩. ಹಿಂದೆ ದೇವರ್ಷಿಗಳೂ, ಗಂಧರ್ವರೂ, ಚಾರಣರೂ, ಗುಹ್ಯಕರೂ ಸುಧರ್ಮಾಖ್ಯವಾದ ದೇವೇಂದ್ರನ ಸಭಾಸ್ಥಾನದಲ್ಲಿ ಕುಳಿತು ಶುಭಚರಿತ್ರೆಗಳನ್ನು ಹೇಳಿಕೊಳ್ಳುತ್ತಿದ್ದರು.

೪. ಈ ಸಮಯದಲ್ಲಿಯೇ ದೇವರ್ಷಿಯೂ, ಉತ್ತಮ ವೈಷ್ಣವವ್ರತಧಾರಿಯೂ ಆದ ನಾರದ ಮಹಾಮುನಿಯು ಅಲ್ಲಿಗೈತರಲು ಮಹೇಂದ್ರನು ಆದರದಿಂದ ಆತನನ್ನು ಕೇಳಲುಪಕ್ರಮಿಸಿದನು.

೫. ಆ ನಾರದನು ವಿನಯವೆಂಬ ಸದ್ಗುಣದಿಂದ ಭರಿತನೂ, ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತಿರುವವನೂ, ಜಿಂಕೆಯ ಚರ್ಮದ ಕಟಿಸೂತ್ರ ಕೌಪೀನಗಳುಳ್ಳವನೂ, ವೀಣೆಯ ದಂಡವನ್ನು ಕೈಯಲ್ಲಿ ಹಿಡಿದವನೂ ಆಗಿದ್ದನು.

ತ್ವಯಾ ದೃಷ್ಟಮಿದಂ ಸರ್ವಂ ತ್ರೈಲೋಕ್ಯಂ ಭೂರ್ಭುವಾದಿಕಂ ।
ಉತ್ಪಾದ್ಯಮಾನಮುತ್ಪನ್ನಂ ಪ್ರಲಯಂ ಚ ಸಹಸ್ರಶಃ ॥ ೬ ॥
ತ್ವತ್ತುಲ್ಯೋ ನಾಽಸ್ತಿ ಲೋಕೇಽಸ್ಮಿನ್ಮುಕ್ತ್ವೈಕಂ ಪರಮೇಷ್ಠಿನಂ ।
ಜಗತ್ಕಾರಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ ॥ ೭ ॥
ಯೋಗೇನ ತಪಸಾ ಭಕ್ತ್ಯಾ ಯತ್ತ್ವಯಾ ಪರಿತೋಷಿತಃ ।
ತ್ರೈಲೋಕ್ಯಮಭಿಜಾನಾಸಿ ತತ್ಸರ್ವಂ ಸರ್ವತಃ ಸ್ಫುಟಂ ॥ ೮ ॥
ಅತೋಽಹಂ ಪ್ರಷ್ಟುಮಿಚ್ಛಾಮಿ ಕಥ್ಯತಾಂ ಮಮ ನಿಶ್ಚಯಂ ।
ಪೃಥಿವ್ಯಾಂ ಪ್ರವರಂ ಕ್ಷೇತ್ರಂ ಪಾವನಂ ಭುಕ್ತಿಮುಕ್ತಿದಂ ॥ ೯ ॥
ಏವಂ ಶ್ರುತ್ವಾ ತದಾ ಧ್ಯಾತ್ವಾ ಚಿಂತಯಾಮಾಸ ನಾರದಃ ।
ಚಿಂತಯಿತ್ವಾ ಚಿರಂ ಕಾಲಮಿದಂ ವಚನಮಬ್ರವೀತ್ ॥ ೧೦ ॥
ದೇವರಾಜ ಸ್ಮೃತಂ ಪುಣ್ಯಂ ಕ್ಷೇತ್ರರಾಜಮನುತ್ತಮಂ ।
ಕ್ಷೇತ್ರಾಣಾಮುತ್ತಮಂ ಕ್ಷೇತ್ರಂ ಪ್ರಯಾಗಂ ಚ ಪ್ರಶಸ್ಯತೇ ॥ ೧೧ ॥

೬. "ಮಹರ್ಷಿಯೆ! ಭೂರ್ಲೋಕ, ಭುವರ್ಲೋಕಗಳೇ ಮೊದಲಾಗಿ ಸಕಲ ಲೋಕಗಳೂ ನಿನಗೆ ಚಿರಪರಿಚಿತಗಳಾಗಿರುವುವು. ಅವುಗಳ ಉತ್ಪತ್ತಿ ಸ್ಥಿತಿ ಪ್ರಳಯಗಳನ್ನೂ ಸಾವಿರಾರು ಸಲ ನೋಡಿರುವೆ.

೭. ಚತುರ್ಮುಖನೊಬ್ಬನನ್ನು ಬಿಟ್ಟರೆ ಬ್ರಹ್ಮಾಂಡದಲ್ಲಿ ನಿನಗೆ ಸಮಾನರಾದವರು ಬೇರೆ ಯಾರೂ ಇಲ್ಲ. ಆತನೇ ಲೋಕಗಳಿಗೆ ಆದಿಕಾರಣನು. ಅವ್ಯಕ್ತನು. ಶಾಶ್ವತನು. ಸದಸತ್ತುಗಳಿಗೆ ಅಧಿಷ್ಠಾನನಾದವನು.

೮. ಆತನನ್ನೇ ನೀನು ಯೋಗಾಭ್ಯಾಸದಿಂದಲೂ, ತಪಸ್ಸಿನಿಂದಲೂ, ಭಕ್ತಿಯಿಂದಲೂ ಸಂತೋಷಗೊಳಿಸಿರುವೆ. ಆದುದರಿಂದ ಮೂರು ಲೋಕಗಳಲ್ಲಿ ಎಲ್ಲೆಡೆಗಳಲ್ಲಿಯೂ ಯಾವಾಗಲೂ ನಡೆಯುತ್ತಿರುವ ಎಲ್ಲ ವಿಷಯಗಳನ್ನೂ ಬಲ್ಲವನಾಗಿರುವೆ.

೯. ಆದುದರಿಂದ ನಿನ್ನನ್ನು ಪ್ರಶ್ನೆಮಾಡಲಿಚ್ಛಿಸುತ್ತೇನೆ. ಸಕಲ ಭೂಮಂಡಲದಲ್ಲಿ ಅಗ್ರಗಣ್ಯವೂ, ಪಾವನವೂ, ಭೋಗಮೋಕ್ಷಪ್ರದವೂ ಆದ ತೀರ್ಥವು ಯಾವುದೆಂಬುದನ್ನು ನಿಶ್ಚಯಮಾಡಿ ನನಗೆ ತಿಳಿಸು."

೧೦. ದೇವೇಂದ್ರನ ಈ ಮಾತುಗಳನ್ನು ಕೇಳಿ ನಾರದನು ಧ್ಯಾನಾಸಕ್ತನಾಗಿ ಯೋಚಿಸಿದನು. ಬಹಳ ಕಾಲದವರೆಗೂ ಚಿಂತಿಸಿದ ಮೇಲೆ ಈ ಮಾತುಗಳನ್ನಾಡಿದನು.

೧೧. "ದೇವರಾಜನೆ! ಪುಣ್ಯಪ್ರದವೂ, ಉತ್ತಮೋತ್ತಮವೂ ಆದ ಕ್ಷೇತ್ರವು ಯಾವುದೆಂಬುದು ಜ್ಞಾಪಕಕ್ಕೆ ಬಂದಿತು. ಕ್ಷೇತ್ರಗಳಲ್ಲೆಲ್ಲ ಉತ್ತಮ ಕ್ಷೇತ್ರವೆಂದು ಪ್ರಯಾಗವು ವಿಖ್ಯಾತವಾಗಿರುವುದು.

ತಸ್ಮಾದ್ದಶಗುಣಂ ಕ್ಷೇತ್ರಂ ಮಹಾಕಾಲಸ್ಯ ಕಥ್ಯತೇ ।
ಭುಕ್ತಿದಂ ಮುಕ್ತಿದಂ ತಚ್ಚ ದರ್ಶನಾದಪಿ ವಾಸವ ॥ ೧೨ ॥
ಏತಚ್ಛ್ರುತ್ವಾ ಸಹಸ್ರಾಕ್ಷೋ ವರ್ಣಯಿತ್ವಾ ಚ ತಂ ಮುನಿಂ ।
ಸರ್ವೈರ್ದೇವಗಣೈಃ ಸಾರ್ಧಂ ವಿಮಾನಸ್ಥಸ್ತ್ವರಾನ್ವಿತಃ ॥ ೧೩ ॥
ಅಂತರಿಕ್ಷಸ್ಥಿತೋ ಜಿಷ್ಣುರದ್ರಾಕ್ಷೀಚ್ಚ ಸುರೈಃ ಸಹ ।
ಕ್ಷೇತ್ರಂ ಲಿಂಗೈಃ ಸಮಾಕೀರ್ಣಮಂಗುಲಸ್ಯಾಂತರಂ ನ ಹಿ ॥ ೧೪ ॥
ಷಷ್ಟಿಕೋಟಿಸಹಸ್ರಾಣಿ ಷಷ್ಟಿಕೋಟಿಶತಾನಿ ಚ ।
ಮಹಾಕಾಲವನೇ ರಮ್ಯೇ ನಿರ್ಮಾಲ್ಯಂ ಲಂಘ್ಯತೇ ಕಥಂ ॥ ೧೫ ॥
ನಿರ್ಮಾಲ್ಯಲಂಘನಾದ್ದೋಷೋ ಮಹಾನ್ ಭವತಿ ನಿಶ್ಚಿತಂ ।
ಇತ್ಯಾಲೋಚ್ಯ ಪುನರ್ದೇವಿ ಜಗ್ಮುಃ ಸ್ವರ್ಗೇ ಮನೋರಮಾಃ ॥ ೧೬ ॥
ನಿರ್ಮಾಲ್ಯದೋಷಭೀತಾಸ್ತೇ ಕ್ಷೇತ್ರೇ ನ ವಿವಿಶುಃ ಸುರಾಃ ।
ಏತಸ್ಮಿನ್ನಂತರೇ ದೇವಿ ವಿಮಾನಸ್ಥಾ ಗಣೋತ್ತಮಾಃ ॥ ೧೭ ॥

---

೧೨. ಆದರೆ ಮಹಾಕಾಲವನವು ಅದಕ್ಕೂ ಹತ್ತುಪಾಲು ಮಿಗಿಲೆಂದು ಹೇಳಲ್ಪಟ್ಟಿರುವುದು. ಮಹೇಂದ್ರನೆ! ದರ್ಶನಮಾತ್ರದಿಂದಲೇ ಆ ಕ್ಷೇತ್ರವು ಭೋಗಮೋಕ್ಷಗಳನ್ನು ಕೈಗೂಡಿಸುವುದು.''

೧೩. ಈ ಮಾತನ್ನು ಕೇಳಿ ಇಂದ್ರನು ಆ ಮುನಿವರ್ಯನನ್ನು ಬಹುವಾಗಿ ಹೊಗಳಿ ಅತ್ಯಂತ ಸಂಭ್ರಮದಿಂದ ಸಕಲ ದೇವತಾಗಣಗಳೊಡನೆ ದಿವ್ಯವಿಮಾನ ದಲ್ಲಿ ಕುಳಿತು ಹೊರಟನು.

೧೪. ಅಂತರಿಕ್ಷದಲ್ಲಿಯೇ ನಿಂತು ಮಹೇಂದ್ರನು ದೇವತಾಪರಿವಾರಿತನಾಗಿ ಆ ಕ್ಷೇತ್ರವನ್ನು ನೋಡಿದನು. ಆ ಪ್ರದೇಶವೆಲ್ಲವೂ ಒಂದಂಗುಲದ ಅವಕಾಶವೂ ಇಲ್ಲದಂತೆ ಅಸಂಖ್ಯಾತಲಿಂಗಗಳಿಂದ ತುಂಬಿದ್ದಿತು.

೧೫. '' ರಮ್ಯವಾದ ಈ ಮಹಾಕಾಲವನದಲ್ಲಿ ಅರುವತ್ತಾರುಸಾವಿರ ಕೋಟಿ ಮಹಾ ಲಿಂಗಗಳಿರುವುವು. ಹೀಗಿರುವಲ್ಲಿ ಯಾವೊಂದು ಶಿವಲಿಂಗದ ನಿರ್ಮಾಲ್ಯ ವನ್ನುಲ್ಲಂಘಿಸದಂತೆ ವರ್ತಿಸುವುದು ಹೇಗೆ?

೧೬. ನಿಜವಾಗಿಯೂ ನಿರ್ಮಾಲ್ಯದ ಉಲ್ಲಂಘನದಿಂದ ಮಹಾದೋಷವು ಸಂಭವಿಸುವುದು.'' ಪಾರ್ವತಿಯೆ! ಇಂತೆಂದಾಲೋಚಿಸಿ ಆ ದೇವತೆಗಳೆಲ್ಲರೂ ಪುನಃ ಸ್ವರ್ಗಲೋಕಕ್ಕೆ ಹಿಂದಿರುಗಿದರು.

೧೭–೧೯. ಅವರು ನಿರ್ಮಾಲ್ಯೋಲ್ಲಂಘನದೋಷದ ಭಯದಿಂದ ಆ ಕ್ಷೇತ್ರ ವನ್ನು ಪ್ರವೇಶಿಸಲಾಗಲಿಲ್ಲ. ಪಾರ್ವತಿಯೆ! ಈ ಕಾಲಾಂತರದಲ್ಲಿಯೇ ಒಬ್ಬಾನೊಬ್ಬ ಗಣೋತ್ತಮನು ಸ್ವರ್ಗಲೋಕಕ್ಕೆ ಬರುತ್ತಿದ್ದನು. ಅನೇಕ

ಗಣೈರ್ನಾನಾವಿಧೈಃ ಸೇವ್ಯೈರ್ಗೀಯಮಾನಶ್ಚ ಕಿನ್ನರೈಃ ।
ಚಾರಣೈಃ ಸ್ತೂಯಮಾನಸ್ತು ಸ್ವರ್ಗಲೋಕಂ ವ್ರಜನ್ಸುರೈಃ ॥ ೧೮ ॥
ಪ್ರಫುಲ್ಲನಯನೈರ್ದೃಷ್ಟಃ ಕೋಽಯಂ ಧನ್ಯೋ ಮಹಾತಪಾಃ ।
ತೇಜಸಾ ದೀಪ್ಯಮಾನೋಽಯಮಪ್ಸರೋಭಿಶ್ಚ ಸೇವ್ಯತೇ ॥ ೧೯ ॥
ಪಪ್ರಚ್ಛುರಮರಾಃ ಸರ್ವೇ ಕೋಽಯಂ ರುದ್ರನಿಭೋ ಗಣಃ ।
ಯಾತಿ ಕುತ್ರ ಮಹಾಬಾಹೋ ಹೃಷ್ಟಾತ್ಮಾ ಪ್ರಹಸನ್ಮುಖಃ ॥ ೨೦ ॥
ಪೃಷ್ಟಸ್ತದಾ ಸುರೈಃ ಸರ್ವೈರ್ವಿಸ್ಮಯಾವಿಷ್ಟಮಾನಸೈಃ ।
ಕಸ್ತ್ವಂ ಪುರುಷಶಾರ್ದೂಲ ಕಿಂ ತ್ವಯಾ ಸುಕೃತಂ ಕೃತಂ ॥ ೨೧ ॥
ದೇವಾನಾಂ ಪುರತೋ ದೇವಿ ನಿಃಶೇಷಂ ಕಥಿತಂ ತದಾ ।
ಮಹಾಕಾಲೋ ಮಹಾದೇವಃ ಪೂಜಿತೋ ಭಕ್ತಿತಃ ಸ್ತುತಃ ॥ ೨೨ ॥
ಹೃಷ್ಟೇನ ತೇನ ಮೇ ದತ್ತಂ ಗಣತ್ವಂ ಯತ್ಸುದುರ್ಲಭಂ ।
ನಾಮ ದತ್ತಂ ಚ ಸುಭಗಂ ನಾಗಚಂಡ ಇತಿ ಧ್ರುವಂ ॥ ೨೩ ॥

---

ವಿಧರಾದ ಗಣರು ಅವನಿಗೆ ಸೇವೆಯನ್ನು ಮಾಡುತ್ತಿದ್ದರು. ಕಿನ್ನರರು ಗಾನ ಮಾಡುತ್ತಿದ್ದರು. ಚಾರಣರು ಸ್ತೋತ್ರಮಾಡುತ್ತಿದ್ದರು. ಇಂತು ವೈಭವ ದಿಂದ ಬರುತ್ತಿರುವ ಅವನನ್ನು ದೇವತೆಗಳು ಅರಳಿದ ಕಣ್ಣುಗಳಿಂದ ನೋಡುತ್ತ ತಮ್ಮಲ್ಲಿಯೇ, "ಪರಮತಪಸ್ವಿಯಾದ ಈ ಮಹಾತ್ಮನಾರು? ತೇಜಸ್ಸಿನಿಂದ ಬೆಳಗುತ್ತಿರುವ ಇವನನ್ನು ಅಪ್ಸರೆಯರು ಸೇವಿಸುತ್ತಿರುವರು" ಎಂದು ಯೋಚಿಸಿದರು.

೨೦. ಸಕಲ ದೇವತೆಗಳೂ "ಈಶ್ವರನಿಗೆ ಸಮಾನನೂ, ಮಹಾಬಾಹುವೂ, ಸಂತುಷ್ಟಾಂತರಂಗನೂ, ನಗೆಮೊಗದವನೂ ಆದ ಈ ಗಣನಾಯಕನು ಯಾರಾ ಗಿರಬಹುದು?" ಎಂದು ಒಬ್ಬರನ್ನೊಬ್ಬರು ಕೇಳುತ್ತಿದ್ದರು.

೨೧. ವಿಸ್ಮಯಾವಿಷ್ಟವಾದ ಮನಸ್ಸಿನಿಂದ ಸಕಲ ದೇವತೆಗಳೂ ಆತನನ್ನು ಕುರಿತು "ಎಲೈ ಪುರುಷಶ್ರೇಷ್ಠನೆ! ನೀನು ಯಾರು? ಯಾವ ಪುಣ್ಯವನ್ನು ಮಾಡಿರುವೆ?" ಎಂದು ಕೇಳಿದರು.

೨೨. ಆಗ ಆತನು ದೇವತೆಗಳ ಮುಂದೆ ತನ್ನ ಚರಿತ್ರೆಯನ್ನು ನಿಶ್ಶೇಷವಾಗಿ ಹೇಳಿದನು. "ಮಹಾಕಾಲನೆಂಬ ಮಹೇಶ್ವರನನ್ನು ನಾನು ನಿತ್ಯವೂ ಭಕ್ತಿಯಿಂದ ಪೂಜಿಸಿ ಸ್ತೋತ್ರಮಾಡುತ್ತಿದ್ದೆನು.

೨೩. ಆತನೇ ಸಂತೋಷಗೊಂಡು ಅತಿದುರ್ಲಭವಾದ ಈ ಗಾಣಾಪತ್ಯ ವನ್ನು ನನಗೆ ಕೊಟ್ಟಿರುವನು. ಮತ್ತು ನನಗೆ ಸೌಭಾಗ್ಯಕರವಾದ ನಾಗಚಂಡ ನೆಂಬ ಹೆಸರನ್ನೂ ಕೊಟ್ಟಿರುವನು."

ಪಪ್ರಚ್ಛುರಮರಾಸ್ತಚ್ಚ ಸಾದರಂ ಗಣಸತ್ತಮು ।
ನಾಗಚಂಡ ತ್ವಯಾ ತತ್ರ ನಿರ್ಮಾಲ್ಯಂ ಪತಿತಂ ತ್ವಥ ॥ ೨೪ ॥
ಮಹಾಕಾಲವನೇ ಪುಣ್ಯೇ ಲಂಘಿತಂ ಚರತಾ ತ್ವಯಾ ।
ಸಂಚಾರೋ ನಾಽಸ್ತಿ ತತ್ರೈವ ಲಿಂಗಸಂಕೀರ್ಣತಾ ಯತಃ ॥ ೨೫ ॥
ಉಪಾಯಸ್ತೇನ ಕಥಿತೋ ದೇವಾನಾಂ ಪುರತಸ್ತದಾ ।
ತತ್ರ ತಿಷ್ಠತಿ ದೇವೇಶ ಲಿಂಗಂ ಸರ್ವಫಲಪ್ರದಂ ॥ ೨೬ ॥
ಈಶಾನೇಶ್ವರದೇವಸ್ಯ ತಿಷ್ಠತೀಶಾನಭಾಗತಃ ।
ತಸ್ಯ ದರ್ಶನಮಾತ್ರೇಣ ನ ಸ ಗಚ್ಛತಿ ದುಷ್ಕೃತಂ ॥ ೨೭ ॥
ನಿರ್ಮಾಲ್ಯಲಂಘನೋದ್ಭೂತಂ ಯತ್ಪಾಪಂ ಜಾಯತೇ ಮಹತ್ ।
ತತ್ಸರ್ವಂ ನಾಶಮಾಯಾತಿ ತಸ್ಯ ಲಿಂಗಸ್ಯ ದರ್ಶನಾತ್ ॥ ೨೮ ॥
ತತೋ ದೇವಗಣಾಃ ಸರ್ವೇ ಮಹಾಕಾಲವನೇ ಪುನಃ ।
ಸಮಾಯಾತಾ ಮಹಾಭಾಗಾ ಮಹಾಕಾಲಶ್ಚ ಪೂಜಿತಃ ॥ ೨೯ ॥

---

೨೪. ದೇವತೆಗಳು ಪುನಃ ಆದರದಿಂದ ಪ್ರಶ್ನೆಮಾಡಿದರು. ''ಗಣೋತ್ತಮನಾದ ನಾಗಚಂಡನೆ! ನೀನು ಅಲ್ಲಿ ಬಿದ್ದಿರುವ ನಿರ್ಮಾಲ್ಯದ ವಿಷಯದಲ್ಲಿ ಹೇಗೆ ನಡೆದುಕೊಂಡೆ?

೨೫. ಪುಣ್ಯಪ್ರದೇಶವಾದ ಮಹಾಕಾಲವನದಲ್ಲಿ ಓಡಾಡುತ್ತಿದ್ದ ನೀನು ಅದನ್ನು ಉಲ್ಲಂಘಿಸಿರಲೇ ಬೇಕು. ಆ ಸ್ಥಳವೆಲ್ಲವೂ ಲಿಂಗಗಳಿಂದ ನಿಬಿಡಿತವಾಗಿರುವುದರಿಂದ ಅಲ್ಲಿ ಸಂಚರಿಸುವಂತೆಯೇ ಇಲ್ಲ.''

೨೬. ಆಗ ಆ ಗಣನಾಯಕನು ದೇವತೆಗಳ ಮುಂದೆ ಒಂದು ಉಪಾಯವನ್ನು ಹೇಳಿದನು. ''ದೇವಾಧಿದೇವತೆಗಳಿರಾ! ಅಲ್ಲಿ ಸರ್ವಾಭೀಷ್ಟಫಲಪ್ರದವಾದ ಮಹಾಲಿಂಗವೊಂದಿರುವುದು.

೨೭. ಅದು ಈಶಾನೇಶ್ವರನಿಗೆ ಈಶಾನ್ಯದಿಕ್ಕಿನಲ್ಲಿ ನೆಲಸಿರುವುದು. ಅದನ್ನು ನೋಡುವ ಮಾತ್ರದಿಂದಲೇ ಕ್ಷೇತ್ರಗತಗಳಾದ ಸಮಸ್ತ ಪಾತಕಗಳೂ ನಾಶವಾಗುವುವು.

೨೮. ಆ ಮಹಾಲಿಂಗದ ದರ್ಶನದಿಂದ, ನಿರ್ಮಾಲ್ಯೋಲ್ಲಂಘನದಿಂದ ಉಂಟಾಗುವ ಮಹತ್ತರವಾದ ಪಾಪವೂ ನಿಶ್ಶೇಷವಾಗಿ ನಾಶವಾಗುವುದು.''

೨೯. ಇದನ್ನು ಕೇಳಿ ದೇವತಾಸಮೂಹಗಳೆಲ್ಲರೂ ಪುನಃ ಮಹಾಕಾಲವನ ಕ್ಷೇತ್ರಕ್ಕೆ ಬಂದು ಸೇರಿದರು. ಮತ್ತು ಮಹಾಭಾಗ್ಯಶಾಲಿಗಳಾದ ಅವರು ಮಹಾಕಾಲೇಶ್ವರನನ್ನು ಪೂಜಿಸಿದರು.

ಯಥಾ ಲಿಂಗಂ ಚ ತದ್ದೃಷ್ಟ್ವಂ ಸರ್ವಲೋಕಕ್ಷಯಂಕರಂ ।
ತಸ್ಯ ದರ್ಶನಮಾತ್ರೇಣ ನಿರ್ಮಾಲ್ಯಲಂಘನಾದಿಭಿಃ ।
ದೋಷೋ ನಷ್ಟಃ ಸುರಾಣಾಂ ಚ ತತೋ ನಾಮಾಽಸ್ಯ ಚಕ್ರಿರೇ ॥ ೩೦ ॥
ಅಸ್ಮಾಕಂ ತೇನ ಕಥಿತಂ ನಾಗಚಂಡೇನ ಧೀಮತಾ ।
ನಾಗಚಂಡೇಶ್ವರಾಖ್ಯಾನಮತೋ ಲೋಕೇ ಭವಿಷ್ಯತಿ ॥ ೩೧ ॥
ಕೃತ್ವಾಽಸ್ಯ ನಾಮ ತೇ ದೇವಾ ಜಗ್ಮುಃ ಸ್ವರ್ಗೇಽಹಮುತ್ತಮಂ ।
ಪೂಜಯಿಷ್ಯಂತಿ ಯೇ ಕೇಚಿನ್ನಾಗಚಂಡೇಶ್ವರಂ ಶಿವಂ ।
ನಿರ್ಮಾಲ್ಯಲಂಘನೋದ್ಭೂತಂ ತೇಷಾಂ ನಶ್ಯತಿ ಪಾತಕಂ ॥ ೩೨ ॥
ನಾಗಚಂಡೇಶ್ವರಂ ದೇವಂ ಯೇ ಪಶ್ಯಂತಿ ದಿನೇ ದಿನೇ ।
ಅಜ್ಞಾನಾಜ್ಜ್ಞಾನತಃ ಪಾಪಂ ತೇಷಾಂ ನಶ್ಯತಿ ನಾಽನ್ಯಥಾ ॥ ೩೩ ॥
ಆಹ್ಲಾದಂ ನಿರ್ವೃತಿಂ ಸ್ವಾಸ್ಥ್ಯಮಾರೋಗ್ಯಂ ಚಾರುರೂಪತಾಂ ।
ಸಪ್ತಜನ್ಮಾನ್ಯವಾಪ್ನೋತಿ ದರ್ಶನೇನ ನ ಸಂಶಯಃ ॥ ೩೪ ॥
ಪ್ರಾಪ್ನೋತ್ಯಭಿಮತಾನ್ಕಾಮಾನ್ದೇವಾನಾಮಪಿ ದುರ್ಲಭಾನ್ ।
ಕೀರ್ತನಾನ್ನಾತ್ರ ಸಂದೇಹೋ ನಾಗಚಂಡೇಶ್ವರಸ್ಯ ಚ ॥ ೩೫ ॥

---

೩೦. ಮತ್ತು ಸಕಲ ದೋಷಗಳನ್ನೂ ಕ್ಷಯಗೊಳಿಸುವಂತಹ ಆ ಲಿಂಗವನ್ನೂ ನೋಡಿದರು. ಅದರ ದರ್ಶನಮಾತ್ರದಿಂದಲೇ ನಿರ್ಮಾಲ್ಯಲಂಘನಾದಿಗಳಿಂದುಂಟಾದ ದೇವತೆಗಳ ಸಮಸ್ತ ದೋಷಗಳೂ ತೊಲಗಿದುವು. ಆದುದರಿಂದ ಅವರೇ ಅದಕ್ಕೆ ಒಂದು ಹೆಸರನ್ನೂ ಕೊಟ್ಟರು.

೩೧. "ಈ ಮಹಾಲಿಂಗದ ಮಹಿಮೆಯು ಮಹಾಪ್ರಾಜ್ಞನಾದ ನಾಗಚಂಡನಿಂದ ನಮಗೆ ಹೇಳಲ್ಪಟ್ಟಿತು. ಆದುದರಿಂದ ಈ ಲಿಂಗವು ನಾಗಚಂಡೇಶ್ವರನೆಂದೇ ಲೋಕದಲ್ಲಿ ಪ್ರಖ್ಯಾತವಾಗುವುದು."

೩೨–೩೩. ಇಂತೆಂದು ದೇವತೆಗಳು ಅದಕ್ಕೆ ಹೆಸರನ್ನಿಟ್ಟು ತಮ್ಮ ಉತ್ತಮವಾದ ಸ್ವರ್ಗದ ನೆಲೆಗೆ ಹೊರಟುಹೋದರು. ಯಾವ ನರರೇ ಆಗಲಿ ಈ ನಾಗಚಂಡೇಶ್ವರ ಮಹಾಲಿಂಗವನ್ನು ಪೂಜಿಸುವರೊ, ಅವರಿಗೆ ನಿರ್ಮಾಲ್ಯವನ್ನು ಉಲ್ಲಂಘಿಸಿದ ಪಾಪವು ನಾಶವಾಗುವುದು. ಯಾರು ಪ್ರತಿದಿನದಲ್ಲಿಯೂ ನಾಗಚಂಡೇಶ್ವರದೇವನನ್ನು ನೋಡುತ್ತಿರುವರೊ, ಅವರು ತಿಳಿದೂ ತಿಳಿಯದೆಯೂ ಮಾಡುವ ಪಾಪವೆಲ್ಲವೂ ನಾಶವಾಗುವುದು. ಇದು ಸುಳ್ಳಲ್ಲವು.

೩೪. ಈ ಮಹಾಲಿಂಗದ ಒಂದು ದರ್ಶನದಿಂದಲೇ ಮನುಷ್ಯನು ಏಳು ಜನ್ಮಗಳವರೆಗೂ ಸಂತೋಷ, ನಿಶ್ಚಿಂತೆ, ಮನಸ್ಸಮಾಧಾನ, ದೇಹಾರೋಗ್ಯ ಮತ್ತು ಸುಂದರವಾದ ರೂಪ ಮುಂತಾದುವುಗಳನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

೩೫. ಈ ನಾಗಚಂಡೇಶ್ವರನನ್ನು ಸ್ತೋತ್ರಮಾಡುವುದರಿಂದ ನಿಸ್ಸಂದೇಹ

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ನಾಗಚಂಡೇಶ್ವರಸ್ಯೈವ ಪ್ರತೀಹಾರೇಶ್ವರಂ ಶೃಣು ॥ ೩೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ನಾಗಚಂಡೇಶ್ವರಮಾಹಾತ್ಮ್ಯವರ್ಣನಂ" ನಾಮ್ನೈಕೋನವಿಂಶೋಽಧ್ಯಾಯಃ**

---

ವಾಗಿಯೂ ದೇವತೆಗಳಿಗೂ ದುರ್ಲಭಗಳೆನಿಸಿದ ಮನಸ್ಸಿನ ಎಲ್ಲ ಅಭೀಷ್ಟಗಳನ್ನೂ ಮನುಜನು ಪಡೆಯುವನು.

೩೬. ದೇವಿಯೆ! ಇಂತು ನಿನಗೆ ನಾಗಚಂಡೇಶ್ವರ ಮಹಾಲಿಂಗದ ಪಾಪ ಪರಿಹಾರಕವಾದ ಪ್ರಭಾವವನ್ನು ವರ್ಣಿಸಿರುವೆನು. ಇನ್ನು ಪ್ರತೀಹಾರೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ನಾಗಚಂಡೇಶ್ವರಮಾಹಾತ್ಮ್ಯವರ್ಣನ"ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಂಶೋಽಧ್ಯಾಯಃ

## ಪ್ರತೀಹಾರೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಪ್ರತೀಹಾರೇಶ್ವರಂ ದೇವಿ ವಿದ್ಧಿ ವಿಂಶತಿಮಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ಧನವಾನಿಹ ಜಾಯತೇ ॥ ೧ ॥
ದಕ್ಷಕೋಪಾತ್ತ್ವಂ ಚ ದೇವಿ ಪುರಾ ಪ್ರಾಣೈರ್ವಿಸರ್ಜಿತೈಃ ।
ಹಿಮಾಚಲೇ ತಥಾ ಜಾತಾ ಮಯಾ ಪ್ರಾಪ್ತಾ ಪುನಃ ಪ್ರಿಯೇ ॥ ೨ ॥
ಪ್ರಾರಬ್ಧಾ ಚ ಮಯಾ ದೇವಿ ತ್ವಯಾ ಸಾರ್ಧಂ ರತಿಸ್ತದಾ ।
ದಿವ್ಯಂ ವರ್ಷಶತಂ ಜಾತಂ ಸಾಗ್ರಂ ದೇವಿ ಪ್ರಮೋದತಃ ।
ಅನುರಾಗವಶಾಚ್ಚೈವ ಮನ್ಮಥೇನ ಪ್ರಪೀಡಿತಾ ॥ ೩ ॥
ಮಹಾರತಿಂ ಸಮಾಕರ್ಣ್ಯಾಥ ದೇವಾಃ ಸಂಕ್ಷುಬ್ಧಮಾನಸಾಃ ।
ಚಕ್ರುರ್ಮಂತ್ರಂ ಯಥಾಕಾಲಂ ವಾಸವಾದ್ಯಾ ಯಥೋಚಿತಂ ॥ ೪ ॥

---

## ಕನ್ನಡದ ಅನುವಾದ

### ಪ್ರತೀಹಾರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಇಪ್ಪತ್ತನೆಯ ಮಹಾಲಿಂಗವೇ ಪ್ರತೀಹಾರೇಶ್ವರನೆಂದು ತಿಳಿ. ಅದರ ದರ್ಶನವನ್ನು ಮಾಡುವುದರಿಂದಲೇ ಮನುಜನು ಐಶ್ವರ್ಯವಂತನಾಗುವನು.

೨. ದೇವಿಯೆ! ದಕ್ಷಬ್ರಹ್ಮನಿಗೆ ನನ್ನಲ್ಲಿ ಉಂಟಾದ ಕೋಪದ ಕಾರಣದಿಂದ ನೀನು ಪ್ರಾಣವನ್ನು ತ್ಯಜಿಸಿ ಮತ್ತೆ ಹಿಮವಂತರಾಜನ ಮನೆಯಲ್ಲಿ ಹುಟ್ಟಿರಲು ನಾನೇ ನಿನ್ನನ್ನು ಪತ್ನಿಯನ್ನಾಗಿ ಪಡೆದೆನು.

೩. ಮತ್ತು ನಿನ್ನೊಡನೆ ನಾನು ಸುರತಕ್ರೀಡೆಯನ್ನಾರಂಭಿಸಿ ಅದರಲ್ಲಿಯೇ ನಿರತನಾಗಿದ್ದೆನು. ಇಂತು ನಾವು ಸಂತೋಷದಲ್ಲಿರಲು ಒಂದು ನೂರು ದಿವ್ಯವರ್ಷಗಳು ಕಳೆದುಹೋದುವು. ಅನುರಾಗವಶಂಗತಳಾಗಿ ನೀನೂ ಮನ್ಮಥನ ಬಾಣಗಳಿಗೆ ತುತ್ತಾಗಿದ್ದೆ.

೪. ಈ ಮಹಾಸುರತವನ್ನು ಕಂಡು ದೇವತೆಗಳೆಲ್ಲರೂ ಚಿತ್ತಕ್ಷೋಭೆಗೆ ಸಿಕ್ಕಿದವರಾದರು. ಮಹೇಂದ್ರನೇ ಮೊದಲಾಗಿ ಅವರೆಲ್ಲರೂ ಕಾಲಕ್ಕೆ ತಕ್ಕಂತೆ ಉಚಿತವಾದ ಮಂತ್ರಾಲೋಚನೆಯನ್ನು ಮಾಡಿದರು.

ದಿವ್ಯಂ ವರ್ಷಶತಂ ರುದ್ರೋ ಗೌರ್ಯಾ ಸಹ ಸದಾ ರತಿಂ ।
ಕುರ್ವಂಸ್ತಿಷ್ಠತಿ ಸರ್ವೋಽಸೌ ಮಂದರೇ ಚಾರುಕಂದರೇ ॥ ೫ ॥
ಅನಯೋರ್ಬೀಜಸಂಪತ್ತ್ಯೋಃ ಪುತ್ರೋ ಯೋ ಹಿ ಭವೇತ್ತದಾ ।
ವಿನಶ್ಯೇತ್ತೇನ ತ್ರೈಲೋಕ್ಯಮಖಿಲಂ ಚ ನ ಸಂಶಯಃ ॥ ೬ ॥
ತಸ್ಯ ತೇಜೋಽಪಿ ನೋ ಸೋಢುಂ ಸಮರ್ಥಾ ನಿಶ್ಚಿತಂ ವಯಂ ।
ತಸ್ಮಾತ್ತತ್ಕ್ರಿಯತಾಂ ಕರ್ಮ ರತಿರ್ಯೇನೋಪಶಾಮ್ಯತಿ ॥ ೭ ॥
ಉಪಾಯಂ ದೃಷ್ಟವಾಂಸ್ತತ್ರ ದೇವಾನಾಂ ಗುರುರಗ್ರಣೀಃ ।
ಬೃಹಸ್ಪತಿರ್ಮಹಾತೇಜಾ ವೇದಶಾಸ್ತ್ರಾರ್ಥಪಾರಗಃ ॥ ೮ ॥
ಗಚ್ಛಂತು ತ್ರಿದಶಾಃ ಸರ್ವೇ ಶಿವಸ್ಯ ತು ಸಮೀಪತಃ ।
ಸ್ವಯಂ ವಿಜ್ಞಾಪ್ಯತಾಂ ದೇವಸ್ತತ್ಕರ್ಮ ನ ಕರಿಷ್ಯತಿ ॥ ೯ ॥
ಇತಿ ನಿಶ್ಚಿತ್ಯ ತೇ ದೇವಿ ಜಗ್ಮುಃ ಶೀಘ್ರಂ ಸುರಾಸ್ತದಾ ।
ಮಂದರಾದ್ರೇಃ ಶುಭೇ ದ್ವಾರಿ ಸ್ಥಿತಾಸ್ತೇ ವಿಸ್ಮಯಾನ್ವಿತಾಃ ॥ ೧೦ ॥

---

೫. "ಒಂದುನೂರು ದೇವಮಾನದ ವರ್ಷಗಳಿಂದ ಮಹಾದೇವನು ಸುಂದರಕಂದರಗಳುಳ್ಳ ಮಂದರಪರ್ವತದಲ್ಲಿ ವಿಹರಿಸುತ್ತ ಗೌರೀದೇವಿಯೊಡನೆ ಸುರತದಲ್ಲಿಯೇ ಆಸಕ್ತನಾಗಿರುವನು.

೬. ಇವರಿಬ್ಬರ ಬೀಜವೈಭವದಿಂದ ಪುತ್ರನುದಯಿಸಿದವನಾದರೆ, ಆತನಿಂದ ಸಕಲಬ್ರಹ್ಮಾಂಡವೂ ನಾಶವನ್ನು ಹೊಂದುವುದು. ಇದರಲ್ಲಿ ಸಂದೇಹಕ್ಕೆ ಕಾರಣವಿಲ್ಲ.

೭. ಆ ಮಹಾಪುರುಷನ ತೇಜಸ್ಸನ್ನು ಸಹಿಸುವುದಕ್ಕೆ ನಾವು ಸಮರ್ಥರಲ್ಲವೆಂಬುದು ನಿಶ್ಚಯವು. ಆದುದರಿಂದ ಈ ಸುರತವಿಲಾಸವನ್ನು ಕೊನೆಗಾಣಿಸುವುದಕ್ಕೆ ಯಾವುದಾದರೂ ತಕ್ಕ ಕ್ರಿಯೆಯನ್ನು ನಾವೀಗ ಮಾಡಬೇಕಾಗಿರುವುದು."

೮. ದೇವತೆಗಳ ಆಚಾರ್ಯನೂ, ಅಗ್ರಗಣ್ಯನೂ, ಮಹಾತೇಜಸ್ವಿಯೂ, ಸಕಲವೇದಶಾಸ್ತ್ರಗಳಲ್ಲಿ ಪಾರಂಗತನೂ ಆದ ಬೃಹಸ್ಪತಿಯು ಒಂದುಪಾಯವನ್ನು ಯೋಚಿಸಿ ನೋಡಿ ಅವರಿಗೆ ಸೂಚಿಸಿದನು.

೯. "ದೇವತೆಗಳೆಲ್ಲರೂ ಆ ಮಹಾದೇವನ ಸಮೀಪಕ್ಕೆ ಹೋಗಿ, ವಿಜ್ಞಾಪನೆ ಮಾಡಿಕೊಳ್ಳಲಿ. ದೇವನು ತನ್ನ ಕಾರ್ಯವನ್ನು ಸಾಕುಮಾಡುವನು."

೧೦. ಇಂತೆಂದ ಬೃಹಸ್ಪತಿಯ ಮಾತನ್ನೇ ನಿಶ್ಚಯಿಸಿ ದೇವತೆಗಳೆಲ್ಲರೂ ಶೀಘ್ರವಾಗಿ ಮಂದರಪರ್ವತದಲ್ಲಿ ನಮ್ಮ ಅರಮನೆಗೆ ಬಂದು ಬಾಗಿಲಿನಲ್ಲಿ ವಿಸ್ಮಯಾವಿಷ್ಟರಾಗಿ ನಿಂತುಬಿಟ್ಟರು.

ಗಣಾನಾಮಧಿಪೋ ನಂದೀ ದ್ವಾರಿ ತಿಷ್ಠತಿ ಯತ್ನತಃ ।
ತ್ವಯಾ ಸಾರ್ಧಮಹಂ ದೇವಿ ಕುರ್ವಂಸ್ತಿಷ್ಠಾಮಿ ತಾಂ ರತಿಂ ॥ ೧೧ ॥
ಅಥ ಪ್ರವೇಶೋ ದೇವಾನಾಂ ದುಷ್ಕರೋ ಮಮ ಪಾರ್ಶ್ವತಃ ।
ತದಾ ಚಿಂತಯಮಾನಾಶ್ಚ ತತ್ರ ತಿಷ್ಠಂತಿ ತೇ ಸುರಾಃ ॥ ೧೨ ॥
ಅಗ್ನಿನಾ ತದ್ಧಿತಂ ವಾಕ್ಯಮುಕ್ತಂ ತೇಷಾಂ ಪುರಃ ಶುಭಂ ।
ಹಂಸರೂಪಂ ಸಮಾಸ್ಥಾಯ ಯಾಸ್ಯಾಮಿ ಶಿವಸನ್ನಿಧೌ ॥ ೧೩ ॥
ವಂಚಯಿತ್ವಾ ಪ್ರತೀಹಾರಂ ಕೃತಂ ತೇನ ತಥೈವ ಚ ।
ಹಂಸರೂಪೇಣ ಕಥಿತಂ ಕರ್ಣೇ ಮಮ ಶುಚಿಸ್ಮಿತೇ ॥ ೧೪ ॥
ಇಂದ್ರಾದ್ಯಾ ಅಮರಾ ದೇವಾ ದ್ವಾರಿ ತಿಷ್ಠಂತಿ ಸಂಯುತಾಃ ।
ಶ್ರುತ್ವಾ ತಸ್ಯ ಚ ತದ್ವಾಕ್ಯಂ ತತೋಽಹಂ ದ್ವಾರಮಾಗತಃ ॥ ೧೫ ॥
ತತಶ್ಚ ತೈಃ ಕೃತೋ ಮಹ್ಯಂ ಪ್ರಣಾಮಶ್ಚ ಯಥಾಕ್ರಮಂ ।
ಮಯಾ ದೃಷ್ಟಾಶ್ಚ ತೇ ದೇವಾ ಯುಷ್ಮಾಕಂ ಕಿಂ ಕರೋಮ್ಯಹಂ॥ ೧೬ ॥

---

೧೧. ಗಣಗಳಿಗೆ ಅಧಿಪತಿಯಾದ ನಂದೀಶ್ವರನು ಬಾಗಿಲನ್ನು ಕಾಯುತ್ತ ಜಾಗರೂಕನಾಗಿದ್ದನು. ದೇವಿಯೆ! ಒಳಗೆ ನಿನ್ನೊಡನೆ ನಾನು ಸುರತಲೋಲನಾಗಿರುತ್ತಿದ್ದೆನು.

೧೨. ದೇವತೆಗಳಿಗೆ ನನ್ನ ಬಳಿಗೆ ಪ್ರವೇಶಿಸುವುದೂ ಸಹ ಬಹಳದುಸ್ಸಾಧ್ಯವಾಗಿದ್ದಿತು. ಆಗ ಮುಂದುಗಾಣದೆ ದೇವತೆಗಳು ಚಿಂತಿಸುತ್ತ ಬಾಗಿಲಿನಲ್ಲಿಯೇ ನಿಂತುಬಿಟ್ಟರು.

೧೩. ಆ ಸಮಯದಲ್ಲಿ ಅಗ್ನಿದೇವನು ಅವರೆದುರಿನಲ್ಲಿ ಹಿತವೂ ಮಂಗಳಪ್ರದವೂ ಆದ ಮಾತನ್ನಾಡಿದನು. "ನಾನು ಹಂಸದ ರೂಪವನ್ನು ತಳೆದು ಪರಮೇಶ್ವರನ ಸನ್ನಿಧಿಗೆ ಹೋಗುತ್ತೇನೆ."

೧೪. ದ್ವಾರಪಾಲಕನನ್ನು ವಂಚಿಸಿ ಅಗ್ನಿಯು ಹಾಗೆಯೇ ಮಾಡಿದನು. ಮಂಗಳೆಯೆ! ಹಂಸರೂಪದಿಂದ ಬಳಿಗೆ ಬಂದು ನನ್ನ ಕಿವಿಯಲ್ಲಿ ಇಂತು ಹೇಳತೊಡಗಿದನು.

೧೫. "ದೇವ! ಇಂದ್ರಾದಿ ದೇವತೆಗಳೆಲ್ಲರೂ ಭಕ್ತಿಭರಿತರಾಗಿ ನಿನ್ನ ದರ್ಶನಕಾಂಕ್ಷಿಗಳಾಗಿ ಬಾಗಿಲಿನಲ್ಲಿ ನಿಂತಿರುವರು." ಅಗ್ನಿದೇವನ ಈ ವಾಕ್ಯವನ್ನು ಕೇಳಿ ನಾನೂ ಬಾಗಿಲಿನ ಬಳಿಗೆ ಬಂದೆನು.

೧೬. ಆಗ ನನಗೆ ಅವರೆಲ್ಲರೂ ಯಥಾಕ್ರಮವಾಗಿ ಪ್ರಣಾಮಗಳನ್ನು ಮಾಡಿದರು. ನಾನೂ ಆ ದೇವತೆಗಳನ್ನು ಕುರಿತು "ನಿಮಗಾಗಿ ಏನು ಮಾಡಲಿ?" ಎಂದು ಪ್ರಶ್ನೆಮಾಡಿದೆನು.

ತೈರುಕ್ತಂ ತ್ಯಜ್ಯತಾಂ ಚೈವ ಸಂಭೋಗಸ್ತು ಸುದಾರುಣಃ ।
ತಥಾ ಮಯಾ ಕೃತಂ ದೇವಿ ಗತಾಸ್ತೇ ತ್ರಿದಿವಂ ಪುನಃ ॥ ೧೭ ॥
ತತಃ ಶಪ್ತೋ ಮಯಾ ನಂದೀ ಭೂಲೋಕಂ ಗಚ್ಛ ಸತ್ವರಂ ।
ತತಃ ಶಾಪಪರಿಭ್ರಷ್ಟಃ ಪೃಥಿವ್ಯಾಂ ಪರಿತಸ್ತದಾ ॥ ೧೮ ॥
ಸೋಚ್ಛ್ವಾಸಹೃದಯೋ ದೀನೋ ದುಃಖವ್ಯಾಕುಲಲೋಚನಃ ।
ವಿಲಪಂಶ್ಚ ತಥಾ ನಂದೀ ವಿಲುಠಂಛೋಕತೋ ಭುವಿ ॥ ೧೯ ॥
ವಂಚಿತಶ್ಚಾಽಗ್ನಿನಾ ಬಾಢಂ ವಾಸವೇನ ವಿಶೇಷತಃ ।
ಕಿಂ ಮಯಾ ದುಷ್ಕೃತಂ ಕರ್ಮ ಕೃತಂ ಕಿಂಚಿತ್ಪುರಾತನಂ ॥ ೨೦ ॥
ಸ ದೃಷ್ಟೋ ಲೋಕಪಾಲೈಸ್ತು ತಾಮವಸ್ಥಾಂ ಗತೋ ಗಣಃ ।
ಪೃಷ್ಟಶ್ಚ ತೈಃ ಕುತೋ ನಂದಿನ್ವಿಲಾಪಂ ಕುರುತೇ ಮಹತ್ ॥ ೨೧ ॥
ಸರ್ವಂ ನಿವೇದಿತಂ ತೇನ ತೇಷಾಮಗ್ರೇ ಚ ನಂದಿನಾ ।
ಉಪಾಯಃ ಕಥಿತಸ್ತೈಶ್ಚ ಮಹಾಕಾಲವನಂ ತತಃ ॥ ೨೨ ॥

---

೧೭. ಅವರು "ಲೋಕಗಳಿಗೆ ಭಯಕಾರಕವಾದ ಈ ಸಂಭೋಗಕಾರ್ಯವನ್ನು ಸಾಕುಮಾಡು" ಎಂದು ಬೇಡಿಕೊಂಡರು. ದೇವಿಯೆ! ನಾನು ಹಾಗೆಯೇ ಮಾಡಲು ದೇವತೆಗಳು ಮತ್ತೆ ಸ್ವರ್ಗಕ್ಕೆ ಹೊರಟು ಹೋದರು.

೧೮. ಬಳಿಕ ನಾನು ಅಗ್ನಿಯನ್ನು ಒಳಗೆ ಬಿಟ್ಟಿದಕ್ಕಾಗಿ ನಂದಿಯನ್ನು "ಬೇಗ ನೀನು ಭೂಲೋಕದಲ್ಲಿ ಜನಿಸು" ಎಂದು ಶಪಿಸಿದೆನು. ನನ್ನ ಶಾಪದಿಂದ ಕೈಲಾಸವನ್ನು ಬಿಟ್ಟು ಆತನು ಭೂಲೋಕದಲ್ಲಿ ಬಿದ್ದನು.

೧೯. ನಿಟ್ಟುಸಿರನ್ನು ಬಿಡುವವನೂ, ಹೃದಯಕಂಪನವುಳ್ಳವನೂ, ದೀನನೂ, ದುಃಖದಿಂದ ತಲ್ಲಣಿಸುವವನೂ ಆಗಿ ಆ ನಂದಿಯು ಶೋಕದಿಂದ ಪ್ರಲಾಪವನ್ನು ಮಾಡುತ್ತ ಭೂಮಿಯಲ್ಲಿ ಹೊರಳಾಡುತ್ತಿದ್ದನು.

೨೦. ನಿಜವಾಗಿಯೂ ನಾನು ಅಗ್ನಿಯಿಂದಲೂ ವಿಶೇಷವಾಗಿ ಮಹೇಂದ್ರನಿಂದಲೂ ವಂಚಿತನಾಗಿರುವೆನು. ನಾನು ಹಿಂದೆ ಯಾವ ಅಲ್ಪಪಾತಕವನ್ನು ಮಾಡಿದ್ದೆನೊ, ಏನೊ!

೨೧. ಇಂತಹ ಅವಸ್ಥೆಯಲ್ಲಿದ್ದ ನಂದೀಶ್ವರ ಗಣನಾಯಕನನ್ನು ಲೋಕಪಾಲಕರು ನೋಡಿದರು. ಮತ್ತು "ಎಲೈ ನಂದಿಯೆ! ನೀನೇತಕ್ಕೆ ಇಂತು ಬಹುವಾಗಿ ಪ್ರಲಾಪವನ್ನು ಮಾಡುತ್ತಿರುವೆ?" ಎಂದು ಪ್ರಶ್ನೆಮಾಡಿದರು.

೨೨. ಆ ನಂದಿಯು ಅವರ ಸಮ್ಮುಖದಲ್ಲಿ ನಡೆದುದೆಲ್ಲವನ್ನೂ ವಿಜ್ಞಾಪಿಸಿಕೊಂಡನು. ಅವರು ಇವಕ್ಕೆ ಮಹಾಕಾಲವನಕ್ಷೇತ್ರದ ಸೇವೆಯೊಂದೇ ಉಪಾಯವೆಂದು ಹೇಳಿದರು.

**ತತಶ್ಚ ವಚನಂ ಶ್ರುತ್ವಾ ನಂದೀ ರೋಮಾಂಚಕಂಚುಕಃ ।**
**ಮಹಾಕಾಲವನೇ ದೇವಿ ಜಗಾಮ ಸ ತದಾ ಗಣಃ ।**
**ಪೂಜಯಾಮಾಸ ವಿಧಿವದ್ಭೂತ್ವಾ ಕಾಪಾಲಿನೀಂ ತನುಂ ॥ ೨೩ ॥**
**ಅಶರೀರಸಮುತ್ಪನ್ನಾ ವಾಣೀ ಲಿಂಗಾತ್ತದಾ ಪ್ರಿಯೇ ।**
**ಸಂಜಾತಾ ಶಾಪಮೋಕ್ಷಸ್ತೇ ಪ್ರತೀಹಾರ ಸುಭಕ್ತಿತಃ ।**
**ಪೂಜಿತೋಽಸೌ ಮಹಾಭಕ್ತ್ಯಾ ಪ್ರತೀಹಾರೇಣ ನಂದಿನಾ ॥ ೨೪ ॥**
**ತದಾ ಪ್ರಭೃತಿ ಲೋಕೇಽಸ್ಮಿನ್ಪ್ರತೀಹಾರೇಶ್ವರೇಶ್ವರಃ ।**
**ಮಯಾ ತೇ ಕಥಿತೋ ದೇವಿ ಪ್ರತೀಹಾರೇಶ್ವರಸ್ಯ ಚ ।**
**ಪ್ರಭಾವಃ ಸರ್ವಲೋಕಾನಾಮತ್ಯಭೀಷ್ಟಫಲಪ್ರದಃ ॥ ೨೫ ॥**
**ಪೂಜಯಿಷ್ಯಂತಿ ಯೇ ಭಕ್ತ್ಯಾ ಪ್ರತೀಹಾರೇಶ್ವರಂ ಶಿವಂ ।**
**ಸ್ಥಾನಭ್ರಂಶೋ ವಿಯೋಗಶ್ಚ ತೇಷಾಂ ಸ್ವಪ್ನೇಽಪಿ ನೋ ಭವೇತ್ ॥ ೨೬ ॥**
**ಸಪ್ತಜನ್ಮಕೃತಂ ಪಾಪಂ ಸ್ವಲ್ಪಂ ವಾ ಯದಿ ವಾ ಬಹು ।**
**ತತ್ಸರ್ವಂ ನಾಶಮಾಯಾತಿ ಪ್ರತೀಹಾರೇಶ್ವರಾರ್ಚನಾತ್ ॥ ೨೭ ॥**

---

೨೩. ಅವರ ಮಾತನ್ನು ಕೇಳಿ ನಂದೀಶ್ವರನು ರೋಮಾಂಚಗಳೆದ್ದವನಾದನು. ದೇವಿಯೇ! ಬಳಿಕ ಆತನು ಮಹಾಕಾಲವನ ಕ್ಷೇತ್ರಕ್ಕೆ ಹೋಗಿ ಮಹೇಶ್ವರಭಕ್ತನ ವೇಷಭೂಷಣಗಳನ್ನು ಧರಿಸಿಕೊಂಡು ವಿಧ್ಯುಕ್ತವಾದ ರೀತಿಯಿಂದ ಒಂದು ಮಹಾಲಿಂಗವನ್ನು ಪೂಜಿಸುತ್ತಿದ್ದನು.

೨೪. ಪ್ರಿಯಳೆ! ಆ ಲಿಂಗಮಧ್ಯದಿಂದ ಆಗ ಒಂದು ಅಶರೀರವಾಣಿಯು ಹೊರಟು ಆತನನ್ನು ಕುರಿತು ಇಂತೆಂದಿತು. "ಪ್ರತಿಹಾರಿಯೆ! ನಿನ್ನ ಉತ್ತಮ ಭಕ್ತಿಯ ಫಲವಾಗಿ ನಿನಗೆ ಶಾಪಮೋಕ್ಷವುಂಟಾಗಿರುವುದು. ಈ ಲಿಂಗವು ದ್ವಾರಪಾಲಕನಾದ ನಂದೀಶ್ವರನಿಂದ ಮಹಾಭಕ್ತಿಯುತವಾದ ಪೂಜೆಯನ್ನು ಕೈಗೊಂಡಿರುವುದು."

೨೫. ಅಂದಿನಿಂದ ಈ ಮಹಾಲಿಂಗವು ಭೂಲೋಕದಲ್ಲಿ ಪ್ರತೀಹಾರೇಶ್ವರನೆಂದು ವಿಖ್ಯಾತವಾಗಿರುವುದು. ದೇವಿಯೆ! ಪ್ರತೀಹಾರೇಶ್ವರದೇವನ ಪ್ರಭಾವವನ್ನು ನಿನಗೆ ಹೇಳಿರುವೆನು. ಈ ಚರಿತ್ರೆಯು ಸಕಲಜನರಿಗೂ ಸರ್ವಾಭೀಷ್ಟಪ್ರದವಾಗಿರುವುದು.

೨೬. ಯಾರು ಭಕ್ತಿಸಹಿತರಾಗಿ ಈ ಪ್ರತೀಹಾರೇಶ್ವರ ಲಿಂಗವನ್ನು ಪೂಜಿಸುವರೊ, ಅವರಿಗೆಂದಿಗೂ ಸ್ವಪ್ನದಲ್ಲಿಯೂ ಸಹ ಸ್ಥಾನಭ್ರಷ್ಟತೆಯಾಗಲಿ ಇಷ್ಟವಿಯೋಗವಾಗಲಿ ಸಂಭವಿಸುವುದಿಲ್ಲ.

೨೭. ಈ ಪ್ರತೀಹಾರೇಶ್ವರನ ಪೂಜೆಯನ್ನು ಮಾಡುವುದರಿಂದ ಏಳು ಜನ್ಮಗಳಲ್ಲಿ ಮಾಡಿರಬಹುದಾದ ಸ್ವಲ್ಪ ಅಥವ ಮಹತ್ತರಗಳಾದ ಪಾಪಗಳೆಲ್ಲವೂ ನಾಶವನ್ನು ಹೊಂದುವುವು.

**ಮನಸಾ ಯೇ ಸ್ಮರಿಷ್ಯಂತಿ ಪ್ರತೀಹಾರೇಶ್ವರಂ ಶಿವಂ ।**
**ಏವಂ ತಸ್ಯ ಕುಲಂ ಸರ್ವಂ ಯಾತಿ ಸ್ವರ್ಗಂ ನ ಸಂಶಯಃ ॥ ೨೮ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಪ್ರತೀಹಾರೇಶ್ವರಮಾಹಾತ್ಮ್ಯವರ್ಣನಂ"
ನಾಮ ವಿಂಶೋಽಧ್ಯಾಯಃ

---

೨೮. ಪ್ರತೀಹಾರೇಶ್ವರ ಮಹಾಲಿಂಗವನ್ನು ಯಾರು ಮನಸ್ಸಿನಲ್ಲಿಯೂ ನಿತ್ಯವೂ ಸ್ಮರಿಸುತ್ತಿರುವರೊ, ಅವರ ಕುಲವೆಲ್ಲವೂ ಸ್ವರ್ಗಕ್ಕೆ ಹೋಗುವುದೆಂಬುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಪ್ರತೀಹಾರೇಶ್ವರವರ್ಣನ"ವೆಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕವಿಂಶೋಽಧ್ಯಾಯಃ

### ಕುಕ್ಕುಟೇಶ್ವರಮಾಹಾತ್ಮ್ಯವರ್ಣನಂ

**ಈಶ್ವರ ಉವಾಚ :—**

**ಏಕವಿಂಶತಿಕಂ ವಿದ್ಧಿ ಕುಕ್ಕುಟೇಶ್ವರಸಂಜ್ಞಕಂ ।**
**ಯಸ್ಯ ದರ್ಶನಮಾತ್ರೇಣ ತಿರ್ಯಗ್ಯೋನಿರ್ನ ಲಭ್ಯತೇ ॥ ೧ ॥**
**ಕೌಶಿಕೋ ನಾಮ ರಾಜಾಽಭೂತ್ಕುಕ್ಕುಟೋ ಜಾಯತೇ ಸದಾ ।**
**ದೃಶ್ಯತೇ ವಾಸರೇ ಭಾಗೇ ಸರ್ವಾಭರಣಭೂಷಿತಃ ॥ ೨ ॥**
**ವ್ಯಾಪ್ತಾ ಚ ಪೃಥಿವೀ ತೇನ ಸಶೈಲವನಕಾನನಾ ।**
**ಪೂರ್ವಕರ್ಮಪ್ರಭಾವೇನ ಪ್ರಾಪ್ತಂ ರಾಜ್ಯಮಕಂಟಕಂ ॥ ೩ ॥**
**ವಿಶಾಲಾನಾಮ ವಿಖ್ಯಾತಾ ಭಾರ್ಯಾ ತಸ್ಯ ಮಹೀಪತೇಃ ।**
**ರೂಪಲಾವಣ್ಯಸಂಯುಕ್ತಾ ಚತುಃಷಷ್ಟಿಕಲಾನ್ವಿತಾ ॥ ೪ ॥**
**ತಯಾ ಚಕಾರ ಸಹಿತಃ ಸ ರಾಜ್ಯಂ ರಾಜಸತ್ತಮಃ ।**
**ಸಾ ವಲ್ಲಭಾಽಪಿ ನೃಪತೇಃ ಪ್ರಾಣೇಭ್ಯೋಽಪಿ ಗರೀಯಸೀ ॥ ೫ ॥**

---

### ಕನ್ನಡದ ಅನುವಾದ

#### ಕುಕ್ಕುಟೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಕುಕ್ಕುಟೇಶ್ವರನಾಮಕವಾದ ಲಿಂಗವೇ ಇಪ್ಪತ್ತೊಂದನೆಯದು. ಇದರ ದರ್ಶನಮಾತ್ರದಿಂದ ಮನುಷ್ಯನು ಪಶುಯೋನಿಗಳಲ್ಲಿ ಜನ್ಮಗಳನ್ನು ಪಡೆಯುವುದಿಲ್ಲ.

೨. ಹಿಂದೆ ಕೌಶಿಕನೆಂಬ ಹೆಸರಿನ ಮಹಾರಾಜನೊಬ್ಬನಿದ್ದನು. ಪ್ರತಿರಾತ್ರಿಯಲ್ಲಿಯೂ ಆತನು ಕೋಳಿಯರೂಪವನ್ನು ತಾಳುತ್ತ ಹಗಲಿನಲ್ಲಿ ಮಾತ್ರ ಸರ್ವಾಲಂಕಾರಭೂಷಿತನಾಗಿ ಕಂಗೊಳಿಸುತ್ತಿದ್ದನು.

೩. ಪರ್ವತಗಳು, ಅರಣ್ಯಗಳು, ಉದ್ಯಾನಗಳು ಮುಂತಾದುವುಗಳನ್ನೊಳಗೊಂಡ ಸಕಲ ಭೂಮಂಡಲವೂ ಆತನ ಅಧೀನದಲ್ಲಿತ್ತು. ಪೂರ್ವಜನ್ಮಗಳ ಪುಣ್ಯದ ಪ್ರಭಾವದಿಂದ ಆತನ ರಾಜ್ಯವು ನಿಷ್ಕಂಟಕವಾಗಿದ್ದಿತು.

೪. ಆ ಮಹಾರಾಜನಿಗೆ ವಿಶಾಲೆಯೆಂಬ ಪತ್ನಿಯು ವಿಖ್ಯಾತಳಾಗಿದ್ದಳು. ಆಕೆಯು ರೂಪಲಾವಣ್ಯಗಳಿಗೆ ತವರುಮನೆಯೆನಿಸಿ ಅರುವತ್ತು ನಾಲ್ಕು ವಿದ್ಯೆಗಳಲ್ಲಿಯೂ ಪ್ರವೀಣೆಯಾಗಿದ್ದಳು.

೫. ಆ ರಾಜೋತ್ತಮನು ಆಕೆಯೊಡನೆ ಸುಖವಾಗಿ ರಾಜ್ಯಭಾರವನ್ನು ಮಾಡುತ್ತಿದ್ದನು. ಆತನ ಮಡದಿಯೂ ಸಹ ತನ್ನ ಗಂಡನಿಗೆ ಪ್ರಾಣಗಳಿಗಿಂತಲೂ ಪ್ರಿಯತಮೆಯಾಗಿದ್ದಳು.

**ತಯಾ ಸಾರ್ಧಂ ಕದಾಚಿಜ್ಜ ಸುರತಂ ನಾಽಸ್ತಿ ಪಾರ್ವತಿ ।**
**ಸಂತಪ್ತಾ ಸರ್ವದಾ ಸಾ ಚ ರತ್ಯಭಾವಾದ್ಬಭೂವ ಹ ॥ ೬ ॥**
**ಏವಂ ಗಚ್ಛತಿ ಕಾಲೇ ತು ಸಹ ರಾಜ್ಞಾ ಸ್ಮರಾತುರಾ ।**
**ಸರ್ವಸತ್ತ್ವರುತಜ್ಞಾ ಸಾ ವಿಶಾಲಾ ವಿಪುಲೇಕ್ಷಣಾ ।**
**ದದರ್ಶ ಕೀಟಮಿಥುನಮನಂಗಕಲಹಾತುರಂ ॥ ೭ ॥**
**ಪ್ರಸಾದಯಂಸ್ತಥಾ ಕೀಟಃ ಸ್ವಾಂ ಪ್ರಿಯಾಂ ಚ ಮುಹುರ್ಮುಹುಃ ।**
**ದಾಸೋಽಸ್ಮಿ ತವ ಕಾಂತೇಽಹಂ ರೂಪಸೌಭಾಗ್ಯಸುಂದರಿ ॥ ೮ ॥**
**ಭಜಸ್ವ ಮಾಂ ಯಥಾ ಕಾಮಮನಂಗಶರಪೀಡಿತಂ ।**
**ಶಿರಸಾ ಪ್ರಣತೇನೈವ ರಚಿತಸ್ತೇ ಮಯಾಽಂಜಲಿಃ ॥ ೯ ॥**
**ನ ತ್ವಯಾ ಸದೃಶೀ ಲೋಕೇ ಕಾಮಿನೀ ವಿದ್ಯತೇ ಕ್ವಚಿತ್ ।**
**ಸುವರ್ಣವರ್ಣಸದೃಶೀ ಮುಗ್ಧಕಾಂತಾ ಚಾರುಹಾಸಿನೀ ॥ ೧೦ ॥**
**ಕುತೋ ವಾ ಮಯಿ ದೀನೇ ತ್ವಂ ಕ್ರುದ್ಧೇವ ಪ್ರಿಯವಾದಿನಿ ।**
**ಕಿಮರ್ಥಂ ವದ ಕಲ್ಯಾಣಿ ಸರೋಷವದನಾ ಸ್ಥಿತಾ ॥ ೧೧ ॥**

---

೬. ಪಾರ್ವತಿಯೇ! ಆವರೆ ಆತನಿಗೆ ಆಕೆಯೊಡನೆ ಒಮ್ಮೆಯಾದರೂ ಸುರತ ಸುಖಾನುಭವವಾಗಲಿಲ್ಲ. ರತಿಸುಖವಿಲ್ಲದೆ ಆಕೆಯು ಯಾವಾಗಲೂ ಪರಿತಪಿಸುತ್ತಿದ್ದಳು.

೭. ಹೀಗೆಯೇ ಕೆಲವು ಕಾಲವು ಕಳೆಯಲು ಸ್ಮರಪೀಡಿತಳಾದ ಆ ರಾಣಿಯು ಒಮ್ಮೆ ರಾಜನೊಡನೆ ಇದ್ದಾಗ ಸರ್ವಪ್ರಾಣಿಗಳ ಧ್ವನಿಯನ್ನು ತಿಳಿಯಬಲ್ಲವಳೂ ವಿಶಾಲನೇತ್ರೆಯೂ ಆದ ಆ ವಿಶಾಲಾದೇವಿಯು ಪ್ರಣಯಕಲಹದಲ್ಲಿ ಉದ್ಯುಕ್ತಗಳಾಗಿದ್ದ ಕ್ರಿಮಿದಂಪತಿಗಳನ್ನು ಕಂಡಳು.

೮. ಹೆಣ್ಣುಕೀಟವನ್ನು ಸಮಾಧಾನಮಾಡಲೆಳಸಿ ಗಂಡುಹುಳುವು ಮತ್ತೆ ಮತ್ತೆ ಪ್ರಿಯೆಯನ್ನು ಕುರಿತು ಹೇಳಿತು. "ಪ್ರಿಯೆಯೆ! ರೂಪಸೌಭಾಗ್ಯಸುಂದರಿಯೆ! ನಾನು ನಿನ್ನ ದಾಸನಾಗಿರುವೆನು.

೯. ಮನ್ಮಥಬಾಣಗಳಿಂದ ಪೀಡಿತನಾಗಿರುವ ನನ್ನಲ್ಲಿ ಯಥೇಚ್ಛವಾದ ಸುರತಸುಖವನ್ನು ಹೊಂದು. ತಲೆಬಾಗಿ ನಿಂತು ನಾನು ನಿನಗೆ ಕೈಮುಗಿದುಕೊಂಡಿರುವೆನು.

೧೦. ನಿನಗೆ ಸಮಾನಳಾದ ಕಾಮಿನಿಯು ಲೋಕದಲ್ಲಿಯೇ ಮತ್ತೊಬ್ಬಳಿಲ್ಲವು. ಚಿನ್ನದ ಬಣ್ಣವನ್ನು ಹೋಲುವ ಮೈಬಣ್ಣವುಳ್ಳವಳೂ, ಮಂದಸ್ಮಿತಮುಖದವಳೂ ಆದ ನೀನು ನನ್ನ ಪ್ರಿಯಳಾಗಿರುವೆ.

೧೧. ಪ್ರಿಯಭಾಷಿಣಿಯೆ! ದೀನನಾದ ನನ್ನಲ್ಲಿ ನೀನು ಕೋಪಗೊಂಡಂತಿರುವುದೇಕೆ? ಕಲ್ಯಾಣಿಯೆ! ರೋಷಸಹಿತವಾದ ಮುಖದಿಂದ ನೀನು ಕೂಡಿರಲು ಕಾರಣವನ್ನಾದರೂ ಹೇಳು.

ಸಾ ತಮಾಹ ಪ್ರಕೋಪಾಚ್ಚ ಕಿಮಾಲಪಸಿ ಮಾಂ ವೃಥಾ ।
ತ್ವಯಾ ಮೋದಕಚೂರ್ಣಂ ತು ಮಾಂ ವಿಹಾಯ ಮನೋರಮಾಂ ।
ಪ್ರದತ್ತಂ ಕಾಮಲುಬ್ಧೇನ ಅನ್ಯಸ್ಯೈ ಕೀಟಿಕಾಽಧಮ ॥ ೧೨ ॥
ನಾಽಹಮೇವಂ ಕರಿಷ್ಯಾಮಿ ಕೀಟಃ ಪ್ರಾಹ ಪುನಃ ಪುನಃ ।
ಸ್ಪೃಶಾಮಿ ಪಾದೌ ಸತ್ಯೇನ ಪ್ರಣತಸ್ಯ ಪ್ರಸೀದ ಮೇ ॥ ೧೩ ॥
ಇತಿ ತದ್ವಚನಂ ಶ್ರುತ್ವಾ ಸಾ ಪ್ರಸನ್ನಾಽಭವತ್ತದಾ ।
ಆತ್ಮಾನಮರ್ಪಯಾಮಾಸ ಕಾಮನಾಯ ಪಿಪೀಲಿಕಾ ॥ ೧೪ ॥
ದೃಷ್ಟ್ವಾ ತನ್ಮಹದಾಶ್ಚರ್ಯಂ ಸಾ ರಾಜ್ಞೀ ವಿಲಲಾಪ ಹ ।
ಧಿಗ್ರಾಜ್ಯಂ ಧಿಕ್ಚ ಮೇ ರೂಪಂ ಧಿಕ್ಚ ಯೌವನಮದ್ಯ ಮೇ ।
ನ ಕಾಮಿತಾಽಹಂ ಕಾಂತೇನ ಮರಿಷ್ಯಾಮಿ ನ ಸಂಶಯಃ ॥ ೧೫ ॥
ಏವಂ ವಿಲಪ್ಯ ಬಹುಧಾ ವಿನಿಃಶ್ವಸ್ಯ ಪುನಃ ಪುನಃ ।
ಉನ್ಮತ್ತೇವ ವಿಶಾಲಾಕ್ಷೀ ಗಾಲವಸ್ಯಾಶ್ರಮಂ ಗತಾ ॥ ೧೬ ॥
ದೃಷ್ಟ್ವಾ ತಮೃಷಿಮಾಸೀನಂ ತಪೋಯೋನಿಂ ದೃಢವ್ರತಂ ।
ಉವಾಚ ಪ್ರಣತಾಂಗೀ ಸಾ ಶೋಕಸಂತಪ್ತಮಾನಸಾ ॥ ೧೭ ॥

---

೧೨. ಆ ಹೆಣ್ಣುಕೀಟವು ಹೇಳಿತು. "ಕೀಟಕಾಧಮನೆ! ಸುಮ್ಮನೆ ನನ್ನಲ್ಲಿ ಏಕೆ ಪ್ರಲಪಿಸುತ್ತಿರುವೆ? ನಿನ್ನ ಮನೋರಮೆಯಾದ ನನ್ನನ್ನು ಮರೆತುಬಿಟ್ಟು ಕಾಮಲೋಭಗಳಿಂದ ಪ್ರೇರಿತನಾಗಿ ನೀನು ಮತ್ತೊಬ್ಬಳಿಗೆ ಮೋದಕಚೂರ್ಣ ವನ್ನು ಅಂದು ಕೊಡಲಿಲ್ಲವೆ?"

೧೩. ಆ ಗಂಡುಕೀಟವು ಇಂತೆಂದಿತು. "ಇನ್ನುಮೇಲೆ ನಾನು ಹಾಗೆ ಮಾಡುವುದಿಲ್ಲ. ಸತ್ಯವಾಗಿಯೂ ನಿನ್ನ ಕಾಲುಗಳನ್ನು ಮುಟ್ಟಿ ಹೇಳುತ್ತಿರು ವೆನು. ಪ್ರಣತನಾದ ನನ್ನಲ್ಲಿ ಪ್ರಸನ್ನಳಾಗು."

೧೪. ಇಂತೆಂದ ಗಂಡನ ಮಾತನ್ನು ಕೇಳಿ ಆ ಹೆಣ್ಣುಕೀಟವು ಸಂತೋಷ ಭರಿತವಾಯಿತು. ಮತ್ತು ಆ ಗಂಡು ಪಿಪೀಲಿಕೆಗೆ ಸುರತಸೌಖ್ಯಕ್ಕಾಗಿ ತನ್ನ ಶರೀರವನ್ನೇ ಅರ್ಪಣಮಾಡಿತು.

೧೫. ಇದನ್ನೆಲ್ಲ ಕಂಡ ಮಹಾರಾಣಿಯು ಆಶ್ಚರ್ಯದಿಂದ ತನ್ನನ್ನು ತಾನೇ ನಿಂದಿಸಿಕೊಂಡು ಪ್ರಲಾಪಿಸಿದಳು. "ರಾಜ್ಯಕ್ಕೆ ಧಿಕ್ಕಾರವಿರಲಿ. ನನ್ನ ಸೌಂದ ರ್ಯಕ್ಕೆ ಧಿಕ್ಕಾರವಿರಲಿ. ನನ್ನ ಯೌವನವು ಹಾಳಾಗಲಿ. ಕಾಂತನಿಂದ ಅಪೇಕ್ಷಿಸಲ್ಪಡದೆ ನಾನು ಹೀಗೆಯೇ ಸಾಯುವೆನೆಂಬುದೇ ನಿಶ್ಚಯವು."

೧೬. ಇಂತೆಂದು ಬಹುವಿಧವಾಗಿ ಪ್ರಲಾಪಿಸುತ್ತ ಪುನಃ ಪುನಃ ನಿಶ್ವಾಸ ಗಳನ್ನು ಬಿಡುತ್ತ ವಿಶಾಲಾಕ್ಷಿಯಾದ ಆಕೆಯು ಹುಚ್ಚಳಂತೆ ಅರಮನೆಯಿಂದ ಹೊರಟು ಗಾಲವಮಹರ್ಷಿಗಳ ಆಶ್ರಮಕ್ಕೆ ಹೋದಳು.

೧೭. ತಪೋಮೂರ್ತಿಯಾದ ಆತನು ದೃಢವ್ರತನಾಗಿ ಸುಖಾಸೀನನಾಗಿದ್ದು

ಏಕೋಽಯಂ ಸಂಶಯೋ ಬ್ರಹ್ಮನ್ಹೃದಯೇ ಪರಿವರ್ತತೇ ।
ವಶ್ಯೋಽಪಿ ಹಿ ಚ ಮೇ ಭರ್ತಾ ರೂಪಲಾವಣ್ಯವಾನಪಿ ।
ನ ಜಾನೇ ಕಾರಣಂ ಕಿಂ ತು ಸಂಗಮೋ ನೋಪಜಾಯತೇ ॥ ೧೮ ॥
ಯೋ ಗತ್ವಾ ಪ್ರಮದಾರಾಜ್ಯಂ ಜಿತ್ವಾ ಸರ್ವಾಃ ಪುರಾ ರಣೇ ।
ಆಜಹಾರ ಶುಭಾಸ್ತಾಸಾಂ ಮಧ್ಯಾದಷ್ಟೌ ವರಾಂಗನಾಃ ।
ನೈವ ಕಾಮಯತೇ ತಾಸು ಕಿಮೇತದಿತಿ ಸುವ್ರತ ॥ ೧೯ ॥
ವಾಜಿನೋ ವಾರಣಾಶ್ಚೈವ ಧನಧಾನ್ಯಮನಂತಕಂ ।
ವರ್ತತೇ ಹಿ ಜನಃ ಸರ್ವೋ ಮಮಾಜ್ಞಾಂ ಪಾಲಯನ್ಕ್ಷಿತೌ ॥ ೨೦ ॥
ಕೇನ ಕರ್ಮವಿಪಾಕೇನ ಮಮೇದಂ ಯೌವನಂ ದೃಢಂ ।
ವ್ಯರ್ಥಂ ಜಾತಂ ದ್ವಿಜಶ್ರೇಷ್ಠ ರತಿಂ ನ ಕುರುತೇ ನೃಪಃ ॥ ೨೧ ॥
ದೃಶ್ಯತೇ ವಾಸರೇ ಭಾಗೇ ರಾತ್ರೌ ಚೈವ ನ ದೃಶ್ಯತೇ ।
ಇಹಜನ್ಮಕೃತಂ ಚೈತದಾಹೋಸ್ವಿತ್ಪಾರಲೌಕಿಕಂ ॥ ೨೨ ॥

---

ದನ್ನು ಕಂಡು ಶೋಕದಿಂದ ಬೇಗುದಿಗೊಂಡ ಮನಸ್ಸಿನಿಂದ ಆತನ ಪಾದಗಳಿಗೆ ನಮಸ್ಕರಿಸಿ ಇಂತೆಂದು ವಿಜ್ಞಾಪಿಸಿಕೊಂಡಳು.

೧೮. "ಬ್ರಹ್ಮಜ್ಞಾನಿಯಾದ ಮಹರ್ಷಿಯೇ! ನನ್ನ ಹೃದಯದಲ್ಲಿ ಒಂದೇ ಸಂದೇಹವು ಪ್ರಬಲವಾಗುತ್ತಿರುವುದು. ನನ್ನ ಪತಿಯು ನನಗೆ ವಶನಾಗಿರುವನು, ರೂಪಲಾವಣ್ಯಗಳಿಂದ ಕೂಡಿರುವನು. ಆದರೂ ಆತನೊಡನೆ ನನಗೆ ಸಹವಾಸವುಂಟಾಗಲಿಲ್ಲ. ಇದಕ್ಕೆ ಕಾರಣವೇನೆಂಬುದನ್ನರಿಯೆನು.

೧೯. ಆತನು ಸ್ತ್ರೀರಾಜ್ಯಕ್ಕೆ ದಂಡೆತ್ತಿಹೋಗಿ ಅವರ ಸಕಲ ದೇಶವನ್ನೂ ಹಿಂದೆ ಗೆದ್ದು ಅವರಲ್ಲೆಲ್ಲ ಅತ್ಯುತ್ತಮೆಯರೆನಿಸಿದ ಎಂಟುಜನ ಲಾವಣ್ಯವತಿಯರನ್ನು ಕರೆದುಕೊಂಡು ಬಂದಿರುವನು. ಅವರಲ್ಲಿಯೂ ಸಹ ಆತನಿಗೆ ಅನುರಾಗವಿರುವುದಿಲ್ಲ. ಇದೇನೆಂಬುದನ್ನು ವ್ರತನಿಷ್ಠನಾದ ನೀನೇ ಹೇಳಬೇಕು.

೨೦. ನನಗೆ ಕುದುರೆಗಳೂ, ಆನೆಗಳೂ, ಅನಂತವಾಗಿ ಧನಧಾನ್ಯಗಳೂ ಇರುವುವು. ಭೂಲೋಕದ ಜನರೆಲ್ಲರೂ ನನ್ನ ಅಪ್ಪಣೆಯನ್ನೇ ನಡೆಸುತ್ತ ವಿಧೇಯರಾಗಿರುತ್ತಾರೆ

೨೧. ಬ್ರಾಹ್ಮಣೋತ್ತಮನೆ! ಯಾವ ಪಾಪಕರ್ಮದ ಫಲವಾಗಿ ನನ್ನ ಯೌವನವು ಈ ರೀತಿಯಲ್ಲಿ ವ್ಯರ್ಥವಾಗುತ್ತಿರುವುದು? ಮಹಾರಾಜನು ನನ್ನ ಸಹವಾಸವನ್ನೇಕೆ ಮಾಡುವುದಿಲ್ಲ?

೨೨. ಹಗಲಿನಲ್ಲಿ ಮಾತ್ರ ಕಾಣುತ್ತಿರುವನು. ಆದರೆ ರಾತ್ರಿಯಲ್ಲಿ ಕಾಣಿಸದಂತಾಗುವನು. ಇದು ಈ ಜನ್ಮದಲ್ಲಿ ಮಾಡಿದ ಕರ್ಮದ ಫಲವೆ? ಅಥವ ಪೂರ್ವ ಜನ್ಮಗಳಲ್ಲಿ ಮಾಡಿದ ಪಾಪಗಳ ಫಲವೆ?

ದುಷ್ಕೃತಾವರ್ಜನಂ ಬ್ರಹ್ಮನ್ನಮೇದಂ ವಕ್ತುಮರ್ಹಸಿ ।
ತಸ್ಯಾಸ್ತದ್ವಚನಂ ಶ್ರುತ್ವಾ ಗಾಲವೋ ವಾಕ್ಯಮಬ್ರವೀತ್ ॥ ೨೩ ॥
ಶೃಣು ಪುತ್ರಿ ಪುರಾವೃತ್ತಂ ಬಾಲಭಾವೇನ ಯತ್ಕೃತಂ ।
ಅನೇನ ರಾಜ್ಞಾ ಧರ್ಮಜ್ಞೇ ರಾತ್ರೌ ಯೇನ ನ ದೃಶ್ಯತೇ ॥ ೨೪ ॥
ವಿದೂರಥಸ್ಯ ತನಯಸ್ತವ ಭರ್ತಾ ಸ ನಿಶ್ಚಿತಂ ।
ಮಾಂಸಾಹಾರೀ ದೋಷರತಿರ್ವಿಷಯಾಸಕ್ತಮಾನಸಃ ॥ ೨೫ ॥
ಕುಕ್ಕುಟಾನಾಂ ಚ ಮಾಂಸೇನ ಪ್ರೀತಿಸ್ತಸ್ಯ ತದಾಽಭವತ್ ।
ಬಹವಃ ಕುಕ್ಕುಟಾಸ್ತೇನ ಭಕ್ಷಿತಾ ರಾಜಸೂನುನಾ ॥ ೨೬ ॥
ಏವಂ ಭಕ್ಷಯತಸ್ತಸ್ಯ ಬಹುಶೋ ವತ್ಸರಾ ಗತಾಃ ।
ಕಾಲೇನ ಮಹತಾ ರಾಜ್ಞಾ ತಾಮ್ರಚೂಡೇನ ಮಂತ್ರಿಣಃ ।
ಪೃಷ್ಟಾಃ ಕಿಂ ಕಾರಣಂ ನಾಽತ್ರ ಸಮಾಯಾಂತಿ ಹಿ ಕುಕ್ಕುಟಾಃ ॥ ೨೭ ॥
ಅಥ ಕೇನಾಽಪಿ ಕಥಿತಂ ಕುಕ್ಕುಟಾನಾಂ ಚ ಭಕ್ಷಣಂ ।
ವಿದೂರಥಸ್ಯ ಪುತ್ರೇಣ ಕೌಶಿಕೇನ ದುರಾತ್ಮನಾ ।
ಭಕ್ಷಿತಾಃ ಕುಕ್ಕುಟಾಃ ಸರ್ವೇ ವಿನಾ ಕಾರಣತೋ ನೃಪ ॥ ೨೮ ॥

---

೨೩. ಬ್ರಾಹ್ಮಣಶ್ರೇಷ್ಠನೆ! ಈ ನನ್ನ ಪಾಪವು ದೂರವಾಗುವುದಕ್ಕೆ ತಕ್ಕ ಉಪಾಯವನ್ನು ಹೇಳಲು ನೀನೇ ತಕ್ಕವನಾಗಿರುವೆ.'' ಆಕೆಯ ಈ ಮಾತುಗಳನ್ನು ಕೇಳಿ ಗಾಲವಮಹರ್ಷಿಯು ಹೇಳತೊಡಗಿದನು.

೨೪. ''ಮಗಳೆ! ಕೇಳು. ಹಿಂದೆ ಈ ಮಹಾರಾಜನು ಬಾಲಭಾವದಿಂದ ನಡೆಸಿದ ಒಂದು ವಿಚಾರವನ್ನು ಹೇಳುವೆನು. ಧರ್ಮಜ್ಞಳಾದ ನಿನಗೆ ರಾತ್ರಿಯಲ್ಲಿ ಈತನು ಕಾಣದಿರಲು ಕಾರಣವನ್ನೂ ತಿಳಿಸುವೆನು.

೨೫–೨೬. ನಿನ್ನ ಪತಿಯು ವಿದೂರಥಚಕ್ರವರ್ತಿಯ ಪುತ್ರನೆಂಬುದು ಸತ್ಯವು. ಹಿಂದೆ ಇವನು ಮಾಂಸಭಕ್ಷಕನೂ, ದೋಷಗಳಲ್ಲಿ ಆಸಕ್ತನಾದವನೂ, ವಿಷಯಸುಖಗಳಲ್ಲಿ ನೆಟ್ಟ ಮನಸ್ಸುಳ್ಳವನೂ ಆಗಿದ್ದನು. ಆಗ ಇವನಿಗೆ ಕೋಳಿಗಳ ಮಾಂಸದಲ್ಲಿ ಅಧಿಕವಾದ ಪ್ರೀತಿಯಿದ್ದಿತು. ರಾಜಪುತ್ರನಾದ ಇವನು ಲೆಕ್ಕವಿಲ್ಲದಷ್ಟು ಕುಕ್ಕುಟಗಳನ್ನು ತಿನ್ನುತ್ತಿದ್ದನು.

೨೭. ಇಂತು ಮಾಂಸಭಕ್ಷಣದಲ್ಲಿಯೇ ಈತನಿಗೆ ಅನೇಕ ವರ್ಷಗಳು ಕಳೆದುಹೋದುವು. ಬಹಳಕಾಲದಮೇಲೆ ಕುಕ್ಕುಟರಾಜನಾದ ತಾಮ್ರಚೂಡನು ತನ್ನ ಮಂತ್ರಿಗಳನ್ನು ಕುರಿತು, 'ಮೊದಲಿನಂತೆ ಸಭೆಯಲ್ಲಿ ಕುಕ್ಕುಟಗಳು ಸೇರದಿರಲು ಕಾರಣವೇನು?' ಎಂದು ಕೇಳಿದನು.

೨೮. ಅವರಲ್ಲಿ ಒಬ್ಬನು ಈ ಕುಕ್ಕುಟ ಭಕ್ಷಣದ ಕಥೆಯನ್ನು ಹೇಳಿದನು. 'ಮಹಾರಾಜನೆ! ವಿದೂರಥನ ಪುತ್ರನೂ ದುರಾತ್ಮನೂ ಆದ ಕೌಶಿಕನು ನಿಷ್ಕಾರಣವಾಗಿಯೇ ಎಲ್ಲ ಕುಕ್ಕುಟಗಳನ್ನೂ ಭಕ್ಷಿಸಿರುವನು.'

ತಾಮ್ರಚೂಡೋಽಥ ಸಂಕ್ರುದ್ಧೋ ದದೌ ಶಾಪಂ ದುರಾತ್ಮನೇ ।
ಕೌಶಿಕಾಯ ಕ್ಷಯೋ ರೋಗೋ ಭವಿಷ್ಯತಿ ಭಯಾವಹಃ ॥ ೨೯ ॥
ತದಾ ಪ್ರಭೃತ್ಯಭೂತ್ಕ್ಷೀಣೋ ರಾಜಪುತ್ರೋ ದಿನೇ ದಿನೇ ।
ಔಷಧೈರಧಿಕೋಽಭ್ಯೇತಿ ವ್ಯಾಧಿನಾ ಪೀಡಿತೋ ಭೃಶಂ ॥ ೩೦ ॥
ಅಥ ಕೇನಾಽಪಿ ಕಾಮೇನ ವಾಮದೇವಾಶ್ರಮಂ ಗತಃ ।
ಕ್ಷಯರೋಗಾಽಭಿಭೂತೋಽಸೌ ಮರಣೋತ್ಸುಕಮಾನಸಃ ।
ಪಪ್ರಚ್ಛ ವಾಮದೇವಂ ಸ ನಮಸ್ಕೃತ್ಯ ಪುನಃ ಪುನಃ ॥ ೩೧ ॥
ಭಗವನ್ಕೇನ ಪಾಪೇನ ಕ್ಷೀಯತೇಽಹರ್ನಿಶಂ ವಪುಃ ।
ಮದೀಯಂ ಪೋಷ್ಯಮಾಣಂ ಹಿ ಮಾಂಸೇನ ವಿವಿಧೇನ ಚ ॥ ೩೨ ॥
ವಾಮದೇವೋಽಥ ತಂ ಪ್ರಾಹ ಕುಕ್ಕುಟಾ ಭಕ್ಷಿತಾಸ್ತ್ವಯಾ ।
ತಾಮ್ರಚೂಡೇನ ಶಪ್ತೋಽಸಿ ಕುಕ್ಕುಟಾನಾಂ ನೃಪೇಣ ಹಿ ॥ ೩೩ ॥
ತಮೇವ ಶರಣಂ ಗಚ್ಛ ಸ ಉಪಾಯಂ ವದಿಷ್ಯತಿ ।
ತತಃ ಸ ತಾಮ್ರಚೂಡಸ್ಯಾಽಭ್ಯರ್ಣಮಾಗಾನ್ನೃಪಾತ್ಮಜಃ ॥ ೩೪ ॥

---

೨೯. ಆಗ ತಾಮ್ರಚೂಡನು ಬಹಳವಾಗಿ ಕೋಪಗೊಂಡು ದುಷ್ಟಾತ್ಮನಾದ ಆ ಕೌಶಿಕನಿಗೆ ಶಾಪವನ್ನಿತ್ತನು. 'ಈ ಕೌಶಿಕನಿಗೆ ಭಯಂಕರವಾದ ಕ್ಷಯರೋಗವು ಪ್ರಾಪ್ತವಾಗುವುದು.'

೩೦. ಅಂದು ಮೊದಲು ಆ ರಾಜಪುತ್ರನು ದಿನದಿನಕ್ಕೂ ಕ್ಷೀಣನಾಗುತ್ತ ಬರುತ್ತಿದ್ದನು. ಅನೇಕ ಔಷಧಗಳ ಸೇವನೆಯನ್ನು ಮಾಡಿದರೂ ವ್ಯಾಧಿಯಿಂದ ಬಹಳ ಪೀಡಿತನಾಗಿದ್ದನು.

೩೧. ಕಡೆಗೆ ಯಾವುದೋ ಅಭಿಲಾಷೆಯಿಂದ ಕೂಡಿ ಕ್ಷಯರೋಗವು ದೇಹವನ್ನೆಲ್ಲ ವ್ಯಾಪಿಸಿರಲು ಮರಣದಲ್ಲಿಯೇ ಮನಸ್ಸನ್ನಿಟ್ಟವನಾಗಿ ವಾಮದೇವ ಮಹರ್ಷಿಗಳ ಆಶ್ರಮವನ್ನು ಸೇರಿದನು. ಮತ್ತು ಆತನಿಗೆ ಪುನಃಪುನಃ ನಮಸ್ಕರಿಸಿ ಪ್ರಶ್ನೆಮಾಡಿದನು.

೩೨. 'ಮಹಾಪ್ರಾಜ್ಞನೆ! ನನ್ನ ಈ ದೇಹವು ಬಹುವಿಧಗಳಾದ ಮಾಂಸಗಳಿಂದ ಪೋಷಿತವಾಗುತ್ತಿರುವುದು. ಆದರೂ ಅಹೋರಾತ್ರಗಳಲ್ಲಿ ನಶಿಸುತ್ತಿರುವುದಕ್ಕೆ ಕಾರಣವೇನು? ಇದು ಯಾವ ಪಾಪದ ಫಲವು?'

೩೩. ವಾಮದೇವನು ಇಂತೆಂದನು. 'ನೀನು ಅಸಂಖ್ಯಾತಗಳಾದ ಕೋಳಿಗಳನ್ನು ತಿಂದಿರುವೆ. ಆದುದರಿಂದ ಕುಕ್ಕುಟರಾಜನಾದ ತಾಮ್ರಚೂಡನ ಶಾಪಕ್ಕೊಳಗಾಗಿರುವೆ.

೩೪. ಆತನನ್ನೇ ಶರಣುಹೊಕ್ಕರೆ ಆತನೇ ಇದಕ್ಕೆ ನಿವಾರಣೋಪಾಯವನ್ನು ನಿನಗೆ ಹೇಳುವನು, ಆಗ ಆ ರಾಜಪುತ್ರನು ತಾಮ್ರಚೂಡನ ಸಮೀಪವನ್ನು ಬಂದು ಸೇರಿದನು.

ದೃಷ್ಟ್ವಾ ಚ ತಾಮ್ರಚೂಡಂ ತಂ ಮಹಾಭಕ್ತ್ಯಾ ಕೃತಾಂಜಲಿಃ ।
ಪ್ರೋವಾಚ ಪ್ರಣತೋ ಭೂತ್ವಾ ಪಾಹಿ ಮಾಂ ಶರಣಾಗತಂ ॥ ೩೫ ॥
ಅಜ್ಞಾನಾದ್ಭಕ್ಷಿತಾ ದೇವ ಕುಕ್ಕುಟಾಃ ಪುಷ್ಟಿಕಾರಣಾತ್ ।
ಕ್ಷಂತುಮರ್ಹಸಿ ದೇವೇಶ ಮಮಾಗಃ ಕೃಪಣಸ್ಯ ಚ ॥ ೩೬ ॥
ಪ್ರೋವಾಚ ತಾಮ್ರಚೂಡೋಽಥ ಯಸ್ಮಾತ್ತ್ವಾರ್ಥಯಸೇ ನೃಪ ।
ತಸ್ಮಾತ್ತೇ ವಾಸರೇ ಪ್ರಾಪ್ತೇ ಪುರುಷತ್ವಂ ಭವಿಷ್ಯತಿ ॥ ೩೭ ॥
ಶಾಸ್ತಾ ಗೋಪ್ತಾ ಚ ಲೋಕಾನಾಂ ರಾಜಾ ದಂಡಧರಃ ಪ್ರಭುಃ ।
ಕುಕ್ಕುಟೋ ಭವಿತಾ ರಾತ್ರೌ ಸರ್ವಭೋಗವಿವರ್ಜಿತಃ ॥ ೩೮ ॥
ಅತೋ ನ ದೃಶ್ಯತೇ ಪುತ್ರಿ ತಿರ್ಯಗ್ಭಾವಂ ಸಮಾಶ್ರಿತಃ ॥ ೩೯ ॥
ಇತಿ ತಸ್ಯ ವಚಃ ಶ್ರುತ್ವಾ ಗಾಲವಸ್ಯ ಮಹಾತ್ಮನಃ ।
ಸಾ ಸಂಪೂಜ್ಯ ವಿಶಾಲಾಕ್ಷೀ ಗಾಲವಂ ಮುನಿಸತ್ತಮಂ ।
ಪಪ್ರಚ್ಛ ಪರಯಾ ಭಕ್ತ್ಯಾ ಶಾಪಾಂತೋ ಹಿ ಕಥಂ ಭವೇತ್ ॥ ೪೦ ॥

---

೩೫. ತಾಮ್ರಚೂಡನನ್ನು ಕಂಡು ಅತ್ಯಂತ ಭಕ್ತಿಯಿಂದ ಕೈಗಳನ್ನು ಮುಗಿದುಕೊಂಡು ಪ್ರಣಾಮವನ್ನು ಮಾಡಿ ಬೇಡಿಕೊಂಡನು. 'ಶರಣಾಗತನಾದ ನನ್ನನ್ನು ಕಾಪಾಡು.

೩೬. 'ದೇವ! ತಿಳಿವಿಲ್ಲದೆ ಕೇವಲ ದೇಹವನ್ನು ಪುಷ್ಟಿಗೊಳಿಸುವ ಕಾರಣದಿಂದ ನಾನು ಕುಕ್ಕುಟಗಳನ್ನು ಭಕ್ಷಿಸಿದೆನು. ಕೃಪಣನಾದ ನನ್ನ ಪಾಪವನ್ನು ಕ್ಷಮಿಸಲು ನೀನೇ ಶಕ್ತನಾಗಿರುವೆ.'

೩೭. ಆಗ ತಾಮ್ರಚೂಡನಿಂತೆಂದನು. 'ರಾಜಪುತ್ರನೆ! ನೀನು ನನ್ನನ್ನು ಬಹಳವಾಗಿ ಪ್ರಾರ್ಥಿಸುತ್ತಿರುವೆಯಾದುದರಿಂದ ಹಗಲಿನಲ್ಲಿ ಮಾತ್ರ ನಿನಗೆ ಪುರುಷರೂಪವಿರುವುದು.

೩೮. ಆ ಸಮಯದಲ್ಲಿ ನೀನು ಮಹಾರಾಜನೂ ಪ್ರಭುವೂ ಆಗಿ ಲೋಕಗಳನ್ನು ನಿಗ್ರಹಿಸುವವನೂ, ರಕ್ಷಿಸುವವನೂ ಆಗಿರುವೆ. ರಾತ್ರಿಯಲ್ಲಿ ಮಾತ್ರ ಸರ್ವಭೋಗಹೀನನಾಗಿ ಕುಕ್ಕುಟದೇಹವನ್ನು ಧರಿಸಿರುವೆ.'

೩೯. ವಿಶಾಲಾದೇವಿಯೆ! ಈ ನೀಚಜನ್ಮವನ್ನು ತಾಳಿರುವುದರಿಂದಲೇ ಕೌಶಿಕರಾಜನು ನಿನಗೆ ರಾತ್ರಿ ಕಾಣಿಸಿಕೊಳ್ಳುವುದಿಲ್ಲ.''

೪೦. ಮಹಾತ್ಮನಾದ ಗಾಲವಮುನಿಯ ಈ ಮಾತುಗಳನ್ನು ಕೇಳಿ ವಿಶಾಲನೇತ್ರೆಯಾದ ಆಕೆಯು ಆ ಮುನಿಸತ್ತಮನನ್ನು ಪೂಜಿಸಿ ಅತ್ಯಂತ ಭಕ್ತಿಯಿಂದ "ಈ ಶಾಪಕ್ಕೆ ಹೇಗೆ ಅಂತವುಂಟಾಗುವುದು?" ಎಂದು ಬೆಸಗೊಂಡಳು.

ಗಾಲವಃ ಕಥಯಾಮಾಸ ಧ್ಯಾನೇನಾಲೋಕ್ಯ ಯತ್ನತಃ ॥ ೪೧ ॥
ಮಹಾಕಾಲವನೇ ಲಿಂಗಂ ಪಕ್ಷಿಯೋನಿವಿಮೋಚನಂ ।
ಜ್ವಾಲೇಶ್ವರಸ್ಯ ದೇವಸ್ಯ ಪೂರ್ವಭಾಗೇ ವ್ಯವಸ್ಥಿತಂ ।
ತಸ್ಯ ದರ್ಶನಮಾತ್ರೇಣ ಶಾಪಸ್ಯಾಂತೋ ಭವಿಷ್ಯತಿ ॥ ೪೨ ॥
ಸಾ ಪ್ರಣಮ್ಯ ಮುನಿಶ್ರೇಷ್ಠಮಾಜಗಾಮ ತ್ವರಾನ್ವಿತಾ ।
ಯತ್ರಾಸ್ತೇ ನೃಪಶಾರ್ದೂಲೋ ವಿಧ್ಯನ್ಬಹುವಿಧಾನ್ ಮೃಗಾನ್ ॥ ೪೩ ॥
ಪ್ರಫುಲ್ಲನಯನಾಭ್ಯಾಂ ಸಾ ದೃಷ್ಟ್ವಾ ಲೋಲೇಕ್ಷಣಾ ಪ್ರಿಯಾ ।
ಆಹ್ಲಾದಿತಾ ಬಹುವಿಧೈಃ ಕೋಮಲೈರ್ವಚನಾಮೃತೈಃ ॥ ೪೪ ॥
ತತಸ್ತೇನ ತದಾ ರಾಜ್ಞಾ ಪ್ರೋಕ್ತಾ ಸಾ ಮೃಗಲೋಚನಾ ।
ಇದಾನೀಂ ಕಿಂ ಮಯಾ ಕಾಂತೇ ಕಾರ್ಯಂ ಭವತಿ ಕಥ್ಯತಾಂ ॥ ೪೫ ॥
ತಯಾ ಪ್ರೋಕ್ತಂ ಮಹಾರಾಜ ಗಮ್ಯತೇಽದ್ಯ ಮಯಾ ಸಹ ।
ಮಹಾಕಾಲವನೇ ಪುಣ್ಯೇ ಸರ್ವದುಷ್ಕೃತನಾಶನೇ ॥ ೪೬ ॥

---

೪೧. ಗಾಲವನು ಪ್ರಯತ್ನದಿಂದ ಬಹಳಕಾಲ ಧ್ಯಾನಾಸಕ್ತನಾಗಿದ್ದು ಬಳಿಕ ಉಪಾಯವನ್ನು ಹೇಳಿದನು.

೪೨. ಸಕಲ ಜೀವರಿಗೂ ಪಕ್ಷಿಜನ್ಮವನ್ನು ಕಳೆಯುವ ಲಿಂಗವೊಂದು ಮಹಾಕಾಲವನದಲ್ಲಿರುವುದು. ಅದು ಜ್ವಾಲೇಶ್ವರಮಹಾದೇವನಿಗೆ ಪೂರ್ವ ಭಾಗದಲ್ಲಿ ನೆಲಸಿರುವುದು. ಅದನ್ನು ನೋಡುವ ಮಾತ್ರದಿಂದಲೇ ಈ ಶಾಪವು ಕೊನೆಗಾಣುವುದು.

೪೩. ಆ ಮಹಾರಾಣಿಯು ಮಹರ್ಷಿಯನ್ನು ನಮಸ್ಕರಿಸಿ ಸಂಭ್ರಮಾನ್ವಿತಳಾಗಿ ತನ್ನ ಪತಿಯಾದ ರಾಜೇಂದ್ರನು ಅನೇಕ ಮೃಗಗಳನ್ನು ಕೊಂದು ಕೆಡವುತ್ತಿದ್ದ ಅರಣ್ಯಕ್ಕೆ ಬಂದು ಸೇರಿದಳು.

೪೪. ಆ ರಾಜನು ಚಪಲಲೋಚನೆಯಾದ ಆ ಪ್ರಿಯೆಯನ್ನು ಅರಳಿದ ಕಣ್ಣುಗಳಿಂದ ನೋಡಿ ಬಹು ವಿಧಗಳಾದ ಮೃದುಮಧುರಭಾಷಣಗಳಿಂದ ಆಕೆಯನ್ನು ಸಂತೋಷಗೊಳಿಸಿದನು.

೪೫. ಬಳಿಕ ಆತನು ಆ ಹರಿಣಾಕ್ಷಿಯನ್ನು ಕುರಿತು "ಓ ಕಾಂತೆಯೇ! ಈಗ ಕಾರ್ಯಭಾರವೇನಿರುವುದೆಂಬುದನ್ನು ತಿಳಿಸು" ಎಂದು ಹೇಳಿದನು.

೪೬. ಆಕೆಯು ಹೇಳಿದಳು. "ಮಹಾರಾಜನೆ! ಈಗ ನನ್ನೊಡನೆ ಸಮಸ್ತ ಪಾತಕಗಳನ್ನು ನಾಶಗೊಳಿಸುವ ಪುಣ್ಯ ಕ್ಷೇತ್ರವಾದ ಮಹಾಕಾಲವನಕ್ಕೆ ಬರಬೇಕು."

ತಸ್ಯಾಸ್ತದ್ವಚನಂ ಶ್ರುತ್ವಾ ತ್ವರಮಾಣೋ ಮುದಾನ್ವಿತಃ ।
ತಯಾ ನೀತೋಽಥ ನೃಪತಿರ್ಲಿಂಗಸ್ಯಾಽಸ್ಯ ಸಮೀಪತಃ ॥ ೪೭ ॥
ಪೂಜಯಿತ್ವಾಽಥ ತಲ್ಲಿಂಗಂ ಪಕ್ಷಿಯೋನಿವಿಮೋಚನಂ ।
ತತ್ರೈವ ಚ ಸ್ಥಿತೋ ರಾಜಾ ಪ್ರಿಯಯಾ ಸಹ ಪಾರ್ವತಿ ॥ ೪೮ ॥
ತಸ್ಯಾಂ ರಾತ್ರೌ ನ ಸಂಜಾತಃ ಕುಕ್ಕುಟೋ ಯಾದೃಶಃ ಸದಾ ।
ಶಿವಪ್ರಸಾದಾದಭವದ್ದಿವ್ಯರೂಪೀ ಮನೋಹರಃ ॥ ೪೯ ॥
ರೂಪೇಣ ನಿರ್ಜಿತಃ ಕಾಮಸ್ತೇನಾಽಪ್ರತಿಮತೇಜಸಾ ।
ತತೋ ವಿಸ್ಮಯಮಾಪನ್ನಶ್ಚಿಂತಯಾಮಾಸ ಪಾರ್ಥಿವಃ ।
ಕೋಽಯಂ ಪ್ರಭಾವೋ ಯೇನಾಽಹಂ ಶಾಪಾನ್ಮುಕ್ತಃ ಸುದುಸ್ತರಾತ್ ॥
ಪ್ರಿಯಾಂ ಪಪ್ರಚ್ಛ ನೃಪತಿಃ ಪೂರ್ಣೇಂದುವದನಾಂ ಭೃಶಂ ।
ಕಥಂ ಶಾಪಾದ್ವಿಮುಕ್ತೋಽಹಂ ಕೇನ ಪುಣ್ಯೇನ ಕರ್ಮಣಾ ॥ ೫೧ ॥
ಅಥ ಸಾ ಕಥಯಾಮಾಸ ವೃತ್ತಾಂತಂ ವಿಸ್ತರಾನ್ಮುದಾ ।
ಗಾಲವೇನ ಹಿ ಯತ್ಪ್ರೋಕ್ತಂ ಯತ್ಕಿಂಚಿಚ್ಛಾಪಮೋಕ್ಷಣಂ ।
ರಾಜಂಛಾಪಾದ್ವಿಮುಕ್ತೋಽಸಿ ಲಿಂಗಸ್ಯಾಽಸ್ಯ ಪ್ರಭಾವತಃ ॥ ೫೨ ॥

---

೪೭. ಆಕೆಯ ಮಾತನ್ನು ಕೇಳಿ ರಾಜನೂ ಸಂತೋಷಭರಿತನಾಗಿ ಆ ಕ್ಷೇತ್ರ ಗಮನಕ್ಕಾಗಿ ಆತುರಗೊಂಡನು. ಆಗ ಆಕೆಯು ಆ ರಾಜನನ್ನು ಆ ಮಹಾಲಿಂಗದ ಬಳಿಗೆ ಕರೆದುಕೊಂಡು ಹೋದಳು.

೪೮. ಪಾರ್ವತಿಯೆ! ಆ ಮಹಾರಾಜನು ಪಕ್ಷಿಯೋನಿಯ ಜನ್ಮವನ್ನು ಕಳೆಯುವ ಆ ಲಿಂಗಕ್ಕೆ ಪೂಜೆಯನ್ನೆಸಗಿ ತನ್ನ ಪ್ರಿಯೆಯೊಡನೆ ಅಲ್ಲಿಯೇ ವಾಸ ಮಾಡುತ್ತಿದ್ದನು.

೪೯. ಅಂದಿನ ರಾತ್ರಿ ಎಂದಿನಂತೆ ಆತನು ಕುಕ್ಕುಟದೇಹವನ್ನು ತಾಳಲಿಲ್ಲ. ಅಲ್ಲದೆ ಆ ಮಹೇಶ್ವರನ ಅನುಗ್ರಹದಿಂದ ದಿವ್ಯದೇಹವನ್ನು ತಳೆದು ಸುಂದರನಾಗಿ ತೋರುತ್ತಿದ್ದನು.

೫೦. ಅಪ್ರತಿಮತೇಜಸ್ಸಿನಿಂದಲೂ ರೂಪದಿಂದಲೂ ಆತನು ಮನ್ಮಥನನ್ನೂ ಜಯಿಸಿದ್ದನು. ಇದರಿಂದ ವಿಸ್ಮಯವನ್ನು ತಾಳಿದ ಮಹಾರಾಜನು ತನ್ನಲ್ಲಿಯೇ ಯೋಚಿಸತೊಡಗಿದನು. "ಅತ್ಯಂತ ದುಸ್ಸಾಧ್ಯವಾದ ಈ ಶಾಪದಿಂದ ನನ್ನನ್ನು ಮುಕ್ತನನ್ನಾಗಿ ಮಾಡಿದ ಈ ಪ್ರಭಾವವೆಲ್ಲಿಯದು?"

೫೧. ಆ ಮಹಾರಾಜನು ಪೂರ್ಣಚಂದ್ರಮುಖಿಯಾದ ತನ್ನ ರಾಣಿಯನ್ನು "ನಾನು ಹೇಗೆ ಶಾಪದಿಂದ ಮುಕ್ತನಾದೆನು? ಯಾವ ಪುಣ್ಯಕರ್ಮದ ಫಲವು ನನಗೆ ಕೈಗೂಡಿತು?" ಎಂದು ಕೇಳಿದನು.

೫೨. ಆಕೆಯು ಗಾಲವಮಹರ್ಷಿಯು ಹೇಳಿದ ಪೂರ್ವಕಥೆಯನ್ನೂ,

ಪುನಃ ಪ್ರಸಾದ್ಯ ತಲ್ಲಿಂಗಂ ಭುಕ್ತ್ವಾ ಭೋಗಾಂಶ್ಚಿರಂ ಭುವಿ ।
ತಯಾ ಸಾರ್ಧಂ ಯಯೌ ರಾಜಾ ಸ್ವರ್ಗಂ ಸುರಗಣೈಃ ಸ್ತುತಃ ॥ ೫೩ ॥
ತದಾ ಪ್ರಭೃತಿ ತಲ್ಲಿಂಗಂ ಕುಕ್ಕುಟೇಶ್ವರಸಂಜ್ಞಕಂ ।
ವಿಖ್ಯಾತಂ ದೇವಿ ಲೋಕೇಽಸ್ಮಿನ್ಸರ್ವಕಾಮಫಲಪ್ರದಂ ॥ ೫೪ ॥
ತಚ್ಚ ಯೇ ಪೂಜಯಿಷ್ಯಂತಿ ಕುಕ್ಕುಟೇಶ್ವರಸಂಜ್ಞಕಂ ।
ತಿರ್ಯಗ್ಯೋನಿಂ ನ ಯಾಸ್ಯಂತಿ ನ ವಿಯೋಗೋ ಭವಿಷ್ಯತಿ ॥ ೫೫ ॥
ನ ಚಾಽಪಿ ನರಕಾಽವಾಪ್ತಿರ್ನ ದುಃಖಂ ನ ಜರಾ ಭಯಂ ।
ನಾಽಕಾಲೇ ಮರಣಂ ನೄಣಾಂ ನ ಚ ಕಷ್ಟಂ ಭವಿಷ್ಯತಿ ।
ರೂಪಸೌಭಾಗ್ಯಸಂಪನ್ನಾ ಭವಿಷ್ಯಂತಿ ಯುಗೇ ಯುಗೇ ॥ ೫೬ ॥
ಚತುರ್ದಶ್ಯಾಂ ಪ್ರಪಶ್ಯಂತಿ ಲಿಂಗಂ ಯೇ ಕುಕ್ಕುಟೇಶ್ವರಂ ।
ತೇಷಾಂ ಕುಲೇ ಚ ಯೇ ಕೇಚಿತ್ಪಿತರೋ ನಿರಯಸ್ಥಿತಾಃ ॥ ೫೭ ॥

---

ಶಾಪವಿಮೋಚನಕ್ಕೆ ತೋರಿಸಿದ ಉಪಾಯವನ್ನೂ ಸಂತೋಷದಿಂದ ವಿಸ್ತಾರವಾಗಿ ರಾಜನಿಗೆ ಹೇಳಿದಳು. ಮಹಾರಾಜನೆ! ಈ ಮಹಾಲಿಂಗದ ಮಹಿಮೆಯಿಂದಲೇ ನೀನು ಶಾಪವಿಮುಕ್ತನಾಗಿರುವೆ.

೫೩. ಆ ರಾಜನು ಪುನಃ ಆ ಮಹಾಲಿಂಗಕ್ಕೆ ಪೂಜೆಯನ್ನು ಮಾಡಿದನು. ಬಳಿಕ ಭೂಲೋಕದಲ್ಲಿ ಬಹುಕಾಲ ಸುಖಗಳನ್ನನುಭವಿಸಿ ದೇವತೆಗಳಿಂದಲೂ ಸ್ತುತ್ಯನಾಗಿ ಸಪತ್ನೀಕನಾಗಿಯೇ ಸ್ವರ್ಗಲೋಕಕ್ಕೆ ಹೊರಟು ಹೋದನು.

೫೪. ಪಾರ್ವತಿಯೆ! ಆ ದಿನದಿಂದ ಈ ಲಿಂಗವು ಕುಕ್ಕುಟೇಶ್ವರವೆಂಬ ಅಭಿಧಾನವನ್ನು ತಾಳಿ ಪ್ರಖ್ಯಾತವಾಗಿರುವುದು. ಭೂಲೋಕದಲ್ಲಿ ಸಕಲಾಭೀಷ್ಟ ಫಲಗಳನ್ನೂ ಕೊಡುತ್ತಿರುವುದು.

೫೫. ಯಾವ ಮಾನವರು ಕುಕ್ಕುಟೇಶ್ವರ ನಾಮಕವಾದ ಈ ಮಹಾಲಿಂಗದ ಪೂಜೆಯನ್ನು ಮಾಡುವರೊ, ಅವರು ನೀಚಯೋನಿಗಳಲ್ಲಿ ಹುಟ್ಟುವುದಿಲ್ಲ. ಮತ್ತು ಇಷ್ಟಮಿತ್ರರ ವಿಯೋಗವನ್ನೂ ಹೊಂದುವುದಿಲ್ಲ.

೫೬. ಅಂತಹ ನರರಿಗೆ ನರಕವಾಸವೂ, ದುಃಖವೂ, ಮುಪ್ಪೂ, ಭಯವೂ, ಅಕಾಲಮರಣವೂ, ಕಷ್ಟಪರಂಪರೆಗಳೂ ಸಂಭವಿಸುವುದಿಲ್ಲ. ಅವರು ಯುಗಯುಗಗಳಲ್ಲಿಯೂ ರೂಪಸೌಭಾಗ್ಯಗಳಿಂದ ಕೂಡಿದವರಾಗುವರು.

೫೭–೫೮. ಚತುರ್ದಶಿಯ ದಿನದಲ್ಲಿ ಯಾರು ಕುಕ್ಕುಟೇಶ್ವರ ಮಹಾಲಿಂಗವನ್ನು ನೋಡಿ ಪೂಜಿಸುವರೊ, ಅವರ ಕುಲದಲ್ಲಿ ಯಾವ ಪಿತೃಗಳು ನರಕದಲ್ಲಿರು

ತಿರ್ಯಗ್ಯೋನಿಗತಾ ಯೇ ಚ ಪಶುಯೋನಿಂ ತು ಯೇ ಗತಾಃ ।
ವೃಕ್ಷತ್ವಮಥವಾ ಪ್ರಾಪ್ತಾಸ್ತೇಷಾಂ ಮೋಕ್ಷೋ ಭವಿಷ್ಯತಿ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕುಕ್ಕುಟೇಶ್ವರಮಾಹಾತ್ಮ್ಯವರ್ಣನಂ"
ನಾಮೈಕವಿಂಶೋಽಧ್ಯಾಯಃ

---

ವರೊ, ಕ್ರಿಮಿಕೀಟಾದಿ ಜನ್ಮಗಳನ್ನು ಪಡೆದಿರುವರೊ, ಪಶುಜನ್ಮಗಳಲ್ಲಿ ಬಂದಿರುವರೊ, ಅಥವ ವೃಕ್ಷಗಳಾಗಿ ಬಂದಿರುವರೊ ಅವರಿಗೆಲ್ಲರಿಗೂ ಮುಕ್ತಿಯು ದೊರಕುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕುಕ್ಕುಟೇಶ್ವರಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾವಿಂಶೋಽಧ್ಯಾಯಃ

## ಕರ್ಕಟೇಶ್ವರಮಾಹಾತ್ಮ್ಯವರ್ಣನಂ

ಶ್ರೀ ವಿಶ್ವನಾಥ ಉವಾಚ :—

ದ್ವಾವಿಂಶತಿತಮಂ ವಿದ್ಧಿ ಕರ್ಕಟೇಶ್ವರಸಂಜ್ಞಕಂ ।
ಯಸ್ಯ ದರ್ಶನಮಾತ್ರೇಣ ತಿರ್ಯಗ್ಯೋನಿರ್ನ ದೃಶ್ಯತೇ ॥ ೧ ॥
ಆಸೀತ್ಪುರಾ ಬೃಹತ್ಕಲ್ಪೇ ಧರ್ಮಮೂರ್ತಿರ್ಜನಾಧಿಪಃ ।
ಸುಹೃಚ್ಛಕ್ರಸ್ಯ ನಿಹತಾ ಯೇನ ದೈತ್ಯಾಃ ಸಹಸ್ರಶಃ ॥ ೨ ॥
ಸೋಮಸೂರ್ಯಾದಯೋ ಯಸ್ಯ ತೇಜಸಾ ನಿಷ್ಪ್ರಭಾಃ ಕೃತಾಃ ।
ಪ್ರಜಾಶ್ಚ ಪಾಲಿತಾ ಯೇನ ನಿಹತ್ಯ ಸಮರೇ ದ್ವಿಷಃ ॥ ೩ ॥
ಯಥೇಚ್ಛಾರೂಪಧಾರೀ ಚ ಸಂಗ್ರಾಮೇಷ್ವಪರಾಜಿತಃ ।
ತಸ್ಯ ಭಾನುಮತೀ ನಾಮ ಭಾರ್ಯಾ ತ್ರೈಲೋಕ್ಯಸುಂದರೀ ॥ ೪ ॥
ರಾಜ್ಞಸ್ತಸ್ಯಾಽಗ್ರಮಹಿಷೀ ಪ್ರಾಣೇಭ್ಯೋಽಪಿ ಗರೀಯಸೀ ।
ದಶನಾರೀಸಹಸ್ರಾಣಾಂ ಮಧ್ಯೇ ಶ್ರೀರಿವ ರಾಜಿತಾ ॥ ೫ ॥

---

## ಕನ್ನಡದ ಅನುವಾದ

### ಕರ್ಕಟೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಇಪ್ಪತ್ತೆರಡನೆಯ ಮಹಾಲಿಂಗವಾದ ಕರ್ಕಟೇಶ್ವರನನ್ನು ದರ್ಶನಮಾಡಿದವರಿಗೆಂದಿಗೂ ನೀಚಯೋನಿಗಳಲ್ಲಿ ಜನ್ಮವನ್ನು ತಾಳುವ ಯೋಗವಿರುವುದಿಲ್ಲ.

೨. ಹಿಂದಿನ ಮಹಾಯುಗದಲ್ಲಿ ಧರ್ಮಮೂರ್ತಿಯೆಂಬ ಚಕ್ರವರ್ತಿಯೊಬ್ಬನು ರಾಜ್ಯಭಾರವನ್ನು ಮಾಡುತ್ತಿದ್ದನು. ಆತನು ಮಹೇಂದ್ರನಿಗೆ ಪರಮ ಮಿತ್ರನಾಗಿ ಸಾವಿರಾರು ರಾಕ್ಷಸರನ್ನು ನಿಗ್ರಹಿಸಿದ್ದನು.

೩. ಆತನ ತೇಜಸ್ಸಿನಿಂದ ಚಂದ್ರಸೂರ್ಯರೂ ಕಾಂತಿಹೀನರಾಗಿದ್ದರು. ಆ ರಾಜೇಂದ್ರನು ಯುದ್ಧಗಳಲ್ಲಿ ಸಕಲ ಶತ್ರುಗಳನ್ನೂ ನಿಗ್ರಹಿಸಿ ಪ್ರಜೆಗಳನ್ನು ಕ್ಷೇಮದಿಂದ ಪಾಲಿಸುತ್ತಿದ್ದನು.

೪. ಸ್ವೇಚ್ಛೆಯಿಂದ ರೂಪಾಂತರಗಳನ್ನು ಹೊಂದುವ ಸಾಮರ್ಥ್ಯವು ಆತನಿಗಿದ್ದಿತು. ಯುದ್ಧಗಳಲ್ಲಿ ಪರಾಜಯವೆಂಬವನ್ನೇ ಆತನರಿಯನು. ಆತನಿಗೆ ತ್ರಿಲೋಕಸುಂದರಿಯಾದ ಭಾನುಮತಿಯೆಂಬಾಕೆಯು ಪತ್ನಿಯಾಗಿದ್ದಳು.

೫. ಪಟ್ಟಮಹಿಷಿಯಾದ ಆಕೆಯು ಗಂಡನಿಗೆ ಪ್ರಾಣಗಳಿಗಿಂತಲೂ ಪ್ರಿಯತಮೆಯಾಗಿ ಆತನ ಇತರ ಹತ್ತುಸಾವಿರ ಅಂತಃಪುರದವರ ಮಧ್ಯದಲ್ಲಿ ಮಹಾಲಕ್ಷ್ಮಿಯಂತೆ ಶೋಭಿಸುತ್ತಿದ್ದಳು.

ನೃಪೋ ನೃಪಸಹಸ್ರೇಣ ನ ಕದಾಚಿತ್ಪ್ರಮುಚ್ಯತೇ ।
ಕದಾಚಿದೇಕಾಂತಗತಃ ಪಪ್ರಚ್ಛ ಸ್ವಪುರೋಹಿತಂ ।
ವಿಸ್ಮಯೇನಾವೃತಮನಾ ವಸಿಷ್ಠಮೃಷಿಸತ್ತಮಂ ॥ ೬ ॥
ಭಗವನ್ಕೇನ ಧರ್ಮೇಣ ಮಮ ಲಕ್ಷ್ಮೀರನುತ್ತಮಾ ।
ಕಸ್ಮಾಚ್ಚ ವಿಪುಲಂ ತೇಜೋ ದುಃಸಹಂ ಮಮ ದೃಶ್ಯತೇ ॥ ೭ ॥

ವಸಿಷ್ಠ ಉವಾಚ :—

ಪುರಾ ತ್ವಮವನೀಪಾಽಽಸೀಃ ಶೂದ್ರಜಾತಿಸಮುದ್ಭವಃ ।
ಬಹುದೋಷಸಮಾವಿಷ್ಟೋ ದುಷ್ಟಯಾ ಭಾರ್ಯಯಾಽನಯಾ ॥ ೮ ॥
ನಿವಸನ್ ದುಷ್ಟಹೃದಯೋ ವರ್ಷಾಣಿ ಸುಬಹೂನ್ಯಪಿ ।
ಮಹಾಕ್ರೋಧಾಽಭಿಭೂತಾತ್ಮಾ ಸದಾ ನಿಷ್ಠುರಜಲ್ಪಕಃ ॥ ೯ ॥
ಸದಾ ಬ್ರಹ್ಮಸ್ವಹಾರೀ ತ್ವಂ ಸದಾ ವೇದವಿನಿಂದಕಃ ।
ಸದಾ ಚಾಽಸೂಯಕೋ ರಾಜನ್ಸದಾ ವಿಶ್ವಾಸಘಾತಕಃ ॥ ೧೦ ॥
ಅಥ ಪಂಚತ್ವಮಾಪನ್ನಃ ಕಾಲೇ ನರಕಮಾಪ್ತವಾನ್ ।
ತಾಮ್ರಭ್ರಾಷ್ಟ್ರೇ ಪರಂ ದಗ್ಧೋ ದಶವರ್ಷಾಣಿ ಪಂಚ ಚ ॥ ೧೧ ॥

---

೬. ಆ ರಾಜನು ಯಾವಾಗಲೂ ಸಾವಿರ ಸಾಮಂತರಾಜರಿಂದ ಪರಿವಾರಿತನಾಗಿರುತ್ತಿದ್ದನು. ಒಮ್ಮೆ ಅವನು ಏಕಾಂತದಲ್ಲಿರಲು ವಿಸ್ಮಯಾವಿಷ್ಟಚಿತ್ತನಾಗಿ ಮಹರ್ಷಿಸತ್ತಮನೂ, ಕುಲಪುರೋಹಿತನೂ ಆದ ವಸಿಷ್ಠಮುನಿವರ್ಯನನ್ನು ಬಳಿಗೆ ಕರೆದು ಪ್ರಶ್ನೆಮಾಡಿದನು.

೭. ಮಹರ್ಷಿಯೆ! ಯಾವ ಧರ್ಮಾಚರಣೆಯಿಂದ ನನಗೆ ಅತುಲವಾದ ಈ ಐಶ್ವರ್ಯವು ಪ್ರಾಪ್ತವಾಗಿರುವುದು? ನನಗೆ ದುಸ್ಸಹವೂ, ಅಪ್ರತಿಮವೂ ಆದ ಈ ತೇಜಸ್ಸು ಹೇಗೆ ಬಂದಿತು?

೮. ವಸಿಷ್ಠನು ಹೇಳುತ್ತಾನೆ:—ಮಹಾರಾಜನೆ! ಹಿಂದೆ ನೀನು ಶೂದ್ರಜಾತಿಯಲ್ಲಿ ಹುಟ್ಟಿ ಈಕೆಯನ್ನೇ ಹೆಂಡತಿಯಾಗಿ ಪಡೆದಿದ್ದೆ. ಆಗ ನೀವಿಬ್ಬರೂ ಅನೇಕ ದುಷ್ಟಕಾರ್ಯಗಳನ್ನು ಮಾಡುತ್ತಿದ್ದಿರಿ.

೯. ಬಹುಕಾಲದವರೆಗೂ ನೀನು ದುಷ್ಟಮನಸ್ಸಿನವನೂ, ಮಹಾಕೋಪಪ್ರಕೃತಿಯುಳ್ಳವನೂ, ಯಾವಾಗಲೂ ಕಠಿನವಾಕ್ಯಗಳನ್ನೇ ಆಡುತ್ತಿರುವವನೂ ಆಗಿರುತ್ತಿದ್ದೆ.

೧೦–೧೧. ರಾಜೇಂದ್ರನೆ! ನಿತ್ಯವೂ ಬ್ರಾಹ್ಮಣರ ಸ್ವತ್ತನ್ನಪಹರಿಸುವವನೂ, ವೇದಶಾಸ್ತ್ರಗಳನ್ನು ನಿಂದಿಸುವವನೂ, ಅಸೂಯಾಪರನೂ, ವಿಶ್ವಾಸಘಾತಕನೂ ಆಗಿದ್ದೆ. ಯಥಾಕಾಲದಲ್ಲಿ ಮರಣವನ್ನು ಹೊಂದಿ ನೀನು ನರಕಲೋಕವನ್ನು ಸೇರಿದೆ. ಅಲ್ಲಿ ತಾಮ್ರಭ್ರಾಷ್ಟ್ರವೆಂಬ ನರಕದಲ್ಲಿ ಹದಿನೈದು ವರ್ಷಗಳಕಾಲ ಪಚನದ ದುಃಖವನ್ನನುಭವಿಸಿದೆ.

ರೌರವೇ ಕುಂಭಿಪಾಕೇ ಚ ಮಹಾರೌರವಸಂಜ್ಞಕೇ ।
ಸೂಕ್ಷ್ಮಾಣಿ ತಿಲಮಾತ್ರಾಣಿ ಕೃತ್ವಾ ಖಂಡಾನ್ಯನೇಕಶಃ ॥ ೧೨ ॥
ಮೂಷಾಯಾಂ ಧಮಿತೋ ರಾಜನ್ನಸಿಪತ್ರೇ ಚ ದಾರಿತಃ ।
ಶೇಷಪಾತಕಶುದ್ಧ್ಯರ್ಥಂ ಧರಾಯಾಮವತಾರಿತಃ ॥ ೧೩ ॥
ವಿಧಾಯ ಕಾರ್ಕಟಂ ರೂಪಂ ಯಮೇನ ತ್ವಯಿ ಪಾರ್ಥಿವ ।
ಶಿವಸ್ಯ ಸರೋ ವಿಖ್ಯಾತಂ ಮಹಾಕಾಲವನೋತ್ತಮೇ ॥ ೧೪ ॥
ದತ್ತಂ ಜಪ್ತಂ ಕೃತಂ ಯಜ್ಞ ಹುತಂ ದೇವಾರ್ಚನಾದಿ ಯತ್ ।
ಸರ್ವಂ ತದಕ್ಷಯಂ ಕರ್ಮ ತಸ್ಮಿನ್ಸರಸಿ ವಿಶ್ರುತಂ ॥ ೧೫ ॥
ನಿಕ್ಷಿಪ್ತಸ್ತ್ವಂ ತದಾ ತೇನ ಭಾವಿಪುಣ್ಯೇನ ಕರ್ಮಣಾ ।
ತತ್ರ ಸ್ಥಿತಸ್ತ್ವಂ ಭೂಪಾಲ ವರ್ಷಾಣಾಂ ಪಂಚಕಂ ತಥಾ ॥ ೧೬ ॥
ಕದಾಚಿತ್ತೀರಭೂಮ್ಯಾಂ ತ್ವಂ ಗತಃ ಸಂಕ್ರೀಡಿತುಂ ಶನೈಃ ।
ಸಮೀಕ್ಷ್ಯ ತತ್ರ ಕಾಕೇನ ಧೃತ್ವಾ ಚಂಚುಪುಟೇನ ಚ ॥ ೧೭ ॥

---

೧೨. ರೌರವ, ಕುಂಭೀಪಾಕ ಮತ್ತು ಮಹಾರೌರವಗಳೆಂಬ ನರಕಗಳಲ್ಲಿ ನಿನ್ನ ಶರೀರವು ಎಳ್ಳಿನ ಗಾತ್ರದ ಅಸಂಖ್ಯಾತ ಖಂಡಗಳಾಗಿ ಕತ್ತರಿಸಲ್ಪಟ್ಟು ಮಹಾಯಾತನೆಗೊಳಗಾದೆ.

೧೩. ಮೂಸೆಯಲ್ಲಿ ಹಾಕಿ ನಿನ್ನನ್ನು ಬೇಯಿಸಿದರು. ರಾಜನೆ! ಅಸಿಪತ್ರ ನರಕದಲ್ಲಿ ನಿನ್ನನ್ನು ಸೀಳಿದರು. ಉಳಿದ ಪಾತಕಗಳನ್ನು ಕಳೆದುಕೊಂಡು ಶುದ್ಧನಾಗಲು ಪುನಃ ಭೂಲೋಕದಲ್ಲಿ ಹುಟ್ಟಿದೆ.

೧೪. ಪಾರ್ಥಿವೋತ್ತಮನೆ! ಯಮಧರ್ಮರಾಜನು ನಿನಗೆ ಕರ್ಕಟದ (ಏಡಿಯ) ರೂಪವನ್ನು ವಿಧಿಸಿದನು. ಮಹಾಕಾಲವನಕ್ಷೇತ್ರದಲ್ಲಿ ಶಿವಸರೋವರವೆಂಬ ಪ್ರಖ್ಯಾತತೀರ್ಥವೊಂದಿರುವುದು.

೧೫. ಆ ಸರೋವರದಲ್ಲಿ ಯಾವ ದಾನ, ಜಪ, ಕರ್ಮ, ಹೋಮ, ದೇವತಾರ್ಚನಾದಿಗಳನ್ನು ಮಾಡಿದರೂ ಅಕ್ಷಯಫಲವನ್ನು ಕೊಡುವುದೆಂದು ಬಹುಕಾಲದಿಂದಲೂ ಪ್ರಖ್ಯಾತವಾಗಿರುವುದು.

೧೬. ಭೂಪಾಲಕನೆ! ಮುಂದೆ ನಡೆಯಬೇಕಾದ ಪುಣ್ಯಫಲದಿಂದ ಪ್ರೇರಿತನಾಗಿ ಯಮಧರ್ಮರಾಜನು ನಿನ್ನನ್ನು ಆ ಸರೋವರದಲ್ಲಿಟ್ಟನು. ಅಲ್ಲಿಯೇ ಐದು ವರ್ಷಗಳ ಕಾಲವು ಕಳೆದುಹೋಯಿತು.

೧೭. ಒಂದು ದಿನ ಆಟವಾಡಲು ನೀನು ದಡದ ಮೇಲೇರಿ ಮೆಲ್ಲನೆ ನಡೆದು ಬರುತ್ತಿರಲು ಒಂದು ಕಾಗೆಯು ನಿನ್ನನ್ನು ಕಂಡು ತನ್ನ ಕೊಕ್ಕಿನಲ್ಲಿ ಕಚ್ಚಿಕೊಂಡು ಹಾರಿಹೋಯಿತು.

ಆಕಾಶಮಾರ್ಗಂ ಚೋಡ್ಡೀನಃ ಸ ತ್ವಯಾ ತಾಡಿತೋ ಭೃಶಂ ।
ತ್ವತ್ತೀಕ್ಷ್ಣಪಾತ್ರೈಶ್ಚರಣೈಸ್ತಾಡಿತೋ ವ್ಯಥಿತಸ್ತದಾ ॥ ೧೮ ॥
ಮುಕ್ತಸ್ತ್ವಂ ಚಂಚುಪುಟತೋ ವಾಯಸೇನಾಕುಲೇನ ತು ।
ಸ್ವರ್ಗದ್ವಾರಸ್ಯ ಪೂರ್ವೇ ತು ದೇವಾಗಾರೇ ಸುಪುಣ್ಯದೇ ॥ ೧೯ ॥
ಶಿವಸ್ಯ ಕ್ಷಿಪ್ತಸ್ತ್ವಂ ಶೀಘ್ರಂ ಚಂಚ್ವಾಕ್ಷೇಪಪ್ರಪೀಡಿತಃ ।
ಮೃತೋಽಸಿ ಸನ್ನಿಧೌ ತತ್ರ ದೇವಸ್ಯ ಪರಮೇಷ್ಠಿನಃ ॥ ೨೦ ॥
ವಿಮುಚ್ಯ ದೇಹಂ ತಜ್ಜೀರ್ಣಂ ಯಾವತ್ತಂ ಕಾರ್ಕಟಂ ಪುರಾ ।
ತತ್ಕ್ಷಣಾದ್ದಿವ್ಯದೇಹಶ್ಚ ದಿವ್ಯಾಽಽಭರಣಭೂಷಿತಃ ॥ ೨೧ ॥
ತಸ್ಯ ಲಿಂಗಸ್ಯ ಮಾಹಾತ್ಮ್ಯಾದ್ಭೂತ್ವಾ ವಿದ್ಯಾಧರೇಶ್ವರಃ ।
ಕಾಮಗೇನ ವಿಮಾನೇನ ಪೂಜ್ಯಮಾನೋ ಗಣೇಶ್ವರೈಃ ॥ ೨೨ ॥
ಸ್ವರ್ಗೇ ವ್ರಜಂಸ್ತ್ವಂ ಸಂಪೃಷ್ಟಃ ಸುರಸಂಘೈಶ್ಚ ಸಾದರಂ ।
ಕೋಽಯಂ ಮಹಾತ್ಮಾ ಮುದಿತೋ ಯಾತಿ ದಿವ್ಯಪಥೋಽಂಬರಾತ್॥ ೨೩॥

---

೧೮. ಆಕಾಶಮಾರ್ಗದಲ್ಲಿ ಹಾರುತ್ತಿದ್ದ ಆ ಕಾಗೆಯನ್ನು ನೀನು ಬಹುವಾಗಿ ಕಚ್ಚಿ ಹಿಂಸೆಗೊಳಿಸಿದೆ. ತೀಕ್ಷ್ಣಗಳಾದ ನಿನ್ನ ಕಾಲುಗಳಿಂದ ಅದು ಬಹಳ ವ್ಯಥೆಗೊಂಡಿತು.

೧೯. ಆಕುಲಗೊಂಡ ಆ ವಾಯಸವು ಸ್ವರ್ಗದ್ವಾರಕ್ಕೆ ಪೂರ್ವದಲ್ಲಿರುವ ಪರಮಪುಣ್ಯಪ್ರದವಾದ ಒಂದು ದೇವಾಲಯದ ಮೇಲೆ ಹಾರುತ್ತಿರುವಾಗ ಬಾಯಿಂದ ನಿನ್ನನ್ನು ಕೆಳಗೆ ಬಿಟ್ಟಿತು.

೨೦. ಆ ಕಾಗೆಯ ಕೊಕ್ಕಿನ ಹೊಡೆತದಿಂದ ಪೀಡಿತನಾಗಿ ನೀನು ಕೆಳಗೆ ಬಿದ್ದು ಆ ಮಂದಿರದಲ್ಲಿದ್ದ ದೇವದೇವನಾದ ಮಹೇಶ್ವರನ ಸನ್ನಿಧಿಯಲ್ಲಿ ಪ್ರಾಣವನ್ನು ತ್ಯಜಿಸಿದೆ.

೨೧. ಆ ಕ್ಷಣದಲ್ಲಿಯೇ ನೀನು ಶಿಥಿಲವಾದ ಏಡಿಯ ದೇಹವನ್ನು ಬಿಟ್ಟು ದಿವ್ಯದೇಹವನ್ನು ತಾಳಿ ದಿವ್ಯಾಭರಣಗಳನ್ನು ಧರಿಸಿ ರಾರಾಜಿಸುತ್ತಿದ್ದೆ.

೨೨. ಆ ಲಿಂಗದ ಮಾಹಾತ್ಮ್ಯದಿಂದ ನೀನೊಬ್ಬ ವಿದ್ಯಾಧರೇಶ್ವರನಾಗಿ ಸ್ವೇಚ್ಛಾಸಂಚಾರವುಳ್ಳ ವಿಮಾನದಲ್ಲಿ ಕುಳಿತು ಹೊರಟೆ. ಪ್ರಮಥಗಣಗಳೆಲ್ಲರೂ ನಿನ್ನನ್ನು ಸ್ತೋತ್ರಮಾಡುತ್ತಿದ್ದರು.

೨೩. ಸ್ವರ್ಗಲೋಕಕ್ಕೆ ಹೋಗುತ್ತಿದ್ದ ನಿನ್ನನ್ನು ಕುರಿತು ದೇವತಾಗಣಗಳೂ ಆದರದಿಂದ, "ಆಕಾಶಮಾರ್ಗದಲ್ಲಿ ಸಂತೋಷದಿಂದ ಸ್ವರ್ಗಕ್ಕೆ ಹೋಗುತ್ತಿರುವ ಈ ಮಹಾತ್ಮನು ಯಾರು?" ಎಂದು ಪ್ರಶ್ನೆಮಾಡಿದರು.

ತತೋ ರುದ್ರಗಣೈಃ ಸರ್ವಂ ಸುರಾಣಾಂ ಕಥಿತಂ ಪುರಾ ।
ವೃತ್ತಾಂತಂ ವಿಸ್ತರಾತ್ಸರ್ವಂ ಕಾರ್ಕಟತ್ವವಿಮೋಚನಂ ॥ ೨೪ ॥
ತಸ್ಯ ಲಿಂಗಸ್ಯ ದೇವೇಶಾಃ ಪ್ರಭಾವೋಽಯಮುಪಸ್ಥಿತಃ ।
ದೇವೈಃ ಪ್ರೋಕ್ತಂ ಚ ಸಹಸಾ ಲಿಂಗಸ್ಯಾಽಸ್ಯ ಪ್ರಭಾವತಃ ॥ ೨೫ ॥
ಕಾರ್ಕಟೇಯೋನಿಮುಕ್ತಸ್ಯ ಪ್ರಾಪ್ತಂ ಸ್ವರ್ಗಸುಖಂ ಯತಃ ।
ಕರ್ಕಟೇಶ್ವರನಾಮಾಽಯಮತೋ ಲೋಕೇ ಭವಿಷ್ಯತಿ ॥ ೨೬ ॥
ತದಾಪ್ರಭೃತಿ ದೇವೋಽಯಂ ಕರ್ಕಟೇಶ್ವರಸಂಜ್ಞಕಃ ।
ತ್ವಯಾ ಸ್ವರ್ಗೇ ಮಹಾಭೋಗಾ ಭುಕ್ತಾ ರಾಜನ್ ಯಥೇಚ್ಛಯಾ ॥೨೭॥
ಆಗತೋಽಸಿ ಪುನರ್ಭೂಮೌ ಲಬ್ಧಂ ರಾಜ್ಯಮಕಂಟಕಂ ।
ತಸ್ಯ ಲಿಂಗಸ್ಯ ಮಾಹಾತ್ಮ್ಯಾಜ್ಜ್ಞಾತಂ ಸರ್ವಂ ತವಾಽಧುನಾ ।
ತಸ್ಮಾತ್ಪಾರ್ಥಿವ ಭೂಯಸ್ತ್ವಂ ಲಿಂಗಮಾರಾಧಯ ದ್ರುತಂ ॥ ೨೮ ॥
ಜಾತಿಸ್ಮರತ್ವಮಾಪನ್ನೋ ವಸಿಷ್ಠವಚನಾತ್ತದಾ ।
ಪೂರ್ವಂ ಕರ್ಮ ಸ್ಮೃತಂ ತೇನ ಸ್ವಕೀಯಂ ಪಾರ್ಥಿವೇನ ತು ॥ ೨೯ ॥

---

೨೪. ಆಗ ನಿನ್ನೊಡನಿದ್ದ ರುದ್ರಗಣಗಳು ನಿನ್ನ ಪೂರ್ವವೃತ್ತಾಂತವನ್ನೂ, ನಿನಗೆ ಏಡಿಯ ಜನ್ಮದ ವಿಮೋಚನೆಯಾದ ಬಗೆಯನ್ನೂ ವಿಸ್ತಾರವಾಗಿ ಅವರಿಗೆ ತಿಳಿಸಿದರು.

೨೫–೨೬. "ದೇವತೆಗಳಿರಾ! ಆ ಲಿಂಗದ ಮಾಹಾತ್ಮ್ಯವು ಈ ವಿಧವಾಗಿರುವುದು" ಎಂದು ಹೇಳಿದ ರುದ್ರಗಣಗಳ ಮಾತನ್ನು ಕೇಳಿ ದೇವತೆಗಳು ಇಂತೆಂದರು. "ಈ ಮಹಾಲಿಂಗದ ಪ್ರಭಾವದಿಂದ ಈತನು ತನ್ನ ಏಡಿಯ ಹೀನಜನ್ಮವನ್ನು ಕಳೆದುಕೊಂಡು ಸ್ವರ್ಗಸುಖವನ್ನು ಪಡೆದ ಕಾರಣದಿಂದ ಇನ್ನುಮುಂದೆ ಈ ಮಹಾಲಿಂಗವು ಕರ್ಕಟೇಶ್ವರನೆಂಬ ಹೆಸರಿನಿಂದ ಪ್ರಖ್ಯಾತವಾಗುವುದು."

೨೭. ಎಲೈ ಕೌಶಿಕರಾಜನೆ! ಆ ದಿನದಿಂದ ಈ ಮಹಾಲಿಂಗವು ಕರ್ಕಟೇಶ್ವರನೆಂಬ ಪೆಸರುಳ್ಳುದಾಯಿತು. ಬಳಿಕ ನೀನು ಸ್ವರ್ಗಲೋಕದಲ್ಲಿ ಸ್ವೇಚ್ಛೆಯಾಗಿ ಮಹಾಭೋಗಗಳನ್ನನುಭವಿಸಿದೆ.

೨೮. ಪುನಃ ನೀನು ಭೂಲೋಕಕ್ಕೆ ಬಂದಿರುವೆ. ನಿಷ್ಕಂಟಕವಾದ ರಾಜ್ಯವೂ ನಿನಗೆ ಪ್ರಾಪ್ತವಾಗಿರುವುದು. ಆ ಲಿಂಗದ ಪ್ರಭಾವದಿಂದಲೇ ಈಗಿನ ನಿನ್ನ ವೈಭವವೆಲ್ಲವೂ ಲಭಿಸಿರುವುದು. ಮಹಾರಾಜ! ಆದುದರಿಂದ ನೀನು ಪುನಃ ಅಲ್ಲಿಗೆ ಹೋಗಿ ಆ ಮಹಾಲಿಂಗವನ್ನು ಜಾಗ್ರತೆಯಾಗಿ ಪೂಜೆಮಾಡುವವನಾಗು.

೨೯. ಆ ಮಹಾರಾಜನು ವಸಿಷ್ಠಮಹರ್ಷಿಯ ಮಾತುಗಳನ್ನು ಕೇಳಿ ಪೂರ್ವಜನ್ಮದ ಸ್ಮೃತಿಯನ್ನು ಪಡೆದನು. ಮತ್ತು ತಾನು ಹಿಂದಿನ ಜನ್ಮಗಳಲ್ಲಿ ಮಾಡಿದುದೆಲ್ಲವನ್ನೂ ಜ್ಞಾಪಿಸಿಕೊಂಡನು.

ಪುನರ್ಗತ್ವಾ ಚ ತಲ್ಲಿಂಗಂ ಪೂಜಯಾಮಾಸ ಯತ್ನತಃ ।
ತಸ್ಮಿಂಲ್ಲಿಂಗೇ ಲಯಂ ಪ್ರಾಪ್ತಃ ಸ್ವಶರೀರೇಣ ಪಾರ್ವತಿ ॥ ೩೦ ॥
ಯೇಽರ್ಚಯಂತಿ ಸದಾ ಭಕ್ತ್ಯಾ ಕರ್ಕಟೇಶ್ವರಸಂಜ್ಞಕಂ ।
ಭುಕ್ತ್ವಾ ಭೋಗಾಂಶ್ಚಿರಂ ಭೂಮೌ ತೇ ಯಾಂತಿ ಪರಮಾಂ ಗತಿಂ॥ ೩೧ ॥
ನಿಯಮೇನ ಪ್ರಪಶ್ಯಂತಿ ಯೇ ದೇವಂ ಕರ್ಕಟೇಶ್ವರಂ ।
ಅಷ್ಟಮ್ಯಾಂ ವಾ ಚತುರ್ದಶ್ಯಾಂ ತೇಷಾಂ ಪುಣ್ಯಫಲಂ ಶೃಣು ॥ ೩೨ ॥
ಸೂರ್ಯದೀಪ್ತಿಪ್ರತೀಕಾಶೈರ್ವಿಮಾನೈಃ ಸಾರ್ವಕಾಮಿಕೈಃ ।
ಮೃತಾ ಮಮ ಪುರಂ ಯಾಂತಿ ತ್ರಿಸಪ್ತಕುಲಸಂಯುತಾಃ ॥ ೩೩ ॥
ತತ್ರ ದಿವ್ಯೈರ್ಮಹಾಭಾಗೈಃ ಸ್ತ್ರೀಸಹಸ್ರೈರ್ಮನೋರಮೈಃ ।
ಕಲ್ಪಕೋಟಿಶತೈರ್ದೇವಿ ಸೇವ್ಯಮಾನಾ ವಸಂತಿ ಹಿ ॥ ೩೪ ॥
ತದಂತೇ ವಿಷ್ಣುಭವನೇ ತಾವತ್ಕಾಲಂ ಚ ಸಂತಿ ಹಿ ।
ವೈಷ್ಣವೈರ್ವಿವಿಧೈರ್ಭೋಗೈಃ ಸ್ತ್ರೀಸಹಸ್ರೈಸ್ತು ಸೇವಿತಾಃ ॥ ೩೫ ॥

---

೩೦. ಪಾರ್ವತಿಯೆ ! ಪುನಃ ಹೋಗಿ ಆ ರಾಜೇಂದ್ರನು ಪ್ರಯತ್ನಪೂರ್ವಕವಾಗಿ ಅದರ ಪೂಜೆಯನ್ನು ಮಾಡಿ ಶರೀರಸಹಿತನಾಗಿಯೇ ಆ ಲಿಂಗದಲ್ಲಿ ಐಕ್ಯವನ್ನು ಪಡೆದನು.

೩೧. ಯಾರು ಕರ್ಕಟೇಶ್ವರನಾಮಕವಾದ ಈ ಮಹಾಲಿಂಗವನ್ನು ಪೂಜಿಸುವರೊ, ಆ ಭಕ್ತೋತ್ತಮರು ಭೂಲೋಕದಲ್ಲಿ ಬಹಳ ಕಾಲ ಭೋಗಗಳನ್ನನುಭವಿಸಿ ಕಡೆಗೆ ಪರಮಪದವನ್ನು ಸೇರುವರು.

೩೨. ನಿಯಮದಿಂದ ಯಾರು ಅಷ್ಟಮಿ ಮತ್ತು ಚತುರ್ದಶಿಯ ದಿನಗಳಲ್ಲಿ ಈ ಕರ್ಕಟೇಶ್ವರನನ್ನು ನೋಡುವರೊ, ಅವರಿಗೆ ಲಭಿಸುವ ಪುಣ್ಯಫಲವನ್ನು ಹೇಳುವೆನು, ಕೇಳು.

೩೩. ಅವರು ಸೂರ್ಯನ ತೇಜಸ್ಸಿನಿಂದ ಹೊಳೆಯುತ್ತ ಸರ್ವಭೋಗಸಹಿತಗಳಾದ ವಿಮಾನಗಳಲ್ಲಿ ಕುಳಿತು ಇಪ್ಪತ್ತೊಂದು ಕುಲಗಳವರೊಡನೆ ನನ್ನ ಪುರವನ್ನು ಸೇರುವರು.

೩೪. ಅಲ್ಲಿ ದಿವ್ಯಗಳಾದ ಮಹಾಭೋಗಗಳನ್ನು ಅನುಭವಿಸುತ್ತ ಸುಂದರಿಯರಾದ ಸಾವಿರಾರು ಸ್ತ್ರೀಯರಿಂದ ಪರಿವೃತರಾಗಿ ಅವರೆಲ್ಲರ ಸೇವೆಗಳನ್ನು ಸ್ವೀಕರಿಸುತ್ತ ನೂರುಕೋಟಿಕಲ್ಪಗಳವರೆಗೂ ನನ್ನ ಲೋಕದಲ್ಲಿರುವರು.

೩೫. ಅದಾದ ಮೇಲೆ ವಿಷ್ಣುಲೋಕಕ್ಕೆ ಹೋಗಿ ಅಲ್ಲಿಯೂ ಸಾವಿರಾರು ಸ್ತ್ರೀಯರಿಂದ ಸೇವಿತರಾಗಿ ವೈಷ್ಣವಭೋಗಗಳನ್ನನುಭವಿಸುತ್ತ ಪುನಃ ಅಷ್ಟು ಕಾಲದವರೆಗೂ ವಾಸಿಸುವರು.

ವಿಷ್ಣುಲೋಕಾದ್ಬ್ರಹ್ಮಲೋಕಂ ಸಂಪ್ರಾಪ್ಯ ಮುದಿತಾಃ ಪುನಃ ।
ಭೋಗಾನ್ನಾನಾವಿಧಾನ್ ಭುಕ್ತ್ವಾ ತತೋ ಯಾಂತಿ ಪರಂ ಪದಂ॥ ೩೬ ॥
ದಶಾಽಶ್ವಮೇಧೈರ್ಯತ್ಪುಣ್ಯಂ ತತ್ಫಲಂ ತೀರ್ಥಯಾತ್ರಯಾ ।
ಕರ್ಕಟೇಶ್ವರದೇವಸ್ಯ ಮೇಘನಾದೇಶ್ವರಂ ಶೃಣು ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕರ್ಕಟೇಶ್ವರಮಾಹಾತ್ಮ್ಯವರ್ಣನಂ"
ನಾಮ ದ್ವಾವಿಂಶೋಽಧ್ಯಾಯಃ

---

೩೬. ವಿಷ್ಣುಲೋಕದಿಂದ ಬ್ರಹ್ಮಲೋಕಕ್ಕೆ ಹೋಗಿ ಮತ್ತೆ ಸಂತೋಷದಿಂದ ಅನೇಕ ಭೋಗಭಾಗ್ಯಗಳನ್ನನುಭವಿಸಿ ಕಡೆಗೆ ಮೋಕ್ಷಪದವನ್ನು ಹೊಂದುವರು.

೩೭. ಈ ಕರ್ಕಟೇಶ್ವರನ ಬಳಿಗೆ ತೀರ್ಥಯಾತ್ರೆಯನ್ನು ಮಾಡಲು ಹತ್ತು ಅಶ್ವಮೇಧಯಜ್ಞಗಳನ್ನು ಮಾಡಿದ ಪುಣ್ಯವು ಲಭಿಸುವುದು. ಇನ್ನು ಮೇಘನಾದೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕರ್ಕಟೇಶ್ವರಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋವಿಂಶೋಽಧ್ಯಾಯಃ

### ಮೇಘನಾದೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ :—

**ಮೇಘನಾದೇಶ್ವರಂ ದೇವಿ ತ್ರಯೋವಿಂಶತಿತಮಂ ಶೃಣು ।**
**ಯಸ್ಯ ದರ್ಶನಮಾತ್ರೇಣ ಪ್ರಾಪ್ಯಂತೇ ಸರ್ವಸಿದ್ಧಯಃ ॥ ೧ ॥**
**ರಾಜಮೂಲಾ ಮಹಾದೇವಿ ಯೋಗಕ್ಷೇಮಾಃ ಸುವೃಷ್ಟಯಃ ।**
**ಪ್ರಜಾಶ್ಚ ವ್ಯಾಧಯಶ್ಚೈವ ಮರಣಂ ಚ ಭಯಾನಿ ಚ ॥ ೨ ॥**
**ರಾಜಾ ಕೃತಂ ತಥಾ ತ್ರೇತಾ ದ್ವಾಪರಶ್ಚ ತಥಾ ಕಲಿಃ ।**
**ರಾಜಮೂಲಾನಿ ಸರ್ವಾಣಿ ರಾಜಾ ಧರ್ಮಸ್ಯ ಕಾರಣಂ ॥ ೩ ॥**
**ರಾಜಾ ಬಭೂವ ಲೋಕೇಽಸ್ಮಿನ್ಮದಾಂಧೋ ನಾಮ ಪಾರ್ವತಿ ।**
**ಅಹಂಕಾರಾವೃತೋ ದುಷ್ಟೋ ದೇವಬ್ರಾಹ್ಮಣಕಂಟಕಃ ॥ ೪ ॥**
**ಕಲಿದ್ವಾಪರಯೋಃ ಸಂಧೌ ತಸ್ಯ ದೋಷಾಚ್ಚ ಭಾಮಿನಿ ।**
**ಅನಾವೃಷ್ಟಿರಭೂದ್ಘೋರಾ ಲೋಕೇ ದ್ವಾದಶವಾರ್ಷಿಕೀ ॥ ೫ ॥**

---

## ಕನ್ನಡದ ಅನುವಾದ

### ಮೇಘನಾದೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಇಪ್ಪತ್ತಮೂರನೆಯ ಮಹಾಲಿಂಗವೇ ಮೇಘನಾದೇಶ್ವರವು. ಇದನ್ನು ನೋಡುವುದರಿಂದಲೇ ಸಕಲ ಸಿದ್ಧಿಗಳೂ ಲಭಿಸುವುವು.

೨. ಮಹೇಶ್ವರಿಯೆ! ಲೋಕದಲ್ಲಿ ಯೋಗಕ್ಷೇಮವೂ, ಸುವೃಷ್ಟಿಯೂ, ಸುಪ್ರಜೆಗಳೂ, ವ್ಯಾಧಿಗಳೂ, ಮರಣವೂ, ಭಯವೂ ಎಲ್ಲವೂ ಮಹಾರಾಜನನ್ನನುಸರಿಸಿಯೇ ಇರುವುವು.

೩. ರಾಜನೇ ಕೃತಯುಗವು. ಆತನೇ ತ್ರೇತಾಯುಗವು. ದ್ವಾಪರ ಕಲಿಯುಗಗಳು. ಸಕಲ ವ್ಯವಹಾರಗಳಿಗೂ ರಾಜನೇ ಮೂಲನಾಗಿರುವನು. ರಾಜನೇ ಧರ್ಮಕ್ಕೆ ಕಾರಣನು.

೪. ಪಾರ್ವತಿಯೆ! ಹಿಂದೆ ಮದಾಂಧನೆಂಬ ಒಬ್ಬ ಮಹಾರಾಜನು ಈ ಪ್ರಪಂಚದಲ್ಲಿ ರಾಜ್ಯವಾಳುತ್ತಿದ್ದನು. ಅಹಂಕಾರಿಯೂ, ದುಷ್ಟನೂ ಆದ ಆತನು ದೇವಬ್ರಾಹ್ಮಣರಿಗೆ ಹಿಂಸಕನಾಗಿದ್ದನು.

೫. ದೇವಿಯೆ! ಆತನ ರಾಜ್ಯಭಾರದ ದೋಷಗಳ ಫಲವಾಗಿ ದ್ವಾಪರ ಕಲಿಯುಗಗಳ ಸಂಧಿಸಮಯದಲ್ಲಿ ಪ್ರಪಂಚದಲ್ಲೆಲ್ಲ ಹನ್ನೆರಡು ವರ್ಷಗಳವರೆಗೆ ಭಯಂಕರವಾದ ಅನಾವೃಷ್ಟಿಯುಂಟಾಯಿತು.

ನವ ವರ್ಷ ಸಹಸ್ರಾಕ್ಷಃ ಪ್ರತಿಲೋಮೋಽಭವತ್ಪ್ರಭುಃ ।
ನಾಽದೃಶ್ಯಂತಾಽಪಿ ರಾತ್ರ್ಯಂತೇ ಕುತ ಏವಾಽಭ್ರಜಾತಯಃ ॥ ೬ ॥
ನದ್ಯಃ ಸಂಕ್ಷಿಪ್ತತೋಯೌಘಾಃ ಕ್ವಚಿದಂತರ್ಹಿತಾಸ್ತದಾ ।
ನಿವೃತ್ತಯಜ್ಞಸ್ವಾಧ್ಯಾಯಾ ನಿರ್ವಷಟ್ಕಾರಮಂಗಲಾಃ ॥ ೭ ॥
ಉಚ್ಛಿನ್ನಕೃಷಿಗೋರಕ್ಷಾ ನಿವೃತ್ತವಿಪಣಾಸ್ತಥಾ ।
ಅಸ್ಥಿಕಂಕಾಲಸಂಕೀರ್ಣಾ ಹಾಹಾಭೂತನರಾಕುಲಾಃ ॥ ೮ ॥
ಶೂನ್ಯಭೂಯಿಷ್ಠನಗರಾ ದಗ್ಧಗ್ರಾಮನಿವೇಶನಃ ।
ಗೋಽಜಾಽಶ್ವ ಮಹಿಷ್ಯೈರ್ಹೀನಾ ಭಕ್ಷ್ಯಮಾಣಾಃ ಪರಸ್ಪರಂ ॥ ೯ ॥
ಆಶ್ರಮಾನ್ ಸಂಪರಿತ್ಯಜ್ಯ ಪರ್ಯಧಾವನ್ನಿತಸ್ತತಃ ।
ಬ್ರಾಹ್ಮಣಾ ದುಃಖಬಹುಲಾ ಮೃತಾ ನಷ್ಟಾಶ್ಚ ಪಾರ್ವತಿ ॥ ೧೦ ॥
ಸೃಷ್ಟಿರುನ್ಮೀಲಿತಾ ಸರ್ವಾ ಜಂಗಮಾ ಸ್ಥಾವರಾಽಖಿಲಾ ।
ಏತಸ್ಮಿನ್ನಂತರೇ ದೇವಾಃ ಶಕ್ರಾದ್ಯಾ ಭಯವಿಹ್ವಲಾಃ ।
ಶರಣ್ಯಂ ಶರಣಂ ಜಗ್ಮುರ್ದೇವದೇವಂ ಜನಾರ್ದನಂ ॥ ೧೧ ॥

---

೬. ಮಹೇಂದ್ರನು ಪ್ರತಿಲೋಮಮನಸ್ಕನಾಗಿ ಮಳೆಯನ್ನು ಕರೆಯಲಿಲ್ಲ. ಒಂದು ದಿನವಾದರೂ ಪ್ರಭಾತಕಾಲದಲ್ಲಿ ಮೇಘಪಜ್ಙ್ತಿಗಳು ಕಾಣಿಸುತ್ತಿರಲಿಲ್ಲ.

೭. ನದಿಗಳೆಲ್ಲವೂ ಸ್ವಲ್ಪ ನೀರುಳ್ಳುವಾದುವು. ಕೆಲವು ನದಿಗಳಾದರೊ ಅಂತರ್ಹಿತಗಳೇ ಆಗಿಹೋದುವು. ಜನರೆಲ್ಲರೂ ಯಜ್ಞಗಳು, ವೇದಾಧ್ಯಯನ, ವಷಟ್ಕಾರ ಮೊದಲಾದ ಮಂಗಳಕಾರ್ಯಗಳನ್ನು ಕೈ ಬಿಟ್ಟರು.

೮. ಕೃಷಿಗೋಪಾಲನೆಗಳು ಕೊನೆಗಂಡುವು. ಸಂತೆ ಅಂಗಡಿಗಳು ಮುಚ್ಚಿ ಹೋದುವು. ಜನರೆಲ್ಲರೂ ಕೇವಲ ಎಲುಬುಗಳುಳ್ಳವರಾಗಿ ವ್ಯಾಕುಲದಿಂದ ಹಾಹಾಕಾರಗಳನ್ನು ಮಾಡುತ್ತಿದ್ದರು.

೯. ಜನನಿಬಿಡಿತಗಳಾಗಿದ್ದ ನಗರಗಳು ಶೂನ್ಯಗಳಾದುವು. ಹಳ್ಳಿಗಳಿಂದ ಮೊದಲುಗೊಂಡು ಎಲ್ಲ ಪ್ರದೇಶಗಳೂ ಸುಟ್ಟು ಬೂದಿಯಾದುವು. ಗೋವುಗಳು, ಮೇಕೆಗಳು, ಕುದುರೆಗಳು, ಎಮ್ಮೆಗಳು ಮುಂತಾದ ಚತುಷ್ಪಾದಗಳೆಲ್ಲವೂ ನಾಶವಾಗಲು ಜನರು ತಮ್ಮತಮ್ಮನ್ನೇ ಭಕ್ಷಿಸತೊಡಗಿದರು.

೧೦. ಪಾರ್ವತಿಯೆ! ಬ್ರಾಹ್ಮಣರು ತಮ್ಮ ಆಶ್ರಮಗಳನ್ನು ಪರಿತ್ಯಜಿಸಿ ದಿಕ್ಕುದಿಕ್ಕುಗಳಲ್ಲಿ ಅಲೆಯುತ್ತ ಅನೇಕ ದುಃಖಗಳಿಗೆ ತುತ್ತಾಗಿ ಕೆಲವರು ಮೃತರಾದರು; ಅನೇಕರು ನಷ್ಟರಾದರು.

೧೧. ಜಂಗಮ ಮತ್ತು ಸ್ಥಾವರ ವಸ್ತುಗಳನ್ನೊಳಗೊಂಡ ಸಕಲ ಜಗತ್ಸೃಷ್ಟಿಯೂ ವ್ಯಾಕುಲಿತವಾಯಿತು. ಇಷ್ಟರಲ್ಲಿಯೇ ಮಹೇಂದ್ರನೇ ಮುಂತಾದ ದೇವತೆಗಳೆಲ್ಲರೂ ಭಯಪೀಡಿತರಾಗಿ ಶರಣಾಗತರಕ್ಷಕನೂ, ದೇವತಾಸಾರ್ವಭೌಮನೂ ಆದ ಶ್ರೀ ಮಹಾವಿಷ್ಣುವಿದ್ದಲ್ಲಿಗೆ ಶರಣುಹೋದರು.

ಕ್ಷೀರೋದಸ್ಯೋತ್ತರೇ ಕೂಲೇ ಶ್ವೇತದ್ವೀಪಂ ಮನೋರಮಂ ।
ಬ್ರಹ್ಮಲೋಕಾದಿಭಿರ್ಲೋಕೈರನೌಪಮ್ಯಗುಣಂ ಶುಭಂ ॥ ೧೨ ॥
ಸದಾನಂದಕರಂ ಶಾಂತಂ ಸೂರ್ಯಕೋಟಿಸಮಪ್ರಭಂ ।
ಸ್ವೇಚ್ಛಾಕಲ್ಪಿತವಿನ್ಯಾಸಪ್ರಾಸಾದಶಯನಾಸನಂ ॥ ೧೩ ॥
ವಜ್ರೇಂದ್ರನೀಲವೈಡೂರ್ಯಚಂದ್ರಕಾಂತಾದಿದೀಪಿತಂ ।
ಜರಾಮೃತ್ಯುಭಯೋಪೇತಸರ್ವವ್ಯಾಧಿವಿವರ್ಜಿತಂ ॥ ೧೪ ॥
ತಸ್ಮಿನ್ದ್ವೀಪೇ ತತೋ ದೇವಿ ಸೂರ್ಯಕೋಟಿಸಮಪ್ರಭಂ ।
ಸಾಷ್ಟಾಂಗಾಂ ಪ್ರಣತಿಂ ಕೃತ್ವಾ ತೇ ದೇವಾಃ ಸ್ತುತಿಮಬ್ರುವನ್ ॥ ೧೫ ॥
ಭವಾನ್ ಬ್ರಹ್ಮಾ ಚ ರುದ್ರಶ್ಚ ಮಹೇಂದ್ರೋ ದೇವಸತ್ತಮಃ ।
ಭವಾನ್ಕರ್ತಾ ವಿಕರ್ತಾ ಚ ಲೋಕಾನಾಂ ಪ್ರಭವೋಽವ್ಯಯಃ ॥ ೧೬ ॥
ಏವಂ ಚ ಸತ್ಯಂ ಪರಮಂ ತಪಶ್ಚ ಪರಮಂ ತಥಾ ।
ಪವಿತ್ರಂ ಪರಮಂ ಮಾರ್ಗಂ ಯಜ್ಞಸ್ತ್ವಂ ಪರಮಃ ಪ್ರಭೋ ॥ ೧೭ ॥

---

೧೨. ಕ್ಷೀರಸಮುದ್ರದ ಆಚೆಯ ತೀರದಲ್ಲಿ ಮನೋಹರವಾದ ಶ್ವೇತದ್ವೀಪವಿರುವುದು. ಅದನ್ನು ಬ್ರಹ್ಮಲೋಕವೇ ಮೊದಲಾದ ಹದಿನಾಲ್ಕು ಲೋಕಗಳೂ ಸರಿಹೋಲಲಾರವು.

೧೩. ಅದು ನಿತ್ಯದಲ್ಲಿಯೂ ಆನಂದಕರವೂ, ಪ್ರಶಾಂತವೂ, ಕೋಟಿ ಸೂರ್ಯರ ತೇಜಸ್ಸಿನಿಂದ ಕೂಡಿದುದೂ, ಸ್ವೇಚ್ಛಾಮಾತ್ರದಿಂದಲೇ ಉದ್ಯಾನಗಳನ್ನೂ, ಉಪ್ಪರಿಗೆಗಳನ್ನೂ, ಶಯ್ಯಾಸನಾದಿಗಳನ್ನೂ ಸೃಷ್ಟಿಮಾಡುವ ಮಹಿಮೆಯುಳ್ಳುದೂ ಆಗಿರುವುದು.

೧೪. ಅಲ್ಲಿನ ಮನೆಗಳಲ್ಲಿ ವಜ್ರ, ಇಂದ್ರನೀಲ, ವೈಡೂರ್ಯ, ಚಂದ್ರಕಾಂತಗಳೇ ಮುಂತಾದ ರತ್ನಗಳೇ ಬೆಳಕನ್ನು ಕೊಡುತ್ತಿರುವುವು. ಅಲ್ಲಿನ ನಿವಾಸಿಗಳಿಗೆ ಮುಪ್ಪು, ಸಾವುಗಳ ಭಯವಿಲ್ಲ. ಸಕಲ ದೇಹವ್ಯಾಧಿಗಳಿಂದ ಮುಕ್ತರಾಗಿ ಸುಖದಿಂದಿರುವರು.

೧೫. ದೇವಿಯೆ! ಅಂತಹ ಶ್ವೇತದ್ವೀಪದಲ್ಲಿ ನೆಲಸಿ ಕೋಟಿಸೂರ್ಯರಂತೆ ದೇದೀಪ್ಯಮಾನನಾಗಿದ್ದ ಮಹಾವಿಷ್ಣುವಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ ದೇವತೆಗಳು ಸ್ತೋತ್ರಮಾಡಿದರು.

೧೬. "ನೀನೇ ಚತುರ್ಮುಖನು. ಪ್ರಪಂಚವನ್ನು ಲಯಗೊಳಿಸುವ ರುದ್ರನು. ದೇವತೆಗಳಿಗೆ ಒಡೆಯನಾದ ಮಹೇಂದ್ರನು. ನೀನೇ ಹದಿನಾಲ್ಕು ಲೋಕಗಳ ಕರ್ತೃವು ಮತ್ತು ಲಯಕಾರಣನು. ನೀನೇ ಅವ್ಯಯನಾದ ಆದಿಮೂಲನು.

೧೭. ಸ್ವಾಮಿಯೆ! ಹಾಗೆಯೇ ನೀನೊಬ್ಬನೇ ಸತ್ಯವಸ್ತುವು; ಪರಾತ್ಪರನು. ಪರಮತಪಸ್ಸೂ, ಪವಿತ್ರವಾದ ಜ್ಞಾನಮಾರ್ಗವೂ, ಉತ್ತಮ ಯಜ್ಞವೂ ನೀನೇ ಆಗಿರುವೆ.

ಪರಂ ಹೌತ್ರಂ ಪರಂ ಧಾಮ ತ್ವಾಮಾಹುಃ ಪುರುಷಂ ಪರಂ ।
ಏವಂ ಸ್ತುತಸ್ತದಾ ತೈಸ್ತು ದೇವದೇವೋ ವರಾನನೇ ॥ ೧೮ ॥
ಪ್ರಾಹ ದೇವಾಂಸ್ತತಃ ಕೃಷ್ಣಃ ಕಿಂ ಕರೋಮ್ಯದ್ಯ ವಃ ಸುರಾಃ ।
ವಿಜ್ಞಪ್ತಸ್ತೈರ್ಹರಿರ್ದೇವೋ ಹ್ಯನಾವೃಷ್ಟ್ಯಾ ಪ್ರಪೀಡಿತೈಃ ॥ ೧೯ ॥
ಉಪಾಯಃ ಕಥ್ಯತಾಂ ದೇವ ತುಷ್ಟಿಃ ಪುಷ್ಟಿರ್ಯಥಾಭವೇತ್ ।
ಧ್ಯಾನೇನ ಚಿಂತಯಿತ್ವಾ ಚ ಕಥಯಾಮಾಸ ಕೇಶವಃ ॥ ೨೦ ॥
ಗಚ್ಛಧ್ವಂ ತ್ರಿದಶಾಃ ಸರ್ವೇ ಮಹಾಕಾಲವನೇ ಶುಭೇ ।
ಲಿಂಗಂ ವೃಷ್ಟಿಕರಂ ತತ್ರ ಪುರಾ ಮೇಘೈಃ ಪ್ರತಿಷ್ಠಿತಂ ॥ ೨೧ ॥
ಮೇಘಾ ವೃಷ್ಟಿಕರಾಃ ಸರ್ವೇ ತಸ್ಮಿಂಲ್ಲಿಂಗೇ ಚ ಸಂತಿ ವೈ ।
ತಸ್ಯ ಲಿಂಗಸ್ಯ ಮಾಹಾತ್ಮ್ಯಾದ್ವೃಷ್ಟಿರೇವ ಭವಿಷ್ಯತಿ ॥ ೨೨ ॥
ಪ್ರತೀಹಾರೇಶ್ವರಾದ್ದೇವಾದೀಶಾನೇ ವಿದ್ಯತೇ ಸುರಾಃ ।
ತಸ್ಯ ತದ್ವಚನಂ ಶ್ರುತ್ವಾ ವಾಸುದೇವಸ್ಯ ಪಾರ್ವತಿ ॥ ೨೩ ॥

---

೧೮. ನಿನ್ನನ್ನೇ ಪರಮಹೋತ್ರವೆಂದೂ, ಪರಂಧಾಮವೆಂದೂ, ಪ್ರಕೃತಿಗೆ ಪರನಾದ ಪುರುಷನೆಂದೂ ಕರೆಯುವರು.'' ಸುಂದರಿಯೆ! ಇಂತು ದೇವತೆಗಳೆಲ್ಲರೂ ಆ ಮಹಾವಿಷ್ಣುವನ್ನು ಸ್ತುತಿಸಿದರು.

೧೯. ಆತನು ಅವರನ್ನು ಕುರಿತು, ''ದೇವತೆಗಳಿರಾ! ಈಗ ನಿಮಗೇನನ್ನು ಮಾಡಲಿ?'' ಎಂದು ಪ್ರಶ್ನೆಮಾಡಲು ಅವರು ಅನಾವೃಷ್ಟಿಯಿಂದ ತಮಗಾದ ತೊಂದರೆಯನ್ನು ವಿಜ್ಞಾಪಿಸಿಕೊಂಡರು.

೨೦. ''ದೇವದೇವನೆ! ನಮಗೆ ಸಂತೋಷವೂ ಪುಷ್ಟಿಯೂ ಉಂಟಾಗಲು ಒಂದು ಉಪಾಯವನ್ನು ಹೇಳು.'' ಇದನ್ನು ಕೇಳಿ ಕೇಶವನು ಧ್ಯಾನಾಸಕ್ತನಾಗಿ ಯೋಚಿಸಿ ಅವರಿಗಿಂತೆಂದನು.

೨೧. ''ದೇವತೆಗಳಿರಾ! ನೀವೆಲ್ಲರೂ ಪವಿತ್ರವಾದ ಮಹಾಕಾಲವನಕ್ಕೆ ಹೋಗಿರಿ. ಪೂರ್ವದಲ್ಲಿ ಮೇಘಾಭಿಮಾನಿದೇವತೆಗಳು ಮಳೆಯನ್ನುಂಟು ಮಾಡುವ ಒಂದು ಶಿವಲಿಂಗವನ್ನು ಅಲ್ಲಿ ಪ್ರತಿಷ್ಠಿಸಿರುವರು.

೨೨. ಮಳೆಯನ್ನು ಕರೆಯುವ ಮೇಘಗಳೆಲ್ಲವೂ ಆ ಲಿಂಗದಲ್ಲಿ ಐಕ್ಯವನ್ನು ಪಡೆದಿರುವುವು. ಆ ಲಿಂಗದ ಮಾಹಾತ್ಮ್ಯದಿಂದಲೇ ಭೂಮಿಯಲ್ಲಿ ಮಳೆಗಳು ಬೀಳುತ್ತಿರುವುವು.

೨೩–೨೪. ದೇವತೆಗಳಿರಾ! ಈ ಮಹಾಲಿಂಗವು ಪ್ರತೀಹಾರೇಶ್ವರಲಿಂಗಕ್ಕೆ ಈಶಾನ್ಯದಿಕ್ಕಿನಲ್ಲಿರುವುದು.'' ಪಾರ್ವತಿಯೆ! ಶ್ರೀಮನ್ನಾರಾಯಣನ ಈ ಮಾತುಗಳನ್ನು ಕೇಳಿ ದೇವತೆಗಳು ಆ ಉತ್ತಮಲಿಂಗವು ಪ್ರತಿಷ್ಠಿತವಾಗಿರುವ ಮಹಾ

ಮಹಾಕಾಲವನೇ ಪ್ರಾಪ್ತಾ ಯತ್ರಾಸ್ತೇ ಲಿಂಗಮುತ್ತಮಂ ।
ತುಷ್ಟುವುಃ ಪರಯಾ ಭಕ್ತ್ಯಾ ದೃಷ್ಟ್ವಾ ದೇವಂ ಮನೋರಮಂ ॥ ೨೪ ॥
ನಮಸ್ತೇಽಸ್ತು ಮಹೇಶಾಯ ನಮೋಽನಂತಾಯ ಮಾಲಿನೇ ।
ನಮಸ್ತೈಜಸಮೂರ್ತಾಯ ನಮಃ ಸೌಂದರ್ಯಶಾಲಿನೇ ॥ ೨೫ ॥
ನಮೋ ಯೋಗಾಯ ವೇದಾಯ ನಮಃ ಪಿಂಗಜಟಾಯ ತೇ ।
ಅನಂತಜ್ಞಾನದೇಹಾಯ ನಮ ಈಶ್ವರಮೂರ್ತಯೇ ॥ ೨೬ ॥
ನಮಃ ಶುಭ್ರಾಟ್ಟಹಾಸಾಯ ನಮಸ್ತೇಽಸ್ತು ಶಿಖಂಡಿನೇ ।
ಶಂಕರಾಯ ನಮಸ್ತೇಽಸ್ತು ನಮಸ್ತೇಽಸ್ತು ಪಿನಾಕಿನೇ ॥ ೨೭ ॥
ನಮೋಽಂತಕಾಯ ಭವ್ಯಾಯ ತ್ರ್ಯಂಬಕಾಯಾಸ್ತು ತೇ ನಮಃ ।
ನಮಸ್ತೇ ಬಹುರೂಪಾಯ ನಮಸ್ತೇಽಚಿಂತ್ಯಮೂರ್ತಯೇ ॥ ೨೮ ॥
ನಮೋ ಯೋಗಶರೀರಾಯ ನಮಸ್ತೇ ಸರ್ವ ಸರ್ವದಾ ।
ನಷ್ಟಂ ದೇವ ಜಗತ್ಸರ್ವಮನಾವೃಷ್ಟ್ಯಾ ಪ್ರಪೀಡಿತಂ ॥ ೨೯ ॥
ಸುವೃಷ್ಟ್ಯಾ ದೇವದೇವೇಶ ಪಾಹಿ ನಃ ಶರಣಾಗತಾನ್ ।
ಏತಸ್ಮಿನ್ನಂತರೇ ಮೇಘಾ ಪಾರ್ವಣಾಂಗಾರವರ್ಚಸಃ ॥ ೩೦ ॥

ಕಾಲವನಕ್ಷೇತ್ರಕ್ಕೆ ಬಂದು ಮನೋಹರವಾದ ಆ ಮಹಾಲಿಂಗವನ್ನು ಕಂಡು ಅತ್ಯಂತ ಭಕ್ತಿಯಿಂದ ಸ್ತೋತ್ರಮಾಡಿದರು.

೨೫. "ಮಹೇಶ್ವರನೂ, ಅನಂತನೂ, ಮಾಲಾವಿಭೂಷಿತನೂ, ತೇಜೋರಾಶಿಯೂ, ಸರ್ವಾಂಗಸೌಂದರ್ಯಶಾಲಿಯೂ ಆದ ನಿನಗೆ ನಮಸ್ಕಾರಗಳು.

೨೬. ಯೋಗಸ್ವರೂಪನೂ, ವೇದಪ್ರತಿಪಾದ್ಯನೂ, ಕೆಂಪಾದ ಜಡೆಗಳಿಂದಲಂಕೃತನೂ, ಅಪ್ರಾಕೃತವಾದ ಚಿನ್ಮಯದೇಹವುಳ್ಳವನೂ, ಮಹೇಶ್ವರಸ್ವರೂಪನೂ ಆದ ಪರಾತ್ಪರವಸ್ತುವಿಗೆ ನಮಸ್ಕಾರವು.

೨೭. ಶುಭ್ರವಾದ ಅಟ್ಟಹಾಸದಿಂದ ಕೂಡಿದವನೂ, ಜಡೆಮುಡಿಯಿಂದಲಂಕೃತನೂ, ಲೋಕಗಳಿಗೆ ಸುಖಪ್ರದನೂ, ಪಿನಾಕವನ್ನು ಕೈಯಲ್ಲಿ ಹಿಡಿದವನೂ ಆದ ನಿನ್ನನ್ನು ನಮಸ್ಕರಿಸುವೆವು.

೨೮. ಬ್ರಹ್ಮಾಂಡವನ್ನು ಲಯಗೊಳಿಸುವವನೂ, ಭವ್ಯಸ್ವರೂಪನೂ, ತ್ರ್ಯಂಬಕನೂ, ಅನೇಕ ರೂಪಗಳನ್ನು ತಾಳುವವನೂ, ಮನಸ್ಸಿಗೆ ನಿಲುಕದ ಮೂರ್ತಿಯೂ ಆದ ನಿನ್ನನ್ನು ವಂದಿಸುವೆವು.

೨೯. ಯೋಗಮಯವಾದ ದೇಹವುಳ್ಳವನೂ, ಸರ್ವಾಕಾರನೂ ಆದ ನಿನ್ನನ್ನು ನಿತ್ಯವೂ ನಮಸ್ಕರಿಸುತ್ತಿರುವೆವು. ದೇವದೇವನೆ! ಮಳೆಯಿಲ್ಲದೆ ಸಕಲ ಜಗತ್ತೂ ಪೀಡೆಗೊಳಗಾಗಿ ನಷ್ಟವಾಗುತ್ತಿರುವುದು.

೩೦–೩೧. ಮಹಾದೇವನೆ! ಒಳ್ಳೆಯ ಮಳೆಯನ್ನು ಕೊಟ್ಟು ಶರಣಾಗತರಾದ ನಮ್ಮನ್ನು ಕಾಪಾಡು." ಹೀಗೆ ಅವರು ಪ್ರಾರ್ಥಿಸುತ್ತಿರುವಂತೆಯೇ ಪರ್ವ

ಲಿಂಗಮಧ್ಯಾತ್ಸಮುತ್ತಸ್ಥುರ್ವಾರಿದಯುಂತೋ ನಭಸ್ತಲಂ ।
ಅನ್ಯೋನ್ಯವೇಗಾಽಭಿಹತಾ ವವೃಷುರ್ಭೂತಲೇ ತದಾ ॥ ೩೧ ॥
ಜಾತಂ ವಿನಿಷ್ಪ್ರಭಂ ಸರ್ವಂ ನ ಪ್ರಾಜ್ಞಾಯತ ಕಿಂಚನ ।
ತಿಮಿರೌಘಪರಿಕ್ಷಿಪ್ತಾ ರೇಜುಶ್ಚಾಽಥ ದಿಶೋ ದಶ ॥ ೩೨ ॥
ತೇ ತಸ್ಯ ದೇವದೇವಸ್ಯ ಮಾಹಾತ್ಮ್ಯೇನ ಪ್ರತೋಷಿತಾಃ ।
ದೇವಾಃ ಪ್ರೀತಿಂ ಪರಾಂ ಜಗ್ಮುಃ ಸರ್ವೇಽಮೃತಮಿವೋತ್ತಮಾಃ ॥ ೩೩ ॥
ತತಸ್ತಮಃ ಸಂಹರಂತೋ ವಿನೇಶುಶ್ಚ ಬಲಾಹಕಾಃ ।
ಪ್ರವವುಃ ಶೀತಲಾ ವಾತಾಃ ಪ್ರಶಾಂತಾಶ್ಚ ದಿಶೋ ದಶ ॥ ೩೪ ॥
ಶುದ್ಧಪ್ರಭಾಣಿ ಜ್ಯೋತೀಂಷಿ ಸೋಮಂ ಚಕ್ರುಃ ಪ್ರದಕ್ಷಿಣಾಂ ।
ಅವಿಗ್ರಹಂ ಗ್ರಹಾಶ್ಚಕ್ರುಃ ಪ್ರಶಾಂತಾಶ್ಚಾಽಪಿ ಸಿಂಧವಃ ॥ ೩೫ ॥
ಮಹರ್ಷಯೋ ವಿಶೋಕಾಶ್ಚ ಗಂಧರ್ವಾಶ್ಚ ಕಲಂ ಜಗುಃ ।
ಅಭೂತ್ಸೃಷ್ಟಿಃ ಪುನಃ ಸರ್ವಾ ಲಿಂಗಸ್ಯಾಽಸ್ಯ ಪ್ರಭಾವತಃ ॥ ೩೬ ॥

---

ಕಾಲದಲ್ಲಿ ಬರುವ ಇದ್ದಿಲಿನ ಬಣ್ಣದ ಮೇಘಗಳು ಆ ಲಿಂಗದ ಮಧ್ಯದಿಂದ ಮೇಲಕ್ಕೆದ್ದು ತಮ್ಮ ಗರ್ಜನೆಯಿಂದ ಆಕಾಶವನ್ನೇ ಪ್ರತಿಧ್ವನಿಗೊಳಿಸುತ್ತಿದ್ದುವು. ಮತ್ತು ವೇಗದಿಂದ ಪರಸ್ಪರ ಸಂಘರ್ಷಣೆಯನ್ನು ಮಾಡುತ್ತ ಭೂಮಿಯಲ್ಲಿ ಮಳೆಯನ್ನು ಕರೆದುವು.

೩೨. ಸಕಲವೂ ಕತ್ತಲೆಯಿಂದಾವೃತವಾಯಿತು. ಯಾವುದನ್ನೂ ಗುರುತಿಸುವಂತೆಯೇ ಇರಲಿಲ್ಲ. ಮೇಘಮಾಲೆಗಳ ಮಧ್ಯದಿಂದ ಮಾತ್ರ ಬೆಳಗುತ್ತಿರುವ ಮಿಂಚಿನ ಬಳ್ಳಿಗಳಿಂದ ಹತ್ತು ದಿಕ್ಕುಗಳೂ ಮಿನುಗುತ್ತಿದ್ದುವು.

೩೩. ಆ ಮಹಾಲಿಂಗದ ಮಾಹಾತ್ಮ್ಯದಿಂದ ಸಂತುಷ್ಟರಾದ ಆ ದೇವತೆಗಳೆಲ್ಲರೂ ಅಮೃತವನ್ನು ಹೊಂದಿದ ಉತ್ತಮ ಜೀವರಂತೆ ಆದರಲ್ಲಿ ಪ್ರೀತಿಯುಳ್ಳವರಾದರು.

೩೪. ಬಳಿಕ ಕತ್ತಲೆಯನ್ನು ಹೋಗಲಾಡಿಸಿ ಮೇಘಜಾಲಗಳೆಲ್ಲವೂ ಮಾಯವಾದುವು. ತಂಗಾಳಿಗಳು ಬೀಸತೊಡಗಿದವು. ಹತ್ತು ದಿಕ್ಕುಗಳೂ ಪ್ರಸನ್ನಗಳಾದುವು.

೩೫. ನಕ್ಷತ್ರಾದಿ ಜ್ಯೋತಿಗಳು ಶುಭ್ರಪ್ರಕಾಶದಿಂದ ಕೂಡಿದ್ದುವು; ಮತ್ತು ಚಂದ್ರನಿಗೆ ಪ್ರದಕ್ಷಿಣೆಯನ್ನು ಮಾಡುತ್ತಿದ್ದುವು. ಸಪ್ತಗ್ರಹಗಳು ಪರಸ್ಪರ ಮೈತ್ರೀಭಾವದಿಂದಿದ್ದುವು. ಸಮುದ್ರಗಳೂ ಶಾಂತಗಳಾಗಿದ್ದುವು.

೩೬. ಮಹರ್ಷಿಗಳ ದುಃಖವಡಗಿತು. ಗಂಧರ್ವರು ಮಧುರವಾಗಿ ಗಾನ ಮಾಡಿದರು. ಈ ಲಿಂಗದ ಪ್ರಭಾವದಿಂದ ಸೃಷ್ಟಿಯೆಲ್ಲವೂ ಮುನ್ನಿನಂತೆಯೇ ನಡೆಯಲುಪಕ್ರಮಿಸಿತು.

ಸುರೈಃ ಸಂಪೂಜ್ಯ ಭಕ್ತ್ಯಾ ತೇ ಚಕ್ರುರ್ನಾಮ ಯಥಾರ್ಥತಃ ।
ಅಸ್ಯ ಲಿಂಗಸ್ಯ ಮಾಹಾತ್ಮ್ಯಂ ದೃಷ್ಟ್ವಾ ಪ್ರೀತಾಃ ಸುರಾ ಬಹು ॥ ೩೭ ॥
ಮೇಘನಾದೇಶ್ವರಂ ನಾಮ ಭವಿಷ್ಯತ್ಯಸ್ಯ ಸರ್ವತಃ ।
ಮೇಘನಾದೇಶ್ವರಾಖ್ಯಾನಂ ಮಯಾ ತೇ ಕಥಿತಂ ಪ್ರಿಯೇ ॥ ೩೮ ॥
ಭವಿಷ್ಯಂತಿ ನರಾ ಭೂಮೌ ಕೃತಾರ್ಥಾಸ್ತತ್ಪ್ರಭಾವತಃ ।
ದರ್ಶನಾದಸ್ಯ ಲಿಂಗಸ್ಯ ಕಾಮವೃಷ್ಟಿರ್ಭವಿಷ್ಯತಿ ॥ ೩೯ ॥
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ಕುರ್ವಂಲ್ಲಿಂಗಸ್ಯ ಸ್ನಪನಂ ರುದ್ರಲೋಕೇ ಮಹೀಯತೇ ॥ ೪೦ ॥
ಪ್ರಭಾವಃ ಪಠ್ಯತೇ ಯತ್ರ ಮೇಘನಾದಸ್ಯ ಪಾರ್ವತಿ ।
ಅತಿವೃಷ್ಟಿಶ್ಚೈವ ತತೋ ಭವಿಷ್ಯತಿ ಚ ಭೂತಲೇ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಮೇಘನಾದೇಶ್ವರಮಾಹಾತ್ಮ್ಯವರ್ಣನಂ"
ನಾಮ ತ್ರಯೋವಿಂಶೋಽಧ್ಯಾಯಃ

---

೩೭. ದೇವತೆಗಳು ಭಕ್ತಿಯಿಂದ ಅದನ್ನು ಪೂಜಿಸಿ ಅದಕ್ಕೆ ಸಾರ್ಥಕವಾದ ಹೆಸರನ್ನಿಟ್ಟರು. ಈ ಮಹಾಲಿಂಗದ ಮಾಹಾತ್ಮ್ಯವನ್ನು ಕಂಡು ದೇವತೆಗಳು ಬಹಳವಾಗಿ ಸಂತೋಷಗೊಂಡರು.

೩೮. ಇದಕ್ಕೆ ಮೇಘನಾದೇಶ್ವರನೆಂಬ ಹೆಸರು ಎಲ್ಲೆಲ್ಲಿಯೂ ಪ್ರಸಿದ್ಧವಾಗಿರುವುದು. ಪ್ರಿಯಳೆ! ಇಂತು ನಿನಗೆ ಮೇಘನಾದೇಶ್ವರನ ಚರಿತ್ರೆಯನ್ನು ವಿವರಿಸಿರುವೆನು.

೩೯. ಅದರ ಪ್ರಭಾವದಿಂದ ಮನುಜರು ಭೂಲೋಕದಲ್ಲಿ ಕೃತಕೃತ್ಯರಾಗುವರು. ಆ ಲಿಂಗವನ್ನು ನೋಡುವುದರಿಂದಲೇ ಮನುಷ್ಯನಿಗೆ ಇಷ್ಟಾರ್ಥಗಳ ವೃಷ್ಟಿಯೇ ದೊರಕುವುದು.

೪೦. ಈ ಲಿಂಗಕ್ಕೆ ಅಭಿಷೇಕವನ್ನೊಮ್ಮೆ ಮಾಡಿಸಿದರೂ ಸಾವಿರಾರು, ನೂರಾರು ಕೋಟಿ ಕಲ್ಪಗಳವರೆಗೂ ಮನುಷ್ಯನು ರುದ್ರಲೋಕದಲ್ಲಿ ಉತ್ತಮ ಸ್ಥಾನವನ್ನು ಪಡೆಯುವನು.

೪೧. ಪಾರ್ವತಿಯೆ! ಈ ಮೇಘನಾದೇಶ್ವರನ ಮಹಿಮೆಯು ಭೂಮಿಯಲ್ಲಿ ಎಲ್ಲಿ ಪಠನವಾಗುತ್ತದೆಯೊ, ಅಲ್ಲಿ ಸುಸಮೃದ್ಧವಾಗಿ ಮಳೆಯು ಬೀಳುತ್ತಿರುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಮೇಘನಾದೇಶ್ವರಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ವಿಂಶೋಽಧ್ಯಾಯಃ

## ಮಹಾಲಯೇಶ್ವರಮಾಹಾತ್ಮ್ಯವರ್ಣನಂ

**ಈಶ್ವರ ಉವಾಚ:—**

**ಮಹಾಲಯಂ ಮಹಾಭಾಗೇ ಚತುರ್ವಿಂಶತಿಕಂ ಶುಭಂ ।**
**ಬ್ರಹ್ಮಾದಿಸ್ತಂಬಪರ್ಯಂತಂ ತ್ರೈಲೋಕ್ಯಂ ಸಚರಾಚರಂ ॥ ೧ ॥**
**ಉತ್ಪಾದಿತಂ ಧೃತಂ ವ್ಯಾಪ್ತಂ ತ್ವಯಾ ದೇವ ಮಯಾ ಶ್ರುತಂ ।**
**ತ್ವಯೈಕೇನ ವಿಶುದ್ಧೇನ ಸರ್ವಗೇನ ಮಹಾತ್ಮನಾ ॥ ೨ ॥**
**ಅತ್ಯರ್ಥಂ ಮುನಯಃ ಸರ್ವೇ ಮುದಿತಾ ಮೌನಿನೋಽವ್ಯಯಾಃ ।**
**ವದಂತಿ ಕಾರಣಂ ಚಾಽಸ್ಯ ತ್ರೈಲೋಕ್ಯಸ್ಯ ಮಹೇಶ್ವರ ॥ ೩ ॥**
**ತ್ವಯಾ ಸರ್ವಮಿದಂ ಸೃಷ್ಟಂ ತ್ರೈಲೋಕ್ಯಂ ಭೂರ್ಭುವಾದಿಕಂ ।**
**ಉತ್ಪಾದ್ಯಮಾನಮುತ್ಪನ್ನಂ ಪ್ರಲೀಯಚ್ಚ ಸಹಸ್ರಶಃ ॥ ೪ ॥**
**ದೇವದಾನವಗಂಧರ್ವಮುನಿಚಾರಣಭೋಗಿನಾಂ ।**
**ಉತ್ಪತ್ತಿಸ್ಥಿತಿಸಂಹಾರಾಸ್ತ್ವಯಾ ದೃಷ್ಟಾ ಮುಹುರ್ಮುಹುಃ ॥ ೫ ॥**

---

### ಕನ್ನಡದ ಅನುವಾದ

#### ಮಹಾಲಯೇಶ್ವರಮಾಹಾತ್ಮ್ಯವರ್ಣನ

೧–೨. ಮಹಾದೇವನು ಹೇಳುತ್ತಾನೆ:—ಮಹಾಭಾಗ್ಯಶಾಲಿನಿಯೆ! ಪವಿತ್ರವಾದ ಮಹಾಲಯೇಶ್ವರವೆಂಬುದೇ ಇಪ್ಪತ್ತನಾಲ್ಕನೆಯ ಲಿಂಗವು. ಹಿಂದೆ ನೀನೊಮ್ಮೆ ನನ್ನೊಡನೆ ಇಂತೆಂದು ಹೇಳಿದೆ. ''ಬ್ರಹ್ಮನಿಂದ ಮೊದಲಾಗಿ ಒಂದು ಹುಲ್ಲುಕಡ್ಡಿಯವರೆಗಿನ ಮೂರು ಲೋಕಗಳಲ್ಲಿರುವ ಚರಾಚರಗಳೆಲ್ಲವೂ ನಿನ್ನಿಂದಲೇ ಹುಟ್ಟಿ ನಡೆಯುತ್ತಿರುವುವು. ನಿನ್ನಿಂದಲೇ ವ್ಯಾಪ್ತವಾಗಿರುವುವೆಂದು ಕೇಳಿರುವೆನು. ನೀನೊಬ್ಬನೇ ಪರಿಶುದ್ಧನೂ, ಸರ್ವವ್ಯಾಪಿಯೂ ಆದ ಮಹಾತ್ಮನು.

೩. ಮಹೇಶ್ವರನೆ! ಸಂತುಷ್ಟರೂ, ಮೌನವ್ರತಧಾರಿಗಳೂ, ಸನಾತನರೂ ಆದ ಮುನಿಗಳೆಲ್ಲರೂ ನೀನೊಬ್ಬನೇ ಈ ಮೂರು ಲೋಕಗಳಿಗೂ ಕಾರಣನೆಂದು ಹೇಳುತ್ತಿರುವರು.

೪. ಭೂಲೋಕ, ಭುವರ್ಲೋಕಗಳೇ ಆದಿಯಾದ ಸಮಸ್ತ ಬ್ರಹ್ಮಾಂಡವೂ ನಿನ್ನಿಂದಲೇ ಸೃಷ್ಟವಾಯಿತು. ಇಂತಹ ಸಾವಿರಾರು ಬ್ರಹ್ಮಾಂಡಗಳು ನಿನ್ನಲ್ಲಿ ಹುಟ್ಟಲಿರುವುವು. ಹುಟ್ಟಿರುವುವು. ನಾಶವಾಗುವುವು.

೫. ದೇವತೆಗಳು, ದಾನವರು, ಗಂಧರ್ವರು, ಮುನಿಗಳು, ಚಾರಣರು, ನಾಗರು ಮುಂತಾದವರ ಉತ್ಪತ್ತಿ, ಸ್ಥಿತಿ, ನಾಶಗಳನ್ನು ನೀನು ಸಾಕ್ಷಿಯಾಗಿ ಅನೇಕ ವೇಳೆ ನೋಡಿರುವೆ.

ಜಗಚ್ಚರಾಚರಂ ದೇವ ಕುತ್ರ ಸ್ಥಿತ್ವಾಽಸೃಜಸ್ಯಲಂ ।
ಲೀಲಯಾ ಸಂಹರಸ್ಯೇತತ್ಪ್ರಸಾದಾದ್ವಕ್ತುಮರ್ಹಸಿ ॥ ೬ ॥
ಕೋಽಸೌ ಮಹಾಲಯೋ ರೌದ್ರಗ್ರಹರೂಪೀ ವ್ಯವಸ್ಥಿತಃ ।
ಯಸ್ಮಿನ್ಧೃತಂ ತ್ವಯಾ ಸರ್ವಂ ತ್ರೈಲೋಕ್ಯಂ ಭೂರ್ಭುವಾದಿಕಂ ॥ ೭ ॥
ಇತಿ ಪೃಷ್ಟಸ್ತ್ವಯಾ ದೇವಿ ಮಯಾ ತೇ ಕಥಿತಂ ಪುರಾ ।
ಇದಾನೀಂ ಕಥಯಿಷ್ಯಾಮಿ ಶೃಣುಷ್ವೈಕಾಗ್ರಮಾನಸಾ ॥ ೮ ॥
ಪೃಥಿವ್ಯಾದೀನಿ ಭೂತಾನಿ ಮಹಾಕಾಲವನೇ ಪ್ರಿಯೇ ।
ಧೃತಾನಿ ಪ್ರಲಯಸ್ಯಾಂತೇ ಏಕೋದ್ದೇಶೇ ಮಹಾಲಯೇ ॥ ೯ ॥
ಬ್ರಹ್ಮಲೋಕಾದಿಭಿರ್ಲೋಕೈರನೌಪಮ್ಯಗುಣಂ ಶುಭಂ ।
ಸ್ಥಾನಂ ಮಹಾಲಯಂ ತತ್ರ ಮಮಾನಂದಕರಂ ಪರಂ ॥ ೧೦ ॥
ಪರಂ ಬ್ರಹ್ಮಮಯಂ ಲಿಂಗಂ ತತ್ರ ತಿಷ್ಠತಿ ಸರ್ವದಾ ।
ತಸ್ಯ ಲಿಂಗಸ್ಯ ಮಧ್ಯೇ ತು ಧೃತಂ ಕೃತ್ಸ್ನಂ ಚರಾಚರಂ ॥ ೧೧ ॥

---

೬. ಮಹಾದೇವನೆ! ನೀನು ಎಲ್ಲಿದ್ದು ಸ್ಥಾವರಜಂಗಮಗಳಿಂದೊಡಗೂಡಿದ ಈ ಪ್ರಪಂಚವನ್ನು ಸೃಷ್ಟಿಮಾಡುವೆ ಮತ್ತು ಲೀಲೆಯಿಂದ ಸಂಹರಿಸುವೆ? ಇದನ್ನು ಅನುಗ್ರಹಮಾಡಿ ತಿಳಿಸು.

೭. ಭಯಂಕರನಾಗಿ ಗ್ರಹರೂಪವನ್ನು ಧರಿಸಿ ನಿಂತಿರುವ ಈ ಮಹಾಲಯ ನೆಂಬುವನು ಯಾರು? ಈ ರೂಪದಲ್ಲಿರುವ ನಿನ್ನಿಂದಲೇ ಭೂಲೋಕಾದಿಗಳ ನ್ನೊಳಗೊಂಡ ಬ್ರಹ್ಮಾಂಡವು ಪ್ರತಿಷ್ಠೆಯನ್ನು ಪಡೆದಿರುವುದು.''

೮. ದೇವಿಯೆ! ಇಂತು ನೀನು ಕೇಳಲು ನಾನು ಹಿಂದೆ ಹೇಳಿದ ಉತ್ತರ ವನ್ನೇ ಪುನಃ ತಿಳಸುವೆನು. ಏಕಾಗ್ರಚಿತ್ತದಿಂದ ಕೇಳುವವಳಾಗು.

೯. "ಪ್ರಿಯಳೆ! ಪ್ರಳಯಕಾಲದಲ್ಲಿ ಪೃಥಿವ್ಯಾದಿ ಪಂಚಮಹಾಭೂತ ಗಳೂ ಮಹಾಕಾಲವನದ ಕಿಂಚಿದ್ಭಾಗವಾದ ಮಹಾಲಯಪ್ರದೇಶದಲ್ಲಿ ಸೇರಿ ಕೊಂಡಿರುವುವು.

೧೦. ಈ ಮಹಾಲಯವೆಂಬ ಸ್ಥಾನಕ್ಕೆ ಬ್ರಹ್ಮಲೋಕಾದಿ ಸ್ಥಾನಗಳೂ ಸರಿದೂಗಲಾರವು. ಈ ಪವಿತ್ರಪ್ರದೇಶವು ನನಗೆ ಬಹಳ ಆನಂದದಾಯಕ ವಾಗಿರುವುದು.

೧೧. ಅಲ್ಲಿ ಬ್ರಹ್ಮಮಯವಾದ ಒಂದು ಲಿಂಗವು ಕಾಲತ್ರಯದಲ್ಲಿಯೂ ನಿಂತಿರುವುದು. ಆ ಲಿಂಗದ ಮಧ್ಯದಲ್ಲಿಯೇ ಸಕಲ ಚರಾಚರಾತ್ಮಕ ಪ್ರಪಂಚವೂ ಅಡಗಿರುವುದು.

ತತ್ರ ಬ್ರಹ್ಮಾದಯೋ ದೇವಾ ವಿಷ್ಣುಸ್ತತ್ರೈವ ಸಂಸ್ಥಿತಃ ।
ಲಿಂಗಸ್ಯಾಽಭ್ಯಂತರೇ ದೇವಿ ಸರ್ವಮೇವಾಽಧಿತಿಷ್ಠತಿ ।
ತಸ್ಮಾಲ್ಲಿಂಗಾತ್ಸಮುತ್ಪನ್ನೋ ಮಹಾನಾತ್ಮಾ ಮಹಾಮತಿಃ ॥ ೧೨ ॥
ಭೂತಾದಿಶ್ಚಾಽಪ್ಯಹಂಕಾರೋ ವಿಷ್ಣುಃ ಶಂಭುಶ್ಚ ಪಾರ್ವತಿ ।
ಬುದ್ಧಿಃ ಪ್ರಜ್ಞಾ ಧೃತಿಃ ಖ್ಯಾತಿಃ ಸ್ಮೃತಿರ್ಲಜ್ಜಾ ಸರಸ್ವತೀ ॥ ೧೩ ॥
ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಂ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೪ ॥
ಅಸ್ಮಾದ್ಭೂತಾನಿ ಲಿಂಗಾನಿ ಮಹಾಭೂತಾನಿ ಪಂಚ ವೈ ।
ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಃ ಪ್ರಲೀಯತೇ ॥ ೧೫ ॥
ಸ್ಥಲಮಾಪಸ್ತಥಾಕಾಶಂ ಜನ್ಮ ಚಾಽಪಿ ಚತುರ್ವಿಧಂ ।
ಅಂಡಜೋದ್ಭಿಜ್ಜಂ ಚ ಸಸ್ವೇದಂ ಜರಾಯುಜಮಥಾಽಪಿವಾ ॥ ೧೬ ॥
ಚತುರ್ಧಾ ಜನ್ಮಚಿಹ್ನಂ ಯಲ್ಲಿಂಗೇಽಸ್ಮಿನ್ನೇವ ಲಕ್ಷ್ಯತೇ ।
ತಪಃ ಕರ್ಮ ಚ ಪುಣ್ಯಂ ಚ ವ್ರತಂ ದಾನಂ ತಥೈವ ಚ ॥ ೧೭ ॥

---

೧೨. ಅದರಲ್ಲಿಯೇ ಬ್ರಹ್ಮಾದಿ ದೇವತೆಗಳೂ, ಮಹಾವಿಷ್ಣುವೂ ನೆಲಸಿರುವರು. ದೇವಿಯೆ! ಆ ಲಿಂಗದ ಅಂತರದಲ್ಲಿಯೇ ಸಕಲವೂ ಪ್ರತಿಷ್ಠಿತವಾಗಿರುವುದು. ಆ ಲಿಂಗದಿಂದ ಮೊದಲು ಮಹಾಪ್ರಜ್ಞನೂ, ಮಹಾತ್ಮನೂ ಆದ ಈಶ್ವರನು ಹುಟ್ಟಿದನು.

೧೩. ಬಳಿಕ ಭೂತಗಳ ಕಾರಣವಾದ ಪ್ರಕೃತಿಯೂ, ಅಹಂಕಾರವೂ, ವಿಷ್ಣುವೂ, ಪರಮೇಶ್ವರನೂ, ಬುದ್ಧಿಯೂ, ಪ್ರಜ್ಞೆಯೂ, ಧೃತಿಯೂ, ಕೀರ್ತಿಯೂ, ಸ್ಮೃತಿಯೂ, ಲಜ್ಜೆಯೂ, ಸರಸ್ವತಿಯೂ ಹುಟ್ಟಿದರು.

೧೪. ಆ ಲಿಂಗವು ಎಲ್ಲೆಲ್ಲಿಯೂ ಕೈಕಾಲುಗಳನ್ನೂ, ಕಣ್ಣು, ತಲೆ, ಮುಖಗಳನ್ನೂ, ಕಿವಿಗಳನ್ನೂ ಹೊಂದಿದುದಾಗಿ ಸಕಲ ಬ್ರಹ್ಮಾಂಡವನ್ನೂ ಆವರಿಸಿಕೊಂಡು ನಿಂತಿರುವುದು.

೧೫. ಇದರಲ್ಲಿಯೇ ಸಕಲ ಜಂತುಗಳೂ, ಸಕಲ ಲಿಂಗಗಳೂ, ಪೃಥ್ವಿ, ವಾಯು, ಆಕಾಶ, ಜಲ, ತೇಜಸ್ಸುಗಳೆಂಬ ಪಂಚಮಹಾಭೂತಗಳೂ ಲಯವನ್ನು ಹೊಂದುವುವು.

೧೬. ಹಾಗೆಯೇ ಭೂಮಿ, ಸಮುದ್ರಗಳು, ಆಕಾಶ, ಅಂಡಜ, ಸ್ವೇದಜ, ಜರಾಯುಜ ಮತ್ತು ಉದ್ಭಿಜ್ಜಗಳೆಂಬ ನಾಲ್ಕು ಪ್ರಕಾರಗಳಾದ ಜೀವರಾಶಿಗಳೂ ಅಡಗಿಹೋಗುವುವು.

೧೭. ಈ ನಾಲ್ಕು ಬಗೆಯ ಯೋನಿಗಳಲ್ಲಿ ಜನಿಸುವ ಸಮಸ್ತವೂ ಇದರಲ್ಲಿಯೇ ಕಾಣುತ್ತಿರುವುದು. ಮತ್ತು ಎಲ್ಲ ತಪಸ್ಸೂ, ಕರ್ಮವೂ, ಪುಣ್ಯವೂ, ವ್ರತವೂ, ದಾನವೂ ಇದರಿಂದಲೇ ಸಮನಿಸುವುದು.

ರಜಃ ಸತ್ತ್ವಂ ತಮೋ ಭಾವಸ್ತಸ್ಮಾಲ್ಲಿಂಗಾಚ್ಚ ಜಾಯತೇ ।
ತಸ್ಮಿಂಸ್ತಚ್ಛ್ರೂಯತೇ ಸತ್ಯಂ ಜ್ಯೋತಿರ್ಬ್ರಹ್ಮ ಸನಾತನಂ ॥ ೧೮ ॥
ಅವ್ಯಕ್ತಕಾರಣಂ ಸೂಕ್ಷ್ಮಂ ಯತ್ತತ್ಸದಸದಾತ್ಮಕಂ ।
ಯಸ್ಮಾತ್ಪಿತಾಮಹೋ ಜಜ್ಞೇ ಪ್ರಭುರೇಕಃ ಪ್ರಜಾಪತಿಃ ॥ ೧೯ ॥
ವಿಶ್ವೇದೇವಾಸ್ತಥಾದಿತ್ಯಾ ವಸವೋಽಥಾಶ್ವಿನಾವಪಿ ।
ಯಕ್ಷಾಃ ಸಾಧ್ಯಾಃ ಪಿಶಾಚಾಶ್ಚ ಗುಹ್ಯಕಾಃ ಪಿತರಸ್ತಥಾ ॥ ೨೦ ॥
ಆಪೋ ದ್ಯೌಃ ಪೃಥಿವೀ ವಾಯುರಂತರಿಕ್ಷಂ ದಿಶಸ್ತಥಾ ।
ಸಂವತ್ಸರರ್ತವೋ ಮಾಸಾಃ ಪಕ್ಷಾಽಹೋರಾತ್ರಯಸ್ತಥಾ ॥ ೨೧ ॥
ಯಚ್ಚಾಽನ್ಯದಪಿ ತತ್ಸರ್ವಂ ಸಂಭೂತಂ ಲೋಕಸಾಕ್ಷಿಕಂ ।
ಯದಿದಂ ದೃಶ್ಯತೇ ಕಿಂಚಿತ್ತಸ್ಯಾಂತೇ ಚ ಪ್ರಲೀಯತೇ ॥ ೨೨ ॥
ಅತೋ ಮಹಾಲಯೋ ನಾಮ ವಿಖ್ಯಾತೋ ಭುವನತ್ರಯೇ ।
ಮುಕ್ತೇಶ್ವರಸ್ಯ ದೇವಸ್ಯ ದಕ್ಷಿಣೇ ಸಂವ್ಯವಸ್ಥಿತಃ ॥ ೨೩ ॥

---

೧೮. ಪ್ರಕೃತಿಯ ಸತ್ತ್ವರಜಸ್ತಮೋಭಾವಗಳೂ ಆ ಲಿಂಗದಿಂದಲೇ ಹುಟ್ಟಿಬರುವುವು. ಅದರಲ್ಲಿಯೇ ಸತ್ಯವು ಕೇಳಿಬರುವುದು. ಸನಾತನವೂ, ಚಿದಾತ್ಮಕವೂ ಆದ ಬ್ರಹ್ಮವಸ್ತುವು ಅಡಗಿರುವುದು.

೧೯. ಅವ್ಯಕ್ತಕ್ಕೆ ಕಾರಣವೂ, ಅತಿಸೂಕ್ಷ್ಮವೂ, ಸದಸದಾತ್ಮಕವೂ ಆದ ಮಹತ್ತತ್ತ್ವವೂ ಅದರಲ್ಲಿರುವುದು. ಅದರಿಂದಲೇ ಏಕೈಕನಾಥನೂ, ಸೃಷ್ಟಿಕರ್ತನೂ ಆದ ಚತುರ್ಮುಖನು ಹುಟ್ಟಿದನು.

೨೦. ವಿಶ್ವೇದೇವತೆಗಳು, ಆದಿತ್ಯರು, ಅಷ್ಟವಸುಗಳು, ಅಶ್ವಿನಿದೇವತೆಗಳು, ಯಕ್ಷರು, ಸಾಧ್ಯರು, ಪಿಶಾಚರು, ಗುಹ್ಯಕರು ಮತ್ತು ಪಿತೃಗಳೂ ಅದರಿಂದಲೇ ಹುಟ್ಟಿದರು.

೨೧. ಜಲ, ಆಕಾಶ, ಭೂಮಿ, ವಾಯು, ಅಂತರಿಕ್ಷ, ದಿಕ್ಕುಗಳು, ಸಂವತ್ಸರ, ಋತುಗಳು, ಮಾಸಗಳು, ಪಕ್ಷಗಳು, ಹಗಲು ರಾತ್ರಿಗಳೂ ಅದರಿಂದಲೇ ಉಂಟಾದುವು.

೨೨. ಲೋಕದಲ್ಲಿ ಕಾಣುತ್ತಿರುವಂತೆ ಹುಟ್ಟಿರುವ ಪ್ರತಿಯೊಂದು ಪದಾರ್ಥವೂ ಅದರಿಂದಲೇ ಹುಟ್ಟಿರುವುದು. ಮತ್ತು ಕಡೆಯಲ್ಲಿ ಆ ಲಿಂಗದಲ್ಲಿಯೇ ಲಯವನ್ನು ಹೊಂದುವುದು.

೨೩. ಆದುದರಿಂದ ಈ ಲಿಂಗಕ್ಕೆ ಮಹಾಲಯವೆಂಬ ಹೆಸರು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಗಿರುವುದು. ಇದು ಮುಕ್ತೇಶ್ವರಲಿಂಗಕ್ಕೆ ದಕ್ಷಿಣದಿಕ್ಕಿನಲ್ಲಿ ಪ್ರತಿಷ್ಠಿತವಾಗಿರುವುದು.

ಯಃ ಪೂಜಯತಿ ತಲ್ಲಿಂಗಂ ರುದ್ರಮೂರ್ತ್ಯಾ ಮಹಾಲಯಂ ।
ತ್ರೈಲೋಕ್ಯವಿಜಯೀ ನಿತ್ಯಂ ಕೀರ್ತಿಮಾನ್ ಸ ನರೋ ಭವೇತ್ ॥ ೨೪ ॥
ಮಹಾಲಯೇಶ್ವರೇ ಪುಣ್ಯೇ ಪೂಜಿತೇ ಪರಮೇಶ್ವರೇ ।
ಭಕ್ತ್ಯಾ ಪರಮಯಾ ಚೈವ ಸರ್ವೇ ದೇವಾಃ ಸುಪೂಜಿತಾಃ ।
ಭವಂತೀಹ ಮಹಾಭಾಗೇ ಯತಸ್ತೈರಪಿ ಪೂಜ್ಯತೇ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಮಹಾಲಯೇಶ್ವರಮಾಹಾತ್ಮ್ಯವರ್ಣನಂ"
ನಾಮ ಚತುರ್ವಿಂಶೋಽಧ್ಯಾಯಃ

---

೨೪. ಯಾವ ಮಾನವನು ಮಹಾಲಯೇಶ್ವರಲಿಂಗವನ್ನು ರುದ್ರಸ್ವರೂಪವೆಂಬುದಾಗಿ ತಿಳಿದು ಪೂಜಿಸುವನೊ, ಅವನು ನಿತ್ಯವೂ ಮೂರು ಲೋಕಗಳಲ್ಲಿಯೂ ವಿಜಯವನ್ನು ಪಡೆದು ಕೀರ್ತಿವಂತನಾಗುವನು.

೨೫. ಮಹೇಶ್ವರಿಯೆ! ಪುಣ್ಯಪ್ರದವೂ, ಮಹೇಶ್ವರನ ಚಿಹ್ನವೂ ಆದ ಈ ಮಹಾಲಯೇಶ್ವರ ಲಿಂಗವನ್ನು ಯಾವನು ಪೂಜಿಸುವನೊ, ಅವನ ಪರಮ ಭಕ್ತಿಯಿಂದ ಸಕಲ ದೇವತೆಗಳೂ ಪೂಜಿತರಾದರೆಂದು ತಿಳಿಯಬೇಕು. ಈ ಲಿಂಗವು ಅವರಿಗೂ ಪೂಜಾರ್ಹವಾಗಿರುವುದು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಮಹಾಲಯೇಶ್ವರಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚವಿಂಶೋಽಧ್ಯಾಯಃ

### ಮುಕ್ತೀಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ:—

ಪಂಚವಿಂಶತಿಕಂ ದೇವಂ ವಿದ್ಧಿ ಮುಕ್ತೀಶ್ವರಂ ಪ್ರಿಯೇ ।
ಯಸ್ಯ ದರ್ಶನಮಾತ್ರೇಣ ಮುಕ್ತಿರ್ಭವತಿ ಪಾರ್ವತಿ ॥ ೧ ॥
ಪುರಾ ರಾಥಂತರೇ ಕಲ್ಪೇ ಬಭೂವ ದ್ವಿಜಸತ್ತಮಃ ।
ಮುಕ್ತಿರ್ನಾಮ ಮಹಾಭಾಗೇ ಸಂಶಿತಾತ್ಮಾ ಜಿತೇಂದ್ರಿಯಃ ॥ ೨ ॥
ಮಹಾಕಾಲಸಮೀಪೇ ತು ಮುಕ್ತಿಲಿಂಗಮನುತ್ತಮಂ ।
ಮಹಾಕಾಲವನೇ ರಮ್ಯೇ ತತ್ರಾಸ್ತೇ ಯೋಗತತ್ಪರಃ ॥ ೩ ॥
ತಪಸ್ತೇಪೇ ಜಿತಾಹಾರೋ ವತ್ಸರಾಣಿ ತ್ರಯೋದಶ ।
ಕದಾಚಿತ್ಸ್ನೋಽಭಿಷೇಕಾಯ ಆಜಗಾಮ ಮಹಾನದೀಂ ॥ ೪ ॥
ಶಿಪ್ರಾಂ ವಿಪ್ರಪ್ರಿಯಾಂ ಪುಣ್ಯಾಂ ಮಹಾಪಾತಕನಾಶಿನೀಂ ।
ತತ್ರ ಸ್ನಾತ್ವಾ ಜಪನ್ವಿಪ್ರೋ ದದರ್ಶಾಯಾಂತಮಗ್ರತಃ ॥ ೫ ॥

---

## ಕನ್ನಡದ ಅನುವಾದ

### ಮುಕ್ತೀಶ್ವರಮಾಹಾತ್ಮ್ಯವರ್ಣನ

೧. ಮಹೇಶ್ವರನು ಹೇಳುತ್ತಾನೆ—ಪ್ರಿಯಳಾದ ಓ ಪಾರ್ವತೀದೇವಿಯೆ! ಇಪ್ಪತ್ತೈದನೆಯ ದೇವತೆಯೇ ಮುಕ್ತೀಶ್ವರನು. ಇದರ ದರ್ಶನಮಾತ್ರದಿಂದಲೇ ಮನುಷ್ಯನಿಗೆ ಮೋಕ್ಷವು ದೊರಕುವುದು.

೨. ಎಲೌ ಸರ್ವಮಂಗಳೆಯೆ! ಹಿಂದೆ ರಥಂತರಕಲ್ಪದಲ್ಲಿ ಮುಕ್ತಿಯೆಂಬ ಬ್ರಾಹ್ಮಣೋತ್ತಮನೊಬ್ಬನಿದ್ದನು. ಆತನು ಜಿತೇಂದ್ರಿಯನಾಗಿ ಆತ್ಮಜ್ಞಾನ ನಿಷ್ಠನಾಗಿದ್ದನು.

೩. ರಮ್ಯವಾದ ಮಹಾಕಾಲವನದಲ್ಲಿ ಮಹಾಕಾಲೇಶ್ವರನ ಸಮೀಪದಲ್ಲಿಯೇ ಅಪ್ರತಿಮವಾದ ಮುಕ್ತೀಶ್ವರಲಿಂಗವಿರುವುದಷ್ಟೆ. ಅದರ ಬಳಿಯಲ್ಲಿಯೇ ಆತನು ಯೋಗಾಭ್ಯಾಸತತ್ಪರನಾಗಿದ್ದನು.

೪. ಹಸಿವನ್ನು ಜಯಿಸಿ ಆತನು ಹದಿಮೂರು ವರ್ಷಗಳಕಾಲ ತಪಸ್ಸನ್ನು ಮಾಡಿದನು. ಒಮ್ಮೆ ಆತನು ಸ್ನಾನವನ್ನು ಮಾಡುವುದಕ್ಕಾಗಿ ಮಹಾನದಿಯಾದ ಶಿಪ್ರಾನದಿಯ ಬಳಿಗೆ ಬಂದನು.

೫–೬. ಆ ನದಿಯು ಪುಣ್ಯಪ್ರದವೂ, ಬ್ರಾಹ್ಮಣರಿಗೆ ಬಹಳ ಬೇಕಾದುದೂ, ಮಹಾಪಾತಕಗಳನ್ನು ನಾಶಗೊಳಿಸುವುದೂ ಆಗಿರುವುದು. ಅಲ್ಲಿ ಸ್ನಾನ, ಜಪಗಳನ್ನು ಮಾಡುತ್ತ ಕುಳಿತಿದ್ದ ಬ್ರಾಹ್ಮಣನೆದುರಿನಲ್ಲಿಯೇ ಬೇಡನೊಬ್ಬನು

ವ್ಯಾಧಂ ಮಹಾಧನುಷ್ಪಾಣಿಂ ರಕ್ತನೇತ್ರಂ ಸುಭೀಷಣಂ ।
ವದಂತಂ ಹಂತುಕಾಮಂ ವೈ ವಲ್ಕಲಾನಾಂ ಜಿಘೃಕ್ಷಯಾ ॥ ೬ ॥
ತಂ ದೃಷ್ಟ್ವಾ ಕಶ್ಮಲೀಭೂತೋ ವಿಪ್ರೋ ಬ್ರಹ್ಮಘ್ನಸ್ಯ ಭಯಾದಿತಿ ।
ಧ್ಯಾಯನ್ನಾರಾಯಣಂ ದೇವಂ ತಸ್ಥೌ ತತ್ರೈವ ಸ ದ್ವಿಜಃ ॥ ೭ ॥
ತಂ ದೃಷ್ಟ್ವಾಽಂತರ್ಗತಹರಿರ್ವ್ಯಾಧೋ ಭೀತ ಇವಾಽಗ್ರತಃ ।
ವಿಹಾಯ ಸಶರಂ ಚಾಪಂ ತತೋ ವಚನಮಬ್ರವೀತ್ ॥ ೮ ॥

ವ್ಯಾಧ ಉವಾಚ :—

ಹಂತುಮಿಚ್ಛುರಹಂ ಬ್ರಹ್ಮನ್ಭಗವಂತಮಿಹಾಗತಃ ।
ಇದಾನೀಂ ಸ್ವಗತಾ ಬುದ್ಧಿಸ್ತ್ವಾಂ ದೃಷ್ಟ್ವೈವ ಮಹಾಪ್ರಭಂ ॥ ೯ ॥
ಬ್ರಾಹ್ಮಣಾನಾಂ ಸಹಸ್ರಾಣಿ ಸ್ತ್ರೀಣಾಮಯುತಶಸ್ತಥಾ ।
ನಿಹತಾನಿ ಮಯಾ ಬ್ರಹ್ಮನ್ವೃತ್ತಿಹೇತೋಃ ಕುಟುಂಬಿನಾ ॥ ೧೦ ॥
ನ ಚ ಮೇ ವ್ಯಥಿತಂ ಚಿತ್ತಂ ಕದಾಚಿದಪಿ ಜಾಯತೇ ।
ಇದಾನೀಂ ತಪ್ತುಮಿಚ್ಛಾಮಿ ತಪೋಽಹಂ ತ್ವತ್ಸಮೀಪತಃ ॥ ೧೧ ॥

---

ಬರುತ್ತಿದ್ದುದನ್ನು ಕಂಡನು. ಆತನು ದೊಡ್ಡ ಧನುಸ್ಸನ್ನು ಕೈಯಲ್ಲಿ ಹಿಡಿದು ಕೆಂಪಾದ ಕಣ್ಣುಗಳಿಂದ ಮಹಾಭಯಂಕರನಾಗಿ ಆ ವಿಪ್ರೋತ್ತಮನ ನಾರುಡೆಗಳನ್ನು ಕಿತ್ತುಕೊಳ್ಳಲು ಆತನನ್ನು ಕೊಲ್ಲಲೂ ಕೂಗುತ್ತ ಬರುತ್ತಿದ್ದನು.

೭. ಬ್ರಹ್ಮಘಾತಕನಾದ ಆ ವ್ಯಾಧನನ್ನು ಕಂಡು ಬ್ರಾಹ್ಮಣನು ಬಹಳವಾಗಿ ಭಯಗೊಂಡು ಕಶ್ಮಲಚಿತ್ತನಾದರೂ, ನಾರಾಯಣನನ್ನು ನೆನೆಯುತ್ತ ತನ್ನ ಸ್ಥಳದಲ್ಲಿಯೇ ಕದಲದೆ ನಿಂತಿದ್ದನು.

೮. ನಿಶ್ಚಲನಾದ ಆ ಬ್ರಾಹ್ಮಣನನ್ನು ಕಂಡು ಅಂತರ್ಯಾಮಿಯಾದ ಶ್ರೀಮನ್ನಾರಾಯಣನ ಪ್ರೇರಣೆಯಿಂದಲೇ ಆ ವ್ಯಾಧನು ಭಯಗೊಂಡವನಂತೆ ಧನುರ್ಬಾಣಗಳನ್ನು ಬಿಸುಟು ಇಂತೆಂದನು.

೯. ವ್ಯಾಧನು ಹೇಳುತ್ತಾನೆ:—"ಅಯ್ಯಾ ಬ್ರಾಹ್ಮಣನೆ! ನಾನು ನಿನ್ನನ್ನು ಕೊಲ್ಲಬಯಸಿ ಇಲ್ಲಿಗೆ ಬಂದೆನು. ಆದರೆ ಮಹಾತೇಜೋವಂತನಾದ ನಿನ್ನ ದರ್ಶನದಿಂದಲೇ ನನ್ನ ಬುದ್ಧಿಯು ಪ್ರಕೃತಿಸ್ಥವಾಯಿತು.

೧೦. ವಿಪ್ರೋತ್ತಮನೆ! ಕುಟುಂಬಭರಣಾರ್ಥವಾಗಿ ನಾನು ಈ ವೃತ್ತಿಯನ್ನನುಸರಿಸಿ ಸಾವಿರಾರು ಬ್ರಾಹ್ಮಣರನ್ನೂ, ಹತ್ತಾರು ಸಾವಿರ ಸ್ತ್ರೀಯರನ್ನೂ ಕೊಂದಿರುವೆನು.

೧೧. ಯಾವಾಗಲೂ ನನ್ನ ಮನಸ್ಸು ಸಂತಾಪವನ್ನು ಪಡೆಯಲಿಲ್ಲ. ಈಗ ಮಾತ್ರ ನಿನ್ನ ಸಮೀಪದಲ್ಲಿಯೇ ನಿಂತು ತಪಸ್ಸನ್ನು ಮಾಡುವ ಇಚ್ಛೆಯುಳ್ಳವನಾಗಿರುವೆನು.

ಉಪದೇಶಪ್ರದಾನೇನ ಪ್ರಸಾದಂ ಕರ್ತುಮರ್ಹಸಿ ।
ಏವಮುಕ್ತೋ ಹ್ಯಸೌ ವಿಪ್ರೋ ನೋತ್ತರಂ ಪ್ರತ್ಯಪದ್ಯತ ॥ ೧೨ ॥
ಬ್ರಹ್ಮಹಾ ಪಾಪಕರ್ಮೇತಿ ಮತ್ವಾ ಬ್ರಾಹ್ಮಣಪುಂಗವಃ ।
ಅನುಕ್ತೋಽಪಿ ಸ ಧರ್ಮಸ್ತು ವ್ಯಾಧಸ್ತತ್ರೈವ ತಸ್ಥಿವಾನ್ ॥ ೧೩ ॥
ಸ್ನಾತ್ವಾ ಸದ್ಯಃ ಸಮಾಯಾತೋ ಮುಕ್ತಿಲಿಂಗಸಮೀಪತಃ ।
ದ್ವಿಜೇನ ಸಹಿತೋ ದೇವಿ ದೃಷ್ಟ್ವಾ ದೇವಂ ಸನಾತನಂ ॥ ೧೪ ॥
ತತ್ಕ್ಷಣಾದ್ದಿವ್ಯದೇಹಸ್ತು ತಸ್ಮಿಂಲ್ಲಿಂಗೇ ಲಯಂಗತಃ ।
ದೃಷ್ಟ್ವಾ ತನ್ಮಹದಾಶ್ಚರ್ಯಂ ಮುಕ್ತಿರ್ವಿಪ್ರೋ ನಿಜಾಂತರೇ ।
ಚಿಂತಯಾಮಾಸ ಸಹಸಾ ಮುಕ್ತಿಃ ಪ್ರಾಪ್ತಾ ವರಾನನೇ ॥ ೧೫ ॥
ವ್ಯಾಧೇನ ಪಾಪಯುಕ್ತೇನ ಸಮಾಧಿರಹಿತೇನ ಚ ।
ಮಯಾ ಪುನಃ ಸಮಾಚೀರ್ಣಂ ತಪಃ ಪರಮದುಷ್ಕರಂ ॥ ೧೬ ॥
ನ ಪ್ರಾಪ್ತಾ ಪರಮಾ ಮುಕ್ತಿರ್ಮುಕ್ತಿರ್ನೈವ ಚ ಲಭ್ಯತೇ ।
ಏವಂ ಸ ಚಿಂತಯಿತ್ವಾಽಥ ವೈರಾಗ್ಯಾದ್ಬ್ರಾಹ್ಮಣರ್ಷಭಃ ।
ಅಂತರ್ಜಲಗತೋ ಭೂತ್ವಾ ಚಚಾರ ವಿಪುಲಂ ತಪಃ ॥ ೧೭ ॥

---

೧೨. ಉಪದೇಶವನ್ನು ಮಾಡುವುದರಿಂದ ನನ್ನಲ್ಲಿ ಪ್ರಸನ್ನನಾಗಲು ಅರ್ಹನಾಗಿರುವೆ.'' ಇಂತೆಂದು ವ್ಯಾಧನು ಹೇಳಲು ಬ್ರಾಹ್ಮಣನು ಯಾವ ಉತ್ತರವನ್ನೂ ಕೊಡಲಾರದೆ ಸುಮ್ಮನಾದನು.

೧೩. ಬ್ರಹ್ಮಘಾತಕನೆಂದೂ, ಮಹಾಪಾತಕಿಯೆಂದೂ ತಿಳಿದು ಆ ಬ್ರಾಹ್ಮಣಪುಂಗವನು ಯಾವ ಮಾತನ್ನೂ ಆಡದಿದ್ದರೂ ಧರ್ಮನೆಂಬ ಆ ವ್ಯಾಧನು ಅಲ್ಲಿಯೇ ನಿಂತನು. ಮತ್ತು ತೀರ್ಥದಲ್ಲಿ ಸ್ನಾನವನ್ನು ಮಾಡಿ ಮುಕ್ತೀಶ್ವರಲಿಂಗದ ಬಳಿಗೆ ಬಂದನು.

೧೪. ದೇವಿಯೆ! ಬಳಿಕ ಆ ಬ್ರಾಹ್ಮಣನೊಡನೆಯೇ ಕೂಡಿಕೊಂಡು ಸನಾತನವಾದ ಆ ಲಿಂಗದ ದರ್ಶನವನ್ನು ಮಾಡಿದನು. ಆ ಕ್ಷಣದಲ್ಲಿಯೇ ದಿವ್ಯರೂಪವನ್ನು ತಾಳಿ ಆ ಲಿಂಗದಲ್ಲಿಯೇ ಲಯವನ್ನು ಹೊಂದಿದನು.

೧೫. ಮಂಗಳಾಂಗಿಯೆ! ಅತ್ಯಂತಾಶ್ಚರ್ಯಕರವಾದ ಈ ಪ್ರಸಂಗವನ್ನು ಕಂಡು ಮುಕ್ತಿನಾಮಕನಾದ ಆ ಬ್ರಾಹ್ಮಣನು ತನ್ನಲ್ಲಿಯೇ ಯೋಚಿಸಿದನು. ''ಮಹಾಪಾಪಕಾರಿಯೂ, ಯೋಗಸಾಧನರಹಿತನೂ ಆದ ಈ ವ್ಯಾಧನು ನಿಮಿಷಮಾತ್ರದಲ್ಲಿಯೇ ಮೋಕ್ಷವನ್ನು ಪಡೆದನು.

೧೬–೧೭. ನಾನಾದರೊ ಅತ್ಯಂತ ದುಸ್ಸಾಧ್ಯವಾದ ತಪಸ್ಸನ್ನು ಮಾಡಿರುವೆನು. ಆದರೂ ನನಗೆ ದಿವ್ಯದೇಹವಾಗಲಿ ಮೋಕ್ಷವಾಗಲಿ ಇದುವರೆಗೂ ಪ್ರಾಪ್ತವಾಗಲಿಲ್ಲ.'' ಆ ಬ್ರಾಹ್ಮಣೋತ್ತಮನು ಇಂತು ಚಿಂತಿಸುತ್ತ ವೈರಾಗ್ಯವನ್ನು ಹೊಂದಿದವನಾಗಿ ಮತ್ತೆ ನೀರಿನಲ್ಲಿ ಮುಳುಗಿ ಕುಳಿತು ದುಷ್ಕರವಾದ ತಪಸ್ಸನ್ನು ಮಾಡಲಾರಂಭಿಸಿದನು.

**ಕಸ್ಯಚಿತ್ತ್ವಥ ಕಾಲಸ್ಯ ತಾಂ ನದೀಮುಗಮುತ್ಕಿಲ ।**
**ವ್ಯಾಘ್ರೋ ಬುಭುಕ್ಷಿತಃ ಸಾಧ್ವಿ ತಂ ವಿಹಂತುಂ ಸಮುದ್ಯತಃ ॥ ೧೮ ॥**
**ಅಂತರ್ಜಲಚರಂ ವಿಪ್ರಂ ಯಾವದ್ವ್ಯಾಘ್ರೋ ಜಿಘೃಕ್ಷತಿ ।**
**ನಮೋ ನಾರಾಯಣಾಯೇತಿ ತಾವದ್ವಾಕ್ಯಂ ದ್ವಿಜೋಽಬ್ರವೀತ್ ॥ ೧೯ ॥**
**ವ್ಯಾಘ್ರೇಣಾಪಿ ಶ್ರುತೋ ಮಂತ್ರೋಽಜಹಾತ್ಪ್ರಾಣಾಂಶ್ಚ ತತ್ಕ್ಷಣಾತ್ ।**
**ದಿವ್ಯಾಂಬರಧರೋ ದೇವಿ ದಿವ್ಯಾಽಭರಣಭೂಷಿತಃ ।**
**ದಿವ್ಯಾಽಲಂಕಾರಶೋಭಾಢ್ಯಃ ಪುರುಷಶ್ಚಾಽಭವಚ್ಛುಭಃ ॥ ೨೦ ॥**
**ಸೋಽಬ್ರವೀದ್ಯಾಮಿ ತಂ ದೇಶಂ ಯತ್ರ ವಿಷ್ಣುಃ ಸನಾತನಃ ।**
**ತ್ವತ್ಪ್ರಸಾದಾದ್ದ್ವಿಜಶ್ರೇಷ್ಠ ಮುಕ್ತ್ವಾ ಶಾಪಾನ್ನಿರಾಮಯಃ ॥ ೨೧ ॥**
**ಇತ್ಯುಕ್ತೇ ಬ್ರಾಹ್ಮಣಃ ಪ್ರಾಹ ಕೋಽಸಿ ತ್ವಂ ಪುರುಷರ್ಷಭ ।**
**ಸೋಽಬ್ರವೀದಸ್ಮಿ ರಾಜೇಂದ್ರಃ ಪ್ರತಾಪೀ ಪೂರ್ವಜನ್ಮನಿ ॥ ೨೨ ॥**
**ದೀರ್ಘಬಾಹುರಿತಿ ಖ್ಯಾತಃ ಸರ್ವಧರ್ಮವಿಶಾರದಃ ।**
**ಅಹಂ ಜಾನಾಮಿ ವೇದಾಂಶ್ಚ ಶಾಸ್ತ್ರಾಣಿ ವಿವಿಧಾನಿ ಚ ॥ ೨೩ ॥**

---

೧೮. ಎಲೌ ಸಾಧ್ವಿಯೆ! ಹೀಗೆ ಕೆಲವು ಕಾಲವು ಕಳೆಯಲು ಬಹಳವಾಗಿ ಹಸಿದಿದ್ದ ಒಂದಾನೊಂದು ಹುಲಿಯು ನದಿಯ ಬಳಿಗೆ ಬಂದು ಆತನನ್ನು ಕೊಲ್ಲಲು ಪ್ರಯತ್ನಿಸಿತು.

೧೯. ನೀರಿನೊಳಗಿರುವ ಆ ಬ್ರಾಹ್ಮಣನನ್ನು ಆ ವ್ಯಾಘ್ರವು ಹಿಡಿಯಲನು ವಾದ ಸಮಯದಲ್ಲಿಯೇ ಆತನು "ಓಂ ನಮೋ ನಾರಾಯಣಾಯ" ಎಂಬ ಮಂತ್ರವನ್ನುಚ್ಚರಿಸುತ್ತಿದ್ದನು.

೨೦. ವ್ಯಾಘ್ರವು ಆ ಮಂತ್ರವನ್ನು ಕೇಳುತ್ತಿದ್ದಂತೆಯೇ ಪ್ರಾಣಗಳನ್ನು ತ್ಯಜಿಸಿ ದಿವ್ಯವಸ್ತ್ರಾವೃತನೂ, ದಿವ್ಯಾಭರಣಾಲಂಕೃತನೂ, ದಿವ್ಯ ಗಂಧಾದಿಗಳಿಂದ ಶೋಭಿಸುವವನೂ ಆದ ಉತ್ತಮಪುರುಷನ ದೇಹವನ್ನು ತಾಳಿ ರಂಜಿಸಿತು.

೨೧. ಮತ್ತು "ಎಲೈ ಬ್ರಾಹ್ಮಣಶ್ರೇಷ್ಠನೆ! ನಿನ್ನ ಅನುಗ್ರಹದಿಂದ ನಾನು ಶಾಪವಿಮೋಚಿತನಾಗಿ ಸುಖವಾಗಿ ಮಹಾವಿಷ್ಣುವಿನ ನಿವಾಸವಾದ ವೈಕುಂಠ ಲೋಕವನ್ನು ಸೇರುವೆನು" ಎಂದಿತು.

೨೨. ಇಂತೆಂದ ಆ ಪುರುಷನನ್ನು ಕುರಿತು ಬ್ರಾಹ್ಮಣನೆಂದನು. "ಎಲೈ ನರೋತ್ತಮನೆ! ನೀನು ಯಾರು?" ಆತನು ಹೇಳಿದನು. "ಪೂರ್ವಜನ್ಮದಲ್ಲಿ ನಾನು ಮಹಾಪರಾಕ್ರಮಿಯಾದ ಮಹಾರಾಜನಾಗಿದ್ದೆನು.

೨೩. ದೀರ್ಘಬಾಹುವೆಂದು ಪ್ರಖ್ಯಾತನಾದ ಆ ನಾನು ಸಮಸ್ತ ಧರ್ಮಗಳಲ್ಲಿಯೂ ನಿಷ್ಣಾತನಾಗಿದ್ದೆನು. ನಾಲ್ಕು ವೇದಗಳನ್ನೂ ಅನೇಕ ವಿಧಗಳಾದ ಶಾಸ್ತ್ರಗಳನ್ನೂ ಚೆನ್ನಾಗಿ ಬಲ್ಲೆನು.

ಶುಭಾಽಶುಭಮಹಂ ವೇದ್ಮಿ ಸರ್ವಜ್ಞೋಽಹಂ ಮಹೀತಲೇ ।
ಬ್ರಾಹ್ಮಣೈರ್ನೈವ ಮೇ ಕಾರ್ಯಂ ಕಿಂವಸ್ತು ಬ್ರಾಹ್ಮಣಾ ಇತಿ ॥ ೨೪ ॥
ತಸ್ಯೈಕಸ್ಮಿನ್ದಿನೇ ವಿಪ್ರಾಃ ಸರ್ವೇ ಕ್ರೋಧಸಮನ್ವಿತಾಃ ।
ದದುಃ ಶಾಪಂ ದುರಾಧರ್ಷಂ ಕ್ರೂರೋ ವ್ಯಾಘ್ರೋ ಭವಿಷ್ಯತಿ ॥ ೨೫ ॥
ಅಪಮಾನೇನ ವಿಪ್ರಾಣಾಂ ಮಾಂಸಾಹಾರೀ ಭಯಾವಹಃ ।
ಸಂಜಾತೋಽಸ್ಮಿ ದ್ವಿಜಶ್ರೇಷ್ಠ ಪಶ್ಯ ಕಾಲವಿಪರ್ಯಯಂ ॥ ೨೬ ॥
ಇತ್ಯುಕ್ತೋಽಹಂ ಪುರಾ ತೈಸ್ತು ಬ್ರಾಹ್ಮಣೈರ್ವೇದಪಾರಗೈಃ ।
ದುರ್ಧರ್ಷೋಽಯಂ ಮಯಾ ಪ್ರಾಪ್ತೋ ಬ್ರಹ್ಮಶಾಪೋ ದ್ವಿಜರ್ಷಭ ॥
ತತಸ್ತೇ ಬ್ರಾಹ್ಮಣಾಃ ಸರ್ವೇ ಪ್ರಣಿಪತ್ಯ ಮಯಾ ಮುನೇ ।
ಪ್ರಸಾದಿತಾ ಭೃಶಂ ವಿಪ್ರ ತದಾ ಗದ್ಗದಯಾ ಗಿರಾ ॥ ೨೮ ॥
ಜಾನಾಮಿ ತೇಜೋ ವಿಪ್ರಾಣಾಂ ಮಹಾಭಾಗ್ಯಂ ಚ ಧೀಮತಾಂ ।
ಅಪೇಯಃ ಸಾಗರಃ ಕ್ರೋಧಾತ್ಕೃತೋ ಯೈರ್ಲವಣೋದಕಃ ॥ ೨೯ ॥
ತಥೈವ ದೀಪ್ತತಪಸಾಂ ಮುನೀನಾಂ ಭಾವಿತಾತ್ಮನಾಂ ।
ಯೇಷಾಂ ಕ್ರೋಧಾಗ್ನಿರದ್ಯಾಽಪಿ ಕಂಡಕೇ ನೋಪಶಾಮ್ಯತಿ ॥ ೩೦ ॥

---

೨೪. ಶುಭಾಶುಭಗಳನ್ನು ತಿಳಿದಿರುವೆನು. ಭೂಮಂಡಲದಲ್ಲಿ ನಾನೇ ಸರ್ವಜ್ಞನಾಗಿರುವಲ್ಲಿ ಬ್ರಾಹ್ಮಣರಿಂದ ನನಗೆ ಕೆಲಸವೇನು? ಅವರು ಎಷ್ಟು ಮಾತ್ರದವರು ?

೨೫. ಹೀಗೆ ಗರ್ವಿತನಾಗಿದ್ದ ನನ್ನನ್ನು ಒಂದು ದಿನ ಆ ಬ್ರಾಹ್ಮಣರೆಲ್ಲರೂ ಮಹಾಕ್ರುದ್ಧರಾಗಿ "ನೀನು ಕ್ರೂರವಾದ ವ್ಯಾಘ್ರವಾಗು" ಎಂದು ಶಾಪವನ್ನಿತ್ತರು.

೨೬. ಬ್ರಾಹ್ಮಣೋತ್ತಮನೆ! ಬ್ರಾಹ್ಮಣರಿಗೆ ಅವಮಾನವನ್ನು ಮಾಡಿದುದರ ಫಲವಾಗಿ ನಾನು ಭಯಂಕರವಾದ ಮಾಂಸಭಕ್ಷಕವಾದ ಮೃಗವಾದೆನು. ಕಾಲವ್ಯತ್ಯಾಸವನ್ನು ನೋಡಿದೆಯಾ!

೨೭. ವೇದಪಾರಂಗತರಾದ ಆ ದ್ವಿಜಶ್ರೇಷ್ಠರು ಹೀಗೆ ಆಡಿದ ಮಾತಿನಿಂದ ಧರಿಸಲಸಾಧ್ಯವಾದ ಈ ಬ್ರಹ್ಮಶಾಪವು ನನಗೆ ಪ್ರಾಪ್ತವಾಯಿತು.

೨೮. ಮುನಿವರ್ಯನೆ! ಬಳಿಕ ನಾನು ಪ್ರಮಾಣವನ್ನು ಮಾಡಿ ಅವರೆಲ್ಲರನ್ನೂ ಪ್ರಸನ್ನರಾಗಿ ಮಾಡಿಕೊಳ್ಳುವ ಅಭಿಲಾಷೆಯಿಂದ ಗದ್ಗದಧ್ವನಿಯಲ್ಲಿ ಮಾತನಾಡಿದೆನು.

೨೯. ಮಹಾಬುದ್ಧಿಶಾಲಿಗಳೂ, ಬ್ರಾಹ್ಮಣೋತ್ತಮರೂ ಆದ ನಿಮ್ಮ ತೇಜಸ್ಸನ್ನೂ, ಮಹಾಭಾಗ್ಯವನ್ನೂ ನಾನು ತಿಳಿದಿರುವೆನು. ಪಾನಕ್ಕೆ ಸಾಧ್ಯವಾಗದಂತೆ ಸಮುದ್ರವೂ ಸಹ ನಿಮ್ಮಿಂದ ಲವಣಮಯವಾಯಿತಲ್ಲವೆ.

೩೦. ಹಾಗೆಯೇ ಮುನಿಗಳು ಉಜ್ವಲ ತಪಸ್ವಿಗಳೂ, ಆತ್ಮಾನುಸಂಧಾನ

ಬ್ರಾಹ್ಮಣಾನಾಂ ಪರೀಭಾವಾದ್ವಾತಾಪಿಶ್ಚ ದುರಾತ್ಮವಾನ್ ।
ಅಗಸ್ತಿಮೃಷಿಮಾಸಾದ್ಯ ಜೀರ್ಣಃ ಕ್ರೂರೋ ಮಹಾಸುರಃ ॥ ೩೧ ॥
ಸರ್ವಭಕ್ಷಃ ಕೃತೋ ವಹ್ನಿರ್ಭೃಗುಣಾ ಕಾರಣಾಂತರೇ ।
ಗೌತಮೇನ ಪುರಾ ಶಕ್ರಃ ಸ ಸಹಸ್ರಭಗಃ ಕೃತಃ ॥ ೩೨ ॥
ದಶಧಾ ಕೇಶವೋ ಜಜ್ಞೇ ಬ್ರಹ್ಮಶಾಪಾತ್ಸುದುಸ್ತರಾತ್ ।
ಪ್ರಸನ್ನೈರ್ವಾಲಖಿಲ್ಯೈಶ್ಚ ಪಕ್ಷೀಂದ್ರೋ ಗರುಡಃ ಕೃತಃ ॥ ೩೩ ॥
ಅಶ್ವಿನೌ ದೇವಭಿಷಜೌ ಚ್ಯವನೇನ ಮಹಾತ್ಮನಾ ।
ವಿಷ್ಟಂಭಯಿತ್ವಾ ಕುಲಿಶಂ ಕೃತೌ ತೌ ಸೋಮಪಾಯಿನೌ ॥ ೩೪ ॥
ಕಾರ್ತವೀರ್ಯಾರ್ಜುನೇನೈವ ಬಾಹೂನಾಂ ಚ ಸಹಸ್ರಕಂ ।
ದತ್ತಾತ್ರೇಯಪ್ರಸಾದೇನ ಪ್ರಾಪ್ತಂ ಪರಮದುರ್ಲಭಂ ॥ ೩೫ ॥
ಪುರಾ ಸೇಂದ್ರಾ ವಸಿಷ್ಠೇನ ರಕ್ಷಿತಾಸ್ತ್ರಿದಿವೌಕಸಃ ।
ಬ್ರಾಹ್ಮಣಪ್ರಭವಂ ಸೌಖ್ಯಂ ಕೀರ್ತಿರಾಯುರ್ಯಶೋ ಬಲಂ ॥ ೩೬ ॥

---

ಪರರೂ ಆಗಿರುವರು. ಅವರ ಕೋಪಾಗ್ನಿಯು ಇಂದಿಗೂ ಕಂಡಕದಲ್ಲಿ (ಹಲಸಿನ ಕಾಯಿ) ಕಾಣುತ್ತಿರುವುದು.

೩೧. ಕ್ರೂರನೂ, ದುರಾತ್ಮನೂ ಆದ ವಾತಾಪಿಯೆಂಬ ಮಹಾದೈತ್ಯನು ಬ್ರಾಹ್ಮಣರನ್ನು ಪರಿಭವಗೊಳಿಸುತ್ತ ಒಮ್ಮೆ ಅಗಸ್ತ್ಯ ಮಹರ್ಷಿಗಳ ಉದರದಲ್ಲಿ ಜೀರ್ಣವಾದನು.

೩೨. ಭೃಗುವು ಒಂದಾನೊಂದು ಕಾರಣಾಂತರದಿಂದ ಅಗ್ನಿಯನ್ನು ಸರ್ವಭಕ್ಷಕನನ್ನಾಗಿ ಮಾಡಿದನು. ಗೌತಮನು ಅಹಲ್ಯಾಭಿಲಾಷಿಯಾದ ಮಹೇಂದ್ರನ ದೇಹವನ್ನು ಸಹಸ್ರಭಗಮಯವಾಗಿಸಿದನು.

೩೩. ನಿವಾರಿಸಲಶಕ್ಯವಾದ ಬ್ರಹ್ಮಶಾಪದಿಂದಲೇ ಮಹಾವಿಷ್ಣುವು ಹತ್ತು ಅವತಾರಗಳನ್ನೆತ್ತಿದನು. ವಾಲಖಿಲ್ಯರು ಪ್ರಸನ್ನರಾಗಿ ಗರುಡನಿಗೆ ಪಕ್ಷಿರಾಜನ ಪದವಿಯನ್ನಿತ್ತರು.

೩೪. ಮಹೇಂದ್ರನ ವಜ್ರಾಯುಧವನ್ನು ನಿಶ್ಚೇಷ್ಟವನ್ನಾಗಿ ಮಾಡಿ ಮಹಾತ್ಮನಾದ ಚ್ಯವನನು ದೇವವೈದ್ಯರಾದ ಅಶ್ವಿನೀದೇವತೆಗಳಿಗೆ ಸೋಮ ಪಾನವು ಸಿಕ್ಕುವಂತೆ ಮಾಡಿದನು.

೩೫. ದತ್ತಾತ್ರೇಯನ ಪ್ರಸಾದದಿಂದಲೇ ಅತ್ಯಂತ ದುರ್ಲಭವಾದ ಒಂದು ಸಾವಿರ ಬಾಹುಗಳ ವರವನ್ನು ಕಾರ್ತವೀರ್ಯಾರ್ಜುನನು ಪಡೆಯುವವನಾದನು.

೩೬. ಹಿಂದೆ ಮಹೇಂದ್ರನೇ ಮುಂತಾದ ದೇವತೆಗಳೆಲ್ಲರೂ ವಸಿಷ್ಠ ಮಹರ್ಷಿಯಿಂದ ಸಂರಕ್ಷಿಸಲ್ಪಟ್ಟರು. ಜೀವರ ಸೌಖ್ಯವೂ, ಕೀರ್ತಿಯೂ, ಆಯುಷ್ಯವೂ, ಯಶಸ್ಸೂ, ಬಲವೂ ಬ್ರಾಹ್ಮಣರಿಂದಲೇ ಹುಟ್ಟಿಬಂದಿರುವುದು.

ಲೋಕಾಲೋಕೇಶ್ವರಾಶ್ಚೈವ ಸರ್ವೇ ಬ್ರಾಹ್ಮಣಪೂರ್ವಕಾಃ ।
ಏತೇ ಹಿ ಸೋಮರಾಜಾನ ಈಶ್ವರಾಃ ಸುಖದುಃಖಯೋಃ ॥ ೩೭ ॥
ಭಸ್ಮೀಕುರ್ಯುರ್ಜಗದಿದಂ ಕ್ರುದ್ಧಾಃ ಪ್ರತ್ಯಕ್ಷದರ್ಶನಾಃ ।
ಪ್ರಭಾವಾ ಬಹವಶ್ಚಾಽಪಿ ಶ್ರೂಯಂತೇ ಬ್ರಹ್ಮವಾದಿನಾಂ ॥ ೩೮ ॥
ಕ್ರೋಧಶ್ಚ ವಿಪುಲಃ ಸದ್ಯಃ ಸದ್ಯಃ ಪ್ರತ್ಯಯಕಾರಕಃ ।
ಅಹಂ ಕೋಪಾದ್ದ್ವಿಜೇಂದ್ರಾಣಾಂ ಗತೋ ನಿರಯಯಾತನಾಂ ॥ ೩೯ ॥
ನಿತ್ಯಂ ಕ್ರೋಧಾಚ್ಛ್ರಿಯಂ ರಕ್ಷೇದ್ಧನಂ ರಕ್ಷೇತ್ಸಮತ್ಸರಾತ್ ।
ವಿದ್ಯಾಂ ಮಾನಾಽಪಮಾನಾಭ್ಯಾಮಾತ್ಮಾನಂ ತು ಪ್ರಮಾದತಃ ॥ ೪೦ ॥
ಮಯಾಽಜ್ಞಾನಾತ್ಕೃತಂ ಪಾಪಂ ರಾಜಗರ್ವೇಣ ದೈವತಃ ।
ಕ್ಷಂತುಮರ್ಹಥ ವಿಪ್ರೇಂದ್ರಾ ಭವತಃ ಶರಣಾಗತಂ ॥ ೪೧ ॥
ಅಥ ತುಷ್ಟಾ ದ್ವಿಜಾಃ ಸರ್ವೇ ತ ಊಚುರ್ಮಾಮಿದಂ ಮುದಾ ।
ಷಷ್ಠಾನ್ನಕಾಲಿಕಸ್ತೇಽಗ್ರೇ ಯದಾ ಸ್ಥಾಸ್ಯತಿ ಕಶ್ಚನ ॥ ೪೨ ॥

---

೩೭. ಲೋಕಲೋಕಾಂತರಗಳ ಪಾಲಕರೆಲ್ಲರೂ ಬ್ರಾಹ್ಮಣರನ್ನು ಮುಂದು ಮಾಡಿಕೊಂಡೇ ಕೆಲಸಗಳನ್ನು ಮಾಡುತ್ತಿರುವರು. ಸೋಮಪಾಯಿಗಳಾದ ಈ ಲೋಕಪಾಲಕರೇ ಜನರಿಗೆ ಸುಖದುಃಖಗಳನ್ನು ಕೊಡಲು ಸಮರ್ಥರಾಗಿರುವರು.

೩೮. ಸಮಸ್ತವನ್ನೂ ಪ್ರತ್ಯಕ್ಷವಾಗಿ ನೋಡಲು ಸಮರ್ಥರಾದ ಇವರು ಕೋಪಗೊಂಡರೆ ಈ ಪ್ರಪಂಚವನ್ನೇ ಬೂದಿಮಾಡಲು ಶಕ್ತರು. ವೇದಾಭ್ಯಾಸ ನಿರತರಾದ ಇವರ ಪ್ರಭಾವಗಳು ಬಹುವಾಗಿ ಕೇಳಿ ಬರುವುವು.

೩೯. ಅವರಿಗೆ ಕೋಪವೂ ಕ್ಷಣಮಾತ್ರದಲ್ಲಿ ಬರುವುದು. ಹಿಂದೆಯೇ ಸಮಾಧಾನವೂ ಉಂಟಾಗುವುದು. ನಾನೂ ಬ್ರಾಹ್ಮಣೋತ್ತಮರ ಕೋಪಕ್ಕೆ ಸಿಕ್ಕಿ ನರಕಯಾತನೆಗಳನ್ನನುಭವಿಸಿದೆನು.

೪೦. ಮಾನವನು ಯಾವಾಗಲೂ ಕ್ರೋಧದಿಂದ ಧನವನ್ನು ಕಾಪಾಡಬೇಕು (ಕ್ರೋಧವು ಐಶ್ವರ್ಯನಾಶಕ್ಕೆ ಕಾರಣವು). ಅಸೂಯಾಪರರಿಗೆ ಸಿಕ್ಕದಂತೆ ಧನವನ್ನು ಭದ್ರಗೊಳಿಸಬೇಕು. ಗರ್ವ, ಅವಮಾನಗಳಿಗೆಡೆಗೊಡದಂತೆ ವಿದ್ಯೆಯನ್ನು ಗೋಪ್ಯಗೊಳಿಸಬೇಕು. ಪ್ರಮಾದವನ್ನು ಮಾಡದಂತೆ ಆತ್ಮರಕ್ಷೆಯನ್ನು ಮಾಡಿಕೊಳ್ಳಬೇಕು.

೪೧. ಪ್ರಾರಬ್ಧದ ಬಲದಿಂದಲೂ, ರಾಜನೆಂಬ ಗರ್ವದಿಂದಲೂ ನಾನು ತಿಳಿಯದೆ ನಿಮ್ಮಲ್ಲಿ ಅಪರಾಧವನ್ನು ಮಾಡಿರುವೆನು. ಎಲೈ ಬ್ರಾಹ್ಮಣೋತ್ತಮರಿರಾ! ಶರಣಾಗತನಾದ ನನ್ನನ್ನು ಕ್ಷಮಿಸಿರಿ.''

೪೨. ನನ್ನ ವಿನಯದಿಂದ ಪರಿತುಷ್ಟರಾದ ಆ ದ್ವಿಜರೆಲ್ಲರೂ ಸಂತೋಷದಿಂದ ವಿಶಾಪವನ್ನು ಕೊಟ್ಟರು. ''ಕಾಲಾಂತರದಲ್ಲಿ ಮೂರು ದಿನಕ್ಕೊಮ್ಮೆ ಆಹಾರವನ್ನು ತೆಗೆದುಕೊಳ್ಳುವ ಬ್ರಾಹ್ಮಣನೊಬ್ಬನು ನಿನ್ನಮುಂದೆ ಕಾಣಿಸಿಕೊಳ್ಳುವನು.

ಮಾಂಸಭೋಕ್ತಾ ಚ ಭವಿತಾ ಕಂಚಿತ್ಕಾಲಂ ನರಾಧಿಪ ।
ಯದಾ ಶಿಪ್ರಾಂತರೇ ಪುಣ್ಯೇ ಸ್ನಾನಸ್ತು ದ್ವಿಜಸತ್ತಮಃ ॥ ೪೩ ॥
ಅಂತರ್ಜಲಗತೇನೋಕ್ತೋ ನಮೋ ನಾರಾಯಣೇತಿ ಚ ।
ಜಪ್ಯಕ್ಷ್ನವ್ಯಾಘ್ರರೂಪೇಣ ತದಾ ಮುಕ್ತೋ ಭವಿಷ್ಯಸಿ ॥ ೪೪ ॥
ಏವಂ ಸ ಭವತಾ ಪ್ರೋಕ್ತೋ ನಮೋ ನಾರಾಯಣೇತಿ ಚ ।
ಮಂತ್ರಃ ಶ್ರುತೋ ಮಯಾ ತ್ವತ್ತಸ್ತಸ್ಯೇಯಂ ವ್ಯುಷ್ಟಿರಾಗತಾ ॥ ೪೫ ॥
ಜಾತೋಽಹಂ ದಿವ್ಯದೇಹಸ್ತು ಪ್ರಸಾದಾತ್ತವ ಸುವ್ರತ ।
ಸ ಕೃತಾರ್ಥೋಽಸ್ಮಿ ಸಂಜಾತೋ ಭಗವನ್ದರ್ಶನಾತ್ತವ ॥ ೪೬ ॥
ವರಂ ಚ ಗೃಹ್ಯತಾಂ ಮತ್ತೋ ಯಚ್ಚ ತೇ ಸಂಶಯೋ ಹೃದಿ ।
ತಂ ಚ ಬ್ರೂಹಿ ದ್ವಿಜಶ್ರೇಷ್ಠ ಸರ್ವಂ ಸಂಪಾದಯಾಮಿ ತೇ ॥ ೪೭ ॥
ತವೋಪದೇಶದಾನೇನ ಆನೃಣ್ಯಂ ಗಂತುಮುತ್ಸಹೇ ॥ ೪೮ ॥
ಇತಿ ತಸ್ಯ ವಚಃ ಶ್ರುತ್ವಾ ದಿವ್ಯದೇಹಸ್ಯ ಸ ದ್ವಿಜಃ ।
ಪ್ರೋವಾಚ ಪರಯಾ ತುಷ್ಟ್ಯಾ ಪ್ರಫುಲ್ಲಮುಖಪಂಕಜಃ ॥ ೪೯ ॥

---

೪೩. ಮಹಾರಾಜನೆ! ಸ್ವಲ್ಪಕಾಲದವರೆಗೂ ನೀನು ಮಾಂಸಭಕ್ಷಕನಾಗಿಯೇ ಇರುವೆ. ಆ ಬ್ರಾಹ್ಮಣೋತ್ತಮನು ಪುಣ್ಯಪ್ರದವಾದ ಶಿಪ್ರಾನದಿಯ ಜಲದಲ್ಲಿ ಸ್ನಾನವನ್ನು ಮಾಡಲು ಬರುವನು.

೪೪. ಮತ್ತು ನೀರಿನಲ್ಲಿ ಕುಳಿತು 'ಓಂ ನಮೋ ನಾರಾಯಣಾಯ' ಎಂಬ ಮಂತ್ರವನ್ನುಚ್ಚರಿಸುತ್ತಿರುವನು. ವ್ಯಾಘ್ರರೂಪಿಯಾದ ನೀನು ಆತನನ್ನು ಹಿಡಿಯಲು ಬಂದು ಆ ಮಂತ್ರವನ್ನು ಕೇಳಿದಾಗ ನಿನಗೆ ಮೋಕ್ಷವುಂಟಾಗುವುದು.

೪೫. ಹಾಗೆಯೇ ನೀನು 'ಓಂ ನಮೋ ನಾರಾಯಣಾಯ' ಎಂಬ ಮಹಾಮಂತ್ರವನ್ನು ಜಪಿಸಿದೆ. ನಿನ್ನಿಂದ ನಾನು ಮಂತ್ರವನ್ನು ಕೇಳಿದ ಕಾರಣದಿಂದ ಈ ವೈಭವವು ನನಗೆ ಪ್ರಾಪ್ತವಾಯಿತು.

೪೬. ಸುವ್ರತನೆ! ಭಗವಂತನೆ! ನಿನ್ನ ಅನುಗ್ರಹದಿಂದಲೇ ನನಗೆ ದಿವ್ಯದೇಹವು ಲಭಿಸಿರುವುದು. ನಿನ್ನ ದರ್ಶನದಿಂದ ನಾನು ಕೃತಕಾರ್ಯನಾದೆನು.

೪೭. ನನ್ನಿಂದ ಬೇಕಾದ ವರವನ್ನು ಕೇಳಿಕೊ. ದ್ವಿಜಶ್ರೇಷ್ಠನೆ! ನಿನ್ನ ಮನಸ್ಸಿನಲ್ಲಿರುವ ಸಂಶಯವನ್ನು ಕೇಳುವವನಾಗು. ನಿನಗೆಲ್ಲವನ್ನೂ ತಿಳಿಸಿ ಕೊಡುವೆನು.

೪೮. ನಿನ್ನ ಮಂತ್ರೋಪದೇಶದ ಋಣವನ್ನು ಸ್ವಲ್ಪಮಟ್ಟಿಗಾದರೂ ತೀರಿಸಿ ಹೋಗಬೇಕೆಂಬ ಉತ್ಸಾಹದಲ್ಲಿರುವೆನು.''

೪೯. ಇಂತೆಂದ ಆ ದಿವ್ಯಶರೀರಧಾರಿಯ ಮಾತನ್ನು ಕೇಳಿ ಬ್ರಾಹ್ಮಣನು ಪರಮಸಂತುಷ್ಟನಾಗಿ ಅರಳಿದ ಮುಖಕಮಲದಿಂದ ಹೇಳಲುಪಕ್ರಮಿಸಿದನು.

ಅದ್ಯ ಮೇ ಸಫಲಂ ಜ್ಞಾನಮದ್ಯ ಮೇ ಸಫಲಂ ತಪಃ ।
ಅದ್ಯ ಮೇ ಸಫಲಾ ಜಿಹ್ವಾ ಸಫಲಂ ಚಕ್ಷುರದ್ಯ ಮೇ ॥ ೫೦ ॥
ಶ್ರುತಂ ದೇವೇನ ಸಂಪ್ರೋಕ್ತಂ ಸ್ನಾತ್ವಾ ಪಶ್ಯಂತಿ ದೇಹಿನಃ ।
ಪ್ರಾಕ್ಛರೀರಗತಂ ತೇಽದ್ಯ ವ್ಯಾಘ್ರರೂಪಂ ತಪೋತ್ತಮ ॥ ೫೧ ॥
ತೇಜೋಮಯಂ ಶರೀರಂ ತು ಬ್ರಹ್ಮರೂಪಂ ಸನಾತನಂ ।
ಯದಿ ತ್ವಹಮನುಗ್ರಾಹ್ಯೋ ಯದ್ಯೇವಂ ಕರ್ತುಮರ್ಹಸಿ ॥ ೫೨ ॥
ಕಾರಣಂ ಶ್ರೋತುಮಿಚ್ಛಾಮಿ ಹೃದಿ ಮೇ ವರ್ತತೇ ಚಿರಂ ।
ಕಥಂ ಮುಕ್ತಿರ್ಮಹಾಭಾಗ ಮುಕ್ತಿಕಾಮೇನ ಯತ್ನತಃ ॥ ೫೩ ॥
ಯೋಗಾಭ್ಯಾಸರತೇನಾಽಪಿ ವತ್ಸರಾಂಶ್ಚ ತ್ರಯೋದಶ ।
ನ ಲಬ್ಧಾ ಪರಮಾಶ್ಚರ್ಯಂ ತಪಸಾ ದುಷ್ಕರೇಣ ತು ॥ ೫೪ ॥
ವ್ಯಾಧೇನಾಽಪಿ ಭೃಶಂ ತೇನ ಪ್ರಾಪ್ತಾ ಮುಕ್ತಿಃ ಕ್ಷಣೇನ ತು ।
ಅತ್ರ ಮೇ ಸಂಶಯೋ ಜಾತಃ ಕೋ ಹೇತುಃ ಕಥ್ಯತಾಂ ಭೃಶಂ ॥ ೫೫ ॥

---

೫೦. "ಇಂದಿಗೆ ನನ್ನ ಜ್ಞಾನವು ಸಫಲವಾಯಿತು. ನನ್ನ ತಪಸ್ಸು ಸಾರ್ಥಕವಾಯಿತು. ನನ್ನ ನಾಲಗೆಯು ಕೃತಾರ್ಥವೆನಿಸಿತು. ನನ್ನ ನೇತ್ರವು ಸಪ್ರಯೋಜನವಾಯಿತು.

೫೧. ದೇವತೆಯಾದ ನೀನು ಹೇಳಿದುದನ್ನು ಕೇಳಿದೆನು. ಈ ತೀರ್ಥದಲ್ಲಿ ಸ್ನಾನವನ್ನು ಮಾಡಿದವರೆಲ್ಲರೂ ನೀನು ಹಿಂದಿನ ವ್ಯಾಘ್ರಜನ್ಮವನ್ನು ಸ್ಮರಿಸಿದಂತೆಯೇ ತಮ್ಮ ಪೂರ್ವಜನ್ಮಗಳನ್ನು ಸ್ಮರಿಸಲು ಸಮರ್ಥರಾಗುವರು.

೫೨. ನಾನು ನಿನ್ನ ಅನುಗ್ರಹಕ್ಕೆ ಸತ್ಪಾತ್ರನಾಗಿದ್ದರೆ ಮತ್ತು ನಿನಗೆ ಸಾಧ್ಯವಾಗಿದ್ದರೆ ನನಗೂ ತೇಜೋಮಯವೂ, ಸನಾತನವೂ ಆದ ಬ್ರಹ್ಮರೂಪವನ್ನು ಅನುಗ್ರಹಿಸು.

೫೩. ಮತ್ತು ಬಹುಕಾಲದಿಂದ ನನ್ನ ಮನಸ್ಸಿನಲ್ಲಿರುವ ಮತ್ತೊಂದು ಪ್ರಶ್ನೆಯನ್ನು ನಿನ್ನಲ್ಲಿ ಕೇಳಬಯಸುವೆನು. ಮುಕ್ತಿಕಾಮನಾಗಿ ಪ್ರಯತ್ನಪಡುತ್ತಿರುವ ನನಗೆ ಮುಕ್ತಿಯಾಗುವ ಮಾರ್ಗವಾವುದು?

೫೪. ಹದಿಮೂರು ವರ್ಷಗಳಿಂದಲೂ ಯೋಗಾಭ್ಯಾಸದಲ್ಲಿ ನಿರತನಾಗಿದ್ದ ನನಗೆ ಅತ್ಯಂತ ದುಸ್ಸಾಧ್ಯವಾದ ತಪಸ್ಸಿನಿಂದಲೂ ಮೋಕ್ಷವು ಲಭಿಸಲಿಲ್ಲ. ಇದು ಪರಮಾಶ್ಚರ್ಯವು.

೫೫. ಆದರೆ ಆ ವ್ಯಾಧನಿಗೆ ಮಾತ್ರ ಕ್ಷಣಮಾತ್ರದಲ್ಲಿಯೇ ಮುಕ್ತಿಯು ಲಬ್ಧವಾಯಿತು. ಇದರಿಂದ ನನಗೆ ಸಂದೇಹವುಂಟಾಗಿರುವುದು. ಇದಕ್ಕೆ ಕಾರಣವೇನೆಂಬುದನ್ನು ವಿಸ್ತಾರವಾಗಿ ಹೇಳು."

ತಸ್ಯ ತದ್ವಚನಂ ಶ್ರುತ್ವಾ ತತೋ ವಚನಮಬ್ರವೀತ್ ।
ಕಥಯಾಮಿ ಪರಂ ಗುಹ್ಯಂ ರಹಸ್ಯಂ ಮುಕ್ತಿಲಕ್ಷಣಂ ॥ ೫೬ ॥
ಮಹಾದೇವಮುಪಾಸ್ಯಾಽಽಶು ಮುನೇ ಮುಕ್ತಿಃ ಸುದುರ್ಲಭಾ ।
ಪುರಾತನೈಸ್ತು ವಿದ್ವದ್ಭಿರಿದಮುಕ್ತಂ ಮಹಾತ್ಮಭಿಃ ॥ ೫೭ ॥
ಶೃಣುಷ್ವೈಕಮನಾ ವಿಪ್ರ ಕುರು ಯತ್ನಂ ಯಥಾರ್ಥತಃ ।
ಮನ್ನಿಯೋಗಾದ್ದ್ವಿಜಶ್ರೇಷ್ಠ ತತೋ ಮುಕ್ತಿಮವಾಪ್ಸ್ಯಸಿ ॥ ೫೮ ॥
ಶಪ್ತೋಽಹಂ ತೈರ್ಯದಾ ವಿಪ್ರೈಸ್ತದಾ ಮೇ ತೋಷಿತಾ ಭೃಶಂ ।
ಮಮಾಽನುಕಂಪಯಾ ಪ್ರೋಕ್ತಂ ಮುಕ್ತಿಸ್ತೇ ಭವಿತಾ ನೃಪ ॥ ೫೯ ॥
ಮುಕ್ತಿಕಾಮೋ ಮಹಾಕಾಲೇ ಮುಕ್ತಿರ್ಬ್ರಾಹ್ಮಣಸತ್ತಮಃ ।
ವಿದ್ಯತೇ ತಪಸಾ ಯುಕ್ತಃ ಸ ತೇ ಪ್ರಶ್ನಂ ಕರಿಷ್ಯತಿ ॥ ೬೦ ॥
ಮುಕ್ತೇಶ್ವರಂ ತದಾ ಲಿಂಗಂ ತಸ್ಯಾಗ್ರೇ ಕಥಯಿಷ್ಯಸಿ ।
ತವಾಽಪಿ ತಸ್ಯ ಮುಕ್ತೇಶ್ಚ ಮುಕ್ತಿರೇವಂ ಭವಿಷ್ಯತಿ ॥ ೬೧ ॥

---

೫೬. ಆ ಬ್ರಾಹ್ಮಣನ ಈ ಮಾತನ್ನು ಕೇಳಿ ದೇವತೆಯು ಹೇಳುತ್ತಾನೆ. "ಮುಕ್ತಿಯನ್ನು ಪಡೆಯಲು ಕಾರಣವೂ ಪರಮಗೋಪ್ಯವೂ ಆದ ರಹಸ್ಯವನ್ನು ಹೇಳುವೆನು.

೫೭. ಮುನಿವರ್ಯನೆ! ಅತಿದುರ್ಲಭವಾದ ಮೋಕ್ಷವೂ ಮಹಾದೇವನ ಉಪಾಸನೆಯಿಂದ ಸುಲಭಸಾಧ್ಯವಾಗುವುದು. ವಿದ್ವಾಂಸರೂ ಮಹಾತ್ಮರೂ ಆದ ಹಿಂದಿನವರು ಇದನ್ನು ಹೇಳಿರುವರು.

೫೮. ದ್ವಿಜಶ್ರೇಷ್ಠನೆ! ನನ್ನ ಮಾತನ್ನು ಏಕಾಗ್ರಚಿತ್ತದಿಂದ ಕೇಳುವವನಾಗು. ನನ್ನ ಅಪ್ಪಣೆಯಂತೆ ನೀನು ನಡೆದುಕೊಂಡರೆ ನೀನೂ ಮೋಕ್ಷವನ್ನು ಪಡೆಯುವೆ.

೫೯. ನಾನು ಆ ಬ್ರಾಹ್ಮಣರಿಂದ ಶಾಪವನ್ನು ಹೊಂದಿದ ಕಾಲದಲ್ಲಿ ಅವರನ್ನು ಬಹುವಾಗಿ ಸಂತೋಷಗೊಳಿಸಲು ನನ್ನಲ್ಲಿ ದಯೆಯುಳ್ಳವರಾಗಿ ಅವರು ಹೇಳಿದರು. 'ರಾಜನೆ! ನಿನಗೆ ಮೋಕ್ಷವಾಗುವುದು.

೬೦. ಮಹಾಕಾಲವನದಲ್ಲಿ ಮೋಕ್ಷೇಚ್ಛಾಪರನಾದ ಮುಕ್ತಿಯೆಂಬ ಒಬ್ಬ ಬ್ರಾಹ್ಮಣೋತ್ತಮನಿರುವನು. ಆತನು ನಿನ್ನನ್ನು ಪ್ರಶ್ನೆ ಮಾಡುವನು.

೬೧. ಆಗ ನೀನು ಮುಕ್ತೇಶ್ವರನ ಮಹಿಮೆಯನ್ನು ಆತನ ಇದಿರಿನಲ್ಲಿ ವಿಸ್ತರಿಸುವೆ. ಇದರಿಂದ ನಿನಗೂ ಆ ಬ್ರಾಹ್ಮಣನಿಗೂ ಒಡನೆಯೇ ಮೋಕ್ಷವು ಪ್ರಾಪ್ತವಾಗುವುದು.'

ಪೂರ್ವಂ ಹಿ ಚಿಹ್ನಿತಂ ಕರ್ಮ ದೇಹಿನೋ ನ ವಿಮುಂಚತಿ ।
ಧಾತ್ರಾ ವಿಧಿರಯಂ ದೃಷ್ಟೋ ಬಹುಧಾ ಕರ್ಮಭಿಶ್ಚ ಯಃ ॥ ೬೨ ॥
ಇತಿ ತಸ್ಯ ವಚಃ ಶ್ರುತ್ವಾ ಸ ವಿಪ್ರೋ ಬ್ರಹ್ಮವಿತ್ತಮಃ ।
ಅಂತರ್ಜಲಾತ್ಸಮುತ್ಥಾಯ ತತೋ ವಚನಮಬ್ರವೀತ್ ॥ ೬೩ ॥
ದಿಷ್ಟ್ಯಾ ತ್ವಮಾಗತೋ ಭೂಪ ದಿಷ್ಟ್ಯಾ ತೇ ಸಂಗತಂ ಮಯಾ ।
ಈದೃಶಾ ದುರ್ಲಭಾ ಲೋಕೇ ನರಾ ಮುಕ್ತಿಪ್ರದರ್ಶಕಾಃ ॥ ೬೪ ॥
ಇತ್ಯುಕ್ತ್ವಾ ನೃಪವಿಪ್ರೌ ತೌ ಮುಕ್ತಿಲಿಂಗಂ ಸಮಾಗತೌ ।
ದರ್ಶನಾರ್ಥಂ ವಿಶಾಲಾಕ್ಷಿ ದೃಷ್ಟ್ವಾ ದೇವಂ ಸನಾತನಂ ॥ ೬೫ ॥
ತತ್ಕ್ಷಣಾತ್ಸಶರೀರೌ ತೌ ತಸ್ಮಿಂಲ್ಲಿಂಗೇ ಲಯಂ ಗತೌ ।
ಈದೃಶೋಽಯಂ ಮಯಾ ದೇವಿ ಮಹಿಮಾ ಕಥಿತಸ್ತವ ॥ ೬೬ ॥
ಅಸ್ಯ ಲಿಂಗಸ್ಯ ಸಂಸ್ಪರ್ಶಾನ್ಮುಕ್ತಿರ್ಭವತಿ ನಾಽನ್ಯಥಾ ।
ಯೇಽರ್ಚಯಂತಿ ಸದಾ ಭಕ್ತ್ಯಾ ಮುಕ್ತಿಲಿಂಗಂ ಸನಾತನಂ ।
ಅಪಿ ಪಾಪಸಮಾಯುಕ್ತಾಃ ತೇ ಯಾಂತಿ ಪರಮಾಂ ಗತಿಂ ॥ ೬೭ ॥

---

೬೨. ಪೂರ್ವದಲ್ಲಿ ಮಾಡಿರುವ ವಾಸನಾರೂಪವಾದ ಕರ್ಮವು ಪ್ರಾಣಿಗಳನ್ನು ಬಿಡುವುದೇ ಇಲ್ಲ. ಬಹು ವಿಧಗಳಾದ ಕರ್ಮಗಳಿಂದ ಬಂಧಿತನಾದ ಮನುಷ್ಯನ ವಿಷಯದಲ್ಲಿ ಈ ವಿಧಿಯೇ ಬ್ರಹ್ಮನಿಂದ ನಿರ್ದಿಷ್ಟವಾಗಿರುವುದು.''

೬೩–೬೪. ಇಂತೆಂದ ಆತನ ಮಾತುಗಳನ್ನು ಕೇಳಿ ಬ್ರಹ್ಮವಿದ್ಯಾಪಾರಂಗತನಾದ ಆ ಬ್ರಾಹ್ಮಣನು ನೀರಿನ ಮಧ್ಯದಿಂದ ಎದ್ದು ಬಂದು ಆ ದೇವತೆಯನ್ನು ಕುರಿತು ಹೇಳತೊಡಗಿದನು. ''ಮಹಾರಾಜನೆ! ನನ್ನ ಅದೃಷ್ಟದಿಂದಲೇ ನೀನು ಇಲ್ಲಿಗೆ ಬಂದಿರುವೆ. ಅದೃಷ್ಟಬಲದಿಂದಲೇ ನನಗೆ ನಿನ್ನ ಸಮಾಗಮವು ಲಭಿಸಿತು. ಜನರಿಗೆ ಮೋಕ್ಷಮಾರ್ಗವನ್ನು ತೋರಿಸಿಕೊಡುವಂತಹ ಮಾನವರು ಪ್ರಪಂಚದಲ್ಲಿ ಬಹಳ ದುರ್ಲಭರಾಗಿರುವರು.''

೬೫. ಇಂತೆಂದ ಬಳಿಕ ಆ ಮಹಾರಾಜ ಬ್ರಾಹ್ಮಣರಿಬ್ಬರೂ ದರ್ಶನಾಕಾಂಕ್ಷಿಗಳಾಗಿ ಮುಕ್ತಿಲಿಂಗದ ಬಳಿಗೆ ಬಂದರು. ವಿಶಾಲಾಕ್ಷಿಯೆ! ಅವರು ಅನಾದಿನಿಧನವಾದ ಆ ಲಿಂಗವನ್ನು ಸಂದರ್ಶಿಸಿದರು.

೬೬. ಆ ಕ್ಷಣದಲ್ಲಿಯೇ ಈರ್ವರೂ ಸಶರೀರರಾಗಿಯೇ ಆ ಲಿಂಗದಲ್ಲಿ ಐಕ್ಯವನ್ನು ಪಡೆದರು. ದೇವಿಯೆ! ಇಂತಹ ಮಹಾಮಹಿಮಾನ್ವಿತವಾದ ಕಥೆಯನ್ನು ನಿನಗೆ ತಿಳಿಸಿರುವೆನು. ಈ ಲಿಂಗವನ್ನು ಸ್ಪರ್ಶಮಾಡುವುದರಿಂದ ಮೋಕ್ಷವು ಲಭಿಸುವುದಲ್ಲದೆ ಬೇರೆ ಮಾರ್ಗವಿಲ್ಲ.

೬೭. ಯಾರು ಪಾಪಕೋಟಿಗಳನ್ನು ಮಾಡಿದ್ದರೂ ನಿತ್ಯವೂ ಭಕ್ತಿಭರಿತರಾಗಿ ಸನಾತನವಾದ ಮುಕ್ತಿಲಿಂಗಕ್ಕೆ ಪೂಜೆಯನ್ನು ಮಾಡುವರೊ, ಅವರು ಉತ್ತಮಗತಿಯನ್ನು ಪಡೆಯುವರು.

ರೇ ಮೂಢಾಃ ಕಿಂ ತಪೋಭಿಶ್ಚ ಕಿಂ ದಾನೈರ್ನಿಯಮೈಶ್ಚ ಕಿಂ ।
ಕುರುಧ್ವಂ ಮುಕ್ತಿಲಿಂಗಸ್ಯ ದರ್ಶನಂ ಮುಕ್ತಿದಾಯಕಂ ॥ ೧೮ ॥
ನ ಮಾಂ ವಿದುರ್ದೇವಗಣಾ ನಾಽಸುರಾ ನ ಮಹರ್ಷಯಃ ।
ಪರಂ ರೂಪಂ ವಿಶಾಲಾಕ್ಷಿ ಯದಶ್ಮದ್ಯುತಿ ನಿರ್ಮಲಂ ॥ ೧೯ ॥
ನ ಮೇ ವೇತ್ತಿ ಪರಂ ರೂಪಂ ಸ್ವಯಂ ಸಾಕ್ಷಾತ್ಪ್ರಜಾಪತಿಃ ।
ನ ವಿಷ್ಣುಸ್ತ್ರಿದಶಶ್ರೇಷ್ಠಾಃ ಕುತೋಽನ್ಯೇ ಮುನಯಃ ಪ್ರಿಯೇ ॥ ೨೦ ॥
ಯದೇತದ್ದೃಶ್ಯತೇ ತೇಜೋ ಲಿಂಗರೂಪಂ ಯಶಸ್ವಿನಿ ।
ಏತದೇವ ಶುಕಾದ್ಯಾ ಹಿ ಧ್ಯಾಯಂತಿ ತ್ರಿದಶಾ ಅಪಿ ॥ ೨೧ ॥
ಅನೇಕಜನ್ಮಸಂಶುದ್ಧಾ ಯೋಗಿನೋಽನುಗ್ರಹಾನ್ಮಮ ।
ಪ್ರವಿಶಂತಿ ತನುಂ ದೇವಿ ಮದೀಯಾಂ ಮುಕ್ತಿದಾಯಿಕಾಂ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಮುಕ್ತೀಶ್ವರಮಾಹಾತ್ಮ್ಯವರ್ಣನಂ"
ನಾಮ ಪಂಚವಿಂಶೋಽಧ್ಯಾಯಃ

---

೧೮. ಎಲೈ ಮೂಢಮಾನವರಿರಾ! ನಿಮ್ಮ ತಪಸ್ಸುಗಳಿಂದಲೂ, ದಾನಗಳಿಂದಲೂ, ವ್ರತೋಪವಾಸಗಳಿಂದಲೂ ಏನು ಪ್ರಯೋಜನವು? ಮೋಕ್ಷಪ್ರದವಾದ ಮುಕ್ತಿಲಿಂಗದ ದರ್ಶನವನ್ನು ಮಾಡಿರಿ.

೧೯. ಪಾರ್ವತಿಯೆ! ನನ್ನನ್ನು ನಿಜವಾಗಿ ದೇವಗಣಗಳಾಗಲಿ, ರಾಕ್ಷಸರಾಗಲಿ, ಮಹರ್ಷಿಗಳಾಗಲಿ ಅರಿಯರು. ಪರಿಶುದ್ಧವಾದ ಕಲ್ಲಿನಂತಿರುವ ಈ ಉತ್ತಮರೂಪವೇ ಎಲ್ಲರಿಗೂ ಲಭ್ಯವಾಗಿರುವುದು.

೨೦. ನನ್ನ ಯಥಾರ್ಥರೂಪವನ್ನು ಲೋಕಪಿತಾಮಹನಾದ ಪ್ರಜಾಪತಿಯು ತಾನೇ ತಿಳಿಯಲಾರನು. ವಿಷ್ಣುವೂ, ದೇವೋತ್ತಮರೂ ತಿಳಿಯಲಾರರು. ಇನ್ನು ಇತರ ಮುನಿಗಳ ಪಾಡೇನು?

೨೧. ಸುಮಂಗಳೆಯೆ! ಲಿಂಗರೂಪವಾದ ಯಾವ ತೇಜಸ್ಸು ಇಲ್ಲಿ ಕಾಣುತ್ತಿರುವುದೊ, ಇದನ್ನೇ ಶುಕಾದಿ ಮಹರ್ಷಿಗಳೂ ದೇವತೆಗಳೂ ಧ್ಯಾನಿಸುತ್ತಿರುವರು.

೨೨. ಅನೇಕಜನ್ಮಗಳಲ್ಲಿ ತಮ್ಮ ಪಾತಕಗಳನ್ನು ಕಳೆದು ಪರಿಶುದ್ಧರಾಗಿರುವ ಯೋಗಿಗಳು ನನ್ನ ಅನುಗ್ರಹಬಲದಿಂದಲೇ ಮುಕ್ತಿದಾಯಕವಾದ ನನ್ನ ಶರೀರವನ್ನು ಪ್ರವೇಶಿಸುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಮುಕ್ತೀಶ್ವರಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡ್ವಿಂಶೋಽಧ್ಯಾಯಃ

### ಸೋಮೇಶ್ವರಮಾಹಾತ್ಮ್ಯವರ್ಣನಂ

**ಈಶ್ವರ ಉವಾಚ :—**

**ವಿದ್ಧಿ ಷಡ್ವಿಂಶಕಂ ದೇವಿ ದೇವಂ ಸೋಮೇಶ್ವರಂ ಪರಂ ।**
**ಯಸ್ಯ ದರ್ಶನಮಾತ್ರೇಣ ನಿಷ್ಕಲಂಕೋ ನರೋ ಭವೇತ್ ॥ ೧ ॥**
**ಅತ್ರಿರ್ನಾಮ ಮಹಾಭಾಗೋ ಬ್ರಹ್ಮಣೋ ಮಾನಸಃ ಸುತಃ ।**
**ಪ್ರಜಾಪತಿರಭೂದ್ದೇವಿ ಕಲ್ಪೇ ವಾರಾಹಸಂಜ್ಞಕೇ ॥ ೨ ॥**
**ತಸ್ಯ ಪುತ್ರೋಽಭವತ್ಸೋಮೋ ದಕ್ಷೋಽಥ ಮಾತೃಭಾಗತಃ ।**
**ಸಪ್ತವಿಂಶತಿಯರ್ನಾಃ ಕನ್ಯಾ ದಾಕ್ಷಾಯಿಣ್ಯಃ ಪ್ರಕೀರ್ತಿತಾಃ ॥ ೩ ॥**
**ಸೋಮಪತ್ನ್ಯೋ ಹಿ ಮಂತವ್ಯಾಸ್ತಾಸಾಂ ಶ್ರೇಷ್ಠಾ ತು ರೋಹಿಣೀ ।**
**ತಾಮೇವ ಭಜತೇ ಸೋಮೋ ನೇತರಾ ಇತಿ ಶುಶ್ರುಮ ॥ ೪ ॥**
**ಇತರಾಃ ಪ್ರೋಚುರಾಗತ್ಯ ದಕ್ಷಸ್ಯಾಗ್ರೇ ಯಥಾತಥಂ ।**
**ದಕ್ಷೋಽಥ ಸ ತದಾಽಽಗತ್ಯ ತಮುವಾಚ ಸ ನಾಽಕರೋತ್ ॥ ೫ ॥**

---

### ಕನ್ನಡದ ಅನುವಾದ

#### ಸೋಮೇಶ್ವರಮಹಿಮಾನುವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಪರಾತ್ಪರನಾದ ಸೋಮೇಶ್ವರನೇ ಇಪ್ಪತ್ತಾರನೆಯ ಮಹಾಲಿಂಗವು. ಅವರ ದರ್ಶನಮಾತ್ರದಿಂದ ಮನುಷ್ಯನು ಪಾಪರಹಿತನಾಗುವನು.

೨. ಪಾರ್ವತಿಯೆ! ವಾರಾಹಕಲ್ಪದ ಆದಿಯಲ್ಲಿ ಬ್ರಹ್ಮಮಾನಸಪುತ್ರನಾದ ಅತ್ರಿಯೆಂಬ ಮಹಾ ಪುಣ್ಯಶಾಲಿಯೊಬ್ಬನು ಪ್ರಜಾಪತಿಗಳಲ್ಲಿ ಒಬ್ಬನಾಗಿದ್ದನು.

೩. ಆತನ ಮಗನೇ ಚಂದ್ರನು. ಅವನ ತಾಯಿಯ ಕಡೆಯ ಬಂಧುವಾದ ದಕ್ಷನಿಗೆ ಇಪ್ಪತ್ತೇಳು ಜನ ಹೆಣ್ಣುಮಕ್ಕಳಿದ್ದರು. ಅವರೇ ದಾಕ್ಷಾಯಣಿಯರೆಂದು ಪ್ರಖ್ಯಾತರಾಗಿರುವರು.

೪. ಅವರೆಲ್ಲರೂ ಚಂದ್ರನಿಗೆ ಪತ್ನಿಯರಾದರು. ಅವರಲ್ಲೆಲ್ಲ ರೋಹಿಣಿಯೇ ಶ್ರೇಷ್ಠಳಾಗಿದ್ದುದರಿಂದ ಚಂದ್ರನು ಆಕೆಯಲ್ಲಿಯೇ ಅನುರಕ್ತನಾಗಿದ್ದನೆಂದೂ ಇತರರನ್ನು ಆದರಿಸುತ್ತಿರಲಿಲ್ಲವೆಂದೂ ಕೇಳಿರುವೆವು.

೫. ಆಗ ಅವರೆಲ್ಲರೂ ದಕ್ಷನ ಬಳಿಗೆ ಬಂದು ನಿಜವಾದ ಸಂಗತಿಯನ್ನು ತಿಳಿಸಲು ದಕ್ಷಬ್ರಹ್ಮನು ಅಳಿಯನ ಬಳಿಸಾರ್ದು ಹಾಗೆ ಪಕ್ಷಪಾತವನ್ನು ಮಾಡಬಾರದೆಂದು ಹೇಳಿದನು. ಆದರೆ ಚಂದ್ರನು ಅವನ ಮಾತನ್ನು ನಡೆಸಲಿಲ್ಲ.

ಯದಾ ನ ವಾರಿತಸ್ತಸ್ಮೌ ದಕ್ಷಃ ಕ್ರುದ್ಧಸ್ತದಾ ಪ್ರಿಯೇ ।
ಶಶಾಪ ಸೋಮಂ ಸಂಕ್ರುದ್ಧಃ ಶೀಘ್ರಮಂತರ್ಹಿತೋ ಭವ ॥ ೬ ॥
ಏವಂ ಶಪ್ತಸ್ತು ಸೋಮೋ ವೈ ತದಾ ಹ್ಯಂತರ್ಹಿತೋಽಭವತ್ ।
ಶಶಾಪ ಸೋಮೋ ದಕ್ಷಂ ತು ಭವಾನಪಿ ಭವಿಷ್ಯತಿ ॥ ೭ ॥
ಅನೇಕತ್ವಂ ವಿಹಾಯೈತಜ್ಜಲದೇಹಂ ಸನಾತನಂ ।
ಅತಃ ಪ್ರಾಚೇತಸೋ ದಕ್ಷೋ ಬ್ರಹ್ಮಪುತ್ರೋಽಪಿ ಗೀಯತೇ ।
ಏವಮಂತರ್ಹಿತಃ ಸೋಮೋ ಗತೋ ವೈ ದಕ್ಷಶಾಪತಃ ॥ ೮ ॥
ದೇವಾಶ್ಚ ನಾಗಾ ಯಕ್ಷಾಶ್ಚ ಗಂಧರ್ವಾಃ ಪಿತೃಭಿಃ ಸಹ ।
ವೈರಾಜಂ ಬ್ರಹ್ಮಸದನಂ ಬ್ರಹ್ಮಾಣಂ ಸಮುಪಸ್ಥಿತಾಃ ॥ ೯ ॥
ತಸ್ಯಾಗ್ರೇ ಕಥಯಾಮಾಸುರ್ನಮಸ್ಕೃತ್ಯ ಪುನಃ ಪುನಃ ।
ಭಗವನ್ ಸರ್ವಭೂತಾನಾಮಾದಿಕರ್ತಾ ಸ್ವಯಂಭುವಃ ।
ಸ್ರಷ್ಟಾ ಚ ಹವ್ಯಕವ್ಯಾನಾಂ ಪಾಹಿ ನಃ ಶರಣಾಗತಾನ್ ॥ ೧೦ ॥
ದೇವಾನಾಂ ವಚನಂ ಶ್ರುತ್ವಾ ಜ್ಞಾತ್ವಾ ದೇವಃ ಪ್ರಜಾಪತಿಃ ।
ಆಶ್ವಾಸಯಾಮಾಸ ಸುರಾನ್ ಸುಶ್ಲಿಷ್ಟೈರ್ವಚನಾಂಬುಭಿಃ ॥ ೧೧ ॥

---

೬. ಬೇಡವೆಂದರೂ ತನ್ನ ಇಚ್ಛೆಯಂತೆಯೇ ನಡೆಯುತ್ತಿದ್ದ ಚಂದ್ರನನ್ನು ಕಂಡು ಕೋಪಗೊಂಡು ಆ ದಕ್ಷಪ್ರಜಾಪತಿಯು, "ಈ ಕ್ಷಣದಲ್ಲಿಯೇ ನೀನು ಅದೃಶ್ಯನಾಗು" ಎಂದು ಶಾಪವನ್ನಿತ್ತನು.

೭–೮. ಇಂತು ಶಾಪಗ್ರಸ್ತನಾದ ಚಂದ್ರನು ಆಗ ಕಣ್ಣಿಗೆ ಕಾಣದಾದನು. ಬಳಿಕ ಆತನೂ ದಕ್ಷಬ್ರಹ್ಮನಿಗೆ "ನೀನೂ ಸಹ ಈ ಶರೀರವನ್ನು ತ್ಯಜಿಸದೆಯೇ ಯಾವ ಕಾಲಕ್ಕೂ ಅನ್ಯಶರೀರವುಳ್ಳವನಾಗುವೆ" ಎಂದು ಪ್ರತಿಶಾಪವನ್ನು ಕೊಟ್ಟನು. ಆದುದರಿಂದಲೇ ಪ್ರಚೇತಸ ಮಗನಾದ ದಕ್ಷನು ಬ್ರಹ್ಮಪುತ್ರನೆಂಬುದಾಗಿಯೂ ಪ್ರಸಿದ್ಧನಾಗಿರುವನು. ಇಂತು ದಕ್ಷಶಾಪದ ಬಲದಿಂದ ಚಂದ್ರನು ಅಂತರ್ಧಾನವನ್ನು ಹೊಂದಿದನು.

೯. ಆಗ ದೇವತೆಗಳೂ, ನಾಗರೂ, ಯಕ್ಷರೂ, ಗಂಧರ್ವರೂ, ಪಿತೃಗಳೂ ವೈರಾಜವಾದ ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವನನ್ನು ಮರೆಹೊಕ್ಕರು.

೧೦–೧೧. ಆತನಿಗೆ ಮತ್ತೆ ಮತ್ತೆ ನಮಸ್ಕಾರಗಳನ್ನು ಮಾಡಿ ಆತನಲ್ಲಿ ಬಿನ್ನವಿಸಿಕೊಂಡರು. "ಸ್ವಾಮಿಯೆ! ನೀನೇ ಸಕಲಭೂತಗಳ ಆದಿಕಾರಣನಾದವನು. ಸ್ವಯಂಭುವು. ಹವ್ಯಕವ್ಯಗಳನ್ನು ಸೃಷ್ಟಿಮಾಡಿದವನೂ ನೀನೇ. ನಿನ್ನನ್ನು ಶರಣುಹೊಕ್ಕಿರುವ ನಮ್ಮನ್ನು ಕಾಪಾಡು." ದೇವತೆಗಳ ಈ ಮಾತನ್ನು ಕೇಳಿ ಪ್ರಜಾಪತಿಯು ಕಾರ್ಯಗೌರವವನ್ನು ತಿಳಿದುಕೊಂಡು ಮೃದುಮಧುರವಚನಗಳಿಂದ ಅವರನ್ನು ಸಮಾಧಾನಗೊಳಿಸಿದನು.

ಅವಶ್ಯಂ ತ್ರಿದಶಾಸ್ತೇನ ಪ್ರಾಪ್ತವ್ಯಂ ಕರ್ಮಣಃ ಫಲಂ ।
ಶಾಪಾಂತಂ ಭಗವಾನ್ ದೇವೋ ವಿಷ್ಣುರೇವ ಕರಿಷ್ಯತಿ ॥ ೧೨ ॥
ಏತಚ್ಛ್ರುತ್ವಾ ತತೋ ದೇವಾ ವಾಕ್ಯಂ ಪಂಕಜಜನ್ಮನಃ ।
ಶರಣ್ಯಂ ಶರಣಂ ವಿಷ್ಣುಮುಪತಸ್ಥುರ್ಗತವ್ಯಥಾಃ ॥ ೧೩ ॥
ಬ್ರಹ್ಮಣಾ ಸಹಿತಾ ದೇವಿ ಸ್ತುತಿಂ ಚಕ್ರುಃ ಸಮಾಹಿತಾಃ ।
ನಮಸ್ತೇ ದೇವದೇವೇಶ ನಮಸ್ತೇ ವಿಶ್ವಭಾವನ ।
ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ ॥ ೧೪ ॥
ನಾರಾಯಣ ಜಗನ್ನಾಥ ದೇವಾಸ್ತ್ವಾಂ ಶರಣಂ ಗತಾಃ ।
ತ್ವಂ ಹಿ ನಃ ಪರಮೋ ಧ್ಯೇಯಸ್ತ್ವಂ ಹಿ ನಃ ಪರಮೋ ಗುರುಃ ॥ ೧೫ ॥
ತ್ವಂ ಹಿ ನಃ ಪರಮೋ ದೇವೋ ಬ್ರಹ್ಮಾದೀನಾಂ ಸುರೋತ್ತಮ ।
ಅಂತರ್ಧಾನಂ ಗತಃ ಸೋಮೋ ದಕ್ಷಶಾಪಾಜ್ಜನಾರ್ದನ ॥ ೧೬ ॥
ವಿನಾ ಸೋಮೇನ ಚೌಷಧ್ಯೋ ನಷ್ಟಾ ದೇವ ಮಹೀತಲೇ ।
ತೇಷಾಂ ತದ್ವಚನಂ ಶ್ರುತ್ವಾ ವಿಷ್ಣುರ್ವಚನಮಬ್ರವೀತ್ ॥ ೧೭ ॥

---

೧೨. "ದೇವತೆಗಳಿರಾ! ಆ ಚಂದ್ರನು ನಿಜವಾಗಿಯೂ ತನ್ನ ಕರ್ಮದ ಫಲವನ್ನು ಅನುಭವಿಸಲೇಬೇಕು. ಮಹಾತ್ಮನಾದ ಮಹಾವಿಷ್ಣುವೇ ಈ ಶಾಪಕ್ಕೆ ಕೊನೆಯನ್ನು ಕಾಣಿಸುವನು."

೧೩. ಇಂತೆಂದ ಪದ್ಮಸಂಭವನ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ಮನಃಕ್ಲೇಶವನ್ನು ನೀಗಿ ಶರಣಾಗತರಕ್ಷಕನಾದ ಮಹಾವಿಷ್ಣುವನ್ನು ಶರಣು ಹೊಕ್ಕರು.

೧೪. ದೇವಿಯೆ! ಅವರು ಸಮಾಧಾನವುಳ್ಳ ಮನಸ್ಸಿನಿಂದ ಅಲ್ಲಿಗೆ ಬಂದು ಚತುರ್ಮುಖನನ್ನು ಮುಂದಿಟ್ಟುಕೊಂಡು ಸ್ತೋತ್ರಮಾಡತೊಡಗಿದರು. "ದೇವ ದೇವೇಶ್ವರನೆ! ಬ್ರಹ್ಮಾಂಡಕ್ಕೆ ಕಾರಣನೆ! ಇಂದ್ರಿಯನಿಯಾಮಕನೆ! ಶಿವ ಬ್ರಹ್ಮಾದಿ ಮಹಾಪುರುಷರಿಗೂ ಮೊದಲಿದ್ದವನೆ! ನಿನಗೆ ನಮಸ್ಕಾರವು.

೧೫. ನಾರಾಯಣ, ಲೋಕನಾಥ! ದೇವತೆಗಳೆಲ್ಲರೂ ನಿನ್ನನ್ನು ಶರಣು ಹೊಕ್ಕಿರುವರು. ನೀನೇ ನಮಗೆ ಉತ್ತಮವಾದ ಧ್ಯೇಯಮೂರ್ತಿಯು. ನೀನೇ ಪರಮಗುರುವು.

೧೬. ದೇವೋತ್ತಮನೆ! ಬ್ರಹ್ಮಾದಿಗಳಿಗೂ ನೀನೇ ಪರಮದೈವತವು. ಜನಾರ್ದನನೆ! ಈಗ ದಕ್ಷಬ್ರಹ್ಮನ ಶಾಪದ ಫಲವಾಗಿ ಸೋಮನು ಅಂತರ್ಧಾನ ವನ್ನು ಹೊಂದಿರುವನು.

೧೭. ಸ್ವಾಮಿಯೆ! ಸೋಮನಿಲ್ಲದೆ ಭೂಲೋಕದಲ್ಲಿ ಓಷಧಿವನಸ್ಪತಿಗಳೆಲ್ಲವೂ

ಭಯಂ ತ್ಯಜಧ್ವಮಮರಾ ಅಭಯಂ ವೋ ದದಾಮ್ಯಹಂ ।
ನಷ್ಟಂ ಚಂದ್ರಮಸಂ ಶೀಘ್ರಮಾನಯಿಷ್ಯಾಮ್ಯಸಂಶಯಂ ॥ ೧೮ ॥
ಏವಮುಕ್ತ್ವಾ ತು ಭಗವಾನ್ವಿಸೃಜ್ಯ ತ್ರಿದಶೇಶ್ವರಾನ್ ।
ಸೋಮಂ ಸಸ್ಮಾರ ಸಹಸಾ ಶಂಖಚಕ್ರಗದಾಧರಃ ॥ ೧೯ ॥
ಯದಾ ಸ್ಮೃತೋ ನ ಚಾಽಭ್ಯೇತಿ ತದಾ ಕ್ರುದ್ಧೋ ಜನಾರ್ದನಃ ।
ಪುರಾಣಪುರುಷೋ ದೇವೋ ಬ್ರಹ್ಮಾಣಮಿದಮಬ್ರವೀತ್ ॥ ೨೦ ॥
ದೇವೈರಸುರಸಂಘೈಶ್ಚ ಮಥ್ಯತಾಂ ಕಲಶೋದಧಿಃ ।
ಭವಿಷ್ಯತಿ ಪುನಶ್ಚಂದ್ರೋ ಮಥ್ಯಮಾನೇ ಮಹೋದಧೌ ॥ ೨೧ ॥
ಅಮೃತಂ ತತ್ರ ಲಪ್ಸ್ಯಧ್ವಂ ರತ್ನಾನಿ ವಿವಿಧಾನಿ ಚ ।
ತಸ್ಯ ತದ್ವಚನಂ ಶ್ರುತ್ವಾ ವಾಸುದೇವಸ್ಯ ಪಾರ್ವತಿ ॥ ೨೨ ॥
ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ಚ ವಾಸುಕಿಂ ।
ದೇವಾ ಮಥಿತುಮಾರಬ್ಧಾಃ ಸಮುದ್ರಂ ನಿಧಿಮಂಭಸಾಂ ॥ ೨೩ ॥

---

ನಷ್ಟವಾಗುತ್ತಿರುವುವು.'' ಇಂತೆಂದ ದೇವತೆಗಳ ವಿಜ್ಞಾಪನೆಯನ್ನು ಕೇಳಿ ಮಹಾವಿಷ್ಣುವು ಅವರಿಗಿಂತೆಂದನು.

೧೮. ''ದೇವತೆಗಳಿರಾ! ನಿಮ್ಮ ಭಯವನ್ನು ಬಿಡಿರಿ. ನಿಮಗೆ ನಾನೇ ಅಭಯವನ್ನು ಕೊಡುವೆನು. ನಷ್ಟನಾಗಿರುವ ಚಂದ್ರನನ್ನು ಬೇಗಲೇ ತಂದು ಕೊಡುವೆನು, ಸಂದೇಹವಿಲ್ಲ.''

೧೯. ಇಂತೆಂದು ಶಂಖಚಕ್ರಗದಾಧಾರಿಯಾದ ಶ್ರೀಮನ್ನಾರಾಯಣನು ದೇವತಾಗಣಗಳೆಲ್ಲವನ್ನೂ ಬೀಳುಕೊಟ್ಟು ಆ ಕ್ಷಣದಲ್ಲಿಯೇ ಚಂದ್ರನನ್ನು ಸ್ಮರಿಸಿದನು.

೨೦–೨೧. ಆತನು ನೆನಸಿದಾಗ ಚಂದ್ರನು ಬರಲಿಲ್ಲವಾದುದರಿಂದ ಪುರಾಣ ಪುರುಷನೂ, ದೇವದೇವನೂ ಆದ ಶ್ರೀಮನ್ನಾರಾಯಣನು ಚತುರ್ಮುಖನಿಗೆ ಹೇಳತೊಡಗಿದನು. ''ದೇವತೆಗಳೂ ರಾಕ್ಷಸರೂ ಸೇರಿ ಕಳಶಸಮುದ್ರವನ್ನು ಮಥನಮಾಡಲಿ. ಮಹಾಸಮುದ್ರವನ್ನು ಕಡೆಯುವುದರಿಂದ ಮತ್ತೆ ಚಂದ್ರನು ಹುಟ್ಟಿಬರುವನು.

೨೨. ಅದರಲ್ಲಿಯೇ ನೀವು ಅಮೃತವನ್ನೂ, ವಿಧವಿಧಗಳಾದ ರತ್ನ ಗಳನ್ನೂ ಪಡೆಯುವಿರಿ.'' ಪಾರ್ವತಿಯೆ! ಆತನ ಮಾತುಗಳನ್ನು ದೇವತೆಗಳು ಕೇಳಿದರು.

೨೩. ಮಂದರಪರ್ವತವನ್ನೇ ಕಡೆಗೋಲನ್ನಾಗಿಯೂ, ವಾಸುಕಿಯನ್ನೇ ಹಗ್ಗವನ್ನಾಗಿಯೂ ಮಾಡಿಕೊಂಡು ದೇವತೆಗಳು ಜಲನಿಧಿಯೆನಿಸಿದ ಸಮುದ್ರ ವನ್ನು ಕಡೆಯಲಾರಂಭಿಸಿದರು.

ಸೋಮಾರ್ಥೇ ಚ ಪುರಾ ದೇವಿ ತಥೈವಾಽಸುರದಾನವಾಃ ।
ಏತೈರ್ಮುಖಮುಪಾಶ್ಲಿಷ್ಟೋ ನಾಗರಾಜೋ ಮಹೇಷ್ಯಯಾ ॥ ೨೪ ॥
ವಿಬುಧಾಃ ಸಹಿತಾಃ ಸರ್ವೇ ಯುತಃ ಪುಚ್ಛಂ ತತಃ ಸ್ಥಿತಾಃ ।
ಅತೋ ವೈ ಭಗವಾನ್ ದೇವೋ ಯುತೋ ನಾರಾಯಣಸ್ತತಃ ॥ ೨೫ ॥
ಶಿರಸ್ಯುದ್ಯಮ್ಯ ನಾಗಸ್ಯ ಪುನಃ ಪುನರವಾಕ್ಷಿಪತ್ ।
ಉದಧೌ ಮಥ್ಯಮಾನೇ ವೈ ಮಹಾಂಛಬ್ದೋ ಬಭೂವ ಹ ॥ ೨೬ ॥
ತತ್ರ ನಾನಾಜಲಚರಾ ವಿನಿಷ್ಪಿಷ್ಟಾ ಮಹಾಽದ್ರಿಣಾ ।
ವಿಲಯಂ ಸಮುಪಾಜಗ್ಮುಃ ಶತಶೋಽಥ ಸಹಸ್ರಶಃ ॥ ೨೭ ॥
ತಸ್ಮಿಂಸ್ತು ಮಥಿತೇ ದೇವಿ ಪ್ರಯತ್ನಾತ್ಕೇಶವಸ್ಯ ಚ ।
ಪ್ರಸನ್ನಾತ್ಮಾ ಸಮುತ್ಪನ್ನಃ ಸೋಮಃ ಶೀತಾಂಶುರುಜ್ವಲಃ ॥ ೨೮ ॥
ತಮೇವ ದೇವಾ ಮನುಜಾಃ ಪಿತರಶ್ಚ ಯಶಸ್ವಿನಿ ।
ಉಪಜೀವಂತಿ ವೃಕ್ಷಾಶ್ಚ ತಥೈವೌಷಧಯೋ ವಿಧುಂ ॥ ೨೯ ॥

---

೨೪. ದೇವಿಯೆ! ಚಂದ್ರನನ್ನು ಪಡೆಯಲು ದೇವತೆಗಳೂ, ಅಸುರರೂ, ದಾನವರೂ ಅಲ್ಲಿ ನೆರೆದರು. ತಮಗೆ ಉತ್ತಮ ಸ್ಥಾನವು ಬೇಕೆಂಬ ಅಹಂಕಾರ ದಿಂದ ರಾಕ್ಷಸರು ವಾಸುಕಿಯ ಮುಖಭಾಗವನ್ನು ಹಿಡಿದರು.

೨೫. ದೇವತೆಗಳೆಲ್ಲರೂ ಒಂದುಗೂಡಿ ಬಾಲವಿದ್ದ ಕಡೆಯಲ್ಲಿ ನಿಂತರು. ಭಗವಂತನೂ ದೇವೋತ್ತಮನೂ ಆದ ನಾರಾಯಣನು ಆ ಕಡೆಯೇ ಸರಿಯೆಂದು ಹೇಳಿ ನಿಂತಿದ್ದನು.

೨೬. ಮತ್ತು ಹಾವಿನ ಹೆಡೆಯ ಹೊಡೆತಗಳಿಂದ ಮತ್ತೆ ಮತ್ತೆ ಅನೇಕ ರಾಕ್ಷಸರನ್ನು ನಾಶಮಾಡಿಸಿದನು. ಇಂತು ಸಮುದ್ರಮಥನವು ನಡೆಯುತ್ತಿರಲು ಮಹತ್ತರವಾದ ಶಬ್ದವುಂಟಾಯಿತು.

೨೭. ಅಲ್ಲಿ ಅನೇಕ ಜಲವಾಸಿಗಳಾದ ಪ್ರಾಣಿಗಳು ನೂರುಗಟ್ಟಲೆ ಸಾವಿರ ಗಟ್ಟಲೆಯಾಗಿ ಆ ಪರ್ವತದ ಭಾರದಿಂದ ಜಜ್ಜಿಹೋಗಿ ಪರಲೋಕವನ್ನೈದಿದುವು.

೨೮. ದೇವಿಯೆ! ಶ್ರೀಮಹಾವಿಷ್ಣುವಿನ ಪ್ರಯತ್ನದಿಂದ ಇಂತು ಸಮುದ್ರ ಮಥನವು ನಡೆಯುತ್ತಿರಲು ಪ್ರಸನ್ನರೂಪನೂ, ಶೀತಕಿರಣನೂ, ಪ್ರಕಾಶ ಸಹಿತನೂ ಆದ ಚಂದ್ರನು ಮೇಲಕ್ಕೆ ಬಂದನು.

೨೯. ಮಂಗಳೆಯೆ! ಆ ಚಂದ್ರನನ್ನಾಶ್ರಯಿಸಿಯೇ ದೇವತೆಗಳೂ, ಮನುಷ್ಯರೂ, ಪಿತೃಗಳೂ, ವೃಕ್ಷಗಳೂ, ಓಷಧಿವನಸ್ಪತಿಗಳೂ ಜೀವಸತ್ತ್ವವುಳ್ಳವರಾಗಿರುವರು.

ಸಮುತ್ಪನ್ನಮಥೋ ದೃಷ್ಟ್ವಾ ಭಗವಾನ್ಪ್ರಾಹ ಕೇಶವಃ ।
ಪಾಲಯೇಮಾಃ ಪ್ರಜಾಶ್ಚಂದ್ರ ತ್ವಂ ಜ್ಯೇಷ್ಠೋ ಜಗತೋ ಭವ ॥ ೩೦ ॥
ಇತ್ಯುಕ್ತೋ ವಾಸುದೇವೇನ ಪ್ರಜಾಃ ಪಾಲಯಿತುಂ ಶಶೀ ।
ಪೂರ್ವಂ ಸೋಮೋಽಪಿ ಯೋ ನಷ್ಟಃ ಪ್ರವಿಷ್ಟೋ ಗಹನಂ ವನಂ ॥೩೧॥
ತಸ್ಯಾಗ್ರೇ ನಾರದಃ ಸರ್ವಂ ಕಥಯಾಮಾಸ ಸತ್ವರಂ ।
ದೇವರ್ಷೇರ್ವಚನಂ ಶ್ರುತ್ವಾ ನಾರದಸ್ಯ ಮಹಾತ್ಮನಃ ॥ ೩೨ ॥
ಪೀಡಿತೋ ದಕ್ಷಶಾಪೇನ ಸೋಮೋಽಪ್ಯಂತರ್ಹಿತಸ್ತದಾ ।
ಜಗಾಮ ಶರಣಂ ದೇವಿ ಬ್ರಹ್ಮಾಣಂ ಪರಮೇಷ್ಠಿನಂ ॥ ೩೩ ॥
ತತ್ರ ಗತ್ವಾ ಯಥಾ ಶಾಪಂ ಕಥಯಾಮಾಸ ಗದ್ಗದಃ ।
ಪೂರ್ವಚಂದ್ರವಚಃ ಶ್ರುತ್ವಾ ಬ್ರಹ್ಮಾ ವಚನಮಬ್ರವೀತ್ ॥ ೩೪ ॥
ಅಯಂ ಮೇ ಪ್ರಥಮಃ ಪುತ್ರಃ ಪೀಡಿತಃ ಶಶಿನಾ ಭೃಶಂ ।
ನವೇನೋದಧಿಜಾತೇನ ಕಿಂ ಮಯಾ ಕ್ರಿಯತೇ ಪುನಃ ॥ ೩೫ ॥
ವಿಷ್ಣುನಾ ಚ ಬಲಂ ದತ್ತಮಸ್ಮೈ ಚಂದ್ರಮಸೇ ದೃಢಂ ।
ತಸ್ಮಾದ್ಯಾಸ್ಯಾಮಿ ತತ್ರಾಹಂ ಯತ್ರ ದೇವೋ ಜನಾರ್ದನಃ ॥ ೩೬ ॥

---

೩೦. ಇಂತು ಸಮುದ್ರದಿಂದ ಸಮುದ್ಭವಿಸಿದ ಚಂದ್ರನಿಗೆ ಮಹಾವಿಷ್ಣುವು ಹೇಳಿದನು. "ಚಂದ್ರನೆ! ಪ್ರಜೆಗಳನ್ನೆಲ್ಲ ಪಾಲಿಸುತ್ತ ನೀನು ಲೋಕದಲ್ಲಿ ಜ್ಯೇಷ್ಠನೆಂದೆನಿಸು."

೩೧. ವಾಸುದೇವನ ಈ ಆಜ್ಞೆಯಿಂದ ಚಂದ್ರನು ಪ್ರಜಾಪಾಲನಕಾರ್ಯದಲ್ಲಿ ನಿರತನಾದನು. ಹಿಂದೆ ಅಂತರ್ಹಿತನಾದ ಸೋಮನೂ ಸಹ ಒಂದು ಕಾಡಿನಲ್ಲಿ ಸಂಚರಿಸುತ್ತಿದ್ದನು.

೩೨–೩೩. ಆತನ ಇದಿರಿನಲ್ಲಿ ನಾರದಮುನಿಯು ನಡೆದುದೆಲ್ಲವನ್ನೂ ಸಂಭ್ರಮದಿಂದ ವಿವರಿಸಿ ಹೇಳಿದನು. ದೇವರ್ಷಿಯೂ, ಮಹಾತ್ಮನೂ ಆದ ನಾರದನ ಮಾತುಗಳನ್ನು ಕೇಳಿ ದಕ್ಷಶಾಪದಿಂದ ಪೀಡಿತನಾಗಿ ಅಶರೀರನಾಗಿದ್ದ ಚಂದ್ರನು ಪರಮೇಷ್ಠಿಯೆನಿಸಿದ ಬ್ರಹ್ಮದೇವನನ್ನು ಶರಣುಹೊಂದಿದನು.

೩೪. ಆತನ ಬಳಿಯಲ್ಲಿ ಹೋಗಿ ಗದ್ಗದಧ್ವನಿಯಿಂದ ತನಗೆ ಶಾಪವು ಸಂಭವಿಸಿದ ಪ್ರಕಾರವನ್ನು ಹೇಳಿಕೊಂಡನು. ಮೊದಲನೆಯ ಚಂದ್ರನ ಮಾತನ್ನು ಕೇಳಿ ಬ್ರಹ್ಮದೇವನಿಂತೆಂದನು.

೩೫. "ಈ ನನ್ನ ಮೊದಲನೆಯ ಪುತ್ರನು ಹೊಸದಾಗಿ ಸಮುದ್ರದಿಂದ ಹುಟ್ಟಿ ಬಂದ ಚಂದ್ರನಿಂದ ಕಷ್ಟಕ್ಕೊಳಗಾಗಿರುವನು. ಈಗ ನಾನು ಮಾಡಬೇಕಾದ ಕಾರ್ಯವೇನು?

೩೬. ಮಹಾವಿಷ್ಣುವು ಇವನಿಗೆ ನಿಶ್ಚಯವಾಗಿಯೂ ಸಾಮರ್ಥ್ಯವನ್ನು

ತಂ ದೃಷ್ಟ್ವಾ ಮಧುಹಂತಾರಂ ಬ್ರಹ್ಮಾ ವಿಷ್ಣುಮುವಾಚ ಹ ।
ತ್ವದಾದೇಶಾಜ್ಜಗನ್ನಾಥ ಏಷ ಚಂದ್ರಃ ಕೃತೋ ಮಯಾ ।
ಸ ಚಾಽಯಂ ಪೀಡಿತೋ ದೇವ ಶಶಾಂಕೇನ ನವೇನ ವೈ ॥ ೩೭ ॥
ಇತ್ಯುಕ್ತೋ ಬ್ರಹ್ಮಣಾ ದೇವಿ ವಾಸುದೇವೋ ಜಗತ್ಪತಿಃ ।
ವೃತ್ತಾಂತಂ ಕಥಯಾಮಾಸ ಬ್ರಹ್ಮಾಽಗ್ರೇ ಚ ಪುನಃ ಪುನಃ ॥ ೩೮ ॥
ಬ್ರಹ್ಮಾಽಪಿ ಪೂರ್ವಚಂದ್ರಾರ್ಥೇ ವಿಷ್ಣುಂ ಲೋಕನಮಸ್ಕೃತಂ ।
ತುಷ್ಟಾವ ಪ್ರಣತೋ ಭೂತ್ವಾ ಪ್ರಾಂಜಲಿಃ ಪ್ರಣತಃ ಸ್ಥಿತಃ ॥ ೩೯ ॥
ನಮಃ ಕೃಷ್ಣ ನಮೋ ವಿಷ್ಣೋ ನಮೋ ಜಿಷ್ಣೋ ನಮೋನಮಃ ।
ನಮೋ ವಾಮನ ಗೋವಿಂದ ನಮೋಽನಂತ ನಮೋಽಚ್ಯುತ ॥ ೪೦ ॥

ಜಯಸ್ವ ಗೋವಿಂದ ಮಹಾಽನುಭಾವ
ಜಯಸ್ವ ವಿಷ್ಣೋ ಜಯ ಪದ್ಮನಾಭ ।
ಜಯಸ್ವ ಸರ್ವಾದ್ಯ ಗದಾಧರೇಶ
ಜಯಸ್ವ ವಿಶ್ವೇಶ್ವರ ವಿಶ್ವಮೂರ್ತೇ ॥ ೪೧ ॥

---

ಕೊಟ್ಟಿರುವನು. ಆದುದರಿಂದ ದೇವದೇವನಾದ ಶ್ರೀಮನ್ನಾರಾಯಣನಿರುವಲ್ಲಿಗೆ ನಾನೇ ಹೋಗುವೆನು.''

೩೭. ಇಂತೆಂದು ಮಧುಮರ್ದನನಾದ ಮಹಾವಿಷ್ಣುವನ್ನು ಕಂಡು ಹೇಳತೊಡಗಿದನು. ''ಜಗನ್ನಾಥನೆ! ನಿನ್ನ ಅಪ್ಪಣೆಯಂತೆಯೇ ನಾನು ಈ ಚಂದ್ರನನ್ನು ನಿರ್ಮಿಸಿದೆನು. ಆದರೆ ಈ ಹೊಸ ಚಂದ್ರನಿಂದ ಈತನು ಪೀಡೆಗೊಳಗಾಗಿರುವನು.''

೩೮. ಎಲೌ ದೇವಿಯೆ! ಬ್ರಹ್ಮದೇವನ ಈ ಮಾತುಗಳನ್ನು ಕೇಳಿ ಲೋಕೇಶ್ವರನಾದ ವಾಸುದೇವನು ಆತನೆದಿರಿನಲ್ಲಿ ನಡೆದುದೆಲ್ಲವನ್ನೂ ಮತ್ತೆ ವಿಸ್ತಾರವಾಗಿ ತಿಳಿಸಿದನು.

೩೯. ಬ್ರಹ್ಮದೇವನೂ ಮೊದಲನೆಯ ಚಂದ್ರನಿಗಾಗಿ ಲೋಕವಂದಿತನಾದ ಮಹಾವಿಷ್ಣುವಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ಅಂಜಲಿಬಂಧದೊಡನೆ ನಿಂತು ಸ್ತೋತ್ರಮಾಡಿದನು.

೪೦. ''ಕೃಷ್ಣವರ್ಣದವನೂ, ಸರ್ವವ್ಯಾಪಿಯೂ, ಜಯಶಾಲಿಯೂ, ವಾಮನನೂ, ಗೋವಿಂದನೂ, ನಾಶರಹಿತನೂ, ಅನಂತನೂ ಆದ ನಿನ್ನನ್ನು ಪುನಃ ಪುನಃ ನಮಸ್ಕರಿಸುವೆನು.

೪೧. ಗೋವಿಂದನೆ! ಮಹಾನುಭಾವನೆ! ಮಹಾವಿಷ್ಣುವೆ! ಪದ್ಮನಾಭನೆ! ಸಕಲಕ್ಕೂ ಆದಿಯಾದವನೆ! ಗದಾಧಾರಿಯೆ! ಸರ್ವೇಶ್ವರನೆ! ಸರ್ವನಿಯಾಮಕನೆ! ವಿಶ್ವಸ್ವರೂಪಿಯೆ! ನಿನಗೆ ಜಯವಾಗಲಿ.''

ಏವಂ ಸ್ತುತಸ್ತದಾ ದೇವಿ ಬ್ರಹ್ಮಣಾ ಲೋಕಕಾರಿಣಾ ।
ಸಮೀಪಸ್ಥಂ ಸಮಾಲೋಕ್ಯ ಸೋಮಂ ವಚನಮಬ್ರವೀತ್ ॥ ೪೨ ॥
ಗಚ್ಛ ಸೋಮ ಮಮಾದೇಶಾನ್ಮಹಾಕಾಲವನೋತ್ತಮೇ ।
ಉತ್ತರೇ ಮುಕ್ತಿಲಿಂಗಸ್ಯ ಲಿಂಗಂ ಕಾಂತಿಕರಂ ಪರಂ ।
ತಮಾರಾಧಯ ಯತ್ನೇನ ಸ ತೇ ದೇಹಂ ಪ್ರದಾಸ್ಯತಿ ॥ ೪೩ ॥
ಇತ್ಯುಕ್ತೋ ವಾಸುದೇವೇನ ಬ್ರಹ್ಮಣಾ ಚ ಪುನಃ ಪುನಃ ।
ಆಜಗಾಮ ಮಹಾದೇವಿ ಮಹಾಕಾಲವನೋತ್ತಮೇ ।
ಲಿಂಗಂ ದೃಷ್ಟ್ವಾ ಚ ತುಷ್ಟಾವ ಸ್ತೋತ್ರೇಣಾನೇನ ಸುವ್ರತೇ ॥ ೪೪ ॥

ಚಂದ್ರ ಉವಾಚ :—

ನಮೋ ದೇವಾಧಿದೇವಾಯ ತ್ರಿನೇತ್ರಾಯ ಮಹಾತ್ಮನೇ ।
ರಕ್ತಪಿಂಗಲನೇತ್ರಾಯ ಜಟಾಮುಕುಟಧಾರಿಣೇ ॥ ೪೫ ॥
ಭೂತವೇತಾಲಜುಷ್ಟಾಯ ಮಹಾದೇವಾಯ ಶೂಲಿನೇ ।
ಭೀಮಾಟ್ಟಹಾಸಯುಕ್ತಾಯ ಕಪರ್ದಿಸ್ಥಾಣವೇ ನಮಃ ॥ ೪೬ ॥

---

೪೨. ದೇವಿಯೆ! ಲೋಕಸೃಷ್ಟಿಕರ್ತನಾದ ಬ್ರಹ್ಮದೇವನ ಈ ಸ್ತೋತ್ರದಿಂದ ಪ್ರೀತನಾದ ಮಹಾವಿಷ್ಣುವು ಸಮೀಪದಲ್ಲಿ ನಿಂತಿದ್ದ ಚಂದ್ರನನ್ನು ಕುರಿತು ಇಂತೆಂದನು.

೪೩. "ಸೋಮನೆ! ನನ್ನ ಆದೇಶವನ್ನು ಮನ್ನಿಸಿ ನೀನೀಗ ಉತ್ತಮವಾದ ಮಹಾಕಾಲವನಕ್ಕೆ ಹೊರಡು. ಅಲ್ಲಿ ಮುಕ್ತೀಶ್ವರಲಿಂಗಕ್ಕೆ ಉತ್ತರದಲ್ಲಿ ಕಾಂತಿದಾಯಕವೂ ಸರ್ವೋತ್ತಮವೂ ಆದ ಲಿಂಗವೊಂದಿರುವುದು. ಪ್ರಯತ್ನದಿಂದ ಆ ಲಿಂಗವನ್ನು ಪೂಜಿಸಲು ಅದು ನಿನಗೆ ದೇಹವನ್ನು ಅನುಗ್ರಹಿಸುವುದು.

೪೪. ಸುವ್ರತೆಯಾದ ಮಹೇಶ್ವರಿಯೆ! ಮಹಾವಿಷ್ಣುವೂ, ಬ್ರಹ್ಮದೇವನೂ ಪುನಃ ಪುನಃ ಕೊಟ್ಟ ಈ ಸಂದೇಶವನ್ನು ಕೇಳಿ ಚಂದ್ರನು ಮಹಾಕಾಲವನವಾದ ಉತ್ತಮ ಕ್ಷೇತ್ರವನ್ನು ಸೇರಿ ಆ ನಿರ್ದಿಷ್ಟಲಿಂಗವನ್ನು ಮುಂದೆ ಹೇಳುವ ಸ್ತೋತ್ರದಿಂದ ಹೊಗಳಿದನು.

೪೫. ಚಂದ್ರನು ಹೇಳುತ್ತಾನೆ:—ದೇವಾಧಿದೇವನೂ, ಮುಕ್ಕಣ್ಣನೂ, ಮಹಾತ್ಮನೂ, ರಕ್ತವರ್ಣವಿಶಿಷ್ಟಗಳಾದ ನೇತ್ರಗಳುಳ್ಳವನೂ, ಜಡೆಗಳ ಕಿರೀಟವನ್ನು ಧರಿಸಿದವನೂ ಆದ ನಿನ್ನನ್ನು ನಮಿಸುವೆನು.

೪೬. ಭೂತಭೇತಾಳಗಳೇ ಪರಿವಾರವಾಗಿರುವವನೂ, ಮಹಾದೇವನೂ, ಶೂಲಾಯುಧಧಾರಿಯೂ, ಭಯಂಕರವಾದ ಅಟ್ಟಹಾಸದಿಂದ ನಗುತ್ತಿರುವವನೂ, ಜಡೆಮುಡಿಯುವನೂ, ಶಶ್ವದೇಕಪ್ರಕಾರನೂ ಆದ ನಿನಗೆ ನಮಸ್ಕಾರವನ್ನು ಮಾಡುವೆನು.

ಪೂಷ್ಣೋ ದಂತವಿನಾಶಾಯ ತಥಾಂಧಕವಿನಾಶಿನೇ ।
ಕೈಲಾಸವರವಾಸಾಯ ಸರ್ವದೇವಾಯ ತೇ ನಮಃ ॥ ೪೭ ॥
ವಿಕರಾಲೋರ್ಧ್ವಕೇಶಾಯ ಭೈರವಾಯ ನಮೋನಮಃ ।
ಅಗ್ನಿಜ್ವಾಲಾಕರಾಲಾಯ ಕಲಿಧರ್ಮವಿನಾಶಿನೇ ॥ ೪೮ ॥
ತಥಾ ದಾರುವನಧ್ವಂಸಕಾರಿಣೇ ತಿಗ್ಮಶೂಲಿನೇ ।
ಕೃತಕಂಕಣಭೋಗೀಂದ್ರ ಕಂಠಸೂತ್ರಾಯ ಶೂಲಿನೇ ॥ ೪೯ ॥
ಪ್ರಚಂಡದಂಡಹಸ್ತಾಯ ವಡವಾಽಗ್ನಿಮುಖಾಯ ಚ ।
ವೇದಾಂತವೇದ್ಯಾಯ ನಮೋ ಯಜ್ಞಮೂರ್ತೇ ನಮೋನಮಃ ॥ ೫೦ ॥
ದಕ್ಷಯಜ್ಞವಿನಾಶಾಯ ಜಗದ್ಭಯಕರಾಯ ಚ ।
ವಿಶ್ವೇಶ್ವರಾಯ ದೇವಾಯ ಸ್ಥೂಲಸೂಕ್ಷ್ಮಾಯ ಶಂಭವೇ ।
ಕಪರ್ದಿನೇ ಕಪಾಲಾಯ ಸರ್ವದೇವಾಯ ತೇ ನಮಃ ॥ ೫೧ ॥
ಏವಂ ಸ್ತುತಸ್ತದಾ ದೇವಿ ಚಂದ್ರೇಣಾಽಂತರ್ಹಿತೇನ ಚ ।
ಲಿಂಗರೂಪೀ ಮಹಾದೇವಸ್ತುಷ್ಟೋ ವಾಕ್ಯಮಥಾಽಬ್ರವೀತ್ ॥ ೫೨ ॥

---

೪೭. ಪೂಷನಿಗೆ ಹಲ್ಲುಗಳನ್ನು ಕಳೆದವನೂ, ಅಂಧಕಾಸುರಸಂಹಾರಿಯೂ, ಉತ್ತಮವಾದ ಕೈಲಾಸದಲ್ಲಿ ನೆಲಸಿರುವವನೂ, ಸರ್ವರಲ್ಲಿಯೂ ಆತ್ಮನಾಗಿ ಬೆಳಗುವವನೂ ಆದ ನಿನಗೆ ನಮಸ್ಕಾರವು.

೪೮. ವಿಶಾಲವಾಗಿ ಕೆದರಿ ನಿಂತಿರುವ ತಲೆಗೂದಲಿನವನೂ, ಭಯಂಕರನೂ, ಹಣೆಗಣ್ಣಿನ ಬೆಂಕಿಯಿಂದ ಕರಾಳನೂ, ಕಲಿಯುಗಧರ್ಮದಲ್ಲಿ ನಿಂತು ಪ್ರಪಂಚವನ್ನು ನಾಶಮಾಡುವವನೂ ಆದ ನಿನಗೆ ನಮಸ್ಕಾರವು.

೪೯. ದಾರುವನವನ್ನು ಧ್ವಂಸಮಾಡಿದವನೂ, ತೀಕ್ಷ್ಣವಾದ ಶೂಲಾಯುಧವನ್ನು ಹಿಡಿದವನೂ, ನಾಗೇಂದ್ರರನ್ನೇ ಕೈಕಡಗಗಳನ್ನಾಗಿಯೂ, ಕಂಠದಲ್ಲಿ ಹಾರವನ್ನಾಗಿಯೂ ತಳೆದವನೂ ಆದ ನಿನಗೆ ನಮಸ್ಕಾರವಿರಲಿ.

೫೦. ಪ್ರಚಂಡವಾದ ದಂಡವನ್ನು ಕೈಯಲ್ಲಿ ಹಿಡಿದವನೂ, ಬಡಬಾಗ್ನಿಯನ್ನು ಮುಖದಲ್ಲಿ ಅಡಗಿಸಿರುವವನೂ, ವೇದಾಂತ ವಾಕ್ಯಗಳ ಲಕ್ಷ್ಯಾರ್ಥನೂ, ಯಜ್ಞಮೂರ್ತಿಯೂ ಆದ ನಿನಗೆ ನಮಸ್ಕಾರವು.

೫೧. ದಕ್ಷನ ಯಜ್ಞವನ್ನು ನಾಶಗೊಳಿಸಿದವನೂ, ಜಗತ್ತನ್ನೆಲ್ಲ ಭಯದಲ್ಲಿರಿಸಿರುವವನೂ, ಸರ್ವಸ್ವಾಮಿಯೂ, ಅಂತಃಪ್ರಕಾಶನೂ, ಸ್ಥೂಲಸೂಕ್ಷ್ಮರೂಪಗಳನ್ನು ಧರಿಸಿದವನೂ, ಸುಖಕಾರಕನೂ, ಜಟಾಜೂಟಾಲಂಕೃತನೂ, ಭೀಕರನೂ, ದೇವಾಧಿದೇವನೂ ಆದ ನಿನಗೆ ನಮಸ್ಕಾರವು.

೫೨. ಪಾರ್ವತಿಯೆ! ಇಂತು ಅಶರೀರಿಯಾದ ಚಂದ್ರನು ಸ್ತೋತ್ರಮಾಡುತ್ತಿರಲು ಲಿಂಗರೂಪಿಯಾದ ಮಹೇಶ್ವರನು ಸಂತುಷ್ಟನಾಗಿ ಇಂತೆಂದು ಹೇಳತೊಡಗಿದನು.

ಸ್ತೋತ್ರೇಣಾನೇನ ತುಷ್ಟೋಽಸ್ಮಿ ಬ್ರೂಹಿ ಸೋಮ ಕಿಮಿಚ್ಛಸಿ ।
ಯತ್ತೇಽಭಿಲಷಿತಂ ಸರ್ವಂ ತತ್ಕರ್ತಾಽಸ್ಮಿ ನ ಸಂಶಯಃ ॥ ೫೩ ॥

ಸೋಮ ಉವಾಚ:—

ಯದಿ ತ್ವಹಮನುಗ್ರಾಹ್ಯೋ ಯದಿ ತುಷ್ಟೋಽಸಿ ಮೇ ಪ್ರಭೋ ।
ಕಾಂತ್ಯಾ ದೀಪ್ತ್ಯಾ ತಥಾ ಮೂರ್ತ್ಯಾ ತಥಾ ರೂಪೇಣ ಚ ಪ್ರಭೋ ।
ಸ್ವಪದಂ ಕರ್ತುಮಿಚ್ಛಾಮಿ ತ್ವತ್ಪ್ರಸಾದಾನ್ಮಹೇಶ್ವರ ॥ ೫೪ ॥
ಏವಮಸ್ತ್ವಿತಿ ಲಿಂಗೇನ ತತ್ಕ್ಷಣಾದ್ರಜನೀಚರ ।
ದ್ವಿಜರಾಜೇನ ತತ್ಪ್ರಾಪ್ತಂ ಲಿಂಗಸ್ಯಾಽಸ್ಯ ಪ್ರಸಾದತಃ ॥ ೫೫ ॥
ಸೋಮೇನಾರಾಧಿತೋ ಯಸ್ಮಾದ್ದೇವದೇವೋ ಮಹೇಶ್ವರಿ ।
ತೇನ ಸೋಮೇಶ್ವರೋ ನಾಮ ವಿಖ್ಯಾತೋ ಭುವನತ್ರಯೇ ॥ ೫೬ ॥
ಯೇಽರ್ಚಯಂತಿ ಮಹಾದೇವಿ ದೇವಂ ಸೋಮೇಶ್ವರಂ ಪರಂ ।
ಕೃತಪುಣ್ಯಾ ನರಾ ಮರ್ತ್ಯಾಸ್ತೇ ಯಾಂತಿ ಪರಮಂ ಪದಂ ॥ ೫೭ ॥
ಯಃ ಪಶ್ಯತಿ ನರೋ ಭಕ್ತ್ಯಾ ಲಿಂಗಂ ಸೋಮೇಶ್ವರಂ ಪ್ರಿಯೇ ।
ವಿಮುಕ್ತೋ ಜನ್ಮದುಃಖಾದ್ಯೈರ್ಲೀಯತೇ ಮಯಿ ಮಾನವಃ ॥ ೫೮ ॥

---

೫೩. "ಚಂದ್ರನೆ! ನಿನ್ನ ಈ ಸ್ತೋತ್ರದಿಂದ ಸಂತೋಷಗೊಂಡಿರುವೆನು. ನಿನ್ನ ಅಭಿಲಾಷೆಯೇನೆಂಬುದನ್ನು ಹೇಳು. ನಿನ್ನ ಮನಸ್ಸಿನಲ್ಲಿರುವುದೆಲ್ಲವನ್ನೂ ಮಾಡಿಕೊಡುವೆನು, ಸಂದೇಹವಿಲ್ಲ."

೫೪. ಚಂದ್ರನು ಹೇಳುತ್ತಾನೆ:—ಓ ನನ್ನ ನಾಥನೆ! ನಾನು ನಿನ್ನ ಅನುಗ್ರಹಕ್ಕೆ ಪಾತ್ರನಾಗಿ ನನ್ನಲ್ಲಿ ನೀನು ಸಂತುಷ್ಟನಾಗಿರುವೆಯಾದರೆ ನನ್ನ ಸ್ಥಾನವನ್ನು (ಸ್ವರೂಪವನ್ನು) ಕಾಂತಿಯಿಂದಲೂ, ತೇಜಸ್ಸಿನಿಂದಲೂ, ರೂಪದಿಂದಲೂ, ಕೂಡಿದುದನ್ನಾಗಿ ಮಾಡಲೆಳಸುವೆನು. ಮಹೇಶ್ವರನೆ! ನಿನ್ನ ಅನುಗ್ರಹದಿಂದಲೇ ಈ ಕಾರ್ಯವಾಗಬೇಕಾಗಿರುವುದು.

೫೫. "ಎಲೈ ರಾತ್ರಿಂಚರನೆ! ಹಾಗೆಯೇ ಆಗಲಿ" ಎಂದು ಆ ಲಿಂಗವು ಹೇಳಿದ ಕ್ಷಣದಲ್ಲಿಯೇ ಅದರ ಪ್ರಸಾದದ ಫಲವಾಗಿ ಚಂದ್ರನು ಕೇಳಿದುದೆಲ್ಲವನ್ನೂ ಪಡೆಯುವವನಾದನು.

೫೬. ಮಹೇಶ್ವರಿಯೆ! ಆ ಮಹಾಲಿಂಗವು ಸೋಮನಿಂದ ಪೂಜಿಸಲ್ಪಟ್ಟುದರಿಂದಲೇ ಸೋಮೇಶ್ವರನೆಂಬ ಹೆಸರಿನಿಂದ ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವುದು.

೫೭. ಮಹಾದೇವಿಯೆ! ಯಾರು ಹಿಂದೆ ಮಾಡಿದ ಅನೇಕ ಪುಣ್ಯಗಳ ಫಲವಾಗಿ ಉತ್ತಮವಾದ ಈ ಸೋಮೇಶ್ವರಲಿಂಗವನ್ನು ಪೂಜಿಸುವರೋ ಅವರು ಪರಮಪದವನ್ನು ಪಡೆಯುವರು.

೫೮. ಪ್ರಿಯಳೆ! ಯಾವ ಮಾನವನು ಭಕ್ತಿಯಿಂದ ಈ ಸೋಮೇಶ್ವರ

ತೇ ನರಾಃ ಪಶವೋ ಲೋಕೇ ಕಿಂ ತೇಷಾಂ ಜೀವಿತೇ ಫಲಂ ।
ಯೈಶ್ಚ ಸೋಮೇಶ್ವರೋ ದೇವೋ ನ ದೃಷ್ಟೋ ನ ಚ ಪೂಜಿತಃ ॥ ೫೯ ॥
ಸಂಸಾರೇಽಸ್ಮಿನ್ಮಹಾಘೋರೇ ಜನ್ಮರೋಗಭಯಾಕುಲೇ ।
ಏಕಃ ಸೋಮೇಶ್ವರಃ ಪೂಜ್ಯಃ ಕುಷ್ಠರೋಗವಿನಾಶನಃ ॥ ೬೦ ॥
ಸ ಏವ ಸುಕೃತೀ ಲೋಕೇ ಕುಲಂ ತೇನಾಽಭ್ಯಲಂಕೃತಂ ।
ಆಧಾರಃ ಸರ್ವಲೋಕಾನಾಂ ಯೇನ ಸೋಮೇಶ್ವರೋಽರ್ಚಿತಃ ॥ ೬೧ ॥
ಸಕೃದಭ್ಯರ್ಚ್ಯ ಸೋಮೇಶಂ ಬಿಲ್ವಪತ್ರೇಣ ಮಾನವಃ ।
ಮುಕ್ತೋ ಭೋಗೀ ನಿರಾತಂಕೋ ಮಮ ಲೋಕೇ ವಸೇಚ್ಚಿರಂ ॥ ೬೨ ॥
ಕಾಂಚನೈಃ ಕುಸುಮೈರ್ದೇವಿ ಲಿಂಗಂ ಸೋಮೇಶ್ವರಂ ಪ್ರಿಯೇ ।
ಪೂಜಯಂತಿ ನರಾ ಭಕ್ತ್ಯಾ ತೇ ಯಾಂತಿ ಪರಮಾಂ ಗತಿಂ ॥ ೬೩ ॥

---

ಲಿಂಗದ ದರ್ಶನವನ್ನು ಮಾಡುವನೊ, ಅವನು ಜನನ ಮರಣಗಳೇ ಮುಂತಾದ ಸಮಸ್ತ ದುಃಖಗಳನ್ನೂ ಕಳೆದುಕೊಂಡು ನನ್ನಲ್ಲಿ ಐಕ್ಯವನ್ನು ಹೊಂದುವವನಾಗುವನು.

೫೯. ಯಾರು ದೇವದೇವನಾದ ಈ ಸೋಮೇಶ್ವರನನ್ನು ನೋಡಿಲ್ಲವೊ, ಯಾರು ಪೂಜಿಸಿಲ್ಲವೊ, ಆ ಮನುಜರೇ ಲೋಕದಲ್ಲಿ ನಿಜವಾಗಿಯೂ ಪಶುಗಳು. ಅವರು ಬದುಕಿರುವುದರಿಂದ ಫಲವೇನು ?

೬೦. ಮಹಾ ಭಯಂಕರವೂ, ಜನನ ರೋಗಾದಿ ಭಯಗಳಿಂದ ನಿಬಿಡವೂ ಆದ ಈ ಸಂಸಾರದಲ್ಲಿ ಮಾಡಬೇಕಾದ ಕಾರ್ಯವೆಂದರೆ ಕುಷ್ಠರೋಗವನ್ನೂ ನಿವಾರಿಸುವ ಮಹಿಮೆಯುಳ್ಳ ಈ ಸೋಮೇಶ್ವರಲಿಂಗದ ಪೂಜೆಯೊಂದೇ ಆಗಿರುವುದು.

೬೧. ಹದಿನಾಲ್ಕು ಲೋಕಗಳಿಗೂ ಆಧಾರಭೂತವಾಗಿರುವ ಈ ಸೋಮೇಶ್ವರನನ್ನು ಯಾವನು ಪೂಜಿಸುವನೊ, ಅವನೇ ಪುಣ್ಯವಂತನು. ಅವನಿಂದ ಕುಲವೆಲ್ಲವೂ ಅಲಂಕೃತವಾಗುವುದು.

೬೨. ಈ ಸೋಮೇಶ್ವರನನ್ನು ಬಿಲ್ವದಳಗಳಿಂದ ಒಂದು ಸಲ ಪೂಜಿಸುವುದರಿಂದಲೇ ಮನುಷ್ಯನು ಸಂಸಾರದಿಂದ ಮುಕ್ತನಾಗಿ ಇಹದಲ್ಲಿ ನಿಷ್ಪ್ರತ್ಯೂಹವಾಗಿ ಸಕಲ ಭೋಗಗಳನ್ನೂ ಅನುಭವಿಸಿ ಕಡೆಯಲ್ಲಿ ಬಹಳ ಕಾಲದವರೆಗೂ ನನ್ನ ಲೋಕದಲ್ಲಿ ವಾಸಿಸುವನು.

೬೩. ದೇವಿಯೆ! ಯಾವ ನರರು ಸೋಮೇಶ್ವರನಿಗೆ ಭಕ್ತಿಭಾವದಿಂದ ಚಿನ್ನದ ಹೂಗಳನ್ನು ಪೂಜೆಮಾಡುವರೊ, ಅವರು ಉತ್ತಮವಾದ ಗತಿಯನ್ನು ಪಡೆಯುವರು.

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ಸೋಮೇಶ್ವರಸ್ಯ ದೇವಸ್ಯ ಶೃಣುಷ್ವಾನರಕೇಶ್ವರಂ ॥ ೬೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಸೋಮೇಶ್ವರಮಾಹಾತ್ಮ್ಯವರ್ಣನಂ" ನಾಮ ಷಡ್ವಿಂಶೋಽಧ್ಯಾಯಃ**

---

೬೪. ಪಾರ್ವತಿಯೆ! ಇಂತು ನಿನಗೆ ಸೋಮೇಶ್ವರಮಹಾದೇವನ ಪಾಪ ಪರಿಹಾರಕವಾದ ಪ್ರಭಾವದ ಚರಿತ್ರೆಯನ್ನು ಹೇಳಿದೆನು. ಇನ್ನು ಅನರಕೇಶ್ವರನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಸೋಮೇಶ್ವರಮಹಿಮಾನುವರ್ಣನ"ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತವಿಂಶೋಽಧ್ಯಾಯಃ

## ಅನರಕೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

**ಸಪ್ತವಿಂಶತಿಮಂ ದೇವ್ಯನರಕೇಶ್ವರಸಂಜ್ಞಕಂ ।**
**ಯಸ್ಯ ದರ್ಶನಮಾತ್ರೇಣ ಸ್ವಪ್ನೇಽಪಿ ನರಕಃ ಕುತಃ ॥ ೧ ॥**
**ಪುರಾ ಕಲಿಯುಗೇ ದೇವಿ ಕಲ್ಪೇ ವಾರಾಹಸಂಜ್ಞಕೇ ।**
**ಕಲುಷಂ ಕಾಲಮಾಸಾದ್ಯ ಸತ್ಯೇ ಚ ಪ್ರಲಯಂ ಗತೇ ॥ ೨ ॥**
**ನಿರ್ಮರ್ಯಾದಾ ನಿರಾಧಾರಾ ನಿರೌಕಾ ನಾಸ್ತಿಕಾ ಜನಾಃ ।**
**ವರ್ಣಾಶ್ರಮಾಶ್ಚ ಸಂಜಾತಾ ವಂಚಯಂತಿ ಪರಸ್ಪರಂ ॥ ೩ ॥**
**ನಾಽರ್ಚಯಂತಿ ಸುರಾನ್ವಿಪ್ರಾಃ ಕರ್ಮ ಕುರ್ವಂತಿ ಕುತ್ಸಿತಂ ।**
**ಲೋಭಮೋಹಪರಾ ಭೂತ್ವಾ ಕಾಮಾಸಕ್ತಾಶ್ಚ ಮಾನವಾಃ ॥ ೪ ॥**
**ವೈರಬದ್ಧಾಶ್ಚ ಸಂಜಾತಾಃ ಪರಸ್ಪರವಧೇ ರತಾಃ ।**
**ನಿವೃತ್ತಯಜ್ಞಸ್ವಾಧ್ಯಾಯಾ ಪಿಂಡೋದಕವಿವರ್ಜಿತಾಃ ॥ ೫ ॥**

---

### ಕನ್ನಡದ ಅನುವಾದ

#### ಅನರಕೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಇಪ್ಪತ್ತೇಳನೆಯ ಮಹಾಲಿಂಗವೇ ಅನರಕೇಶ್ವರವು. ಇದನ್ನು ನೋಡುವ ಮನುಷ್ಯನಿಗೆ ಸ್ವಪ್ನದಲ್ಲಿಯೂ ನರಕದರ್ಶನವೆಲ್ಲಿಯದು?

೨. ಶ್ವೇತವರಾಹಕಲ್ಪದ ಹಿಂದಿನ ಮಹಾಯುಗದ ಕಲಿಕಾಲದಲ್ಲಿ ನೀಚ ಕೃತ್ಯಪ್ರಧಾನವಾದ ಕಾಲದ ಮಹಿಮೆಯಿಂದ ಸತ್ಯವೆಲ್ಲವೂ ನಾಶವನ್ನು ಹೊಂದಿತು.

೩. ಜನರೆಲ್ಲರೂ ಕಟ್ಟಳೆಗಳನ್ನು ಮೀರಿ, ಒಬ್ಬ ರಾಜನ ಅಧೀನಕ್ಕೊಳಪಡದೆ, ಮನೆಮಾರುಗಳಿಲ್ಲದವರೂ, ನಾಸ್ತಿಕರೂ ಆಗಿದ್ದರು. ವರ್ಣಾಶ್ರಮ ಧರ್ಮಗಳನ್ನು ಮೀರಿ ಪರಸ್ಪರ ವಂಚನೆಯಲ್ಲಿಯೇ ತತ್ಪರರಾಗಿದ್ದರು.

೪. ಬ್ರಾಹ್ಮಣರು ದೇವತೆಗಳನ್ನು ಪೂಜಿಸುತ್ತಿರಲಿಲ್ಲ. ನಿಂದ್ಯಕರ್ಮಗಳನ್ನೇ ಮಾಡುತ್ತಿದ್ದರು. ಜನರೆಲ್ಲರೂ ಲೋಭಮೋಹಗಳಿಂದ ಅಭಿಭೂತರಾಗಿ ಕಾಮತೃಪ್ತಿಯಲ್ಲಿಯೇ ಕಾಲವನ್ನು ಕಳೆಯುತ್ತಿದ್ದರು.

೫. ಅನ್ಯೋನ್ಯವೈರವನ್ನೇ ಬೆಳೆಸುತ್ತ ಒಬ್ಬರನ್ನೊಬ್ಬರು ಕೊಲ್ಲುವ ಉದ್ಯೋಗದಲ್ಲಿದ್ದರು. ಯಜ್ಞಗಳನ್ನೂ, ವೇದಾಧ್ಯಯನಗಳನ್ನೂ, ಪಿತೃಗಳಿಗೆ ಪಿಂಡೋದಕಗಳನ್ನೂ ತ್ಯಜಿಸಿದರು.

ಬ್ರಾಹ್ಮಣಾಃ ಸರ್ವಭಕ್ಷ್ಯಾಶ್ಚ ಮೃಷಾವಾದಪರಾಯಣಾಃ ।
ಭೂಯಿಷ್ಠಂ ಕೂಟಮಾನೈಶ್ಚ ಪಣ್ಯಂ ವಿಕ್ರೀಣತೇ ತದಾ ॥ ೬ ॥
ದೃಶ್ಯಂತೇ ಷೋಡಶೇ ವರ್ಷೇ ನರಾಃ ಪಲಿತಿನಃ ಪ್ರಿಯೇ ।
ಆಯುಃಕ್ಷಯೋ ಮನುಷ್ಯಾಣಾಂ ಕ್ಷಿಪ್ರಮೇವ ಪ್ರಪದ್ಯತೇ ॥ ೭ ॥
ಏವಂವಿಧಾಃ ಸಮುದ್ಭೂತಾ ನರಾ ನಾರ್ಯಶ್ಚ ಪಾತಕೈಃ ।
ನರಕೇಷು ಪ್ರಪದ್ಯಂತೇ ಕ್ರಮಾತ್ಪಾಪಾನುಸಾರತಃ ॥ ೮ ॥
ಕುಠಾರೈರ್ಭಿನ್ನಮೂರ್ಧಾನಃ ಕ್ರಕಚೈಃ ಪಾಟಿತಾಃ ಪರೇ ।
ಅಗ್ನಿವರ್ಣೈಶ್ಚ ಸಂದಂಶೈರುತ್ಪಾಟಿತವಿಲೋಚನಾಃ ॥ ೯ ॥
ಭಿನ್ನಾಶ್ಚಾಯೋಮಯೈಸ್ತೀಕ್ಷ್ಣೈರಗ್ನಿತಪ್ತೈಶ್ಚ ಕೀಲಕೈಃ ।
ಪೀಡ್ಯಂತೇ ಶೈಲಶಿಖರೈಶ್ಚೂರ್ಣ್ಯಂತೇ ಕ್ರೂರಭೂಧರೈಃ ॥ ೧೦ ॥
ಕ್ಷಿಪ್ಯಂತೇ ತಪ್ತಕುಂಡೇಷು ದಹ್ಯಂತೇ ವಹ್ನಿರಾಶಿಷು ।
ಅಮೇಧ್ಯೇಽಧೋಮುಖಾಶ್ಚಾನ್ಯೇ ಮರ್ದಿತಾ ದಂಡಪಾಣಿನಾ ॥ ೧೧ ॥

---

೬. ಬ್ರಾಹ್ಮಣರು ವಿವೇಚನೆಯಿಲ್ಲದೆ ಅಭಕ್ಷ್ಯಭಕ್ಷಣವನ್ನು ಮಾಡುತ್ತ ಸುಳ್ಳನ್ನು ಹೇಳುವುದರಲ್ಲಿ ನಿರತರಾಗಿ ಬಹುವಾಗಿ ಜನರು ನೆರೆದಿರುವ ಸ್ಥಳಗಳಲ್ಲಿ ವ್ಯಾಪಾರಗಳನ್ನು ಮಾಡುತ್ತಿದ್ದರು.

೭. ಪ್ರಿಯಳೆ! ಜನರಿಗೆ ಹದಿನಾರು ವರ್ಷಗಳಿಗೇ ತಲೆಗೂದಲು ನೆರೆಯುವುದು. ಅಲ್ಪಕಾಲದಲ್ಲಿಯೇ ಮನುಷ್ಯರ ಆಯುಷ್ಯವೂ ಕೊನೆಗಾಣುತ್ತಿದ್ದಿತು.

೮. ಈ ರೀತಿಯಾಗಿ ಪುರುಷರೂ ಸ್ತ್ರೀಯರೂ ಪಾಪಗಳಿಂದ ತುಂಬಿದವರಾಗುವರು. ಮತ್ತು ಕ್ರಮವಾಗಿ ಅವರವರ ಪಾಪಗಳಿಗನುಸಾರವಾದ ನರಕಗಳಲ್ಲಿ ಬೀಳುವರು.

೯. ಕೆಲವರ ತಲೆಗಳು ಗಂಡುಗೊಡಲಿಗಳಿಂದ ಸೀಳಲ್ಪಡುವುವು. ಕೆಲವರು ಗರಗಸಗಳಿಂದ ಕೊಯ್ಯಲ್ಪಡುವರು. ಹಲವರ ಕಣ್ಣುಗಳು ಕೆಂಪಗೆ ಕಾದ ಸಲಾಕೆಗಳಿಂದ ಚುಚ್ಚಿ ತೆಗೆಯಲ್ಪಡುವುವು.

೧೦. ಕಬ್ಬಿಣದಿಂದ ಮಾಡಿದ ಮೊನಚಾದ ಕಾದ ಉಳಿಗಳಿಂದ ಕೆಲವರು ಶಕಲಿತರಾಗುವರು. ಕೆಲವರ ದೇಹಗಳು ಪರ್ವತಗಳ ಕೋಡುಗಲ್ಲುಗಳಿಂದಲೂ ಭಾರವಾದ ಪರ್ವತಗಳಿಂದಲೂ ಪುಡಿಪುಡಿಯಾಗುವುವು.

೧೧. ಕೆಲವರನ್ನು ಯಮದೂತರು ಕುದಿಯುವ ನೀರಿನ ಕುಂಡಗಳಲ್ಲಿ ಹಾಕುವರು. ಅಗ್ನಿಯ ರಾಶಿಗಳಲ್ಲಿ ಸುಡುವರು. ಮುಖವನ್ನು ಕೆಳಗುಮಾಡಿ ಅಮೇಧ್ಯದ ಮಡುವಿನಲ್ಲಿ ಮಲಗಿಸಿ ಕೈಯೊಳಗಿನ ದಂಡಗಳಿಂದ ಹೊಡೆಯುವರು.

ಲೋಹೈಶ್ಚ ಶೃಂಖಲೈರ್ಬದ್ಧಾ ಹ್ಯಧೋವಕ್ತ್ರಾಶ್ಚ ಲಂಬಿತೈಃ ।
ಅಂತರಿಕ್ಷೇ ಪರಿಕ್ಷೇಪಾತ್ಕ್ರಂದಂತೋಽತೀವ ದುಃಖಿತಾಃ ॥ ೧೨ ॥
ಕೃಮಿಭಿರ್ಭ್ರಮರೈಸ್ತೀಕ್ಷ್ಣೈರ್ದಂಶೈಶ್ಚ ಮಶಕೈಸ್ತಥಾ ।
ಲೋಹತುಂಡೈಶ್ಚ ವಿಹಗೈರ್ನಿರ್ದಯೈರ್ಭಕ್ಷಿತಾ ನರಾಃ ॥ ೧೩ ॥
ಕೇಚಿತ್ ಕೃತ್ತಾಃ ಪ್ರಧಾವಂತಿ ತೋಯಾರ್ಥಂ ಚ ತೃಷಾತುರಾಃ ।
ಸ್ವಮೂತ್ರಂ ಪಾಯಿತಾಶ್ಚಂಡೈಃ ಕ್ಷುಭಿತಾಶ್ಚಾಽಪಿ ಘಾತನೈಃ ॥ ೧೪ ॥
ಯ್ಯೈಶ್ಚಾಂಗೈಃ ಪತಿತಂ ಕರ್ಮ ಕ್ರಿಯತೇ ಪುರುಷೈರ್ಭುವಿ ।
ತೇಷಾಂ ತಾನ್ಯೇವಚಾಂಗಾನಿ ಶೋಧ್ಯಂತೇ ಯಾತನಾಗತೈಃ ॥ ೧೫ ॥
ಯೇ ಪಶ್ಯಂತಿ ಗುರುಂ ದೇವಾನ್ಬ್ರಾಹ್ಮಣಾನ್ಕ್ರುದ್ಧಚಕ್ಷುಷಾ ।
ದುಷ್ಟೇನ ಪರದಾರಾಂಶ್ಚ ವೀಕ್ಷಂತೇ ಲೋಚನೇನ ಯೇ ।
ತೇಷಾಂ ನೇತ್ರಾಣಿ ಭಿದ್ಯಂತೇ ಕೃಷ್ಯಂತೇ ಲೋಹಶಂಕುಭಿಃ ॥ ೧೬ ॥
ಶ್ರವಣೌ ಚ ಪ್ರಪೂರ್ಯಂತೇ ಲೌಹೇನ ಶಂಕುನಾ ತತಃ ।
ಪುನಶ್ಚ ಶಸ್ತ್ರೈಃ ಕೃಷ್ಯಂತೇ ಪುನಸ್ತಪ್ತೈಶ್ಚ ಕೀಲಕೈಃ ॥ ೧೭ ॥

---

೧೨. ಕೆಲವರನ್ನು ಕಬ್ಬಿಣದ ಸಂಕೋಲೆಗಳಿಂದ ಬಂಧಿಸಿ ತಲೆಕೆಳಗಾಗಿ ತೂಗುಹಾಕುವರು. ಅಂತರಿಕ್ಷದಲ್ಲಿ ಎತ್ತಿ ಎಸೆಯಲ್ಪಟ್ಟು ಅತ್ಯಂತ ದುಃಖಕ್ಕೊಳಗಾಗಿ ಕೆಲವರು ಕೂಗುತ್ತಿರುವರು.

೧೩. ಕೆಲಮನುಷ್ಯರು ಕ್ರಿಮಿಗಳಿಂದಲೂ, ಜೇನುಹುಳುಗಳಿಂದಲೂ, ಮೊನಚಾದ ಹಲ್ಲುಗಳುಳ್ಳ ಹುಳುಗಳಿಂದಲೂ, ಸೊಳ್ಳೆಗಳಿಂದಲೂ, ಕಬ್ಬಿಣದ ಕೊಕ್ಕುಗಳುಳ್ಳ ಪಕ್ಷಿಗಳಿಂದಲೂ ಕೀಳಲ್ಪಟ್ಟ ದೇಹಗಳುಳ್ಳವರಾಗುವರು.

೧೪. ಕೆಲವರ ದೇಹಗಳು ಕತ್ತರಿಸಲ್ಪಟ್ಟು ಬಾಯಾರಿಕೆಯಿಂದ ಆತುರರಾಗಿ ಓಡಿಹೋಗುತ್ತಿರುವರು. ಭಯಂಕರರಾದ ಯಮಕಿಂಕರರು ಕೆಲವರಿಗೆ ತಮ್ಮ ಮೂತ್ರವನ್ನೇ ಕುಡಿಸಿ ಪೆಟ್ಟುಗಳಿಂದ ಪೀಡಿಸುವರು.

೧೫. ಮನುಷ್ಯರು ಭೂಲೋಕದಲ್ಲಿ ಯಾವ ಯಾವ ಅಂಗಗಳಿಂದ ಪಾಪ ಕೃತ್ಯಗಳನ್ನು ಮಾಡುವರೊ, ಅವರ ಯಾತನಾದೇಹಗಳಲ್ಲಿ ಆಯಾ ಅಂಗಗಳಲ್ಲಿಯೇ ಸಂಕಟಕ್ಕೊಳಗಾಗುವರು.

೧೬. ಯಾರು ಗುರುವನ್ನೂ, ದೇವತೆಗಳನ್ನೂ, ಬ್ರಾಹ್ಮಣರನ್ನೂ ಕೋಪ ಪೂರಿತ ನೇತ್ರಗಳಿಂದ ನೋಡುವರೊ, ಪರಸ್ತ್ರೀಯರನ್ನು ದುರಭಿಲಾಷೆಯಿಂದ ನೋಡುವರೊ, ಅವರ ಕಣ್ಣುಗಳು ಒಡೆಯಲ್ಪಡುವುವು. ಮತ್ತು ಅವುಗಳನ್ನು ಯಮದೂತರು ಕಬ್ಬಿಣದ ಮುಳೆಗಳಿಂದ ಕಿತ್ತುಹಾಕುವರು.

೧೭. ಕಬ್ಬಿಣದ ಸಲಾಕೆಗಳನ್ನು ಅವರ ಕಿವಿಗಳಲ್ಲಿ ಹೊಡೆಯುವರು. ಪುನಃ ಪುನಃ ಆಯುಧಗಳಮೇಲೂ ಕಾದ ಮುಳೆಗಳ ಮೇಲೂ ಎಳೆದಾಡುವರು.

ಲೌಹೈರ್ನೀಗಾನ್ನಿಖನ್ಯಂತೇ ಯೈಃ ಶ್ರುತಂ ಗುರುನಿಂದನಂ ।
ಮಿತ್ರಾಣಾಂ ದೇವತಾನಾಂ ಚ ಸಾಧ್ವೀನಾಮಥವಾ ಕ್ವಚಿತ್ ॥ ೧೮ ॥
ಶತಶಃ ಪಾಟ್ಯತೇ ಜಿಹ್ವಾ ವಹ್ನಿವರ್ಣೈರಯೋಮುಖೈಃ ।
ಶಂಕುಭಿಸ್ತೀಕ್ಷ್ಣಸೂಕ್ಷ್ಮಾಗ್ರೈಃ ಪೂರ್ಯಂತೇ ಚಾಽನಿಲೈಃ ಪುನಃ॥ ೧೯ ॥
ತದ್ವಕ್ತ್ರಾಣಿ ಬಹೂನ್ಯಾದಾನ್ಯೇಽಪವಾದರತಾ ನರಾಃ ।
ಯೇ ಗುರುಂ ಮಾತರಂ ವಾಽಪಿ ಪಾರುಷ್ಯೇಣ ವದಂತಿ ವೈ ॥ ೨೦ ॥
ಯೇ ನಿಘ್ನಂತಿ ದುರಾಚಾರಾಃ ಸುರಾರ್ಥಾಯೋಪಕಲ್ಪಿತೇ ।
ಆರಾಮೇ ಪುಷ್ಪಪತ್ರಾಣಿ ತೇಷಾಮಂಗಾನಿ ಕೃಂತತಿ ॥ ೨೧ ॥
ಯೈರಪ್ಯಾಲಿಂಗಿತಾ ನಾರೀ ಪರಸ್ಯ ಚ ದುರಾತ್ಮಭಿಃ ।
ತೇಷಾಮಯೋಮಯೀ ನಾರೀ ವಹ್ನಿವರ್ಣಾ ತು ಪಕ್ಷ್ಮಸಿ ॥ ೨೨ ॥
ಸ್ಥಾಪ್ಯತೇ ವಧ್ಯತೇ ಚಾಽಪಿ ಪ್ರಚಂಡೈರ್ಯಮಕಿಂಕರೈಃ ।
ನಾರ್ಯಶ್ಚ ಪುರುಷೈಸ್ತಪ್ತೈಃರಾಲಿಂಗ್ಯಂತೇ ಹ್ಯಯೋಮಯೈಃ ॥ ೨೩ ॥

---

೧೮. ಗುರುಗಳು, ಸ್ನೇಹಿತರು, ದೇವತೆಗಳು, ಪತಿವ್ರತೆಯರು, ಮುಂತಾದವರ ನಿಂದೆಯನ್ನು ಒಮ್ಮೆ ಕೇಳಿದವರ ಕಿವಿಗಳನ್ನೂ ಅವರು ಕಬ್ಬಿಣದ ಸೂಜಿಗಳಿಂದ ಬಗಿಯುವರು.

೧೯. ಹಾಗೆ ನಿಂದಿಸಿದವರ ನಾಲಿಗೆಗಳೂ ಕೆಂಪಗೆ ಕಾದ ಕಬ್ಬಿಣದ ಅಲುಗುಗಳುಳ್ಳ ಕತ್ತಿಗಳಿಂದ ನೂರಾರು ಭಾಗವಾಗಿ ಕತ್ತರಿಸಲ್ಪಡುವುವು. ಹರಿತಗಳೂ, ಸೂಕ್ಷ್ಮಾಗ್ರಗಳೂ ಆದ ಸೂಜಿಗಳಿಂದ ಚುಚ್ಚಿ ಬಳಿಕ ಬಾಯಿಗಳಲ್ಲಿ ಕೆಂಡಗಳನ್ನು ತುಂಬುವರು.

೨೦. ಯಾರು ಕೇವಲ ನಿಂದಾತತ್ಪರರಾಗಿರುವರೊ, ಯಾರು ಗುರುವನ್ನೂ ತಾಯಿಯನ್ನೂ ಕಠಿನವಾಗಿ ಮಾತಾಡಿಸುವರೊ, ಅವರ ಮುಖಗಳು ಮತ್ತೆ ಮತ್ತೆ ಈ ಶಿಕ್ಷೆಗೆ ಒಳಗಾಗುವುವು.

೨೧. ದೇವತಾಪೂಜೆಗಾಗಿ ಕೃಷಿಮಾಡಿ ಬೆಳೆಸಿರುವ ಉದ್ಯಾನವನದಲ್ಲಿ ಹೂವುಗಳನ್ನಾಗಲಿ ಪತ್ರಗಳನ್ನಾಗಲಿ ನಾಶಮಾಡುವ ದುರಾಚಾರಿಗಳ ಕೈಕಾಲುಗಳು ಕಡಿಯಲ್ಪಡುವುವು.

೨೨. ಯಾವ ದುರಾತ್ಮರು ಪರಸ್ತ್ರೀಯರನ್ನು ಆಲಿಂಗಿಸಿಕೊಳ್ಳುವರೊ, ಅವರು ನರಕದಲ್ಲಿ ಕಾದ ಕಬ್ಬಿಣದ ಸ್ತ್ರೀವಿಗ್ರಹವನ್ನಾಲಿಂಗಿಸಿಕೊಳ್ಳಬೇಕಾಗುವುದು.

೨೩. ಪರಸ್ತ್ರೀಲಂಪಟನು ಭಯಂಕರರಾದ ಯಮಕಿಂಕರರ ಕೈಗಳಿಗೆ ಸಿಕ್ಕಿದಾಗ ಅವರು ಅವನನ್ನು ಕಟ್ಟಿಹಾಕಿ ಹೊಡೆಯುವರು. ಪರಪುರುಷರನ್ನು ಕೂಡಿದ ಸ್ತ್ರೀಯರೂ ಕಬ್ಬಿಣದ ಕಾದ ಪುರುಷವಿಗ್ರಹಗಳ ಆಲಿಂಗನಕ್ಕೊಳಗಾಗುವರು.

ತದಾ ಲೋಹಮಯೇ ಗೇಹೇ ಜ್ವಲಿತಾಽನಲಸಂಸ್ತರೇ ।
ನಿಕ್ಷಿಪ್ಯಂತೇ ನರೈಃ ಸಾರ್ಧಮಾಸಾದ್ಯ ಕಾಲಸಂಕ್ಷಯಂ ॥ ೨೪ ॥
ಯಾವತೀ ವೇದನಾ ದೇಹೇ ಇಹಲೋಕೇ ಪ್ರದೃಶ್ಯತೇ ।
ನರಾಣಾಮಂಗಪೀಡಾ ವೈ ತಸ್ಮಾಚ್ಛತಗುಣಾ ಭವೇತ್ ॥ ೨೫ ॥
ಕಾಕೈಶ್ಚ ವೃಶ್ಚಿಕೈರ್ಗೃಧ್ರೈರ್ಭಕ್ಷ್ಯಂತೇಽಪ್ಯಪರೇ ನರಾಃ ।
ದಹ್ಯಮಾನಾ ವಿಲಪಂತಿ ಭ್ರಾತಸ್ತಾತೇತಿ ಚಾಕುಲಾಃ ।
ವದಂತ್ಯಸಕೃದುದ್ವಿಗ್ನಾ ನ ಚ ಶಾಂತಿಂ ಲಭಂತಿ ವೈ ॥ ೨೬ ॥
ದುಃಖಾನಿ ತೇ ಪ್ರಾಪ್ನುವಂತಿ ಯಾನ್ಯಸಹ್ಯಾನಿ ಪಾರ್ವತಿ ।
ಏವಂ ತೇ ಯಾತನಾದುಃಖಂ ಪ್ರಾಪ್ನುವಂತಿ ಸುನಿಶ್ಚಿತಂ ।
ನಿಮಿರ್ನಾಮ ಮಹಾಭಾಗೋ ಯಮಮಾರ್ಗಂ ದದರ್ಶ ಹ ॥ ೨೭ ॥
ರೌದ್ರಂ ಭಯಾನಕಂ ದುರ್ಗಂ ಪೂರಿತಂ ಪಾಪಕರ್ಮಭಿಃ ।
ತಮಸಾ ಸಂವೃತಂ ಚೈವ ಕೇಶಶೈವಾಲಶಾದ್ವಲಂ ॥ ೨೮ ॥

---

೨೪. ಬಳಿಕ ಕೆಲವು ಕಾಲವು ಕಳೆದ ಮೇಲೆ ಈ ಸ್ತ್ರೀಯರೂ ಪುರುಷರೊಡನೆ ಉರಿಯುವ ಬೆಂಕಿಯ ಮಧ್ಯದಲ್ಲಿರುವ ಲೋಹಮಯವಾದ ಕೊಟಡಿಯಲ್ಲಿ ತಳ್ಳಲ್ಪಡುವರು.

೨೫. ಈ ಲೋಕದಲ್ಲಿ ದೇಹದ ಅಂಗಾಂಗಗಳಿಗೆಲ್ಲ ರೋಗವೊದಗಲು ಎಷ್ಟು ಸಂಕಟವಾಗುವುದೊ, ಇದರ ನೂರರಷ್ಟು ಯಾತನೆಯು ನರಕದಲ್ಲಿ ಸಂಭವಿಸುವುದು.

೨೬. ಇತರ ಮಾನವರ ದೇಹಗಳನ್ನು ಕಾಗೆಗಳೂ, ಚೇಳುಗಳೂ, ಹದ್ದುಗಳೂ ಕಿತ್ತು ತಿನ್ನುತ್ತಿರಲು ಅವರು ಬೆಂಕಿಯ ಬೇಗೆಯನ್ನು ತಡೆಯಲಾರದೆ "ಅಯ್ಯೋ! ಅಣ್ಣ! ಅಪ್ಪ!" ಎಂದು ಕಾತರರಾಗಿ ಮತ್ತೆ ಮತ್ತೆ ಉದ್ವೇಗದಿಂದ ಕೂಗುತ್ತಿದ್ದರೂ ನಿಮಿಷಮಾತ್ರವಾದರೂ ಶಾಂತಿಯನ್ನು ಹೊಂದಲಾರರು.

೨೭. ಪಾರ್ವತಿಯೆ! ಇಂತು ಪಾಪಿಗಳು ಸಹಿಸಲಶಕ್ಯಗಳಾದ ಅನೇಕ ದುಃಖಗಳನ್ನನುಭವಿಸುವರು. ಎಲ್ಲರೂ ತಮ್ಮ ಅಪರಾಧಕ್ಕೆ ತಕ್ಕುದಾದ ಶಿಕ್ಷೆಯನ್ನು ಯಾತನಾದೇಹದಲ್ಲಿ ಅನುಭವಿಸುವರೆಂಬುದು ನಿಶ್ಚಯವು. ಹಿಂದೆ ನಿಮಿಯೆಂಬ ಮಹಾತ್ಮನಾದ ಮಹಾರಾಜನೊಬ್ಬನು ಯಮಲೋಕವನ್ನು ನೋಡಿದನು.

೨೮. ಅದು ಕರಾಳವೂ, ಭಯಂಕರವೂ, ದುರ್ಗಮವೂ, ಪಾಪಿಜೀವರುಗಳಿಂದ ಪೂರಿತವೂ, ಗಾಢಾಂಧಕಾರಾವೃತವೂ, ತಲೆಗೂದಲುಗಳೆಂಬ ಪಾಚಿಯಿಂದ ಹಸುರುಗೊಂಡಿರುವುದೂ ಆಗಿದ್ದಿತು.

ಸಂಪೃಕ್ತಂ ಪಾಪಕೃದ್ಗಂಧೈರ್ಮಾಂಸಶೋಣಿತಕರ್ದಮೈಃ ।
ವಹ್ನಿಜ್ವಾಲೇನ ದೀಪ್ತೇನ ಸಮಂತಾತ್ಪರಿವಾರಿತಂ ॥ ೨೯ ॥
ಅಧೋಮುಖೈಶ್ಚ ಕರ್ಕೋಟೈರ್ಗೃಧ್ರೈಶ್ಚ ಸಮಭಿದ್ರುತಂ ।
ಸೂಚೀಮುಖೈಸ್ತಥಾ ಪ್ರೇತೈರ್ವಿಂಧ್ಯಶೈಲೋಪಮೈರ್ವೃತಂ ॥ ೩೦ ॥
ವೃಕ್ಷೈ ರುಧಿರಮಾಂಸೈಶ್ಚ ಛಿನ್ನಬಾಹೂರುಪಾಣಿಭಿಃ ।
ನಿಕೃತ್ತೋದರಹಸ್ತೈಶ್ಚ ತತ್ರ ತತ್ರ ಪ್ರಚಾರಿತೈಃ ।
ವೃತಂ ಕುಣಪದುರ್ಗಂಧೈರಶಿವಂ ಭೋಗವರ್ಜಿತಂ ॥ ೩೧ ॥
ಅಸಿಪತ್ರವನಂ ಚೈವ ಸಮಂತಾತ್ಪರಿವಾರಿತಂ ।
ಕರಂಭವಾಲುಕಾಕೀರ್ಣಮಾಯಸೀಶ್ಚ ಶಿಲಾಃ ಪೃಥಕ್ ॥ ೩೨ ॥
ದದರ್ಶ ಚಾಽಪಿ ದೇಹೋತ್ಥಯಾತನಾಂ ಪಾಪಕರ್ಮಣಾಂ ।
ಸ ತಂ ದುರ್ಗಂಧಮಾಲಕ್ಷ್ಯ ಪುರುಷಂ ತಮುವಾಚ ಹ ॥ ೩೩ ॥
ಕಿಯದಧ್ವಾನಮಸ್ಮಾಭಿರ್ಗಂತವ್ಯಮಿದಮಬ್ರವೀತ್ ।
ದೇಶೋಽಯಂ ಕಶ್ಚ ದೇವಾನಾಮೇತದಿಚ್ಛಾಮಿ ವೇದಿತುಂ ॥ ೩೪ ॥

---

೨೯. ಪಾಪಗಳನ್ನು ಮಾಡಿದವರ ದುರ್ಗಂಧಗಳಿಂದಲೂ, ಮಾಂಸರಕ್ತಗಳ ಕೆಸರಿನಿಂದಲೂ ತುಂಬಿದ್ದ ಆ ಸ್ಥಳವನ್ನು ಧಗಧಗಿಸುತ್ತಿರುವ ಬೆಂಕಿಯ ಜ್ವಾಲೆಯು ಸುತ್ತುವರೆದಿದ್ದಿತು.

೩೦. ಕೆಳಮೊಗವಾಗಿ ಪಾಪಿಗಳ ದೇಹಗಳನ್ನು ಕೀಳುತ್ತಿರುವ ಹಾವು, ಹದ್ದುಗಳಿಂದಲೂ, ವಿಂಧ್ಯಪರ್ವತದಂತೆ ದೇಹವೂ, ಸೂಜಿಯ ಕಣ್ಣಿನಂತೆ ಮುಖವೂ ಉಳ್ಳ ಪ್ರೇತಗಳಿಂದಲೂ ತುಂಬಿದ್ದಿತು.

೩೧. ರಕ್ತಮಾಂಸಗಳ ರಾಶಿಗಳೆಂಬ ವೃಕ್ಷಗಳಿಗೆ ಕತ್ತರಿಸಿದ ಕೈ, ಕಾಲು, ಹಸ್ತಗಳೇ ಕೊಂಬೆಗಳಾಗಿದ್ದುವು. ಹೊಟ್ಟೆ, ಕೈಗಳಿಲ್ಲದ ಅನೇಕ ದೇಹಗಳು ಅಲ್ಲಿ ಈಡಾಡುತ್ತಿದ್ದುವು. ಎಲ್ಲೆಲ್ಲಿಯೂ ಮಾಂಸದ ದುರ್ಗಂಧವು ತುಂಬಿ ಅಮಂಗಳವೂ, ಸೌಖ್ಯಹೀನವೂ ಆಗಿದ್ದಿತು.

೩೨. ಅಸಿಪತ್ರವನವೆಂಬ ನರಕವು ಸುತ್ತಲೂ ಕೆಸರು, ಮರಳುಗಳಿಂದ ಕೂಡಿದುದಾಗಿ ಅಲ್ಲಲ್ಲಿ ಕಬ್ಬಿಣದ ಹಾಸುಗಲ್ಲುಗಳನ್ನು ಹೊಂದಿದ್ದಿತು.

೩೩. ಮತ್ತು ನಿಮಿಯು ಪಾಪಕರ್ಮಿಗಳಾದವರು ಅಲ್ಲಿ ಅನುಭವಿಸುತ್ತಿರುವ ದೇಹಯಾತನೆಗಳನ್ನೂ ನೋಡಿದನು. ಆ ದುರ್ಗಂಧವನ್ನು ನೋಡಿ ತನ್ನೊಡನಿದ್ದ ಪುರುಷನನ್ನು ಕುರಿತು ಇಂತೆಂದನು.

೩೪. "ನೀನು ಎಷ್ಟುದೂರ ಈ ದಾರಿಯನ್ನು ನಡೆಯಬೇಕೆಂದು ಹೇಳಿದೆ? ಈ ದೇಶವು ಯಾವ ದೇವತೆಗಳಿಗೆ ಸೇರಿದುದು? ಇದನ್ನು ತಿಳಿಯಲಪೇಕ್ಷಿಸುತ್ತೇನೆ.

ಇತ್ಯುಕ್ತೋ ಯಮದೂತಸ್ತು ದಂಡಹಸ್ತೋಽಗ್ನಿಸಪ್ರಭಃ ।
ಪುರತೋ ದರ್ಶಯನ್ಮಾರ್ಗಮಿತ ಏಹೀತ್ಯುವಾಚ ಹಿ ॥ ೩೫ ॥
ಭೂಯಃ ಸ ರಾಜಾ ತಂ ಪ್ರಾಹ ಕಿಂಕರಂ ವಿನಯಾನ್ವಿತಃ ।
ಭೋ ಯಾಮ್ಯಪುರುಷಾಽಽಚಕ್ಷ್ವ ಕಿಂ ಮಯಾ ದುಷ್ಕೃತಂ ಕೃತಂ ।
ಯೇನೇದಂ ವ್ಯಸನಂ ಪ್ರಾಪ್ತಂ ಮಯಾ ಚ ಧಾರ್ಮಿಕೇಣ ಹಿ ॥ ೩೬ ॥
ನಿಮಿರ್ನಾಮಾಽಹಂ ವಿಖ್ಯಾತೋ ಜನಕಾನಾಮಹಂ ಕುಲೇ ।
ಜಾತೋ ವಿದೇಹವಿಷಯೇ ಸಮ್ಯಙ್ಮನುಜಪಾಲಕಃ ॥ ೩೭ ॥
ಚಾತುರ್ವರ್ಣ್ಯಂ ಚ ಧರ್ಮಸ್ಥಂ ಕೃತ್ವಾ ಸಂರಕ್ಷಿತಂ ಮಯಾ ।
ಧರ್ಮಪ್ರಧಾನಕಲ್ಪೇನ ಮನುನಾಽತ್ರ ಯಥಾ ಪುರಾ ॥ ೩೮ ॥
ಯಜ್ಞೈರ್ಮಯೇಷ್ಟಂ ಬಹುಭಿರ್ಧರ್ಮತಃ ಪಾಲಿತಾ ಮಹೀ ।
ನೋತ್ಸೃಷ್ಟಶ್ಚೈವ ಸಂಗ್ರಾಮೋ ನಾಽತಿಥಿರ್ವಿಮುಖೋಽಭವತ್ ॥ ೩೯ ॥
ಕೃತಾ ಸ್ಪೃಹಾ ಚ ನ ಮಯಾ ಪರಸ್ತ್ರೀವಿಭವಾದಿಷು ।
ಸೋಽಹಂ ಕಥಮಿಮಂ ಪ್ರಾಪ್ತೋ ನರಕಂ ಭೃಶದಾರುಣಂ ॥ ೪೦ ॥

---

೩೫. ಇಂತೆನಲು ದಂಡಪಾಣಿಯೂ, ಅಗ್ನಿಯಂತೆ ತೇಜಃಪುಂಜನೂ ಆದ ಆ ಯಮದೂತನು ಮುಂದೆ ದಾರಿಯನ್ನು ತೋರಿಸುತ್ತ "ಹೀಗೆ ಬಾ, ಹೀಗೆ ಬಾ" ಎಂದು ಹೇಳುತ್ತಿದ್ದನು.

೩೬. ಪುನಃ ಆ ರಾಜನು ವಿನಯಭರಿತನಾಗಿ ಆ ಯಮಕಿಂಕರನಿಗೆ ಹೇಳಿದನು. "ಎಲೈ ಯಮಸೇವಕನೆ! ಧಾರ್ಮಿಕನಾದ ನಾನು ಇಂತಹ ಮಹಾ ದುಃಖವನ್ನು ಅನುಭವಿಸಲು ಹಿಂದೆ ಯಾವ ಪಾತಕವನ್ನು ಮಾಡಿದ್ದೆನು?

೩೭. ನಾನು ನಿಮಿಯೆಂಬ ಹೆಸರಿನ ಮಹಾರಾಜನು. ಜನಕರಾಜರ ಮಹಾಕುಲದಲ್ಲಿ ಜನಿಸಿ ಪ್ರಖ್ಯಾತಿಯನ್ನು ಪಡೆದವನು. ವಿದೇಹದೇಶದಲ್ಲಿ ಹುಟ್ಟಿದ ನಾನು ಪ್ರಜೆಗಳನ್ನು ಚೆನ್ನಾಗಿ ರಕ್ಷಿಸಿದೆನು.

೩೮–೪೦. ಚಾತುರ್ವರ್ಣ್ಯದವರನ್ನೆಲ್ಲ ಅವರವರ ಧರ್ಮಗಳಲ್ಲಿ ಚೆನ್ನಾಗಿ ನೆಲೆಗೊಳಿಸಿ ಸಂರಕ್ಷಿಸಿರುವೆನು. ಹಿಂದೆ ಮನುಚಕ್ರವರ್ತಿಯು ಹೇಗೆ ಧರ್ಮಪ್ರಧಾನವಾಗಿ ರಾಜ್ಯಭಾರವನ್ನು ಮಾಡಿದನೊ, ಹಾಗೆಯೇ ನಾನೂ ನಡೆಸಿಕೊಂಡು ಬಂದಿರುವೆನು. ಅನೇಕ ಯಜ್ಞಗಳನ್ನು ನಡೆಸಿರುವೆನು. ಧರ್ಮದಿಂದ ರಾಜ್ಯಪರಿಪಾಲನೆಯನ್ನು ಮಾಡಿರುವೆನು. ಯುದ್ಧದಲ್ಲಿ ಎಂದೂ ಹಿಂದಿರುಗಿದುದಿಲ್ಲ. ಎಂದಿಗೂ ಯಾವ ಅತಿಥಿಯೂ ನನ್ನ ಮನೆಯ ಬಾಗಿಲಿನಿಂದ ವಿಫಲನಾಗಿ ಹೋದುದಿಲ್ಲ. ಇತರರ ಸ್ತ್ರೀಯರಲ್ಲಾಗಲಿ, ಐಶ್ವರ್ಯದಲ್ಲಾಗಲಿ, ನಾನೆಂದೂ ಅಭಿಲಾಷೆಗೊಂಡವನಲ್ಲ. ಇಂತಹ ನಾನು ಅತ್ಯಂತ ಭಯಂಕರವಾದ ಈ ನರಕಕ್ಕೆ ಬರಲು ಕಾರಣವೇನು?"

ಇತಿ ಪೃಷ್ಟಸ್ತದಾ ತೇನ ನಿಮಿನಾ ಯಮಕಿಂಕರಃ ।
ಉವಾಚ ಪ್ರಣತೋ ಭೂತ್ವಾ ಕ್ರೂರೋಽಪಿ ಪ್ರಶ್ರಿತಂ ವಚಃ ॥ ೪೧ ॥
ಪುರುಷ ಉವಾಚ :—
ಮಹಾರಾಜ ಯಥಾಽತ್ಥ ತ್ವಂ ತಥೈತನ್ನಾಽತ್ರ ಸಂಶಯಃ ।
ಕಿಂ ತು ಸ್ವಲ್ಪಂ ಕೃತಂ ಪಾಪಂ ಭವಂತಂ ಸ್ಮಾರಯಾಮಿ ತತ್ ॥ ೪೨ ॥
ಉಕ್ತಾ ಯಾ ದಕ್ಷಿಣಾ ಶ್ರಾದ್ಧೇ ನ ದತ್ತಾ ಸಾ ತ್ವಯಾ ನೃಪ ।
ಪ್ರಮಾದಾದ್ವಿಸ್ಮೃತಾ ಚೈವ ತಸ್ಯೇದಂ ಕರ್ಮಣಃ ಫಲಂ ॥ ೪೩ ॥
ಏತಾವದೇವ ತೇ ಪಾಪಂ ನಾಽನ್ಯತ್ಕಿಂಚನ ವಿದ್ಯತೇ ।
ವೈದೇಹಾಽಽಗಚ್ಛ ಪುಣ್ಯಾನಾಮುಪಭೋಗಾಯ ಪಾರ್ಥಿವ ॥ ೪೪ ॥
ಏವಂ ಶ್ರುತ್ವಾ ತು ರಾಜರ್ಷಿರ್ನಿಮಿರ್ದೂತಮಥಾಽಬ್ರವೀತ್ ।
ಯಾಸ್ಯಾಮಿ ದೇವಾಽನುಚರ ಯತ್ರ ಮಾಂ ತ್ವಂ ಹಿ ನೇಷ್ಯಸಿ ॥ ೪೫ ॥
ಕಿಂಚಿತ್ಪೃಚ್ಛಾಮಿ ತೇ ತತ್ವಂ ಯಥಾವದ್ವಕ್ತುಮರ್ಹಸಿ ।
ವಜ್ರತುಂಡಾಸ್ತ್ವಮೀ ಕಾಕಾಃ ಪುಂಸಾಂ ನಯನಹಾರಿಣಃ ।
ಪುನಃಪುನಶ್ಚ ನೇತ್ರಾಣಿ ತದ್ವತ್ತೇಷಾಂ ಭವಂತಿ ಹಿ ॥ ೪೬ ॥

---

೪೧. ಇಂತು ನಿಮಿಯು ಪ್ರಶ್ನೆಮಾಡಲು ಆ ಯಮದೂತನು ಸ್ವಭಾವದಿಂದ ಕ್ರೂರನಾದರೂ ಈತನ ವಿನಯಕ್ಕೆ ಕಟ್ಟುಬಿದ್ದು ಪ್ರತಿನಮಸ್ಕಾರವನ್ನು ಮಾಡಿ ಹೇಳತೊಡಗಿದನು.

೪೨–೪೪. ಪುರುಷನು ಹೇಳುತ್ತಾನೆ:—"ಮಹಾರಾಜನೆ! ನೀನು ಹೇಳಿದುದೆಲ್ಲವೂ ಸತ್ಯವೇ. ಸ್ವಲ್ಪವೂ ಸಂದೇಹವಿಲ್ಲ. ಆದರೆ ನೀನು ಅತ್ಯಲ್ಪವಾದ ಒಂದು ಪಾಪವನ್ನು ಮಾತ್ರ ಮಾಡಿರುವೆ. ಅದನ್ನು ನಿನ್ನ ಜ್ಞಾಪಕಕ್ಕೆ ತಂದುಕೊಡುತ್ತೇನೆ. ಎಲೈ ರಾಜನೆ! ಒಮ್ಮೆ ಶ್ರಾದ್ಧಕಾಲದಲ್ಲಿ ಪ್ರತಿಜ್ಞೆಯನ್ನು ಮಾಡಿದ ದಕ್ಷಿಣೆಯನ್ನು ಬ್ರಾಹ್ಮಣನಿಗೆ ಸಲ್ಲಿಸಲಿಲ್ಲ. ಪ್ರಮಾದದಿಂದ ಮರೆತುಬಿಟ್ಟೆ. ಇದು ಆ ಕರ್ಮದ ಫಲವಾಗಿರುವುದು. ಇದಿಷ್ಟೇ ನಿನ್ನ ಪಾಪವು. ಮತ್ತೆ ಯಾವ ಅಲ್ಪ ಪಾತಕವೂ ಸಹ ನಿನ್ನಲ್ಲಿ ಕಾಣಲಿಲ್ಲ. ವಿದೇಹರಾಜನೆ! ಇನ್ನು ನಿನ್ನ ಪುಣ್ಯಫಲಗಳನ್ನನುಭವಿಸುವುದಕ್ಕಾಗಿ ಉತ್ತಮಲೋಕಗಳಿಗೆ ಬರುವವನಾಗು."

೪೫. ರಾಜರ್ಷಿಯಾದ ನಿಮಿಯು ಈ ಮಾತುಗಳನ್ನು ಕೇಳಿ ಯಮದೂತನಿಗಿಂತೆಂದನು. "ದೇವದೂತನೆ! ನೀನು ಎಲ್ಲಿಗೆ ನನ್ನನ್ನು ಕರೆದುಕೊಂಡು ಹೋಗುವೆಯೊ, ಅಲ್ಲಿಗೆ ಬರುತ್ತೇನೆ.

೪೬. ಆದರೆ ನಿನ್ನಲ್ಲಿ ಒಂದು ವಿಷಯದ ಬಗ್ಗೆ ಪ್ರಶ್ನಿಸುವೆನು. ಯಥಾರ್ಥವಾದ ಉತ್ತರವನ್ನು ಹೇಳಬೇಕು. ವಜ್ರದಂತೆ ಕಠಿನಗಳಾದ ಕೊಕ್ಕುಗಳುಳ್ಳ ಈ ಕಾಗೆಗಳು ಈ ಮಾನವರ ಕಣ್ಣುಗಳನ್ನು ಕುಕ್ಕಿ ತಿನ್ನುತ್ತಿರುವುವಲ್ಲವೆ. ಆದರೂ ಮತ್ತೆ ಮತ್ತೆ ಅವರ ಕಣ್ಣುಗಳು ಮೊದಲಿನಂತೆಯೇ ಬೆಳೆಯುತ್ತಿರುವುವು.

ಕಿಂ ಕೃತಂ ಕರ್ಮ ದೂತೇಂದ್ರ ಕಥಯ್ಯೆತಜ್ಜುಗುಪ್ಸಿತಂ ।
ಹರಂತ್ಯೇಷಾಂ ತಥಾ ಜಿಹ್ವಾಂ ಜಾಯಮಾನಾಂ ಪುನರ್ನವಾಂ ।
ಕರಪತ್ರೇಣ ಪಾಟ್ಯಂತೇ ಕಸ್ಮಾದೇವೇ ಸುದುಃಖಿತಾಃ ॥ ೪೭ ॥
ಕಿಮೇತೇ ನಷ್ಟಚಿತ್ತಾಶ್ಚ ತುದ್ಯಂತೇಽಹರ್ನಿಶಂ ನರಾಃ । ॥ ೪೮ ॥
ಏತಾಶ್ಚಾಽನ್ಯಾಶ್ಚ ದೃಶ್ಯಂತೇ ಯಾತನಾಃ ಪಾಪಕರ್ಮಿಣಾಂ
ಕಿಯತ್ಕಾಲಂ ಭವಿಷ್ಯಂತಿ ತನ್ಮಮೋದ್ದೇಶತೋ ವದ ॥ ೪೯ ॥

ಪುರುಷ ಉವಾಚ :—

ಯನ್ಮಾಂ ಪೃಚ್ಛಸಿ ಭೂಪಾಲ ಪಾಪಕರ್ಮಫಲೋದಯಂ ।
ತತ್ತೇಽಹಂ ಸಂಪ್ರವಕ್ಷ್ಯಾಮಿ ಸಂಕ್ಷೇಪೇಣ ಯಥಾತಥಂ ॥ ೫೦ ॥
ಪುಣ್ಯಾಽಪುಣ್ಯೇ ಹಿ ಪುರುಷಃ ಪರ್ಯಾಯೇಣ ಸಮಶ್ನುತೇ ।
ಭುಂಜತಶ್ಚ ಕ್ಷಯಂ ಯಾತಿ ಪುಣ್ಯಂ ಪಾಪಮಥಾಽಪಿ ವಾ ॥ ೫೧ ॥
ನ ತು ಭೋಗಾದೃತೇ ಪುಣ್ಯಂ ಪಾಪಂ ಕರ್ಮ ಚ ಮಾನವಃ ।
ಪರಿತ್ಯಜತಿ ರಾಜೇಂದ್ರ ಸತ್ಯಮೇತದುದಾಹೃತಂ ॥ ೫೨ ॥

---

೪೭. ಅಯ್ಯಾ ದೂತನಾಯಕನೆ! ಇವರು ಯಾವ ನೀಚಕೃತ್ಯಗಳನ್ನು ಮಾಡಿದ್ದರೆಂಬುದನ್ನು ಹೇಳು. ಹಾಗೆಯೇ ಇಲ್ಲಿರುವವರ ನಾಲಿಗೆಗಳೂ ಹೊಸ ಹೊಸದಾಗಿ ಹುಟ್ಟುತ್ತಿದ್ದಂತೆಯೇ ಗರಗಸಗಳಿಂದ ಕತ್ತರಿಸಿ ಹಾಕಲ್ಪಡುತ್ತಿರುವುವು. ಇವರೇಕೆ ಈ ಮಹಾದುಃಖಗಳಿಗೆ ತುತ್ತಾಗಿರುವರು?

೪೮–೪೯. ಬುದ್ಧಿಹೀನರಾದ ಈ ಜನರು ಹಗಲುರಾತ್ರಿಗಳಲ್ಲಿಯೂ ಹೀಗೇಕೆ ದುಃಖಪಡುತ್ತಿರುವರು? ಪಾಪಕರ್ಮಗಳನ್ನು ಮಾಡಿದವರು ಅನುಭವಿಸುವ ಇವುಗಳನ್ನೂ, ಇತರ ಅನೇಕ ಯಾತನೆಗಳನ್ನೂ ನೋಡುತ್ತಿರುವೆನು. ಇವರು ಈ ಯಾತನೆಗಳನ್ನು ಎಷ್ಟುಕಾಲ ಅನುಭವಿಸುವರೆಂಬುದನ್ನು ವಿಸ್ತಾರವಾಗಿ ನನಗೆ ಹೇಳುವವನಾಗು.''

೫೦–೫೧. ಪುರುಷನು ಹೇಳುತ್ತಾನೆ:—'' ಮಹಾರಾಜನೆ! ಪಾಪಕರ್ಮಗಳ ಫಲಗಳನ್ನು ಕುರಿತು ನನ್ನನ್ನು ಪ್ರಶ್ನೆಮಾಡಿದೆಯಲ್ಲವೆ. ಅದನ್ನೆಲ್ಲ ನಿನಗೆ ಇದ್ದಂತೆಯೇ ಸಂಕ್ಷೇಪವಾಗಿ ತಿಳಿಸುವೆನು. ಮಾನವನು ಪುಣ್ಯಪಾಪಗಳ ಫಲಗಳನ್ನು ಒಂದಾದಮೇಲೊಂದಾಗಿ ಅನುಭವಿಸುವನು. ಪುಣ್ಯವಾಗಲಿ, ಪಾಪವಾಗಲಿ ಅನುಭವಿಸಿದಂತೆಲ್ಲ ನಾಶವನ್ನು ಹೊಂದುವುದು.

೫೨. ರಾಜೇಂದ್ರನೆ! ಫಲವನ್ನನುಭವಿಸಿದಲ್ಲದೆ ಯಾವ ಮಾನವನೇ ಆಗಲಿ ಪುಣ್ಯಪಾಪ ಕರ್ಮಗಳನ್ನು ಕೈಬಿಡುವುದಕ್ಕೆ ಸಾಧ್ಯವಿಲ್ಲ. ಇದೇ ಸತ್ಯವೆಂದು ಹೇಳಲ್ಪಟ್ಟಿರುವುದು.

ಏವಮೇತೇ ಮಹಾಪಾಪಾ ಯಾತನಾಭಿರಹರ್ನಿಶಂ ।
ಕ್ಷಪಯಂತಿ ಮಹಾಘೋರಂ ನರಕಾಂತರವರ್ತಿನಃ ॥ ೫೩ ॥
ದೇವತ್ವೇಽಥ ಮನುಷ್ಯತ್ವೇ ತಿರ್ಯಕ್ತ್ವೇಽಥ ಶುಭಾಶುಭಂ ।
ಪುಣ್ಯಪಾಪೋದ್ಭವಂ ಭುಂಕ್ತೇ ಸುಖದುಃಖಂ ನ ಸಂಶಯಃ ॥ ೫೪ ॥
ಏತದುದ್ದೇಶತೋ ರಾಜನ್ಭವತಾ ಕಥಿತಂ ಮಯಾ ।
ಸ್ವಕರ್ಮಫಲಮೋಕ್ತ್ರಾಣಾಂ ಪುಣ್ಯಾನಾಂ ಪಾಪಿನಾಂ ತಥಾ ॥ ೫೫ ॥
ತದೇಹ್ಯನ್ಯತ್ರ ಗಚ್ಛಾಮಿ ಯಥಾ ದೃಷ್ಟಂ ತ್ವಯಾಽಧುನಾ ।
ತತಸ್ತಮಗ್ರತಃ ಕೃತ್ವಾ ಸ ರಾಜಾ ಗಂತುಮುದ್ಯತಃ ॥ ೫೬ ॥
ತದಾ ಹಿ ಸರ್ವೈರುದ್ಘುಷ್ಟಂ ಯಾತನಾಸ್ಥಾಯಿಭಿರ್ನೃಭಿಃ ।
ಪ್ರಸಾದಂ ಕುರು ಭೂಪೇತಿ ತಿಷ್ಠ ತಾವನ್ಮುಹೂರ್ತಕಂ ।
ತ್ವದಂಗಸಂಗೀ ಪವನೋ ದೇಹಾನ್ ಹ್ಲಾದಯತೇ ಹಿ ನಃ ॥ ೫೭ ॥
ಪರಿತಾಪಂ ಚ ಗಾತ್ರೇಭ್ಯಃ ಪೀಡಾಬಾಧಾಶ್ಚ ಕೃತ್ಸ್ನಶಃ ।
ಅಪಹಂತಿ ನರವ್ಯಾಘ್ರ ಕೃಪಾಂ ಕುರು ಮಹೀಪತೇ ॥ ೫೮ ॥

---

೫೩. ಆದುದರಿಂದಲೇ ಮಹಾಪಾತಕಿಗಳಾದ ಈ ಜೀವರು ನರಕದಲ್ಲಿ ಬಿದ್ದು ಅಹೋರಾತ್ರಗಳಲ್ಲಿಯೂ ಯಾತನೆಯನ್ನನುಭವಿಸುತ್ತ ಅತ್ಯಂತ ಘೋರಗಳಾದ ತಮ್ಮ ಪಾಪಗಳನ್ನು ಕಳೆಯುತ್ತಿರುವರು.

೫೪. ದೇವತಾಜನ್ಮದಲ್ಲಾಗಲಿ, ಮಾನುಷ್ಯದಲ್ಲಾಗಲಿ, ತಿರ್ಯಗ್ಯೋನಿಗಳಲ್ಲಾಗಲಿ ತಮ್ಮ ಪಾಪಪುಣ್ಯಕರ್ಮಗಳ ಫಲಗಳಾದ ಶುಭಾಶುಭಗಳನ್ನೂ, ಸುಖದುಃಖಗಳನ್ನೂ ಅನುಭವಿಸುವರು. ಇದರಲ್ಲಿ ಸಂದೇಹವಿಲ್ಲ.

೫೫–೫೬. ಎಲೈ ನಿಮಿರಾಜನೆ! ಈ ಉದ್ದೇಶದಿಂದಲೇ ಪುಣ್ಯವಂತರೂ, ಪಾಪಿಗಳೂ ತಮ್ಮ ತಮ್ಮ ಕರ್ಮಫಲಗಳನ್ನು ಹೇಗೆ ಅನುಭವಿಸಿ ಕಳೆಯುವರೆಂಬುದನ್ನು ನಿನಗೆ ನಾನು ವಿಸ್ತರಿಸಿರುವೆನು. ಈಗ ಇಲ್ಲಿ ನಡೆದುದೆಲ್ಲವನ್ನೂ ನೋಡಿದೆಯಷ್ಟೆ. ಮುಂದೆ ನಡೆ. ಬೇರೊಂದೆಡೆಗೆ ಹೋಗೋಣ.'' ಇಂತೆಂದ ಯಮದೂತನನ್ನು ಮುಂದುಮಾಡಿಕೊಂಡು ಆ ರಾಜನು ಹೊರಡಲನುವಾದನು.

೫೭. ಅದನ್ನು ಕಂಡು ಯಾತನಾಲೋಕಗಳಲ್ಲಿದ್ದ ಸಕಲ ಜೀವರೂ ಗಟ್ಟಿಯಾಗಿ ಕೂಗಿಕೊಂಡರು. ''ಮಹಾರಾಜನೆ! ನಮ್ಮನ್ನನುಗ್ರಹಿಸು. ಒಂದು ಮುಹೂರ್ತಕಾಲ ಇಲ್ಲಿಯೇ ನಿಂತಿರು. ನಿನ್ನ ದೇಹವನ್ನು ಸೋಕಿ ಬೀಸುತ್ತಿರುವ ತಂಗಾಳಿಯು ನಮಗೆ ಆನಂದವನ್ನುಂಟುಮಾಡುತ್ತಿರುವುದು.

೫೮. ನರವ್ಯಾಘ್ರನೆ! ಮಹಾಬುದ್ಧಿಯೆ! ನಮ್ಮ ದೇಹಗಳ ಸಂತಾಪವನ್ನೂ ಸಕಲ ವಿಧಗಳಾದ ಬಾಧೆಗಳನ್ನೂ ನಿನ್ನ ಶರೀರದ ಗಾಳಿಯು ಕಳೆಯುತ್ತಿರುವುದು. ನಮ್ಮಲ್ಲಿ ಕೃಪೆಮಾಡು.''

ಏತಚ್ಛ್ರುತ್ವಾ ವಚಸ್ತೇಷಾಂ ತಂ ಯಾಮ್ಯಪುರುಷಂ ನೃಪಃ ।
ಪಪ್ರಚ್ಛ ಕಥಮೇತೇಷಾಮಾಹ್ಲಾದೋ ಮಯಿ ತಿಷ್ಠತಿ ॥ ೫೯ ॥
ಕಿಂ ಮಯಾ ಕರ್ಮ ತತ್ಪುಣ್ಯಂ ಮರ್ತ್ಯಲೋಕೇ ಮಹತ್ಕೃತಂ ।
ಪ್ರಹ್ಲಾದಜನನೀ ದೃಷ್ಟಿರ್ಯಸ್ಯೇಯಂ ತದುದೀರ್ಯತಾಂ ॥ ೬೦ ॥

ಪುರುಷ ಉವಾಚ :—

ತ್ವಯಾ ದೃಷ್ಟೋ ಮಹಾಕಾಲೋ ವಿಖ್ಯಾತೋಽನರಕೇಶ್ವರಃ ।
ಆಶ್ವಿನಸ್ಯ ಚತುರ್ದಶ್ಯಾಂ ತಸ್ಯೇದಂ ಫಲಮೀದೃಶಂ ॥ ೬೧ ॥
ತತಸ್ತದ್ಗಾತ್ರಸಂಸರ್ಗೀ ಪವನೋ ಹ್ಲಾದದಾಯಕಃ ।
ಪಾಪಕರ್ಮಕೃತಾಂ ರಾಜನ್ ಯಾತನಾ ನ ಪ್ರಬಾಧತೇ ॥ ೬೨ ॥

ರಾಜೋವಾಚ :—

ಯದಿ ಮತ್ಸನ್ನಿಧಾನೇ ಸಾ ಯಾತನಾ ನ ಪ್ರಬಾಧತೇ ।
ತತೋ ಭದ್ರಮುಖಾಽತ್ರಾಽಹಂ ಸ್ಥಾಸ್ಯೇ ಸ್ಥಾಣುರಿವಾಽಚಲಃ ॥ ೬೩ ॥

ಪುರುಷ ಉವಾಚ :—

ಏಹಿ ರಾಜೇಂದ್ರ ಗಚ್ಛಾವೋ ನಿಜಪುಣ್ಯಸಮಾರ್ಜಿತಾನ್ ।
ಭುಂಕ್ಷ್ವ ಭೋಗಾನ್ನಯಾಸ್ಯೇತಾಂ ಯಾತನಾಂ ಪಾಪಕರ್ಮಣಾಂ ॥ ೬೪ ॥

೫೯–೬೦. ಇಂತೆಂದ ನರಕವಾಸಿಗಳ ಮಾತನ್ನು ಕೇಳಿ ರಾಜನು ಯಮ ದೂತನನ್ನು ಪ್ರಶ್ನಿಸಿದನು. "ನಾನಿದ್ದ ಮಾತ್ರದಿಂದ ಇವರಿಗೆ ಸೌಖ್ಯವುಂಟಾಗಲು ಕಾರಣವೇನು ? ಇವರಿಗೆಲ್ಲ ಆನಂದವನ್ನುಂಟುಮಾಡುವ ಉತ್ತಮಫಲಕ್ಕೆ ಸಾಧನ ವಾದ ಯಾವ ಮಹತ್ಕಾರ್ಯವನ್ನು ಭೂಲೋಕದಲ್ಲಿ ನಾನು ಮಾಡಿರುವೆನೆಂಬು ದನ್ನು ದಯವಿಟ್ಟು ತಿಳಿಸು."

೬೧–೬೨. ಪುರುಷನು ಹೇಳುತ್ತಾನೆ:—"ನೀನೊಮ್ಮೆ ಆಶ್ವಯುಜ ಮಾಸದ ಚತುರ್ದಶಿಯ ದಿನದಲ್ಲಿ ಮಹಾಕಾಲವನದಲ್ಲಿ ಪ್ರಖ್ಯಾತವಾಗಿರುವ ಅನರಕೇಶ್ವರ ಮಹಾಲಿಂಗದ ದರ್ಶನವನ್ನು ಮಾಡಿದೆ. ಆ ಪುಣ್ಯದ ಫಲವೇ ಇಷ್ಟು ಮಹತ್ವ ದ್ದಾಗಿರುವುದು. ಮಹಾರಾಜನೆ! ಆದುದರಿಂದಲೇ ನಿನ್ನ ದೇಹವನ್ನು ಮುಟ್ಟಿ ಬೀಸುತ್ತಿರುವ ಈ ವಾಯುವು ಪಾಪಕರ್ಮಿಗಳಾದ ಇವರಿಗೆ ಸುಖದಾಯಕ ವಾಗಿರುವುದು. ಯಾತನೆಯು ಇವರನ್ನು ಬಾಧಿಸುವುದಿಲ್ಲ."

೬೩. ರಾಜನು ಹೇಳುತ್ತಾನೆ:—"ಭದ್ರಮುಖನೆ! ನನ್ನ ಸನ್ನಿಧಾನ ದಿಂದಲೇ ಇವರಿಗೆ ಯಾತನೆಗಳು ಸಂಭವಿಸದಿರುವುದಾದರೇ ನಾನು ಇಲ್ಲಿಯೇ ಕಲ್ಲು ಕಂಬದಂತೆ ನಿಶ್ಚಲನಾಗಿ ನಿಂತುಬಿಡುವೆನು."

೬೪. ಪುರುಷನು ಹೇಳುತ್ತಾನೆ:—"ರಾಜೇಂದ್ರನೆ! ಬಾ, ಹೋಗೋಣ.

ರಾಜೋವಾಚ:—

ನ ಸ್ವರ್ಗೇ ಬ್ರಹ್ಮಲೋಕೇ ವಾ ತತ್ಸುಖಂ ಪ್ರಾಪ್ಯತೇ ನರೈಃ ।
ಯದಾರ್ತಜಂತುಂ ನಿರ್ವಾಣಮಾನೇತುಮಿತಿ ಮೇ ಮತಿಃ ॥ ೬೫ ॥
ತಸ್ಮಾನ್ನ ತಾವದ್ಯಾಸ್ಯಾಮಿ ಯಾವದೇತೇ ಸುದುಃಖಿತಾಃ ।
ಮತ್ಸನ್ನಿಧಾನಾತ್ಸುಖಿನೋ ಭವಂತು ನರಕೌಕಸಃ ॥ ೬೬ ॥
ಪ್ರಾಪ್ಸ್ಯಂತೇ ತೇ ಯದಿ ಸುಖಂ ಬಹವೋ ದುಃಖಿತೇ ಮಯಿ ।
ಕಿಂ ತು ಪ್ರಾಪ್ತಂ ಮಯಾ ಸರ್ವಂ ತಸ್ಮಾತ್ತ್ವಂ ವ್ರಜ ಮಾ ಚಿರಂ ॥ ೬೭ ॥

ಪುರುಷ ಉವಾಚ:—

ಏಷ ಧರ್ಮಶ್ಚ ಶಕ್ರಶ್ಚ ತ್ವಾಂ ನೇತುಂ ಸಮುಪಾಗತೌ ।
ಅವಶ್ಯಮಸ್ಮಾದ್ಗಂತವ್ಯಂ ತಸ್ಮಾತ್ಪಾರ್ಥಿವ ಗಮ್ಯತಾಂ ॥ ೬೮ ॥
ಏತಸ್ಮಿನ್ನಂತರೇ ಧರ್ಮಃ ಶಕ್ರೇಣ ಸಹಿತೋಽಬ್ರವೀತ್ ।
ನಿಮೇ ಪರಮಧರ್ಮಜ್ಞ ಪ್ರೀತಾ ದೇವಗಣಾಸ್ತವ ॥ ೬೯ ॥

---

ನಿನ್ನ ಪುಣ್ಯದಿಂದ ಸಂಪಾದಿಸಿರುವ ಭೋಗಗಳನ್ನನುಭವಿಸಲು ಹೊರಡು. ಈ ಪಾಪಕರ್ಮಿಗಳ ಯಾತನೆಯ ಗೊಡವೆಯನ್ನು ಇಲ್ಲಿಗೆ ಬಿಟ್ಟುಬಿಡು."

೬೫. ರಾಜನು ಹೇಳುತ್ತಾನೆ:—"ಸ್ವರ್ಗದಲ್ಲಿಯೇ ಆಗಲಿ, ಬ್ರಹ್ಮಲೋಕದಲ್ಲಿಯೇ ಆಗಲಿ, ಕಷ್ಟದಲ್ಲಿರುವ ಜಂತುವಿಗೆ ಸೌಖ್ಯವನ್ನುಂಟುಮಾಡುವುದೇ ಜನರಿಗೆ ಪರಮ ಸುಖದಾಯಕವೆಂಬುದಾಗಿ ನನಗೆ ತೋರುತ್ತಿರುವುದು.

೬೬. ಆದುದರಿಂದ ಇವರೆಲ್ಲ ಇಷ್ಟು ದುಃಖದಲ್ಲಿರುವವರೆಗೂ ನಾನು ಇಲ್ಲಿಂದ ಹೋಗುವುದಿಲ್ಲ. ನರಕವಾಸಿಗಳಾದ ಇವರೆಲ್ಲರೂ ನನ್ನ ಸನ್ನಿಧಾನದಿಂದಲಾದರೂ ಸುಖಿಗಳಾಗಲಿ.

೬೭. ನಾನು ದುಃಖಕ್ಕೊಳಗಾದರೂ ಚಿಂತೆಯಿಲ್ಲ. ಅಸಂಖ್ಯಾತರಾದ ಇವರು ಸುಖವನ್ನು ಪಡೆಯುವರಾದರೆ ನನಗೆಲ್ಲ ಸುಖವೂ ಲಭಿಸಿದಂತೆಯೇ ಆಯಿತು. ಆದುದರಿಂದ ನೀನು ತಡಮಾಡದೆ ಹೊರಟುಹೋಗು."

೬೮. ಪುರುಷನು ಹೇಳುತ್ತಾನೆ:—"ಮಹಾರಾಜನೆ! ಇಗೊ, ಈ ಧರ್ಮನೂ ಮಹೇಂದ್ರನೂ ನಿನ್ನನ್ನು ಕರೆದುಕೊಂಡು ಹೋಗಲು ಬಂದಿರುವರು. ಇವರೊಡನೆ ನೀನು ಅವಶ್ಯಕವಾಗಿ ಹೋಗಲೇ ಬೇಕು. ಆದುದರಿಂದ ಹೊರಡಲನುವಾಗು."

೬೯. ಇಷ್ಟರಲ್ಲಿ ಇಂದ್ರನೊಡನೆ ಪ್ರಾಪ್ತನಾದ ಧರ್ಮರಾಜನು ಹೇಳಿದನು. "ಪರಮಧರ್ಮಗಳನ್ನರಿತ ನಿಮಿರಾಜನೆ! ದೇವತಾಗಣಗಳೆಲ್ಲರೂ ನಿನ್ನಲ್ಲಿ ಸುಪ್ರೀತರಾಗಿರುವರು.

ಏಹ್ಯೇಹಿ ಪುರುಷವ್ಯಾಘ್ರ ಕೃತಮೇತಾವತಾ ಪ್ರಭೋ ।
ಸಿದ್ಧಿಃ ಪ್ರಾಪ್ತಾ ತ್ವಯಾ ರಾಜಂಲ್ಲೋಕಾಶ್ಚಾಽಪ್ಯಕ್ಷಯಾಽನ್ವಿತಾಃ॥ ೭೦ ॥
ನ ಚ ಮನ್ಯುಸ್ತ್ವಯಾ ಕಾರ್ಯಃ ಶೃಣು ಮೇ ವಚನಂ ವಿಭೋ ।
ಅವಶ್ಯಂ ನರಕಸ್ತಾವದ್ದ್ರಷ್ಟವ್ಯಃ ಸರ್ವರಾಜಭಿಃ ॥ ೭೧ ॥
ನಯಾಮಿ ತ್ವಾಮಹಂ ಸ್ವರ್ಗಂ ತ್ವಯಾ ಸಮ್ಯಗುಪಾಸಿತಃ ।
ವಿಮಾನವರಮಾರುಹ್ಯ ವಿಮಲಂ ಚಾಽದ್ಯ ಗಮ್ಯತಾಂ ॥ ೭೨ ॥

ನಿಮಿರುವಾಚ :—

ನರಕೇ ಮಾನವಾ ಧರ್ಮ ಪೀಡ್ಯಂತೇಽತ್ರ ಸಹಸ್ರಶಃ ।
ತ್ರಾಹೀತಿ ವಾರ್ತಾಂ ಕ್ರಂದಂತೋ ಮಾಮತೋ ನ ವ್ರಜಾಮ್ಯಹಂ॥ ೭೩ ॥

ಇಂದ್ರ ಉವಾಚ :—

ಕರ್ಮಣಾ ನರಕೇ ಪ್ರಾಪ್ತಿರೇಷಾಂ ಚ ಪಾಪಕರ್ಮಣಾಂ ।
ಸ್ವರ್ಗೇ ತ್ವಯಾಽಪಿ ಗಂತವ್ಯಂ ನೃಪ ಪುಣ್ಯೇನ ಕರ್ಮಣಾ ॥ ೭೪ ॥

ರಾಜೋವಾಚ :—

ಪರಿಜಾನಾಸಿ ಧರ್ಮಜ್ಞ ತ್ವಂ ವಾ ಶಕ್ರ ಶಚೀಪತೇ ।
ವಿಶಿಷ್ಟಂ ಮಮ ಕಿಂ ಪುಣ್ಯಂ ಶುಭಂ ತದ್ವಕ್ತುಮರ್ಹಸಿ ॥ ೭೫ ॥

---

೭೦. ಪುರುಷವ್ಯಾಘ್ರನೆ! ನನ್ನೊಡನೆ ಬಾ. ನೀನು ಇಷ್ಟನ್ನು ಮಾಡಿದುದೇ ಸಾಕಾಗಿದೆ. ರಾಜೇಂದ್ರನೆ! ನಿನಗೆ ತಪಸ್ಸಿದ್ಧಿಯೂ ಲಭಿಸಿರುವುದು. ನಾಶರಹಿತಗಳಾದ ಲೋಕಗಳನ್ನೂ ಜಯಿಸಿರುವೆ.

೭೧. ಸ್ವಾಮಿಯೆ! ನೀನು ಕೋಪವನ್ನು ಮಾಡಬಾರದು. ನನ್ನ ಮಾತನ್ನು ಕೇಳು. ಸಮಸ್ತರಾಜರೂ ಅವಶ್ಯಕವಾಗಿ ನರಕದ ದರ್ಶನವನ್ನು ಮಾಡಬೇಕು.

೭೨. ನಿನ್ನಿಂದ ಚೆನ್ನಾಗಿ ಉಪಾಸಿತನಾದ ನಾನು ನಿನಗೆ ನಮಸ್ಕರಿಸುತ್ತಿರುವೆನು. ನಾನೇ ನಿನ್ನನ್ನು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗುವೆನು. ನಿರ್ಮಲವಾದ ಈ ಉತ್ತಮ ವಿಮಾನವನ್ನೇರಿ ಹೊರಡು.''

೭೩. ನಿಮಿಯು ಹೇಳುತ್ತಾನೆ:—'' ಧರ್ಮರಾಜನೆ! ಸಾವಿರಾರು ಮಾನವರು ನರಕದಲ್ಲಿ ಬಿದ್ದು ಸಂಕಟಗಳನ್ನನುಭವಿಸುತ್ತ ನನ್ನನ್ನು ಕುರಿತು ಕಾಪಾಡಬೇಕೆಂದು ಮೊರೆಯಿಡುತ್ತಿರುವರು. ಆದುದರಿಂದ ನಾನು ಬರುವುದಿಲ್ಲ.''

೭೪. ಇಂದ್ರನು ಹೇಳುತ್ತಾನೆ:—'' ಪಾಪಕರ್ಮಗಳನ್ನು ಮಾಡಿದ ಈ ಜೀವರು ತಮ್ಮ ಕರ್ಮದ ಫಲವಾಗಿ ನರಕದಲ್ಲಿ ಬಿದ್ದಿರುವರು. ನೀನೂ ನಿನ್ನ ಪುಣ್ಯಕರ್ಮಗಳ ವಶದಿಂದ ಸ್ವರ್ಗಲೋಕಕ್ಕೆ ಹೋಗಲು ಅರ್ಹನಾಗಿರುವೆ.''

೭೫. ರಾಜನು ಹೇಳುತ್ತಾನೆ.—'' ಧರ್ಮರಾಜನೆ! ಶಚೀಪತಿಯಾದ ಇಂದ್ರನೆ! ನೀವು ಎಲ್ಲವನ್ನೂ ಬಲ್ಲವರು. ನಾನು ಈ ವಿಶೇಷ ಪುಣ್ಯಕ್ಕೆ ಕಾರಣವಾದ ಯಾವ ಶುಭಕಾರ್ಯವನ್ನು ಮಾಡಿರುವೆನೆಂದು ಹೇಳುವವನಾಗು.''

ಧರ್ಮ ಉವಾಚ :—

ಆಶ್ವಿನಸ್ಯ ತು ಮಾಸಸ್ಯ ಕೃಷ್ಣಪಕ್ಷೇ ಚತುರ್ದಶೀ ।
ತಸ್ಯಾಂ ತ್ವಯಾ ಮಹಾಬಾಹೋ ಮಹಾಕಾಲವನೋತ್ತಮೇ ।
ದೃಷ್ಟೋ ದೇವಃ ಸುವಿಖ್ಯಾತಃ ಸ್ವರ್ಗದೋಽನರಕೇಶ್ವರಃ ॥ ೭೬ ॥
ತದ್ವಿಶಿಷ್ಟಂ ಚ ತೇ ಪುಣ್ಯಂ ತಸ್ಯ ಸಂಖ್ಯಾ ನ ವಿದ್ಯತೇ ।
ಸ್ವಕರ್ಮೋಪಾರ್ಜಿತಂ ಪುಣ್ಯಂ ಭುಂಕ್ಷ್ವ ರಾಜನ್ಯಥಾಸುಖಂ ।
ಏತೇ ನಾರಕಿಕಾಃ ಸರ್ವೇ ಕ್ಷಪಯಂತು ಸ್ವಕರ್ಮಜಾಂ ॥ ೭೭ ॥

ರಾಜೋವಾಚ :—

ಕಥಂ ಸ್ಪೃಹಾಂ ಕರಿಷ್ಯಂತಿ ಸತ್ಸಂಗೇಷು ಚ ಮಾನವಾಃ ।
ಯದಿ ಮತ್ಸನ್ನಿಧಾವೇಷಾಮುತ್ಕರ್ಷೋ ನೋಪಜಾಯತೇ ॥ ೭೮ ॥
ತಸ್ಮಾದ್ಯತ್ಸುಕೃತಂ ಕಿಂಚಿದ್ವಿಶಿಷ್ಟತರಮಸ್ತಿ ವೈ ।
ತೇನ ಮುಚ್ಯಂತು ನರಕಾತ್ಪಾಪಿನೋ ಯಾತನಾಗತಾಃ ॥ ೭೯ ॥

ಧರ್ಮ ಉವಾಚ :—

ರಾಜಂಸ್ತ್ವಯಾ ಕೃತಂ ಪೂರ್ವೇಽನರಕೇಶ್ವರದರ್ಶನಂ ।
ತದುತ್ಪನ್ನಸ್ಯ ಪುಣ್ಯಸ್ಯ ಕಲಾಮೇಭ್ಯಃ ಪ್ರಯಚ್ಛ ವೈ ॥ ೮೦ ॥

---

೭೬. ಧರ್ಮನು ಹೇಳುತ್ತಾನೆ:—''ಆಶ್ವಯುಜಮಾಸದಲ್ಲೊಮ್ಮೆ ಮಹಾಪರಾಕ್ರಮಿಯಾದ ನೀನು ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಿ ಉತ್ತಮವಾದ ಮಹಾಕಾಲವನಕ್ಷೇತ್ರದಲ್ಲಿ ಹೋಗಿದ್ದೆ. ಅಲ್ಲಿ ಬಹು ಪ್ರಖ್ಯಾತನೂ ಸ್ವರ್ಗಫಲಪ್ರದನೂ ಆದ ಅನರಕೇಶ್ವರಮಹಾದೇವನನ್ನು ದರ್ಶನಮಾಡಿರುವೆ.

೭೭. ನಿನ್ನ ಪುಣ್ಯವಿಶೇಷವು ಅದರಿಂದುಂಟಾಗಿರುವುದು. ಅದನ್ನು ಅಳೆಯಲಾಗುವುದಿಲ್ಲ. ರಾಜನೆ! ನಿನ್ನ ಕರ್ಮದಿಂದ ಸಂಪಾದಿಸಿರುವ ಸೌಖ್ಯವನ್ನು ಯಥಾಸುಖವಾಗಿ ಅನುಭವಿಸು. ನರಕವಾಸಿಗಳಾದ ಇವರೂ ತಮ್ಮ ಪಾಪಗಳ ಫಲಗಳನ್ನು ಅನುಭವಿಸಿ ಕಳೆದುಕೊಳ್ಳಲಿ.''

೭೮–೭೯. ರಾಜನು ಹೇಳುತ್ತಾನೆ:—''ನನ್ನ ಸಾಮೀಪ್ಯದಿಂದ ಇವರಿಗೆ ಸ್ವಲ್ಪವಾದರೂ ಸೌಖ್ಯವುಂಟಾಗದಿದ್ದರೆ ಮುಂದೆ ಮನುಜರು ಸಾಧುಸಂತರ ಸಹವಾಸದಲ್ಲಿ ಆಶೆಯನ್ನೇಕೆ ಮಾಡುವರು? ಆದುದರಿಂದ ನನ್ನಲ್ಲಿ ಯಾವುದಾದರೂ ಪುಣ್ಯವಿಶೇಷವಿರುವುದಾದರೆ ಅದರ ಬಲದಿಂದಲೇ ನರಕದಲ್ಲಿ ಯಾತನೆಗಳನ್ನನುಭವಿಸುತ್ತಿರುವ ಈ ಪಾಪಿಗಳೆಲ್ಲರೂ ಮುಕ್ತರಾಗಲಿ.''

೮೦. ಧರ್ಮನು ಹೇಳುತ್ತಾನೆ:—''ರಾಜನೆ! ಹಿಂದೆ ನೀನು ಅನರಕೇಶ್ವರನ ದರ್ಶನವನ್ನು ಮಾಡಿರುವೆ. ಅದರಿಂದುಂಟಾದ ಪುಣ್ಯದಲ್ಲಿ ಒಂದಂಶವನ್ನು ಇವರಿಗೆ ಕೊಡು.

ತತ್ಪುಣ್ಯಸ್ಯ ಪ್ರಭಾವೇಣ ಮೋಕ್ಷ್ಯಂತೇ ನರಕಾದಿಮೇ ।
ತಥಾ ಕೃತೇ ತತಸ್ತೇನ ವಿಮುಕ್ತಾ ನರಕಾಚ್ಚ ತೇ ॥ ೮೧ ॥
ತತೋಽಬ್ರವೀದ್ಧರ್ಮರಾಜೋ ನಿಮಿಂ ಶಕ್ರಸಮನ್ವಿತಃ ।
ಏವಂ ಶ್ರೇಷ್ಠತರಂ ಸ್ಥಾನಂ ತ್ವಯಾ ಪ್ರಾಪ್ತಂ ಮಹೀಪತೇ ॥ ೮೨ ॥
ಏತಾಂಶ್ಚ ನಾರಕಾನ್ ಪಶ್ಯ ವಿಮುಕ್ತಾನ್ಪಾಪಕರ್ಮಣಃ ।
ತತೋಽಪತತ್ಪುಷ್ಪವೃಷ್ಟಿಸ್ತಸ್ಯೋಪರಿ ಮಹೀಪತೇಃ ॥ ೮೩ ॥
ವಿಮಾನಂ ಚಾಽಧಿರೋಪ್ಯೈನಂ ಸ್ವರ್ಲೋಕಮನಯದ್ಧರಿಃ ।
ಯೇ ಯೇ ತತ್ರಾಽಭವನ್ಪಾಪಾ ಯಾತನಾಭ್ಯಃ ಪರಿಚ್ಯುತಾಃ ।
ಪ್ರಭಾವಾತ್ತಸ್ಯ ದೇವಸ್ಯ ಸ್ವರ್ಗಲೋಕಂ ಗತಾಃ ಪ್ರಿಯೇ ॥ ೮೪ ॥
ಅತೋ ದೇವಃ ಸುವಿಖ್ಯಾತಃ ಸ ದೇವೋಽನರಕೇಶ್ವರಃ ।
ಸ್ತುತೋ ದೇವಗಣೈಃ ಸರ್ವೈರ್ನರಕಾದವತಾರಕಃ ॥ ೮೫ ॥
ಜಾತಃ ಸ ಏವ ಸುಕೃತೀ ಕುಲಂ ತೇನೈವ ಪಾವಿತಂ ।
ಯಃ ಪಶ್ಯತಿ ನರೋ ನಿತ್ಯಂ ದೇವಂ ಚಾಽನರಕೇಶ್ವರಂ ॥ ೮೬ ॥

---

೮೧. ಆ ಪುಣ್ಯದ ಪ್ರಭಾವದಿಂದಲೇ ಇವರೆಲ್ಲರೂ ನರಕದಿಂದ ಉದ್ಧೃತರಾಗುವರು.'' ಆ ರಾಜನು ಹಾಗೆಯೇ ಮಾಡಲು ಅವರೆಲ್ಲರೂ ನರಕದಿಂದ ಮುಕ್ತರಾಗಿ ಹೊರಟುಹೋದರು.

೮೨. ಆಗ ಮಹೇಂದ್ರಸಹಿತನಾದ ಧರ್ಮರಾಜನು ನಿಮಿಮಹಾರಾಜನಿಗೆ ಹೇಳಿದನು. ''ಪೃಥಿವೀಶ್ವರನೆ! ಇಂತಹ ಶ್ರೇಷ್ಠತರವಾದ ಸ್ಥಾನವು ನಿನಗೆ ಲಭಿಸಿರುವುದಷ್ಟೆ.

೮೩. ಪಾಪಕರ್ಮಗಳನ್ನುಮಾಡಿ ನರಕಯಾತನೆಗಳನ್ನನುಭವಿಸುತ್ತಿದ್ದರೂ ಇವರು ಮುಕ್ತರಾಗಿರುವುದನ್ನು ನೋಡು.'' ಆಗ ಆ ಮಹಾರಾಜನ ತಲೆಯ ಮೇಲೆ ದೇವಲೋಕದಿಂದ ಪುಷ್ಪವೃಷ್ಟಿಯು ಕರೆಯಿತು.

೮೪. ಆತನನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಮಹೇಂದ್ರನು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋದನು. ಯಾವ ಯಾವ ಪಾತಕಿಗಳು ಅಲ್ಲಿದ್ದರೊ, ಅವರೆಲ್ಲರೂ ತಮ್ಮ ಯಾತನೆಗಳನ್ನು ಕಳೆದುಕೊಂಡರು. ಪ್ರಿಯಳೆ! ಆ ಅನರಕೇಶ್ವರದೇವನ ಪ್ರಭಾವದಿಂದ ಅವರು ಸ್ವರ್ಗಲೋಕವನ್ನು ಸೇರುವವರಾದರು.

೮೫. ಆದುದರಿಂದ ಅನರಕೇಶ್ವರದೇವನೂ ಬಹಳವಾಗಿ ಪ್ರಖ್ಯಾತಿಯನ್ನು ಪಡೆದನು. ನರಕದಿಂದ ಉದ್ಧರಿಸುವ ಮಹಿಮೆಯುಳ್ಳ ಆತನನ್ನು ದೇವಗಣಗಳೂ ಸ್ತೋತ್ರಮಾಡಿದರು.

೮೬—೮೭. ಯಾವ ಮನುಜನು ನಿತ್ಯವೂ ಅನರಕೇಶ್ವರದೇವನನ್ನು ನೋಡು

ಯೇಽರ್ಚಯಂತಿ ನರಾ ಭಕ್ತ್ಯಾ ದೇವಂ ಚಾಽನರಕೇಶ್ವರಂ ।
ತೇಷಾಂ ವಿಲೀಯತೇ ಪಾಪಂ ಪೂರ್ವಜನ್ಮಶತೋದ್ಭವಂ ॥ ೮೭ ॥
ಯೇಽನುಮೋದಂತಿ ದೇವಸ್ಯ ದರ್ಶನಂ ಪರ್ವತಾತ್ಮಜೇ ।
ತೇಽಪಿ ಪಾಪವಿನಿರ್ಮುಕ್ತಾಃ ಪ್ರಯಾಂತಿ ಮಮ ಮಂದಿರಂ ॥ ೮೮ ॥
ಸಮತೀತಂ ಭವಿಷ್ಯಚ್ಚ ಕುಲಾನಾಮಯುತಂ ನರಃ ।
ಮಮ ಲೋಕಂ ನಯತ್ಯಾಶು ತಸ್ಯ ಲಿಂಗಸ್ಯ ದರ್ಶನಾತ್ ॥ ೮೯ ॥
ಶಿವಯೋಗಸಮಾಯುಕ್ತಾ ಕೃಷ್ಣಾ ಯಾ ಚ ಚತುರ್ದಶೀ ।
ಸಾ ಪ್ರೋಕ್ತಾ ವಲ್ಲಭಾ ತಸ್ಯ ಸರ್ವಪಾಪಪ್ರಣಾಶಿನೀ ॥ ೯೦ ॥
ಯೇ ಚಾಯಾಂತಿ ನರಾಸ್ತಸ್ಯಾಂ ದೇವಂ ಚಾಽನರಕೇಶ್ವರಂ ।
ಉಪೋಷ್ಯ ಪಾಪೈರ್ಮುಚ್ಯಂತೇ ತೇ ನರಾಃ ಶತಜನ್ಮಜೈಃ ॥ ೯೧ ॥
ಕರ್ಮಣಾ ಮನಸಾ ವಾಚಾ ಯತ್ಪಾಪಂ ಸಮುಪಾರ್ಜಿತಂ ।
ತತ್ಕ್ಷಾಲಯತಿ ದೇವೋಽಸೌ ತಿಥೌ ತಸ್ಯಾಂ ಸಮರ್ಚಿತಃ ॥ ೯೨ ॥

---

ತ್ತಿರುವನೊ, ಅವನ ಜನ್ಮವೇ ಸಾರ್ಥಕವು. ಅವನಿಂದ ಕುಲವೇ ಪವಿತ್ರವಾಗುವುದು. ಯಾರು ಭಕ್ತಿಭಾವದಿಂದ ಅನರಕೇಶ್ವರ ಮಹಾಲಿಂಗದ ಪೂಜೆಯನ್ನು ಮಾಡುವರೊ, ಅವರು ಹಿಂದಿನ ಒಂದು ನೂರು ಜನ್ಮಗಳಲ್ಲಿ ಸಂಪಾದಿಸಿರುವ ಪಾಪವೂ ನಾಶವಾಗುವುದು.

೮೮. ಪರ್ವತರಾಜಕುಮಾರಿಯೆ! ಯಾರು ಈ ದೇವದೇವನ ದರ್ಶನವನ್ನು ಅನುಮೋದಿಸುವರೊ, ಅವರೂ ಪಾತಕಗಳನ್ನು ಕಳೆದುಕೊಂಡು ನನ್ನ ಲೋಕವನ್ನು ಸೇರುವರು.

೮೯. ಆ ಮಹಾಲಿಂಗದ ದರ್ಶನವನ್ನು ಮಾಡಿದ ಮಾತ್ರದಿಂದಲೇ ಮಾನವನು ಹಿಂದೆ ಕಳೆದ ಮತ್ತು ಮುಂದೆ ಬರಲಿರುವ ಹತ್ತುಸಾವಿರ ಕುಲದವರನ್ನೂ ನನ್ನ ಲೋಕಕ್ಕೆ ಕರೆತರುವನು.

೯೦. ಯಾವ ಮಾಸದಲ್ಲಿಯಾಗಲಿ ಕೃಷ್ಣಪಕ್ಷದಲ್ಲಿ ಚತುರ್ದಶೀ ತಿಥಿಯು ಶಿವಯೋಗದೊಡಗೂಡಲು ಅದಕ್ಕೆ ವಲ್ಲಭಾತಿಥಿಯೆಂದು ಹೆಸರು. ಇದು ಸಕಲ ಪಾತಕಗಳನ್ನೂ ನಾಶಗೊಳಿಸುವ ಉತ್ತಮದಿನವಾಗಿರುವುದು.

೯೧. ಆ ಶುಭದಿವಸದಲ್ಲಿ ಉಪವಾಸವನ್ನುಮಾಡಿ ಯಾವ ಮಾನವರು ಅನರಕೇಶ್ವರನ ದರ್ಶನಕ್ಕಾಗಿ ಬಂದು ಸೇರುವರೊ, ಅವರು ನೂರು ಜನ್ಮಗಳಲ್ಲಿ ಆರ್ಜಿಸಿದ ಪಾತಕಗಳನ್ನೂ ಕಳೆದುಕೊಳ್ಳುವರು.

೯೨. ಆ ಶುಭತಿಥಿಯಲ್ಲಿ ಪೂಜೆಗೊಂಡ ಅನರಕೇಶ್ವರನು ಕರ್ಮದಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ ಸಂಪಾದಿಸಿರುವ ಸಮಸ್ತಪಾಪವನ್ನೂ ತೊಳೆದುಹಾಕುವನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಜಟೇಶ್ವರಸ್ಯ ದೇವಸ್ಯ ಶೃಣು ಮಾಹಾತ್ಮ್ಯಮುತ್ತಮಂ ॥ ೯೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಅನರಕೇಶ್ವರಮಾಹಾತ್ಮ್ಯವರ್ಣನಂ"
ನಾಮ ಸಪ್ತವಿಂಶೋಽಧ್ಯಾಯಃ

---

೯೩. ದೇವಿಯೆ! ಇಂತು ಪಾಪನಾಶಕವಾದ ಅನರಕೇಶ್ವರನ ಪ್ರಭಾವವನ್ನು ನಿನಗೆ ವರ್ಣಿಸಿ ಹೇಳಿದೆನು. ಇನ್ನು ಜಟೇಶ್ವರಮಹಾಲಿಂಗದ ಉತ್ತಮ ಮಾಹಾತ್ಮ್ಯವನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಅನರಕೇಶ್ವರಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟವಿಂಶೋಽಧ್ಯಾಯಃ

## ಜಟೇಶ್ವರಮಾಹಾತ್ಮ್ಯವರ್ಣನಂ

ಶ್ರೀ ದೇವದೇವ ಉವಾಚ:—

**ಅಷ್ಟಾವಿಂಶತಿಕಂ ವಿದ್ಧಿ ವಿಖ್ಯಾತಂ ಚ ಜಟೇಶ್ವರಂ ।**
**ಯಸ್ಯ ದರ್ಶನಮಾತ್ರೇಣ ಮುಕ್ತೋ ಭವತಿ ಮಾನವಃ ॥ ೧ ॥**
**ಪುರಾ ರಾಥಂತರೇ ಕಲ್ಪೇ ವೀರಧನ್ವಾ ಮಹೀಪತಿಃ ।**
**ಧರ್ಮಾತ್ಮಾ ಚ ಯಶಸ್ವೀ ಚ ಬಭೂವ ಭುವಿ ವಿಶ್ರುತಃ ॥ ೨ ॥**
**ಸ ಕದಾಚಿದ್ವನಂ ಗತ್ವಾ ಮೃಗಹೇತೋರ್ವರಾನನೇ ।**
**ವ್ಯಾಪಾದಯನ್ಮೃಗಗಣಾನ್ಧನುಷಾ ಕ್ರೋಧವಿಹ್ವಲಃ ॥ ೩ ॥**
**ಜಗಾಮ ತತ್ರ ಯತ್ರಾಽಽಸನ್ಭ್ರಾತರಃ ಪಂಚ ಸುವ್ರತಾಃ ।**
**ಸಂವರ್ತಸ್ಯ ಸುತಾ ದೇವಿ ಮೃಗರೂಪೇಣ ಸಂಸ್ಥಿತಾಃ ॥ ೪ ॥**
**ತೇ ಕದಾಚಿದ್ವನೇ ಪಂಚ ದೃಷ್ಟ್ವಾ ಹರಿಣಪೋತಕಾನ್ ।**
**ಶ್ವಸತೋ ಜಾತಮಾತ್ರಾಂಶ್ಚ ಕೌತೂಹಲಸಮನ್ವಿತಾಃ ।**
**ಏಕೈಕಂ ಜಗೃಹುಸ್ತತ್ರ ಮೃತಾಸ್ತೇತ್ವತಿದುಃಖಿತಾಃ ॥ ೫ ॥**

---

## ಕನ್ನಡದ ಅನುವಾದ

### ಜಟೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಎಲೌ ಪಾರ್ವತಿಯೆ! ಇಪ್ಪತ್ತೆಂಟನೆಯ ಮಹಾಲಿಂಗವೇ ಪ್ರಖ್ಯಾತವಾದ ಜಟೇಶ್ವರನು. ಅದನ್ನು ನೋಡುವ ಮಾತ್ರದಿಂದಲೇ ಮನುಷ್ಯನು ಮುಕ್ತನಾಗುವನು.

೨. ಹಿಂದೆ ರಥಂತರಕಲ್ಪದಲ್ಲಿ ವೀರಧನ್ವನೆಂಬ ಚಕ್ರವರ್ತಿಯೊಬ್ಬನಿದ್ದನು. ಆತನು ಧರ್ಮನಿರತನೂ ಯಶಸ್ಸಂಪನ್ನನೂ ಆಗಿ ಲೋಕದಲ್ಲಿ ಪ್ರಖ್ಯಾತಿಯನ್ನು ಗಳಿಸಿದ್ದನು.

೩. ಮಂಗಳಾನನೆಯೆ! ಮೃಗಯಾವಿನೋದಕ್ಕಾಗಿ ಆತನೊಮ್ಮೆ ಅರಣ್ಯವನ್ನು ಪ್ರವೇಶಿಸಿ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಬಿಲ್ಲಿನಿಂದ ಅನೇಕ ಮೃಗಸಮೂಹಗಳನ್ನು ನಿಗ್ರಹಿಸುತ್ತಿದ್ದನು.

೪. ಇಂತು ಬರುತ್ತಿರಲು ಸಂವರ್ತಮಹಾಮುನಿಯ ಮಕ್ಕಳೂ ಸದಾಚಾರಿಗಳೂ ಆದ ಐವರು ಅಣ್ಣತಮ್ಮಂದಿರು ಮೃಗರೂಪಗಳನ್ನು ಧರಿಸಿ ಒಂದೆಡೆಯಲ್ಲಿ ಆಡುತ್ತಿದ್ದರು.

೫. ಅವರೊಮ್ಮೆ ವನದಲ್ಲಿ ಆಗತಾನೇ ಹುಟ್ಟಿ ಉಸಿರಾಡುತ್ತಿರುವ ಐದು ಜಿಂಕೆಯ ಮರಿಗಳನ್ನು ಕಂಡು ಬಹಳ ಕುತೂಹಲವುಳ್ಳವರಾಗಿ ಒಬ್ಬೊಬ್ಬರೂ

ತತಃ ಸರ್ವೇ ಚ ತೇ ಪಂಚ ಯಯುರ್ಯ್ಯ ಪಿತುರಂತಿಕಂ ॥ ೬ ॥
ಪ್ರಾಯಶ್ಚಿತ್ತಂ ಸಮಾಹಂತಃ ಸಂವರ್ತಂ ಸಾಂಸದ್ಯೈರ್ವೃತಂ ।
ಊಚುಸ್ತೇ ವಚನಂ ಚೇದಂ ಮೃಗಹಿಂಸಾಶ್ರಿತಂ ತದಾ ॥ ೭ ॥
ಜಾತಮಾತ್ರಾ ಮೃಗಾಃ ಪಂಚ ಅಸ್ಮಾಭಿರ್ನಿಹತಾಃ ಪ್ರಭೋ ।
ಅಕಾಮತಸ್ತತೋಽಸ್ಮಾಕಂ ಪ್ರಾಯಶ್ಚಿತ್ತಂ ವಿಧೀಯತಾಂ ॥ ೮ ॥
ಊಚೇ ಸ ಶುದ್ಧಿಮಾಪ್ನೋತಿ ಪ್ರಾಯಶ್ಚಿತ್ತೇ ಕೃತೇ ಸತಿ ।
ಅನಧೀತ್ಯ ಧರ್ಮಶಾಸ್ತ್ರಂ ಪ್ರಾಯಶ್ಚಿತ್ತಂ ದದಾತಿ ಯಃ ।
ಪ್ರಾಯಶ್ಚಿತ್ತೀ ಭವೇತ್ಪೂತಃ ಕಿಲ್ಬಿಷಂ ದಾತರಿ ವ್ರಜೇತ್ ॥ ೯ ॥
ಧರ್ಮಶಾಸ್ತ್ರಸಮಾರೂಢಾ ವೇದಖಡ್ಗಧರಾ ದ್ವಿಜಾಃ ।
ಕ್ರೀಡಾರ್ಥಮಪಿ ಯದ್ಬ್ರೂಯುಃ ಸ ಧರ್ಮಃ ಪರಮಃ ಸ್ಮೃತಃ ॥ ೧೦ ॥
ಬ್ರಹ್ಮಚ್ಛಿದ್ರಂ ಜಪಚ್ಛಿದ್ರಂ ಯಚ್ಛಿದ್ರಂ ಯಜ್ಞಕರ್ಮಣಿ ।
ಅಚ್ಛಿದ್ರಂ ಜಾಯತೇ ಸರ್ವಂ ಬ್ರಾಹ್ಮಣೈರುಪಪಾದಿತಂ ॥ ೧೧ ॥

---

ಒಂದು ಮರಿಯನ್ನು ಹಿಡಿಯಲು ಅವು ಸತ್ತುಹೋದುವು. ಅದನ್ನು ಕಂಡು ಅವರು ಬಹಳ ದುಃಖಿತರಾದರು.

೬–೭. ಆಗ ಆ ಐವರೂ ಕೂಡಿ ತಂದೆಯ ಬಳಿಗೆ ಹೋದರು. ಮತ್ತು ಸಭಾಸದರಿಂದಾವೃತನಾಗಿ ಕುಳಿತಿದ್ದ ಆತನಿಂದ ಪ್ರಾಯಶ್ಚಿತ್ತವನ್ನು ತಿಳಿಯುವ ಅಪೇಕ್ಷೆಯಿಂದ ತಾವು ಮೃಗಶಿಶುಗಳನ್ನು ಹಿಂಸಿಸಿದ ಕೃತ್ಯವನ್ನು ಈರೀತಿಯಲ್ಲಿ ಬಿನ್ನವಿಸಿದರು.

೮. "ಪ್ರಭುವೆ! ಆಗತಾನೆ ಹುಟ್ಟಿದ ಐದು ಜಿಂಕೆಯ ಮರಿಗಳು ನಮ್ಮಿಂದ ಮರಣವನ್ನೈದಿದುವು. ಇದನ್ನು ನಾವು ಬುದ್ಧಿಪೂರ್ವಕವಾಗಿ ಮಾಡಲಿಲ್ಲ. ಆದುದರಿಂದ ನಮಗೆ ತಕ್ಕ ಪ್ರಾಯಶ್ಚಿತ್ತವು ವಿಧಿಸಲ್ಪಡಲಿ."

೯. ಆಗ ತಂದೆಯಿಂತೆಂದನು. "ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಮಾನವನು ಪರಿಶುದ್ಧನಾಗುವನು. ಧರ್ಮಶಾಸ್ತ್ರಗಳನ್ನು ಚೆನ್ನಾಗಿ ತಿಳಿಯದವನು ಪ್ರಾಯಶ್ಚಿತ್ತವನ್ನು ವಿಧಿಸಿದರೆ, ಆ ಪ್ರಾಯಶ್ಚಿತ್ತವನ್ನು ಮಾಡಿಕೊಂಡವನು ಮಾತ್ರ ಪುನೀತನಾಗುವನು. ಆದರೆ ಅವನ ಪಾಪವು ಹೇಳಿದವನಿಗೆ ಅಂಟಿಕೊಳ್ಳುವುದು.

೧೦. ಧರ್ಮಶಾಸ್ತ್ರಗಳೆಂಬ ಸಿಂಹಾಸನವನ್ನೇರಿ ವೇದರಾಶಿಯೆಂಬ ಖಡ್ಗವನ್ನು ಕೈಯಲ್ಲಿ ಹಿಡಿದಿರುವ ಬ್ರಾಹ್ಮಣರು ಹುಡುಗಾಟಕ್ಕಾಗಿ ಹೇಳಿದುದೂ ಸಹ ಉತ್ತಮಧರ್ಮವೆಂದೇ ಉಕ್ತವಾಗಿರುವುದು.

೧೧. ಬ್ರಹ್ಮಕರ್ಮದಲ್ಲಿಯಾಗಲಿ, ಜಪದಲ್ಲಿಯಾಗಲಿ, ಯಜ್ಞಾದಿಕರ್ಮಗಳಲ್ಲಿಯಾಗಲಿ ಎಷ್ಟೇ ನ್ಯೂನಾತಿರೇಕಗಳಿದ್ದರೂ, ಬ್ರಾಹ್ಮಣರು ಅನುಮೋದಿಸಿದರೆ ಅವುಗಳೆಲ್ಲವೂ ಸಾಂಗಗಳೇ ಆಗುವುವು.

'ಅಚ್ಛಿದ್ರಮಿತಿ ಯದ್ವಾಕ್ಯಂ ವದಂತಿ ಕ್ಷಿತಿದೇವತಾಃ ।
ಪ್ರಣಶ್ಯತ್ಯಖಿಲಂ ಪಾಪಮಗ್ನಿಷ್ಟೋಮಫಲಂ ಭವೇತ್ ॥ ೧೨ ॥
ಇತ್ಯೇವಂ ವದತಿ ಶ್ರೇಷ್ಠೇ ಸಂವರ್ತೇ ದ್ವಿಜಸತ್ತಮೇ ।
ಸಮಾಗತಾಶ್ಚ ಮುನಯೋ ಭೃಗ್ವತ್ರ್ಯಂಗಿರಸಾದಯಃ ॥ ೧೩ ॥
ತೇಷಾಮರ್ಥೇ ಯಥಾವೃತ್ತಂ ಕಥಯಾಮಾಸುರೇವ ತೇ ।
ಸಂವರ್ತಸ್ಯ ಸುತಾ ದೀನಾ ಭಕ್ತಿನಮ್ರಾಃ ಪುನಃ ಪುನಃ ॥ ೧೪ ॥
ತೇಽಪ್ಯಾಹುರ್ಧರ್ಮಶಾಸ್ತ್ರಾಣಿ ವಿಹಿತಾನಿ ಯಥಾರ್ಥತಃ ।
ಪ್ರಾಯಶ್ಚಿತ್ತಂ ಯಥೋದ್ದಿಷ್ಟಂ ದೇಶಕಾಲವಿಭಾಗತಃ ॥ ೧೫ ॥
ಅಶೀತಿರ್ಯಸ್ಯ ವರ್ಷಾಣಿ ಬಾಲೋ ವಾಽಪ್ಯೂನಷೋಡಶಃ ।
ಪ್ರಾಯಶ್ಚಿತ್ತಾರ್ಧಮರ್ಹಂತಿ ಸ್ತ್ರಿಯೋ ವ್ಯಾಧಿತಸ್ಯ ಚ ॥ ೧೬ ॥
ದೇಶಂ ಕಾಲಂ ವಯಃ ಶಕ್ತಿಂ ಪಾಪಂ ಚಾಽವೇಕ್ಷ್ಯ ಯತ್ನತಃ ।
ಪ್ರಾಯಶ್ಚಿತ್ತಂ ಪ್ರಕಲ್ಪ್ಯಂ ಸ್ಯಾದಿತಿ ಧರ್ಮೋ ವ್ಯವಸ್ಥಿತಃ ॥ ೧೭ ॥

---

೧೨. ಭೂದೇವತೆಗಳಾದ ಬ್ರಾಹ್ಮಣರು ಅಚ್ಛಿದ್ರವೆಂಬ ವಾಕ್ಯವನ್ನು ಹೇಳುವ ಮಾತ್ರದಿಂದಲೇ ಕರ್ತೃವಿನ ಸಮಸ್ತ ಪಾತಕಗಳೂ ನಾಶವಾಗುವುವು. ಮತ್ತು ಆತನಿಗೆ ಅಗ್ನಿಷ್ಟೋಮವನ್ನು ಮಾಡಿದ ಫಲವೂ ಲಭಿಸುವುದು.''

೧೩. ಇಂತೆಂದು ಶ್ರೇಷ್ಠನೂ ಬ್ರಾಹ್ಮಣೋತ್ತಮನೂ ಆದ ಸಂವರ್ತನು ಹೇಳುತ್ತಿರಲು ಭೃಗು, ಅತ್ರಿ, ಅಂಗಿರನೇ ಮುಂತಾದ ಅನೇಕ ಬ್ರಾಹ್ಮಣಶ್ರೇಷ್ಠರು ಅಲ್ಲಿಗೆ ಬಂದು ಸೇರಿದರು.

೧೪. ದೀನರೂ ಭಕ್ತಿಯುಕ್ತರೂ ಆದ ಸಂವರ್ತನ ಪುತ್ರರು ಅವರಿಗೆಲ್ಲ ಮತ್ತೆ ಮತ್ತೆ ನಮಸ್ಕರಿಸುತ್ತ ಅವರಿಗೆ ತಿಳಿಯುವಂತೆ ತಮ್ಮ ಮಹ್ಯತ್ತವನ್ನು ಯಥಾವತ್ತಾಗಿ ತಿಳಿಸಿದರು.

೧೫. ಅವರೂ ಸಹ ವಿಹಿತಗಳಾದ ಧರ್ಮಶಾಸ್ತ್ರಗಳನ್ನೂ, ದೇಶಕಾಲಗಳಿಗನುಸಾರವಾಗಿ ಪ್ರಾಯಶ್ಚಿತ್ತಗಳು ನಡೆಯಬೇಕಾದ ಕ್ರಮಗಳನ್ನೂ ಯಥಾರ್ಥವಾಗಿ ತಿಳಿಸಿದರು.

೧೬. "ಎಂಬತ್ತು ವರ್ಷಗಳಿಗೆ ಹೆಚ್ಚಿನ ವಯಸ್ಸಿನವನೂ, ಹದಿನಾರು ವರ್ಷಗಳಾಗದವನೂ, ಸ್ತ್ರೀಯರೂ, ವ್ಯಾಧಿಪೀಡಿತರೂ ಶಾಸ್ತ್ರೋಕ್ತ ಪ್ರಾಯಶ್ಚಿತ್ತದಲ್ಲಿ ಅರ್ಧಕ್ಕೆ ಮಾತ್ರ ತಕ್ಕವರಾದವರು.

೧೭. ದೇಶ, ಕಾಲ, ವಯಸ್ಸು, ದೇಹದಾರ್ಢ್ಯ, ಪಾಪದ ಹಿರಿಮೆ—ಇವುಗಳನ್ನು ಜಾಗರೂಕತೆಯಿಂದ ಪರೀಕ್ಷಿಸಿ ಪ್ರಾಯಶ್ಚಿತ್ತವನ್ನು ವಿಧಿಸಬೇಕೆಂದೇ ಧರ್ಮಶಾಸ್ತ್ರವು ವ್ಯವಸ್ಥಿತವಾಗಿರುವುದು.

ಇದಾನೀಂ ಮೃಗಚರ್ಮಾಣಿ ಪರಿಧಾಯ ಧೃತವ್ರತಾಃ ।
ಚರಧ್ವಂ ಪಂಚವರ್ಷಾಣಿ ತತಃ ಶುದ್ಧಾ ಭವಿಷ್ಯಥ ॥ ೧೮ ॥
ಏವಮುಕ್ತಾಸ್ತು ತೇ ಬಾಲಾ ಮೃಗಧರ್ಮೋಪಜೀವಿನಃ ।
ವನಂ ವಿವಿಶುರವ್ಯಗ್ರಾ ಧ್ಯಾಯಂತೋ ಬ್ರಹ್ಮ ಶಾಶ್ವತಂ ॥ ೧೯ ॥
ತತೋ ವರ್ಷೇ ಹ್ಯತಿಕ್ರಾಂತೇ ವೀರಧನ್ವಾ ಮಹೀಪತಿಃ ।
ತತ್ರಾಜಗಾಮ ಯಸ್ಮಿಂಸ್ತೇ ಚರಂತಿ ಮೃಗರೂಪಿಣಃ ॥ ೨೦ ॥
ತೇ ಚಾಪ್ಯೇಕತರೋರ್ಮೂಲೇ ಮೃಗಧರ್ಮೋಪಜೀವಿನಃ ।
ಜಪಂತಃ ಸಂಸ್ಥಿತಾಸ್ತೇ ಹಿ ರಾಜ್ಞಾ ದೃಷ್ಟ್ವಾ ಮೃಗಾ ಇತಿ ॥ ೨೧ ॥
ಮತ್ವಾ ವಿದ್ಧಾಸ್ತು ನಾರಾಚೈರ್ಮೃತಾಸ್ತೇ ಬ್ರಹ್ಮವಾದಿನಃ ।
ತಾನ್ ದೃಷ್ಟ್ವಾ ಚ ಮೃತಾನ್ರಾಜಾ ಬ್ರಾಹ್ಮಣಾನ್ ಶಂಸಿತವ್ರತಾನ್ ।
ಭಯೇನ ವೇಪಮಾನಸ್ತು ದೇವರಾತಾಶ್ರಮಂ ಯಯೌ ॥ ೨೨ ॥
ತತ್ರಾಽಪೃಚ್ಛದ್ಬ್ರಹ್ಮವಧಾ ಮಮ ಜಾತಾ ಮಹಾಮುನೇ ।
ಆಮೂಲಾಂತಂ ವಧಾಂ ತಸ್ಯ ಕಥಯಿತ್ವಾ ನರಾಽಧಿಪಃ ।
ಭೃಶಂ ಶೋಕಪರೀತಾತ್ಮಾ ರುರೋದ ಭೃಶಮಃಖಿತಃ ॥ ೨೩ ॥

---

೧೮. ಈಗ ನೀವು ಜಿಂಕೆಯ ಚರ್ಮಗಳನ್ನೇ ಹೊದೆದು ನಿಯಮದಿಂದ ಐದು ವರ್ಷಗಳವರೆಗೂ ಸಂಚರಿಸುತ್ತಿರಬೇಕು. ಆ ಬಳಿಕ ಪರಿಶುದ್ಧರಾಗುವಿರಿ.”

೧೯. ಇಂತೆಂದು ಆ ಮುನಿಯು ಹೇಳಿದ ಪ್ರಾಯಶ್ಚಿತ್ತವನ್ನು ಕೇಳಿ ಆ ಬಾಲಕರು ಮೃಗಧರ್ಮವನ್ನೇ ಅನುಸರಿಸಿ ಜೀವಿಸುತ್ತ ದೃಢಮನಸ್ಸಿನಿಂದ ಸನಾತನವಾದ ಬ್ರಹ್ಮವಸ್ತುವನ್ನು ಕುರಿತು ಚಿಂತಿಸುತ್ತ ಅರಣ್ಯವನ್ನು ಪ್ರವೇಶಿಸಿದರು.

೨೦. ಇಂತು ಒಂದು ವರ್ಷವು ಕಳೆಯಲು ಮಹಾರಾಜನಾದ ವೀರಧನ್ವನು ಈ ಮುನಿಕುಮಾರಕರು ಸಂಚರಿಸುತ್ತಿದ್ದ ವನಕ್ಕೆ ಬಂದು ಸೇರಿದನು.

೨೧. ಮೃಗಧರ್ಮದಿಂದ ಜೀವಿಸುತ್ತಿದ್ದ ಆ ಮುನಿಕುಮಾರಕರು ಅಂತೆಯೆ ಒಂದು ಮರದಡಿಯಲ್ಲಿ ಕುಳಿತು ಜಪಗಳನ್ನು ಮಾಡುತ್ತಿದ್ದರು. ರಾಜನು ಅವರನ್ನು ಕಂಡು ಮೃಗಗಳೆಂದೇ ಭಾವಿಸಿದನು.

೨೨. ಕೂಡಲೆ ಅತನು ಅವರ ಮೇಲೆ ಬಾಣಗಳನ್ನು ಹೊಡೆಯಲು, ಬ್ರಹ್ಮವಾದಿಗಳಾದ ಅವರೆಲ್ಲರೂ ಮೃತರಾದರು. ಬಳಿಕ ಮಹಾನಿಯಮಧಾರಿಗಳಾಗಿದ್ದ ಆ ಐವರೂ ಮೃತರಾದುದನ್ನು ಕಂಡು ರಾಜನು ಭಯದಿಂದ ನಡುಗುತ್ತ ದೇವರಾತಮಹಾಮುನಿಯ ಆಶ್ರಮಕ್ಕೆ ನಡೆತಂದನು.

೨೩. ಅಲ್ಲಿ ಆ ಮಹಾರಾಜನು ತಾನು ಬ್ರಾಹ್ಮಣವಟುಗಳನ್ನು ವಧೆಮಾಡಿದ ವೃತ್ತಾಂತವನ್ನು ಸಮೂಲಾಗ್ರವಾಗಿ ತಿಳಿಸಿ, “ಮಹಾಮುನಿಯೆ! ಬ್ರಹ್ಮಹತ್ಯಾ

ಸ ಋಷಿರ್ದೇವಕಲ್ಪಸ್ತು ರುದಂತಂ ನೃಪಸತ್ತಮಂ ।
ಉವಾಚ ಮಾ ಭೈರ್ನೃಪ ತೇಽಪನೇಷ್ಯಾಮಿ ಚ ಪಾತಕಂ ॥ ೨೪ ॥
ಪಾತಾಲೇ ಸುತಲಾಖ್ಯೇ ತು ನಿಮಜ್ಜಂತೀ ಯಥಾ ಧರಾ ।
ಉದ್ಧೃತಾ ದೇವದೇವೇನ ವಿಷ್ಣುನಾ ಕ್ರೋಡರೂಪಿಣಾ ॥ ೨೫ ॥
ತದ್ವದ್ಭವಂತಂ ಹಿ ರಾಜೇಂದ್ರ ಬ್ರಹ್ಮಹತ್ಯಾಪರಿಪ್ಲುತಂ ।
ಉದ್ಧರಿಷ್ಯತಿ ದೇವೋಽಸೌ ಸ್ವಯಮೇವ ಜನಾರ್ದನಃ ॥ ೨೬ ॥
ಏವಮುಕ್ತಸ್ತತೋ ರಾಜಾ ದುರಿತೋ ವಾಕ್ಯಮಬ್ರವೀತ್ ॥ ೨೭ ॥
ಕಿಮನೇನ ದ್ವಿಜೇನೈವ ನಿಷ್ಪ್ರಭೇಣ ದುರಾತ್ಮನಾ ।
ಉದ್ಧರ್ತುಂ ನೈವ ಶಕ್ನೋತಿ ಸ್ವಯಮೇವ ದ್ವಿಜಾಧಮಃ ॥ ೨೮ ॥
ಇತ್ಯುಕ್ತ್ವಾ ಕೋಪರಕ್ತಾಕ್ಷಃ ಖಡ್ಗೇನೈವ ಜಘಾನ ತಂ ।
ಮೃತಂ ದೃಷ್ಟ್ವಾ ದ್ವಿಜಂ ರಾಜಾ ಕ್ರೋಧೇನ ಕಲುಷೀಕೃತಃ ॥ ೨೯ ॥

---

ದೋಷವು ನನಗೆ ಹತ್ತಿರುವುದು'' ಎಂದನು. ಮತ್ತು ಅತ್ಯಂತ ಶೋಕದಿಂದ ಕದಡಿದ ಮನಸ್ಸುಳ್ಳವನಾಗಿ ಬಹುವಾಗಿ ರೋದನ ಮಾಡಿದನು.

೨೪. ದೇವತಾಸಮಾನನಾದ ಆ ಮಹರ್ಷಿಯು ಅಳುತ್ತಿದ್ದ ರಾಜೇಂದ್ರನನ್ನು ಕಂಡು ಇಂತೆಂದನು. ''ಮಹಾರಾಜನೆ! ಭಯಗೊಳ್ಳಬೇಡ. ನಾನು ನಿನ್ನ ಪಾತಕವನ್ನು ಹೋಗಲಾಡಿಸುವೆನು.

೨೫. ಹಿಂದೆ ಭೂಮಿಯು ಸುತಲನಾಮಕವಾದ ಪಾತಾಳದಲ್ಲಿ ಮುಳುಗಿ ಹೋಗಿರಲು ದೇವಾಧಿದೇವನಾದ ಮಹಾವಿಷ್ಣುವು ವರಾಹರೂಪವನ್ನು ಧರಿಸಿ ಅದನ್ನುದ್ಧರಿಸಲಿಲ್ಲವೆ.

೨೬. ರಾಜೇಂದ್ರ! ಹಾಗೆಯೇ ಈಗಲೂ ಬ್ರಹ್ಮಹತ್ಯೆಯೆಂಬ ಮಹಾಪಾತಕ ಸಮುದ್ರದಲ್ಲಿ ಮುಳುಗಿರುವ ನಿನ್ನನ್ನೂ ಆ ದೇವದೇವನಾದ ಜನಾರ್ದನನೇ ಉದ್ಧರಿಸುವನು.''

೨೭–೨೮. ಇಂತೆಂದ ಆ ಬ್ರಾಹ್ಮಣನ ಮಾತನ್ನು ಕೇಳಿ ಪಾಪಿಯಾದ ರಾಜನು ಇಂತೆಂದು ಆಲೋಚಿಸಿದನು. ''ತೇಜೋಹೀನನೂ, ದುರಾತ್ಮನೂ ಆದ ಈ ಬ್ರಾಹ್ಮಣನಿಂದಾಗಬೇಕಾದುದೇನು? ಈ ದ್ವಿಜಾಧಮನು ತನ್ನ ಶಕ್ತಿಯಿಂದಲೇ ನನ್ನ ಉದ್ಧಾರವನ್ನು ಮಾಡಲರಿಯದವನಾಗಿರುವನು.''

೨೯. ಹೀಗೆ ಯೋಚಿಸಿ ಆ ರಾಜನು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಆ ಬ್ರಾಹ್ಮಣನನ್ನು ತನ್ನ ಕತ್ತಿಯಿಂದ ಹೊಡೆದನು. ಕೂಡಲೆ ಆ ದ್ವಿಜನು ಸತ್ತುಹೋದನು. ಹೀಗೆ ಆ ಮಹಾರಾಜನು ಕೋಪವಶನಾಗಿ ಮತ್ತೂ ಪಾಪಿಷ್ಠನಾಗಿಹೋದನು.

ತಸ್ಮಿನ್ನೇವ ವನೇ ದೇವಿ ಪಾಪಸಂಘೇನ ಮೋಹಿತಃ ।
ಜಘಾನ ಕಪಿಲಾಂ ದೋಗ್ಧ್ರೀಂ ಸವತ್ಸಾಂ ಗಾಲವಸ್ಯ ಚ ॥ ೩೦ ॥
ಕ್ಷುಧಾರ್ತಶ್ಚ ತೃಷಾರ್ತಶ್ಚ ಬಾಲ್ಯಾನ್ಮೋಹಾಚ್ಚ ಸಾಹಸಾತ್ ।
ಕ್ರೂರಾ ಬುದ್ಧಿಃ ಸಮುಭವಜ್ಜಟೀಭೂತಂ ಚ ಪಾತಕಂ ॥ ೩೧ ॥
ಜಟೀಭೂತೇನ ಪಾಪೇನ ಬಭ್ರಾಮ ಗಹನೇ ವನೇ ।
ಸ ಕದಾಚಿತ್ತುರಂಗೇಣ ಹೃತೋ ದೂರಂ ಮಹದ್ವನಂ ॥ ೩೨ ॥
ವ್ಯಾಘ್ರಸಿಂಹಗಜಾಕೀರ್ಣಂ ಮೃಗಶಂಬರಸೇವಿತಂ ।
ಏಕಾಕೀ ತತ್ರ ರಾಜಾಽಸಾವಶ್ವಂ ಮುಕ್ತ್ವಾ ತರೋರಧಃ ॥ ೩೩ ॥
ಕುಶೋಪರಿ ತದಾ ತತ್ರ ಸುಷ್ವಾಪ ಚ ಸ ನಿರ್ಭಯಂ ।
ತತ್ರ ವ್ಯಾಧಾಃ ಸಮುಚರನ್ದೃಷ್ಟ್ವಾ ಸುಪ್ತಂ ಚ ನಿರ್ಭಯಂ ॥ ೩೪ ॥
ತೇ ಗತಾಸ್ತ್ವರಿತಾ ವ್ಯಾಧಾ ಸ್ವಭರ್ತುಃ ಕಥನಾಯ ವೈ ।
ಸ್ವಾಮಿನಾ ತೇನ ನಿರ್ದಿಷ್ಟಾ ನಿಗ್ರಹೀತುಂ ಪ್ರಚಕ್ರಮುಃ ॥ ೩೫ ॥

---

೩೦. ಎಲೌ ಪಾರ್ವತಿಯೆ! ಇಂತು ಮೇಲೆ ಮೇಲೆ ಸಂಘಟಿಸುತ್ತಿರುವ ಪಾಪರಾಶಿಯಿಂದ ಮೋಹಿತನಾಗಿ ಆತನು ಆ ವನದಲ್ಲಿಯೇ ಹಾಲು ಕರೆಯುತ್ತಿರುವುದೂ, ಕರುವಿನೊಡನಿರುವುದೂ ಆದ ಗಾಲವಾಶ್ರಮದ ಕಪಿಲೆಯ ಆಕಳನ್ನು ಕೊಂದನು.

೩೧. ಬಾಲ್ಯದಿಂದಲೂ, ಬುದ್ಧಿಭ್ರಂಶದಿಂದಲೂ, ಸಾಹಸದಿಂದಲೂ ಆತನಿಗೆ ಈ ಕ್ರೂರಬುದ್ಧಿಯುಂಟಾಯಿತು. ಅವನು ಹಸಿವು ಬಾಯಾರಿಕೆಗಳಿಂದ ಬಳಲಿದನು. ಪಾಪವು ಬಲವಾಗಿ ಅಂಟಿಕೊಂಡಿತು.

೩೨. ಇಂತು ಜಟೀಭೂತವಾದ ಪಾಪವನ್ನು ಹೊತ್ತು ಅವನು ದಟ್ಟವಾದ ಆ ಅರಣ್ಯದಲ್ಲಿ ತಿರುಗುತ್ತಿದ್ದನು. ಒಮ್ಮೆ ಆಕಸ್ಮಾತ್ತಾಗಿಯೇ ಆತನ ಕುದುರೆಯು ಆತನನ್ನು ದೂರದ ಮತ್ತೊಂದು ಮಹಾರಣ್ಯಕ್ಕೆ ತೆಗೆದುಕೊಂಡುಹೋಯಿತು.

೩೩. ಆ ವನವು ಹುಲಿ, ಸಿಂಹ, ಆನೆಗಳಿಂದ ತುಂಬಿದುದಾಗಿ ಜಿಂಕೆಗಳಿಗೂ ಕೃಷ್ಣಸಾರಗಳಿಗೂ ನಿವಾಸವೆನಿಸಿದ್ದಿತು. ಏಕಾಕಿಯಾದ ರಾಜನು ಒಂದು ಮರದ ಕೆಳಗೆ ಕುದುರೆಯಿಂದಿಳಿದನು.

೩೪. ಮತ್ತು ಕೆಳಗೆ ಬೆಳೆದಿದ್ದ ಕುಶಗಳಮೇಲೆ ನಿರ್ಭಯವಾಗಿ ನಿದ್ರೆಯನ್ನು ಮಾಡಿದನು. ಅಲ್ಲಿ ಸಂಚರಿಸುತ್ತಿದ್ದ ವ್ಯಾಧರು ನಿಶ್ಚಿಂತೆಯಿಂದ ನಿದ್ರಿಸುತ್ತಿದ್ದ ಆತನನ್ನು ಕಂಡರು.

೩೫. ಅವರು ತಮ್ಮ ಯಜಮಾನನಿಗೆ ಈ ಸಮಾಚಾರವನ್ನು ಹೇಳಲು ತ್ವರೆಯಿಂದ ಹೋದರು. ಪ್ರಭುವಿನ ಆಜ್ಞೆಯನ್ನನುಸರಿಸಿ ಆತನನ್ನು ಬಂಧಿಸಲು ಪ್ರಯತ್ನವನ್ನು ಮಾಡಿದರು.

ತಾವದ್ರಾಜ್ಞಃ ಶರೀರಾತ್ತು ಶ್ವೇತಾಭರಣಭೂಷಿತಾ ।
ಉತ್ಥಾಯ ಚಕ್ರಮಾದಾಯ ತಯಾ ಮ್ಲೇಚ್ಛಾಶ್ಚ ಪಾತಿತಾಃ ॥ ೩೬ ॥
ದಸ್ಯೂನ್ನಿಹತ್ಯ ಸಾ ದೇವೀ ತತ್ರೈವಾದರ್ಶನಂ ಗತಾ ॥ ೩೭ ॥
ಅಥ ರಾಜಾ ತಯಾ ಮುಕ್ತಃ ಪ್ರತಿಬುದ್ಧೋಽಥ ತತ್ಕ್ಷಣಾತ್ ।
ಮ್ಲೇಚ್ಛಾಂಶ್ಚ ನಿಹತಾನ್ದೃಷ್ಟ್ವಾ ಚಿಂತಯಾಮಾಸ ಪಾರ್ಥಿವಃ ॥ ೩೮ ॥
ಗೋವಧಾದ್ಬ್ರಹ್ಮವಧಾದ್ವನೇ ಹ್ಯಸ್ಮಿನ್ ಸುದಾರುಣಾ ।
ಕಥಂ ಮಯಾ ನೃಶಂಸೇನ ಪ್ರಾಪ್ತಾ ಪಾಪಪರಂಪರಾ ॥ ೩೯ ॥
ಏವಂ ಸ ಚಿಂತಯಿತ್ವಾಽಥ ನಿಃಶ್ವಸ್ಯ ಚ ಪುನಃ ಪುನಃ ।
ತಮೇವಾಶ್ವಂ ಸಮಾರುಹ್ಯ ವಾಮದೇವಾಶ್ರಮಂ ಯಯೌ ॥ ೪೦ ॥
ಮುನಿನಾ ವಾಮದೇವೇನ ದೃಷ್ಟೋ ರಾಜಾ ತಥಾವಿಧಃ ।
ಜಟೀಭೂತೇನ ಪಾಪೇನ ಪೀಡಿತೋ ದುಃಖಿತಸ್ತದಾ ॥ ೪೧ ॥

ವಾಮದೇವ ಉವಾಚ :—

ಅಯಂ ಸ ಪುರುಷವ್ಯಾಘ್ರೋ ವೀರಧನ್ವಾ ಮಹೀಪತಿಃ ।
ಸೋಮವಂಶಸಮುತ್ಪನ್ನೋ ದಶಾಂ ಕಷ್ಟಾಂ ಸಮಾಗತಃ ॥ ೪೨ ॥

---

೩೬. ಅಷ್ಟರಲ್ಲಿಯೇ ರಾಜನ ಶರೀರದಿಂದ ಶ್ವೇತವರ್ಣದವಳೂ, ಆಭರಣಗಳಿಂದಲಂಕೃತಳೂ ಆದ ದೇವಿಯೊಬ್ಬಳು ಕೈಯಲ್ಲಿ ಚಕ್ರವನ್ನು ಹಿಡಿದಳು. ಆಕೆಯಿಂದ ಆ ಮ್ಲೇಚ್ಛರೆಲ್ಲರೂ ಹತರಾದರು.

೩೭. ಆ ವ್ಯಾಧರನ್ನೆಲ್ಲ ನಿಗ್ರಹಿಸಿ ಆ ದೇವಿಯು ಅಲ್ಲಿಯೇ ಅಂತರ್ಧಾನವನ್ನು ಹೊಂದಿದಳು.

೩೮. ರಾಜನಿಂತು ಆಕೆಯಿಂದ ಸಂರಕ್ಷಿತನಾಗಿ ಆ ಕ್ಷಣದಲ್ಲಿಯೇ ಎಚ್ಚರಗೊಂಡನು. ತನ್ನ ಸುತ್ತಲೂ ಸತ್ತುಬಿದ್ದಿರುವ ಮ್ಲೇಚ್ಛರನ್ನು ಕಂಡು ಚಿಂತಿಸಿದನು.

೩೯. "ಈ ವನದಲ್ಲಿ ಗೋಹತ್ಯೆ, ಬ್ರಹ್ಮಹತ್ಯೆಗಳೆಂಬ ಮಹಾ ಕ್ರೂರಗಳಾದ ಪಾತಕಗಳನ್ನು ಮಾಡಿದೆನು. ಅತಿ ನೀಚನಾದ ನಾನು ಈ ಪಾಪಪರಂಪರೆಯನ್ನು ಹೊಂದಿದುದು ಹೇಗೆ?"

೪೦. ಇಂತೆಂದು ಆ ರಾಜನು ಮತ್ತೆ ಮತ್ತೆ ನಿಟ್ಟುಸಿರನ್ನು ಬಿಡುತ್ತ ಚಿಂತಾಪರವಶನಾಗಿ ಪುನಃ ತನ್ನ ಕುದುರೆಯನ್ನೇರಿ ವಾಮದೇವಮಹರ್ಷಿಯ ಆಶ್ರಮಕ್ಕೆ ಹೋಗಿ ಸೇರಿದನು.

೪೧. ಜಟೀಭೂತವಾದ ಪಾತಕರಾಶಿಯಿಂದ ದುಃಖಗೊಂಡಿರುವ ಇಂತಹ ಮಹಾರಾಜನನ್ನು ಮುನಿವರ್ಯನಾದ ವಾಮದೇವನು ನೋಡಿದನು.

೪೨. ವಾಮದೇವನು ಹೇಳುತ್ತಾನೆ:—"ಇವನೇ ಪುರುಷಶ್ರೇಷ್ಠನಾದ ವೀರಧನ್ವನೆಂಬ ಮಹಾರಾಜನು. ಚಂದ್ರವಂಶದಲ್ಲಿ ಹುಟ್ಟಿರುವ ಈತನು ಈಗ ಈ ದುರವಸ್ಥೆಯನ್ನು ಹೊಂದಿರುವನು.

ಉದ್ಧರಿಷ್ಯಾಮಿ ರಾಜಾನಮೇನಂ ಪುರುಷಸತ್ತಮಂ ।
ಇತ್ಯಾಲೋಚ್ಯ ತದಾ ವಿಪ್ರೋ ವಾಮದೇವೋ ಮಹಾತಪಾಃ ।
ಪ್ರತ್ಯುವಾಚ ಮಹೀಪಾಲಂ ವೀರಧನ್ವಾನಮಾತುರಂ ॥ ೪೩ ॥
ಭೋ ಭೋ ರಾಜನ್ಮಹೀಪಾಲ ವೀರಧನ್ವೇತಿ ವಿಶ್ರುತಃ ।
ವಿದೂರಥಸ್ಯ ತನಯೋ ವಿಖ್ಯಾತೋ ಭುವನತ್ರಯೇ ॥ ೪೪ ॥
ಪ್ರಾಗ್ಭವೇ ವ್ಯಾಧರೂಪೇಣ ನಿಹಿಂಥಾ ವಿಪಿನೇ ಮೃಗಾನ್ ।
ದೃಷ್ಟಂ ಜಾಗರಣಂ ರಾತ್ರಾವಾಮಲಕ್ಯಾಸ್ತರೋರಧಃ ॥ ೪೫ ॥
ಫಾಲ್ಗುನಾಽಮಲಪಕ್ಷೇ ತ್ವಾಮಲಕ್ಯೇಕಾದಶೀ ಶುಭಾ ।
ಪುಷ್ಯರ್ಕ್ಷಯೋಗಿನೀ ತಸ್ಯಾಂ ಜಾಮದಗ್ನ್ಯಪ್ರದಕ್ಷಿಣಾ ॥ ೪೬ ॥
ಪೂಜಾ ಲೋಕೈಃ ಕೃತಾ ದೃಷ್ಟ್ವಾ ವಿಸ್ಮಯೇನ ತ್ವಯಾ ಪುರಾ ।
ಅಕಾಮಾದುಪವಾಸೋಽಭೂತ್ತಸ್ಯಾಂ ಜಾಗರಣಂ ಪುನಃ ॥ ೪೭ ॥
ತತ್ಪ್ರಭಾವಾದಭೂ ರಾಜಾ ಮಹಾಬಲಪರಾಕ್ರಮಃ ।
ತಯಾ ಸಂರಕ್ಷಿತೋ ರಾಜನ್ ಮ್ಲೇಚ್ಛವರ್ಗಾದ್ವಧೇಽಧುನಾ ॥ ೪೮ ॥

---

೪೩. ಪುರುಷಸತ್ತಮನಾದ ಈ ರಾಜನನ್ನು ಉದ್ಧರಿಸುವೆನು.'' ಇಂತೆಂದು ಆಲೋಚಿಸಿ ಮಹಾತಪಸ್ವಿಯೂ, ಬ್ರಾಹ್ಮಣೋತ್ತಮನೂ ಆದ ಆ ವಾಮದೇವನು ಆತುರನಾಗಿದ್ದ ವೀರಧನ್ವಮಹಾರಾಜನಿಗೆ ಹೇಳಿದನು.

೪೪. ''ಅಯ್ಯಾ ರಾಜನೆ! ನೀನು ವೀರಧನ್ವನೆಂದು ಪ್ರಖ್ಯಾತಿಯನ್ನು ಪಡೆದಿರುವ ಮಹಾರಾಜನಾಗಿರುವೆ. ವಿದೂರಥನ ಮಗನಾದ ನಿನ್ನ ಕೀರ್ತಿಯು ಮೂರು ಲೋಕಗಳಲ್ಲಿಯೂ ವ್ಯಾಪಿಸಿರುವುದು.

೪೫. ಹಿಂದಿನ ಜನ್ಮದಲ್ಲಿ ನೀನು ಬೇಡರವನಾಗಿ ಮೃಗಗಳನ್ನು ಕೊಲ್ಲಬೇಕೆಂಬ ಬಯಕೆಯಿಂದ ಒಮ್ಮೆ ರಾತ್ರಿಯಲ್ಲಿ ಒಂದು ಆಮಲಕವೃಕ್ಷದ ಕೆಳಗೆ ಕುಳಿತಿದ್ದೆ.

೪೬. ಅಂದು ಫಾಲ್ಗುನಮಾಸದ ಶುಕ್ಲಪಕ್ಷದ ಆಮಲಕ್ಯೇಕಾದಶಿಯು ತಿಥಿಯಾಗಿದ್ದಿತು. ಪವಿತ್ರವೂ, ಪುಷ್ಯನಕ್ಷತ್ರದಿಂದ ಕೂಡಿದುದೂ ಆದ ಆ ದಿನದಲ್ಲಿ ಜಾಮದಗ್ನ್ಯ ಪ್ರದಕ್ಷಿಣೆಯನ್ನು ಮಾಡಬೇಕು.

೪೭. ಜನರೆಲ್ಲರೂ ಅಂದು ಮಾಡುತ್ತಿದ್ದ ಪೂಜೆಯನ್ನು ನೀನು ವಿಸ್ಮಯದಿಂದ ನೋಡುತ್ತಿದ್ದೆ. ಇಚ್ಛೆಯಿಲ್ಲದೆಯೇ ನಿನಗೆ ಉಪವಾಸವೂ ರಾತ್ರಿಯ ಜಾಗರಣೆಯೂ ಪ್ರಾಪ್ತವಾದುವು.

೪೮. ಅದರ ಪ್ರಭಾವದಿಂದಲೇ ನೀನು ಈ ಜನ್ಮದಲ್ಲಿ ಮಹಾಬಲಶಾಲಿಯಾದ ಮಹಾರಾಜನಾಗಿ ಹುಟ್ಟಿರುವೆ. ಅದರಿಂದಲೇ ಈಗ ನೀನು ಮ್ಲೇಚ್ಛರ ಉಪದ್ರವದಿಂದ ರಕ್ಷಿಸಲ್ಪಟ್ಟಿರುವೆ.

ನಿಹತಾಃ ಶತ್ರವಃ ಸರ್ವೇ ತಯೈವ ಶುಭಮಾಪ್ಸ್ಯಸಿ ।
ಪೂರ್ವಕರ್ಮವಿಪಾಕೇನ ಬ್ರಹ್ಮಹತ್ಯಾ ಸಮಾಗತಾ ॥ ೪೯ ॥
ಜ್ಞಾತಾ ತಪಃಪ್ರಭಾವೇನ ಮಯಾ ಯೋಗಬಲೇನ ಚ ।
ಜಟೀಭೂತಂ ಶರೀರಂ ತೇ ಪಾಪಸಂಘೇನ ಪಾರ್ಥಿವ ॥ ೫೦ ॥
ಇದಾನೀಂ ಪಾಲಯಿಷ್ಯಾಮಿ ಶೃಣು ಮೇ ವಚನಂ ಪರಂ ॥ ೫೧ ॥
ಇತ್ಯುಕ್ತೋ ವಾಮದೇವೇನ ಮುನಿನಾ ಸ ಮಹೀಪತಿಃ ।
ಪ್ರಣಮ್ಯ ಪ್ರಯತೋ ಭೂತ್ವಾ ಪಪ್ರಚ್ಛ ಚ ಪುನಃ ಪುನಃ ॥ ೫೨ ॥
ಕಥಂ ಯಾಸ್ಯಂತಿ ಮೇ ಹತ್ಯಾ ಗೋಬ್ರಾಹ್ಮಣಸಮುದ್ಭವಾಃ ।
ಉಪದೇಶಪ್ರದಾನೇನ ಪ್ರಸಾದಂ ಕರ್ತುಮರ್ಹಸಿ ॥ ೫೩ ॥
ತಸ್ಯ ತದ್ವಚನಂ ಶ್ರುತ್ವಾ ವಾಮದೇವೋ ಮಹಾಮುನಿಃ ।
ಕಥಯಾಮಾಸ ಮಾಹಾತ್ಮ್ಯಂ ಲಿಂಗಸ್ಯಾಽಸ್ಯ ಯಶಸ್ವಿನಿ ॥ ೫೪ ॥
ಮಹಾಕಾಲವನಂ ಗಚ್ಛ ಮಹಾರಾಜ ಮಮಾಜ್ಞಯಾ ।
ತತ್ರಾಸ್ತೇ ದೇವದೇವೋಽಪಿ ಜಗದ್ವ್ಯಾಪೀ ಜಟೇಶ್ವರಃ ॥ ೫೫ ॥

---

೪೯. ಆದುದರಿಂದಲೇ ನಿನ್ನ ಶತ್ರುಗಳೆಲ್ಲರೂ ಸಂಹೃತರಾದರು. ಇನ್ನು ನೀನು ಶುಭವನ್ನು ಕಾಣುವೆ. ಪೂರ್ವಕರ್ಮದ ಫಲವಾಗಿ ನಿನಗೆ ಬ್ರಹ್ಮಹತ್ಯೆಯು ಸಂಭವಿಸಿರುವುದು.

೫೦–೫೧. ನನ್ನ ತಪಸ್ಸಿನ ಪ್ರಭಾವದಿಂದಲೂ, ಯೋಗಾಭ್ಯಾಸದ ಬಲದಿಂದಲೂ ನಿನ್ನ ವೃತ್ತಾಂತವನ್ನೆಲ್ಲ ತಿಳಿದುಕೊಂಡೆನು. ರಾಜೇಂದ್ರನೆ! ನಿನ್ನ ದೇಹವೆಲ್ಲವೂ ಪಾಪರಾಶಿಯಿಂದ ಜಟೀಭೂತವಾಗಿರುವುದು. ಈಗ ನಿನ್ನನ್ನು ಸಂರಕ್ಷಿಸುವೆನು. ಉತ್ತಮವಾದ ನನ್ನ ಮಾತನ್ನು ಕೇಳು.''

೫೨. ಮುನಿಶ್ರೇಷ್ಠನಾದ ವಾಮದೇವನಿಂತೆನ್ನಲು, ಆ ಮಹಾರಾಜನು ನಮಿಸಿ ನಿಯತೇಂದ್ರಿಯನಾಗಿ ಮತ್ತೆಮತ್ತೆ ಆತನನ್ನು ಕುರಿತು ಪ್ರಶ್ನೆಮಾಡಿದನು.

೫೩. ''ಗೋವನ್ನೂ, ಬ್ರಾಹ್ಮಣರನ್ನೂ ವಧಿಸಿರುವ ನನ್ನ ಬ್ರಹ್ಮಹತ್ಯಾದಿ ದೋಷಗಳು ಹೇಗೆ ಕಳೆಯುವುವು? ಉಪದೇಶವನ್ನು ನನಗಿತ್ತು ಅನುಗ್ರಹವನ್ನು ಮಾಡಲು ನೀನೇ ತಕ್ಕ ಗುರುವಾಗಿರುವೆ.''

೫೪. ಎಲೌ ಪಾರ್ವತಿಯೆ! ಆತನ ಮಾತನ್ನು ಕೇಳಿ ಮಹಾಮುನಿಯಾದ ವಾಮದೇವನು ಈ ಮಹಾಲಿಂಗದ ಮಾಹಾತ್ಮ್ಯವನ್ನು ಆತನೆದುರಿನಲ್ಲಿ ವಿಸ್ತರಿಸಿ ಹೇಳಿದನು.

೫೫. ಮಹಾರಾಜನೆ! ನನ್ನ ಅಪ್ಪಣೆಯನ್ನು ಅಂಗೀಕರಿಸಿ ನೀನು ಮಹಾಕಾಲವನವೆಂಬ ಕ್ಷೇತ್ರವನ್ನು ಸೇರು. ಅಲ್ಲಿ ದೇವದೇವನೂ, ಸರ್ವವ್ಯಾಪಿಯೂ ಆದ ಜಟೇಶ್ವರನೆಂಬ ದೇವತೆಯಿರುವನು.

ಪಾಪಸಂಘಪ್ರಹರ್ತಾ ಚ ಸರ್ವವೇದೇಷು ಪಠ್ಯತೇ ।
ದೇವಸ್ಯಾಽನರಕೇಶಸ್ಯ ಉತ್ತರೇ ಸ ವ್ಯವಸ್ಥಿತಃ ॥ ೫೬ ॥
ತಸ್ಯ ತದ್ವಚನಂ ಶ್ರುತ್ವಾ ವಾಮದೇವಸ್ಯ ಪಾರ್ಥಿವಃ ।
ಆಜಗಾಮ ತ್ವರಾಯುಕ್ತೋ ಮಹಾಕಾಲವನೋತ್ತಮೇ ॥ ೫೭ ॥
ತತ್ರ ದೃಷ್ಟ್ವಾ ಜಗದ್ವಂದ್ಯಂ ದೇವದೇವಂ ಜಟೇಶ್ವರಂ ।
ಸ್ತುತಿಂ ಚಕಾರ ರಾಜೇಂದ್ರೋ ಭಕ್ತ್ಯಾ ಪರಮಯಾ ಪುನಃ ॥ ೫೮ ॥
ಶಿವಾಯ ತೇ ನಮೋ ನಿತ್ಯಂ ವಿಶ್ವಕಾಯ ನಮೋನಮಃ ।
ನಮೋ ದಿವ್ಯಾಯ ಗುಹ್ಯಾಯ ಗೂಢವ್ರತಶರೀರಿಣೇ ॥ ೫೯ ॥
ನಮೋ ಜಟಾಯ ರಾಮಾಯ ಮಾಯಯಾಕ್ರಾಂತಕಾರಿಣೇ ।
ನಮೋಽಸ್ತು ಬಹುರೂಪಾಯ ನಮೋ ನೀಲಾಭರೂಪಿಣೇ ॥ ೬೦ ॥
ನಮೋ ಭೋಗಾಯ ಧೂಮ್ರಾಯ ನಮೋಽಸ್ತು ಗಗನಾತ್ಮನೇ ।
ನಮೋ ವಹ್ನಿಸಮೂಹಾಯ ನಮಸ್ತೇ ನಿರ್ಮಲಾಕರ ॥ ೬೧ ॥

---

೫೬. ಆತನು ಪಾಪಸಮೂಹಗಳನ್ನು ನಿರ್ಮೂಲಮಾಡುವನೆಂಬುದನ್ನು ಸಕಲ ವೇದಗಳಲ್ಲಿಯೂ ಕೇಳುತ್ತಿರುವೆವು. ಅನರಕೇಶ್ವರ ಮಹಾಲಿಂಗಕ್ಕೆ ಉತ್ತರದಲ್ಲಿ ಆ ಲಿಂಗವು ನೆಲಸಿರುವುದು.''

೫೭. ವಾಮದೇವನ ಮಾತನ್ನು ಕೇಳಿ ಆ ರಾಜೇಂದ್ರನು ಸಂಭ್ರಮಗೊಂಡು ಉತ್ತಮವಾದ ಮಹಾಕಾಲವನಕ್ಕೆ ಬಂದು ಸೇರಿದನು.

೫೮. ಅಲ್ಲಿ ಲೋಕವಂದ್ಯನೂ, ಮಹಾದೇವನೂ ಆದ ಜಟೇಶ್ವರನನ್ನು ಕಂಡು ಆ ಮಹಾರಾಜನು ಅತ್ಯಂತ ಭಕ್ತಿಯಿಂದ ಕೂಡಿದವನಾಗಿ ಮತ್ತೆ ಮತ್ತೆ ಸ್ತೋತ್ರಮಾಡಿದನು.

೫೯. ''ಮಂಗಳಪ್ರದನೂ, ಜಗತ್ತಿನ ಸ್ವರೂಪವುಳ್ಳವನೂ ಆದ ನಿನಗೆ ಯಾವಾಗಲೂ ನಮಿಸುವೆನು. ಜ್ಯೋತಿರ್ಮಯನೂ, ಗುಹಾಂತರ್ಗತನೂ, ಏಕಾಂತವ್ರತಗಳನ್ನೇ ದೇಹವಾಗಿ ಉಳ್ಳವನೂ ಆದ ನಿನಗೆ ನಮಸ್ಕಾರವು.

೬೦. ಜಟಾಭೂಷಿತನೂ, ಭಕ್ತರನ್ನು ಆನಂದಗೊಳಿಸುವವನೂ, ಮಾಯೆಯಿಂದ ಜನರನ್ನು ಮೋಹಗೊಳಿಸುತ್ತಿರುವವನೂ, ಅನೇಕ ರೂಪಗಳನ್ನು ಧರಿಸುವವನೂ, ನೀಲವರ್ಣದ ದೇಹವುಳ್ಳವನೂ ಆದ ನಿನಗೆ ನಮಸ್ಕಾರವು.

೬೧. ಭೋಗಪ್ರದನೂ, ಧೂಮ್ರವರ್ಣದವನೂ, ಆಕಾಶಕ್ಕೆ ಕಾರಣನೂ, ಅಗ್ನಿಗಳಿಗೆ ನೆಲೆಯೂ, ಪರಿಶುದ್ಧನೂ, ಪ್ರಪಂಚದ ನಿದಾನವೂ ಆದ ನಿನಗೆ ನಮಸ್ಕಾರವು.

ನಮೋ ಮಹಾಂಧಕಾರಾರ್ಕ ನಮಸ್ತೇ ಶತ್ರುಘಾತಿನೇ ।
ನಮಃ ಸಂಸಾರಪಾರಾಯ ದಿವ್ಯರೂಪಶರೀರಿಣೇ ।
ನಮಃ ಕನಕವರ್ಣಾಯ ನಮೋ ಮೋಹಿತಮೋಹಿನೇ ॥ ೬೨ ॥
ನಮಃ ಸುರೂಪಾಯ ಸುರಾರ್ಚಿತಾಯ
ನಮೋ ವಿರೂಪಾಯ ಪ್ರಕೃತೇಃ ಪರಾಯ ।
ನಮೋ ನಮೋ ರೂಪನಿರಾಶ್ರಯಾಯ
ಶ್ಯಾಮಾಸುರೂಪಾಯ ನಮೋ ನಮಸ್ತೇ ॥ ೬೩ ॥
ಇತಿ ಸ್ತುತಸ್ತದಾ ದೇವಿ ಮಹಾದೇವೋ ಮಹೇಶ್ವರಃ ।
ಜಟಾವೇಷ್ಟಿತಸರ್ವಾಂಗೋ ಲಿಂಗಮಧ್ಯಾಚ್ಚ ನಿಃಸೃತಃ ॥ ೬೪ ॥
ಭಸ್ಮಚರ್ಚಿತಸರ್ವಾಂಗೋ ಭೋಗಿಭೋಗಾಂಗದೋಜ್ಜ್ವಲಃ ।
ಹಿಮರಾಶಿನಿಭಾಕಾರೋ ರಾಜತಾಚಲನಿರ್ಮಲಃ ॥ ೬೫ ॥
ಮುಕ್ತಾಲತಾನಿಭಾಭಿಸ್ತು ಜಟಾಭಿರ್ಭೂಷಿತೋ ವಿಭುಃ ।
ಕಪಿಲಾಭಿಃ ಕರಾಲಾಭಿರ್ವಿಕಟಾಭಿಶ್ಚ ವೇಷ್ಟಿತಃ ॥ ೬೬ ॥

---

೬೨. ಸಂಸಾರವೆಂಬ ಗಾಢಾಂಧಕಾರಕ್ಕೆ ಸೂರ್ಯಸ್ವರೂಪನೂ, ಶತ್ರುಮರ್ದನನೂ, ಸಂಸಾರಸಾಗರದಿಂದ ಕಡೆಹಾಯಿಸುವವನೂ, ದಿವ್ಯರೂಪಗಳನ್ನು ಲೀಲೆಯಿಂದ ಧರಿಸುವವನೂ ಆದ ನಿನಗೆ ನಮಸ್ಕಾರವಿರಲಿ. ಚಿನ್ನದ ಬಣ್ಣವುಳ್ಳವನೂ, ಮೋಹಕನೂ ಆದ ನಿನಗೆ ನಮಸ್ಕಾರವು.

೬೩. ಸುಂದರರೂಪನೂ, ದೇವತೆಗಳಿಗೆ ಪೂಜ್ಯನೂ, ರೂಪರಹಿತನೂ, ಪ್ರಕೃತಿಗೂ ಪರನಾದವನೂ, ರೂಪಗಳಿಗೆ ಆಶ್ರಯನಲ್ಲದವನೂ, ಕಾಳಿಕಾದೇವಿಯ ಅರ್ಧಾಂಗದಿಂದ ಶೋಭಿಸುವವನೂ ಆದ ನಿನಗೆ ಮಣಿಯುವೆನು.''

೬೪. ದೇವಿಯೆ! ಇಂತು ವೀರಧನ್ವನು ಸ್ತೋತ್ರಮಾಡಲು, ದೇವದೇವೋತ್ತಮನೂ, ಜಡೆಗಳಿಂದ ದೇಹವನ್ನೆಲ್ಲ ಮುಚ್ಚಿಕೊಂಡಿರುವವನೂ ಆದ ಮಹೇಶ್ವರನು ಆ ಲಿಂಗದ ಮಧ್ಯದಿಂದ ಆವಿರ್ಭವಿಸಿದನು.

೬೫. ಮೈಯನ್ನೆಲ್ಲ ಭಸ್ಮದಿಂದ ಮುಚ್ಚಿಕೊಂಡು, ಹಾವುಗಳ ಹೆಡೆಗಳು ಆಭರಣಗಳಾಗಿ ಬೆಳಗುತ್ತಿರಲು ಹಿಮದ ರಾಶಿಯಂತೆ ರೂಪವುಳ್ಳವನಾಗಿ ಬೆಳ್ಳಿಯ ಬೆಟ್ಟದಂತೆ ಆ ಸ್ವಾಮಿಯು ಪರಿಶುದ್ಧನಾಗಿದ್ದನು.

೬೬. ಮುತ್ತುಗಳ ಮಾಲೆಗಳನ್ನು ಹೋಲುತ್ತ ಭಸ್ಮಲೇಪಿತಗಳಾದ ಆತನ ಕೆಂಪುಬಣ್ಣದವುಗಳೂ, ಕಪ್ಪುಬಣ್ಣದವುಗಳೂ, ವಿಕಟರೂಪಗಳೂ ಆದ ಜಡೆಗಳು ಆತನ ದೇಹವನ್ನು ಮುಚ್ಚಿ ಕಂಗೊಳಿಸುತ್ತಿದ್ದುವು.

ಭೋಗೀಂದ್ರಫಣಬದ್ಧಾಭಿಃ ಸಿತಪೀತಾದಿಭಿಸ್ತಥಾ ।
ನದೀರೂಪಾಭಿರೂತಾಭಿಃ ಶೋಭಿತೋಽಸೌ ಜಟೇಶ್ವರಃ ॥ ೬೭ ॥
ರಾಜಾನಂ ಪ್ರತ್ಯುವಾಚೇದಂ ವಚನಂ ಪರ್ವತಾತ್ಮಜೇ ।
ಸ್ತೋತ್ರೇಣಾಽನೇನ ರಾಜೇಂದ್ರ ತುಷ್ಟೋಽಹಂ ತೋಷಿತಸ್ತ್ವಯಾ ॥೬೮॥
ಜಟೀಭೂತಂ ಚ ತೇ ಪಾಪಂ ಗತಂ ಮದ್ದರ್ಶನೇನ ವೈ ।
ತಸ್ಮಾತ್ ಸ್ಥಾನಂ ಪರಂ ಗಚ್ಛ ಮದೀಯಂ ಶಾಶ್ವತಂ ಮುದಾ ॥ ೬೯ ॥
ಇತ್ಯುಕ್ತೋ ದೇವದೇವೇನ ವೀರಧನ್ವಾ ಮಹೀಪತಿಃ ।
ಜಗಾಮ ಪರಮಂ ಸ್ಥಾನಂ ದಾಹಪ್ರಲಯವರ್ಜಿತಂ ॥ ೭೦ ॥
ಕಾಮಗೇನ ವಿಮಾನೇನ ಸ್ತೂಯಮಾನೋ ಗಣೈಃ ಪ್ರಿಯೇ ।
ಪಾಪಸಂಘೇನ ಮುಕ್ತೋಽಸೌ ಜಟೀಭೂತೇಶದರ್ಶನಾತ್ ॥ ೭೧ ॥
ಲಿಂಗಶ್ಚಾಽತಃ ಸಮಾಖ್ಯಾತೋ ನಾಮ್ನಾ ದೇವೋ ಜಟೇಶ್ವರಃ ।
ಜಟೇಶ್ವರಂ ವರಾರೋಹೇ ಯೇ ಪಶ್ಯಂತಿ ಸುಭಕ್ತಿತಃ ।
ತೇಷಾಂ ಪಾಪಂ ಜಟೀಭೂತಂ ತತ್ಕ್ಷಣಾದೇವ ನಶ್ಯತಿ ॥ ೭೨ ॥

---

೬೭. ನಾಗೇಂದ್ರರ ಫಣಾಭೋಗಗಳಿಂದ ಬಿಗಿಯಲ್ಪಟ್ಟು ಬಿಳುಪು, ಹಳದಿ ಮುಂತಾದ ಬಣ್ಣಗಳಿಂದ ಶೋಭಿಸುತ್ತ, ನದಿಗಳ ಪ್ರವಾಹಗಳಂತೆ ಕಾಣುವ ನಿಡುಜಡೆಗಳಿಂದ ಆ ಜಟೇಶ್ವರನು ವಿರಾಜಿಸುತ್ತಿದ್ದನು.

೬೮. ಪರ್ವತರಾಜಪುತ್ರಿಯೆ! ಆ ದೇವನು ರಾಜನಿಗೆ ಪ್ರತಿವಚನವನ್ನಿತ್ತನು. "ರಾಜೇಂದ್ರನೆ! ಈ ನಿನ್ನ ಸ್ತೋತ್ರದಿಂದ ನಾನು ಪರಮಸಂತುಷ್ಟನಾಗಿರುವೆನು. ನೀನು ನನ್ನನ್ನು ದಿಟವಾಗಿಯೂ ಸಂತೋಷಗೊಳಿಸಿರುವೆ.

೬೯. ಜಟೀಭೂತವಾಗಿದ್ದ ನಿನ್ನ ಪಾಪರಾಶಿಯು ನನ್ನ ದರ್ಶನಮಾತ್ರದಿಂದಲೇ ನಾಶವಾಯಿತು. ಆದುದರಿಂದ ನೀನು ಸಂತೋಷದಿಂದ ಶಾಶ್ವತವಾದ ನನ್ನ ಉತ್ತಮಲೋಕಕ್ಕೆ ಹೊರಡು."

೭೦. ಆ ದೇವೋತ್ತಮನು ಇಂತು ವರವನ್ನು ಕೊಡಲು, ಮಹಾರಾಜನಾದ ವೀರಧನ್ವನು ತಾಪವಿನಾಶಗಳಿಲ್ಲದ ಆ ಪರಮಪದವನ್ನು ಕುರಿತು ಹೊರಟು ಹೋದನು.

೭೧. ಪ್ರಿಯಳೆ! ಗಣಗಳೆಲ್ಲರೂ ಸ್ತೋತ್ರಮಾಡುತ್ತಿರಲು ಕಾಮಚಾರಿಯಾದ ವಿಮಾನವನ್ನೇರಿ ಆತನು ನನ್ನ ಲೋಕಕ್ಕೆ ಹೊರಟುಹೋದನು. ಇಂತು ಆ ಮಹಾರಾಜನು ಜಟೇಶ್ವರನ ದರ್ಶದಿಂದ ತನ್ನ ಪಾಪಸಮೂಹವನ್ನೆಲ್ಲ ಕ್ಷಣಮಾತ್ರದಲ್ಲಿ ಕಳೆದುಕೊಂಡನು.

೭೨. ಆದುದರಿಂದ ಈ ಮಹಾಲಿಂಗವು ಜಟೇಶ್ವರನೆಂಬ ಹೆಸರಿನಿಂದಲೇ ಪ್ರಖ್ಯಾತವಾಯಿತು. ಮಂಗಳಾಂಗಿಯೆ! ಯಾರು ಅತ್ಯಂತ ಭಕ್ತಿಯುಕ್ತರಾಗಿ

ಯೇಽರ್ಚಯಂತಿ ಸದಾ ದೇವಿ ದೇವದೇವಂ ಜಟೇಶ್ವರಂ ।
ತೇಷಾಂ ಬಲಂ ಪ್ರಭಾವಶ್ಚ ಸೌಭಾಗ್ಯಂ ಚ ಭವಿಷ್ಯತಿ ॥ ೭೩ ॥
ಯೇಽಪ್ಯನ್ಯೇ ದೇವಗಂಧರ್ವಾ ಯಕ್ಷರಾಕ್ಷಸಮಾನವಾಃ ।
ಲಿಂಗಂ ಚ ಪೂಜಯಿಷ್ಯಂತಿ ವಿಧಿವದ್ಭಕ್ತಿಭಾವತಃ ॥ ೭೪ ॥
ತೇಽಪಿ ಕಾಮಾನವಾಪ್ಸ್ಯಂತಿ ಯಾಂಶ್ಚ ಕಾಂಶ್ಚ ಸುದುರ್ಲಭಾನ್ ।
ಐಶ್ವರ್ಯಂ ಧರ್ಮಮತುಲಂ ದೀರ್ಘಮಾಯುರರೋಗತಾಂ ॥ ೭೫ ॥
ನಿಃಸಪತ್ನತ್ವಮತುಲಂ ಯಚ್ಚಾಽನ್ಯತ್ತದವಾಪ್ನುಯಾತ್ ।
ಪಾಪಿನಃ ಕ್ರೂರಕರ್ಮಾಣೋ ಯೇಽಪಿ ಲಿಂಗಂ ಸಮಾಶ್ರಿತಾಃ ।
ತೇಽಪಿ ಪಾಪವಿನಿರ್ಮುಕ್ತಾ ಭವಿಷ್ಯಂತಿ ಗತಜ್ವರಾಃ ॥ ೭೬ ॥
ಜಟೇಶ್ವರಂ ಪ್ರಪಶ್ಯಂತಿ ಭಕ್ತ್ಯಾ ಯೇ ಚ ದಿನೇ ದಿನೇ ।
ತೇ ಧರ್ಮಧನಸೌಭಾಗ್ಯೈರ್ಭವಿಷ್ಯಂತಿ ಸಮನ್ವಿತಾಃ ॥ ೭೭ ॥
ವ್ಯಾಧಿತೋ ವ್ಯಾಧಿನಾ ಮುಕ್ತೋ ದುಃಖೀ ದುಃಖಾತ್ಪ್ರಮುಚ್ಯತೇ ।
ದರ್ಶನಾತ್ತು ಭವೇತ್ಸದ್ಯಃ ಸರ್ವಪಾತಕವರ್ಜಿತಃ ॥ ೭೮ ॥

---

ಈ ಜಟೇಶ್ವರನನ್ನು ನೋಡುವರೊ, ಅವರ ಪಾಪರಾಶಿಯು ಜಡೆಗಟ್ಟಿಕೊಂಡಿದ್ದರೂ ಕ್ಷಣದಲ್ಲಿಯೇ ನಾಶವಾಗುವುದು.

೭೩. ದೇವಿಯೆ! ಯಾರು ನಿತ್ಯವೂ ದೇವದೇವನಾದ ಈ ಜಟೇಶ್ವರನ ಪೂಜೆಯನ್ನು ಮಾಡುವರೊ, ಅವರಿಗೆ ಬಲವೂ, ಪುಣ್ಯವೂ, ಸೌಮಂಗಲ್ಯವೂ ಉಂಟಾಗುತ್ತಿರುವುದು.

೭೪. ದೇವತೆಗಳು, ಗಂಧರ್ವರು, ಯಕ್ಷರು, ರಾಕ್ಷಸರು, ಮನುಷ್ಯರು— ಯಾರೇ ಆದರೂ ಈ ಲಿಂಗವನ್ನು ವಿಧ್ಯುಕ್ತರೀತಿಯಿಂದಲೂ, ಭಕ್ತಿಯುಕ್ತರಾಗಿಯೂ ಪೂಜಿಸಲು ಅವರೂ ಅತ್ಯಂತ ದುರ್ಲಭಗಳಾದ ಯಾವ ವರಗಳನ್ನಾದರೂ ಪಡೆಯುವರು.

೭೫. ಐಶ್ವರ್ಯ, ಅಸದೃಶವಾದ ಧರ್ಮ, ದೀರ್ಘಾಯುಷ್ಯ, ದೇಹಸೌಷ್ಠವ, ದಾಯಾದಿಗಳ ಪೀಡೆಯಿಲ್ಲದಿರುವುದು — ಮುಂತಾದ ಸಕಲ ವರಗಳನ್ನೂ ಮನುಷ್ಯನು ಜಟೇಶ್ವರನ ಅನುಗ್ರಹದಿಂದ ಪಡೆಯುವನು.

೭೬—೭೭. ಪಾಪಿಗಳೇ ಆಗಲಿ, ಕ್ರೂರಕರ್ಮಿಗಳೇ ಆಗಲಿ, ಯಾರು ಈ ಮಹಾಲಿಂಗವನ್ನು ಆಶ್ರಯಿಸಿರುವರೊ, ಅವರೂ ತಮ್ಮ ಪಾತಕಗಳನ್ನು ಕಳೆದುಕೊಂಡು ನಿಶ್ಚಿಂತೆಯಾಗಿರುವರು. ಯಾರು ಭಕ್ತಿಯಿಂದ ದಿನದಿನವಲ್ಲಿಯೂ ಜಟೇಶ್ವರನ ದರ್ಶನವನ್ನು ತೆಗೆದುಕೊಳ್ಳುವರೊ, ಅವರು ಧರ್ಮ, ಧನ, ಸೌಭಾಗ್ಯಗಳಿಂದ ಕೂಡಿದವರಾಗುವರು.

೭೮. ರೋಗಿಯು ತನ್ನ ವ್ಯಾಧಿಯನ್ನು ಕಳೆದುಕೊಳ್ಳುವನು. ದುಃಖಿಯು

**ಜಟೇಶ್ವರಸ್ಯ ಮಾಹಾತ್ಮ್ಯಂ ಯೇ ಪಠಿಷ್ಯಂತಿ ಪಾರ್ವತಿ ।**
**ಶ್ರೋಷ್ಯಂತಿ ಯೇಽಪಿ ಮದ್ಭಕ್ತ್ಯಾ ಪ್ರಯತಾಃ ಶ್ರದ್ಧಯಾಽನ್ವಿತಾಃ ॥ ೭೯ ॥**
**ತೇ ಸರ್ವಕಾಮಾನಾಪ್ಸ್ಯಂತಿ ಗತಿಮಂತೇ ಚ ಮತ್ಪುರೇ ।**
**ಯಾ ನಾರೀ ದುರ್ಭಗಾ ಸಾಽಪಿ ಸೌಭಾಗ್ಯಂ ಲಭತೇ ಸದಾ ॥ ೮೦ ॥**
**ಗುರ್ವಿಣೀ ಲಭತೇ ಪುತ್ರಮರೋಗಂ ಶ್ರುತಿಭೂಷಣಂ ।**
**ಶಿಶುಗ್ರಹಾಶ್ಚ ನಶ್ಯಂತಿ ನಾಽಪಮೃತ್ಯುಭಯಂ ಭವೇತ್ ॥ ೮೧ ॥**
**ಮಾಂಗಲ್ಯಮಿದಮಾಯುಷ್ಯಂ ಧರ್ಮಕಾಮಾಶ್ರಯಂ ಮಹತ್ ।**
**ದುಃಸ್ವಪ್ನಜಂ ಭಯಂ ಘೋರಂ ಪಾಪಜಂ ಯಾತಿ ಸಂಕ್ಷಯಂ ॥ ೮೨ ॥**
**ದುರ್ಭಕ್ತಂ ದುರ್ಜನಸ್ಪರ್ಶಂ ಯಚ್ಚಾಽಲ್ಪಾಯುಷ್ಕರಂ ಭವೇತ್ ।**
**ಲಿಂಗಾಖ್ಯಾನಕಥಾಂ ಶ್ರುತ್ವಾ ವಿನಶ್ಯತಿ ನ ಸಂಶಯಃ ॥ ೮೩ ॥**
**ಶ್ರಾದ್ಧೇಷು ಯಃ ಪಠೇದೇತಾಂ ಜಟೇಶ್ವರಕಥಾಂ ಶುಭಾಂ ।**
**ತದಕ್ಷಯಂ ಭವೇಚ್ಛ್ರಾದ್ಧಂ ಪಿತೄಣಾಂ ಪ್ರೀತಿವರ್ಧನಂ ॥ ೮೪ ॥**

---

ದುಃಖದೂರನಾಗುವನು. ಇದರ ದರ್ಶನಮಾಡಿದ ಕ್ಷಣದಲ್ಲಿಯೇ ಮನುಷ್ಯನು ಪಾಪರಹಿತನಾಗುವನು.

೭೯–೮೦. ಪಾರ್ವತಿಯೆ! ಯಾರು ಈ ಜಟೇಶ್ವರನ ಮಾಹಾತ್ಮ್ಯವನ್ನು ಪಠನಮಾಡುವರೊ, ಯಾರು ನನ್ನಲ್ಲಿ ಭಕ್ತಿಯನ್ನಿಟ್ಟು ಪ್ರಯತ್ನದಿಂದಲೂ, ಶ್ರದ್ಧೆಯಿಂದಲೂ ಕೇಳುವರೊ, ಅವರು ಇಹದಲ್ಲಿ ಸಕಲಾಭೀಷ್ಟಗಳನ್ನೂ ಪಡೆಯುವುದಲ್ಲದೆ, ಕಡೆಯಲ್ಲಿ ನನ್ನ ಪಟ್ಟಣದಲ್ಲಿ ಸದ್ಗತಿಯನ್ನೂ ಹೊಂದುವರು. ದರಿದ್ರಳಾಗಿರುವ ಸ್ತ್ರೀಯಳೂ ನಿತ್ಯವಾದ ಸೌಭಾಗ್ಯವನ್ನು ಪಡೆಯುವಳು.

೮೧. ಗರ್ಭಿಣಿಯು ಆರೋಗ್ಯವಂತನೂ ಸತ್ಕೀರ್ತಿಸಂಪನ್ನನೂ ಆದ ಮಗನನ್ನು ಪಡೆಯುವಳು. ಬಾಲಗ್ರಹಗಳು ನಾಶವಾಗುವುವು. ಅಪಮೃತ್ಯುವಿನ ಭಯವೂ ದೂರವಾಗುವುದು.

೮೨. ಈ ಆಖ್ಯಾನವು ಮಂಗಳಪ್ರದವೂ, ಆಯುಷ್ಯಕಾರಕವೂ, ಧರ್ಮಕಾಮುಗಳನ್ನು ಕೊಡುವ ಮಹಾಸಾಧನವೂ ಆಗಿರುವುದು. ಇದರ ಶ್ರವಣದಿಂದ ದುಸ್ಸ್ವಪ್ನಗಳಿಂದಲೂ, ಪಾಪಗಳಿಂದಲೂ ಉಂಟಾದ ಮಹಾಭಯಗಳೂ ನಾಶವಾಗುವುವು.

೮೩. ಈ ಲಿಂಗದ ಆಖ್ಯಾನವನ್ನು ಕೇಳಲು ಅಭಕ್ಷ್ಯಭೋಜನ, ದುರ್ಜನ ಸಹವಾಸಗಳೇ ಮುಂತಾದ ಅಲ್ಪಾಯುಷ್ಯಕರಗಳಾದ ಪಾತಕಗಳೆಲ್ಲವೂ ನಾಶವಾಗುವುವು; ಸಂದೇಹವಿಲ್ಲ.

೮೪. ಯಾವನು ಪರಮಪಾವನವಾದ ಈ ಜಟೇಶ್ವರನ ಚರಿತ್ರೆಯನ್ನು ಶ್ರಾದ್ಧಕಾಲದಲ್ಲಿ ಪಠನಮಾಡುವನೊ, ಅವನ ಶ್ರಾದ್ಧಕರ್ಮವು ನ್ಯೂನಾತಿರೇಕ

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಜಟೇಶ್ವರಸ್ಯ ದೇವಸ್ಯ ಶೃಣು ರಾಮೇಶ್ವರಂ ಶಿವಂ ॥ ೮೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಜಟೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟವಿಂಶೋಽಧ್ಯಾಯಃ

---

ರಹಿತವೂ ಅಚ್ಛಿದ್ರವೂ ಆಗಿ ಪಿತೃಗಳಿಗೆ ಅತ್ಯಂತ ಸಂತೋಷವನ್ನುಂಟು ಮಾಡುವುದು.

೮೫. ದೇವಿಯೆ! ಇಂತು ನಿನಗೆ ಜಟೇಶ್ವರನ ಮಹಿಮೆಗೆ ಸಂಬಂಧಿಸಿದ ಪಾಪನಾಶಕವಾದ ಕಥೆಯನ್ನು ಹೇಳಿದೆನು. ಇನ್ನು ರಾಮೇಶ್ವರಮಹಾಲಿಂಗದ ಮಾಹಾತ್ಮ್ಯೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಜಟೇಶ್ವರಮಾಹಾತ್ಮ್ಯವರ್ಣನ"ವೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನತ್ರಿಂಶೋಽಧ್ಯಾಯಃ

### ರಾಮೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಹರ ಉವಾಚ :—**

**ಏಕೋನತ್ರಿಂಶತಂ ವಿದ್ಧಿ ದೇವಂ ರಾಮೇಶ್ವರಂ ಪ್ರಿಯೇ ।**
**ಯಸ್ಯ ದರ್ಶನಮಾತ್ರೇಣ ಮುಚ್ಯತೇ ಬ್ರಹ್ಮಹತ್ಯಯಾ ॥ ೧ ॥**
**ಪುರಾ ತ್ರೇತಾಯುಗೇ ದೇವಿ ರಾಮಃ ಶಸ್ತ್ರಭೃತಾಂ ವರಃ ।**
**ಶೂರಃ ಸರ್ವಗುಣೋಪೇತಃ ಪಿತೃಭಕ್ತೋ ಬಭೂವ ಹ ॥ ೨ ॥**
**ರೇಣುಕಾಗರ್ಭಸಂಭೂತಃ ಸ್ವಯಂ ರಾಮೋ ಬಭೂವ ಹ ।**
**ವಿಷ್ಣುರೇವಾಽವತೀರ್ಣೋಽಸೌ ಭೃಗೋಃ ಶಾಪಾತ್ಸುದುಸ್ತರಾತ್ ॥ ೩ ॥**
**ಸ ಕದಾಚಿನ್ನಿಯುಕ್ತೋಽಸೌ ಮುನಿನಾ ಜಮದಗ್ನಿನಾ ।**
**ಶಿರಶ್ಛಿಂಧೀತ್ಯುವಾಚೇದಂ ಮಾತುಸ್ತೇ ವಿಪುಲಂ ಸುತ ॥ ೪ ॥**
**ಸ ಪಿತುರ್ವಚನಂ ಶ್ರುತ್ವಾ ಭ್ರಾತೄಣಾಂ ಮಾತುರೇವ ಚ ।**
**ಶಿರಾಂಸಿ ಚಿಚ್ಛಿದೇ ರಾಮೋ ಜಮದಗ್ನಿರ್ವರಂ ದದೌ ॥ ೫ ॥**

---

### ಕನ್ನಡದ ಅನುವಾದ

### ರಾಮೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪ್ರಿಯಳೆ! ಇಪ್ಪತ್ತೊಂಬತ್ತನೆಯ ಮಹಾಲಿಂಗವೇ ರಾಮೇಶ್ವರವೆಂದು ತಿಳಿ. ಇದನ್ನು ನೋಡಿದ ಮಾತ್ರದಿಂದಲೇ ಬ್ರಹ್ಮಹತ್ಯೆಯ ಪಾತಕವೂ ನಾಶವಾಗುವುದು.

೨. ಹಿಂದೆ ತ್ರೇತಾಯುಗದಲ್ಲಿ ಪರಶುರಾಮನು ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನೆನಿಸಿ, ಶೂರನೂ, ಸಕಲ ಸದ್ಗುಣಭರಿತನೂ, ಪಿತೃಭಕ್ತನೂ ಆಗಿದ್ದು ಪ್ರಖ್ಯಾತಿಯನ್ನು ಪಡೆದಿದ್ದನು.

೩. ಈ ರಾಮನು ರೇಣುಕಾದೇವಿಯ ಗರ್ಭದಲ್ಲಿ ಜನಿಸಿದವನು. ಕಡೆಗಾಣಲಶಕ್ಯವಾದ ಭೃಗುಮಹರ್ಷಿಯ ಶಾಪದಿಂದ ಮಹಾವಿಷ್ಣುವೇ ಈ ರೀತಿಯಾಗಿ ಅವತರಿಸಿದನು.

೪. ಒಮ್ಮೆ ತಂದೆಯಾದ ಜಮದಗ್ನಿಮಹರ್ಷಿಯು ಆತನನ್ನು ಕುರಿತು, "ಎಲೈ ಪುತ್ರನೆ! ನಿನ್ನ ತಾಯಿಯ ತಲೆಯನ್ನು ಕಡಿದುಹಾಕು" ಎಂದು ಅಪ್ಪಣೆಯನ್ನು ಮಾಡಿದನು.

೫. ಆ ಭಾರ್ಗವರಾಮನು ತಂದೆಯ ಮಾತನ್ನು ಕೇಳಿ ಸಹೋದರರ

ಸರ್ವೇಷಾಂ ಪೃಥಿವೀಶಾನಾಂ ತ್ವಮಜೇಯೋ ಭವಿಷ್ಯಸಿ ।
ಸರ್ವಕ್ಷಯಕರೋ ಭಾವೀ ನ ಚಿರಾದೇವ ಭಾರ್ಗವ ॥ ೬ ॥
ಗೃಹಾಣ ಪರಶುಂ ಪುತ್ರ ವಹ್ನಿಜ್ವಾಲೋದ್ಭವಂ ದೃಢಂ ।
ಅನೇನ ಶಿತಶಸ್ತ್ರೇಣ ತತಃ ಖ್ಯಾತೋ ಭವಿಷ್ಯಸಿ ॥ ೭ ॥
ಅಥ ಕೇನಾಽಪಿ ಕಾಲೇನ ಕಾರ್ತವೀರ್ಯಾರ್ಜುನೋ ನೃಪಃ ।
ಹೈಹಯಾನಾಂ ಕುಲೇ ಜಾತಃ ಸಹಸ್ರಬಾಹುವಿಶ್ರುತಃ ॥ ೮ ॥
ಜಘಾನ ಜಮದಗ್ನಿಂ ತು ಕಾಮಧೇನುಕೃತೇ ಕುಧೀಃ ।
ಪಿತರಂ ನಿಹತಂ ದೃಷ್ಟ್ವಾ ರಾಮಃ ಕ್ರುದ್ಧೋಽಬ್ರವೀದಿದಂ ॥ ೯ ॥
ಅಥ ಪಶ್ಯಂತು ಮೇ ವೀರ್ಯಂ ತ್ರಯೋ ಲೋಕಾಃ ಸನಾತನಂ ।
ಸ ಚ ಪಶ್ಯತು ದುರ್ಬುದ್ಧಿರ್ಬ್ರಹ್ಮಹಾ ಕೃತವೀರ್ಯಜಃ ॥ ೧೦ ॥
ಮತ್ಪಿತಾ ನಿಹತೋ ಯೇನ ಸತ್ಕರ್ಮನಿರತಃ ಸದಾ ।
ತಸ್ಯ ಬಾಹುಸಹಸ್ರಂ ತು ಛೇತ್ಸ್ಯಾಮ್ಯಾಹ ನ ಸಂಶಯಃ ॥ ೧೧ ॥

---

ಮತ್ತು ತಾಯಿಯ ತಲೆಗಳನ್ನು ಕಡಿದುಹಾಕಿದನು. ಆಗ ಜಮದಗ್ನಿಯು ಸುಪ್ರೀತನಾಗಿ ಮಗನಿಗೆ ವರವನ್ನಿತ್ತನು.

೬. "ಭಾರ್ಗವನೆ! ನೀನು ಸಕಲರಾಜರಿಗೂ ಅಜೇಯನಾಗಿರುವೆ. ಶೀಘ್ರವಾಗಿಯೇ ನೀನು ಅವರೆಲ್ಲರ ನಾಶಕ್ಕೆ ಕಾರಣವಾಗುವೆ.

೭. ಪುತ್ರನೆ! ಅಗ್ನಿಯ ಜ್ವಾಲೆಗಳಲ್ಲಿ ಹುಟ್ಟಿದುದೂ, ಬಲಶಾಲಿಯೂ ಆದ ಈ ಕೊಡಲಿಯನ್ನು ತೆಗೆದುಕೊ. ಹರಿತವಾದ ಅಲುಗುಳ್ಳ ಈ ಆಯುಧದಿಂದಲೇ ನೀನು ಖ್ಯಾತಿಯನ್ನು ಪಡೆಯುವೆ."

೮. ಬಳಿಕ ಕೆಲವು ಕಾಲವು ಕಳೆಯಲು ಹೈಹಯನ ವಂಶದಲ್ಲಿ ಕಾರ್ತವೀರ್ಯಾರ್ಜುನನೆಂಬ ರಾಜನು ಹುಟ್ಟಿ ಒಂದುಸಾವಿರ ಕೈಗಳುಳ್ಳವನಾಗಿ ಕೀರ್ತಿಯನ್ನು ಪಡೆದನು.

೯. ದುಷ್ಟಬುದ್ಧಿಯಾದ ಆತನು ಕಾಮಧೇನುವಿನ ಸಲುವಾಗಿ ಜಮದಗ್ನಿಯನ್ನು ಕೊಂದನು. ತಂದೆಯ ವಧೆಯನ್ನು ಕೇಳಿ ಕೋಪಗೊಂಡು ಪರಶುರಾಮನಿಂತೆಂದನು.

೧೦. "ಈಗ ಅನಾದಿಯಾದ ನನ್ನ ಬ್ರಹ್ಮತೇಜಸ್ಸಿನ ಪ್ರಭಾವವನ್ನು ಮೂರು ಲೋಕಗಳೂ ನೋಡಲಿ. ದುರ್ಬುದ್ಧಿಯೂ ಬ್ರಹ್ಮಘಾತಕನೂ ಆದ ಆ ಕೃತವೀರ್ಯಪುತ್ರನೂ ಸಹ ನೋಡಲಿ.

೧೧. ನಿತ್ಯವೂ ಸತ್ಕಾರ್ಯಗಳಲ್ಲಿಯೇ ನಿರತನಾಗಿದ್ದ ನನ್ನ ತಂದೆಯು ಯಾವನಿಂದ ಕೊಲ್ಲಲ್ಪಟ್ಟನೊ, ಅವನ ಒಂದುಸಾವಿರ ಕೈಗಳನ್ನೂ ಕತ್ತರಿಸುವೆನು. ಇದರಲ್ಲಿ ಸಂದೇಹವಿಲ್ಲ."

ಇತ್ಯುಕ್ತ್ವಾ ಕ್ರೋಧರಕ್ತಾಕ್ಷಃ ಕಾರ್ತವೀರ್ಯಾರ್ಜುನಂ ಭುವಿ ।
ಧರ್ಷಯಿತ್ವಾ ಯಥಾಕಾಮಂ ಕ್ರೋಶಮಾನಂ ಪುನಃ ಪುನಃ ॥ ೧೨ ॥
ಕೃತ್ಸ್ನಂ ಬಾಹುಸಹಸ್ರಂ ಚ ಚಿಚ್ಛೇದ ಭೃಗುನಂದನಃ ।
ಪರಶ್ವಧೇನ ತೀಕ್ಷ್ಣೇನ ಜ್ಞಾತಿಭಿಃ ಸಹಿತಂ ತದಾ ॥ ೧೩ ॥
ರಥಸ್ಥಂ ಪಾತಯಾಮಾಸ ಜಘಾನ ನೃಪತಿಂ ಪ್ರಿಯೇ ।
ತ್ರಿಃಸಪ್ತಕೃತ್ವಃ ಪೃಥಿವೀ ತೇನ ನಿಃಕ್ಷತ್ರಿಯಾ ಕೃತಾ ॥ ೧೪ ॥
ಕೃತ್ವಾ ನಿಃಕ್ಷತ್ರಿಯಾಂ ಚೈವ ಭಾರ್ಗವಃ ಸ ಮಹಾಬಲಃ ।
ಸರ್ವಪಾಪವಿನಾಶಾಯ ವಾಜಿಮೇಧೇನ ಚೇಷ್ಟವಾನ್ ॥ ೧೫ ॥
ತಸ್ಮಿನ್ ಯಜ್ಞೇ ಮಹಾದಾನೇ ದಕ್ಷಿಣಾಂ ಭೃಗುನಂದನಃ ।
ಮಾರೀಚಾಯ ದದೌ ಪ್ರೀತಃ ಕಶ್ಯಪಾಯ ವಸುಂಧರಾಂ ॥ ೧೬ ॥
ವಾರುಣಾಂಸ್ತುರಗಾಂಛುಭ್ರಾನ್ರಥಂ ಚ ರಥಿನಾಂ ವರಃ ।
ಹಿರಣ್ಯಮಕ್ಷಯಂ ಧೇನೂರ್ಗಜೇಂದ್ರಾಂಶ್ಚ ಮಹಾಮತಿಃ ॥ ೧೭ ॥
ತದಾ ತಸ್ಮಿನ್ಮಹಾಯಜ್ಞೇ ವಾಜಿಮೇಧೇ ಮಹಾಯಶಾಃ ।
ತಥಾಽಪಿ ನ ಗತಾ ಹತ್ಯಾ ಹ್ಯನೇಕಪ್ರಾಣಿಸಂಭವಾ ॥ ೧೮ ॥

---

೧೨. ಇಂತೆಂದು ನುಡಿದು, ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಕಾರ್ತವೀರ್ಯಾರ್ಜುನನನ್ನೇ ಹಿಡಿದು ನೆಲಕ್ಕೆ ತಳ್ಳಿ, ಮತ್ತೆ ಮತ್ತೆ ಆಕ್ರಂದನ ಮಾಡುತ್ತಿರುವ ಅವನನ್ನು ಸ್ವೇಚ್ಛೆಯಾಗಿ ಅಪಮಾನಗೊಳಿಸಿದನು.

೧೩. ತೀಕ್ಷ್ಣವಾದ ತನ್ನ ಕೊಡಲಿಯಿಂದ ಪರಶುರಾಮನು ಅವನ ಬಾಹುಗಳೆಲ್ಲವನ್ನೂ ನಿಶ್ಶೇಷವಾಗಿ ಕಡಿದುಹಾಕಿ ಅವನ ಜ್ಞಾತಿಗಳೆಲ್ಲರನ್ನೂ ಕೊಂದನು.

೧೪. ಪ್ರಿಯಳೆ! ರಥದಲ್ಲಿ ಕುಳಿತಿದ್ದ ಆ ಮಹಾರಾಜನನ್ನು ಕೆಳಗೆ ಸೆಳೆದು ಕೊಂಡು ಕೊಂದುಹಾಕಿದನು. ಬಳಿಕ ರೋಷದಿಂದ ಅವನು ಇಪ್ಪತ್ತೊಂದು ಸಲ ಭೂಮಂಡಲದ ಕ್ಷತ್ರಿಯರನ್ನೆಲ್ಲ ನಿರ್ಮೂಲಮಾಡಲುಪಕ್ರಮಿಸಿದನು.

೧೫. ಮಹಾಬಲಶಾಲಿಯಾದ ಆ ಭಾರ್ಗವರಾಮನು ಭೂಮಿಯನ್ನು ಕ್ಷತ್ರಿಯರಹಿತವನ್ನಾಗಿ ಮಾಡಿ ಅವರನ್ನು ಕೊಂದ ಸಕಲ ಪಾತಕಗಳ ಪರಿಹಾರಕ್ಕಾಗಿ ಒಂದು ಅಶ್ವಮೇಧಯಜ್ಞವನ್ನು ಮಾಡಿದನು.

೧೬. ಆ ಯಜ್ಞವಲ್ಲಿ ಮಹಾದಾನದ ಕಾಲಪ್ರಾಪ್ತವಾಗಲು ಆ ಭೃಗುನಂದನನು ಮರೀಚಿಯ ಪುತ್ರನಾದ ಕಾಶ್ಯಪನಿಗೆ ಸಮಸ್ತ ಭೂಮಂಡಲವನ್ನೂ ದಕ್ಷಿಣೆಯಾಗಿ ಕೊಟ್ಟನು.

೧೭. ರಥಿಕರಲ್ಲಿ ಶ್ರೇಷ್ಠನೂ ಮಹಾಪ್ರಾಜ್ಞನೂ ಆದ ಆತನು ಶುಭ್ರವರ್ಣದ ವರುಣಲೋಕದ ಕುದುರೆಗಳನ್ನೂ, ರಥವನ್ನೂ, ಅಮಿತವಾದ ಚಿನ್ನದ ರಾಶಿಯನ್ನೂ, ಆಕಳುಗಳನ್ನೂ, ಆನೆಗಳನ್ನೂ ದಾನ ಕೊಟ್ಟನು.

೧೮. ಮಹಾಕೀರ್ತಿವಂತನಾದ ಆತನು ಅಶ್ವಮೇಧಮಹಾಯಜ್ಞವನ್ನು

ಏವಂ ಕಿಲ ಪುರಾಣೇಷು ಸರ್ವಾಗಮಭಿದಾದಿಷು ।
ವಿಶ್ವಸ್ತಘಾತಿನಾಂ ಚೈವ ನಿಷ್ಕೃತಿಃ ಶ್ರೂಯತೇ ಯಥಾ ॥ ೧೯ ॥
ಅಶ್ವಮೇಧೇನ ಯಜ್ಞೇನ ಬ್ರಹ್ಮಹತ್ಯಾ ವಿನಶ್ಯತಿ ।
ಅಥವಾ ದ್ವಾದಶಾಬ್ದೇನ ಯದ್ಯೇಕಾಽಽಶ್ಯಾ ಕೃತಾ ಭುವಿ ॥ ೨೦ ॥
ಮಯಾ ಪುನರ್ನೃಶಂಸೇನ ಬಹವಃ ಪ್ರಾಣಿನೋ ಹತಾಃ ।
ವಿಶ್ವಸ್ತಾಶ್ಚ ಪ್ರಮತ್ತಾಶ್ಚ ಗರ್ಭಸ್ಥಾಶ್ಚ ಪುನಃ ಪುನಃ ॥ ೨೧ ॥
ಸ್ತ್ರಿಯೋ ವೃದ್ಧಾಶ್ಚ ಬಾಲಾಶ್ಚ ಮಾತಾ ಚೈವ ವಿಶೇಷತಃ ।
ಇತಿ ದುಃಖಾನ್ವಿತೋ ರಾಮೋ ವಿಷಾದಂ ಪರಮಂ ಗತಃ ॥ ೨೨ ॥
ಚಿಂತಯಿತ್ವಾ ಮುಹೂರ್ತಂ ತು ಗತೋ ರೈವತಕಂ ಗಿರಿಂ ।
ತಥಾ ತಪೋಽತಪದ್ಘೋರಂ ಬಹೂನ್ವರ್ಷಗಣಾನ್ಪ್ರಿಯೇ ॥ ೨೩ ॥
ತಥಾಽಪಿ ನ ಗತಾ ಹತ್ಯಾ ಹ್ಯನೇಕಪ್ರಾಣಿಸಂಭವಾ ।
ಅಥ ರಾಮೋ ಜಗಾಮಾಽಥ ಮಹೇಂದ್ರೇ ಮಲಯೇ ತಥಾ ॥ ೨೪ ॥

---

ಮಾಡಿದರೂ, ಅಸಂಖ್ಯಾತಪ್ರಾಣಿಗಳನ್ನು ಕೊಂದ ಆ ಮಹಾಪಾತಕವು ಮಾತ್ರ ಹೋಗಲಿಲ್ಲ. ಆಗ ಆತನು ಇಂತೆಂದು ಚಿಂತಿಸಿದನು.

೧೯. "ಪುರಾಣಗಳಲ್ಲಿಯೂ, ವಿವಿಧ ಆಗಮಗಳಲ್ಲಿಯೂ, ವಿಶ್ವಾಸವನ್ನು ಇಟ್ಟವರ ವಧೆಗೂ ಸಹ ಇದೇ ಪ್ರಾಯಶ್ಚಿತ್ತವೆಂದು ಕೇಳುತ್ತಿರುವೆನಲ್ಲವೆ.

೨೦. ಅಶ್ವಮೇಧವೆಂಬ ಯಜ್ಞವನ್ನು ಮಾಡುವುದರಿಂದಾಗಲಿ, ಹನ್ನೆರಡು ವರ್ಷಗಳವರೆಗೆ ಏಕಭುಕ್ತದ ವ್ರತವನ್ನಾಚರಿಸುವುದರಿಂದಾಗಲಿ ಬ್ರಹ್ಮಹತ್ಯೆಯ ದೋಷವು ಕಳೆದುಹೋಗುವುದು.

೨೧–೨೨. ಮಹಾನೀಚನಾದ ನಾನಾದರೋ ವಿಶ್ವಾಸವನ್ನಿಟ್ಟವರೂ, ಪ್ರಮತ್ತರೂ, ಗರ್ಭಗತರಾದವರೂ ಮುಂತಾದವರನ್ನು ಲೆಕ್ಕವಿಲ್ಲವೆ ಕೊಂದಿರುವೆನು. ವಿಶೇಷವಾಗಿ ಸ್ತ್ರೀಯರನ್ನೂ, ವೃದ್ಧರನ್ನೂ, ಎಳೆಗೂಸುಗಳ ತಾಯಿಯರನ್ನೂ ಕೊಂದಿರುವೆನು." ಇಂತೆಂದು ದುಃಖಿತನಾಗಿ ಆ ಪರಶುರಾಮನು ಬಹಳ ವಿಷಾದಗೊಂಡನು.

೨೩. ಒಂದು ಮುಹೂರ್ತಕಾಲ ಯೋಚಿಸಿ ರೈವತವೆಂಬ ಪರ್ವತವನ್ನು ಸೇರಿ ಅನೇಕ ವರ್ಷಗಳವರೆಗೂ ಅತ್ಯುಗ್ರವಾದ ತಪಸ್ಸನ್ನಾಚರಿಸಿದನು.

೨೪. ಹಾಗಾದರೂ ಅಸಂಖ್ಯಾತ ಪ್ರಾಣಿಗಳನ್ನು ಕೊಂದ ಆ ಪಾತಕವು ಕೊನೆಗಾಣಲಿಲ್ಲ. ಅಲ್ಲಿಂದ ರಾಮನು ಮಹೇಂದ್ರಕ್ಕೂ ಮಲಯಪರ್ವತಕ್ಕೂ ಹೋದನು.

ಸಹ್ಯೇ ಹಿಮಾಲಯೇ ರಮ್ಯೇ ಪುಣ್ಯೇ ಬದರಿಕಾಶ್ರಮೇ ।
ಚರಿತ್ವಾ ಪರ್ವತಾನ್ಸರ್ವಾನ್ ಸ್ನಾನಾರ್ಥಂ ನರ್ಮದಾಂ ಯಯೌ॥ ೨೫ ॥
ಯಮುನಾಂ ಚಂದ್ರಭಾಗಾಂ ಚ ಗಂಗಾಂ ತ್ರಿಪಥಗಾಮಿನೀಂ ।
ಇರಾವತೀಂ ವಿತಸ್ತಾಂ ಚ ಪರಾಂ ಚರ್ಮಣ್ವತೀಂ ಶುಭಾಂ ॥ ೨೬ ॥
ವಿಶಾಲಾಂ ಕಪಿಲಾಂ ದುರ್ಗಾಂ ಗಂಭೀರಾಂ ಗೋಮತೀಂ ಶಿವಾಂ ।
ಗೋದಾವರೀಂ ದಶಾರ್ಣಾಂ ಚ ಪುಣ್ಯಾಂ ಭೀಮರಥೀಂ ತಥಾ ॥ ೨೭ ॥
ಗಯಾಂ ಚೈವ ಕುರುಕ್ಷೇತ್ರಂ ನೈಮಿಷಂ ಪುಷ್ಕರಂ ತಥಾ ।
ಅಟ್ಟಹಾಸಂ ಪ್ರಭಾಸಂ ಚ ಕೇದಾರಮಮರೇಶ್ವರಂ ॥ ೨೮ ॥
ಕೃತಯಾತ್ರೋಽಪಿ ದುಃಖಾರ್ತಶ್ಚಿಂತಯಾಮಾಸ ಭಾರ್ಗವಃ ।
ನ ನೂನಂ ತೀರ್ಥಮಾಹಾತ್ಮ್ಯಂ ದೃಶ್ಯತೇ ಭುವಿ ಸಾಂಪ್ರತಂ ॥ ೨೯ ॥
ನ ಗತಾ ಬ್ರಹ್ಮಹತ್ಯಾ ಮೇ ಕೃತೋ ಧರ್ಮೋ ನಿರರ್ಥಕಃ ।
ಮಿಥ್ಯಾ ತತ್ಕಥ್ಯತೇ ಶಾಸ್ತ್ರೇ ತೀರ್ಥದಾನಾದಿಭಿಃ ಶುಭೈಃ ।
ಯದಿ ಸ್ಯಾತ್ಸತ್ಯಮೇತಚ್ಚ ನಷ್ಟಂ ಜಾತಂ ಕಥಂ ಮಮ ॥ ೩೦ ॥

---

೨೫. ಸಹ್ಯಪರ್ವತದಲ್ಲಿಯೂ, ರಮ್ಯವಾದ ಹಿಮಾಲಯದಲ್ಲಿಯೂ, ಪುಣ್ಯಕ್ಷೇತ್ರವಾದ ಬದರಿಕಾಶ್ರಮದಲ್ಲಿಯೂ, ಇತರ ಅನೇಕ ಪರ್ವತಪ್ರದೇಶಗಳಲ್ಲಿಯೂ ಸಂಚರಿಸಿ ತೀರ್ಥಸ್ನಾನಕ್ಕಾಗಿ ನರ್ಮದಾತೀರಕ್ಕೆ ಪರಶುರಾಮನು ಬಂದನು.

೨೬. ಯಮುನೆ, ಚಂದ್ರಭಾಗಾ, ಗಂಗಾ, ಇರಾವತಿ, ಉತ್ತಮವಾದ ವಿತಸ್ತಾ, ಪವಿತ್ರವಾದ ಚರ್ಮಣ್ವತಿ ಇವುಗಳಲ್ಲಿಯೂ ಮಿಂದನು.

೨೭. ವಿಶಾಲಾ, ಕಪಿಲಾ, ದುರ್ಗಾ, ಗಂಭೀರಾ, ಗೋಮತಿ, ಗೋದಾವರಿ, ದಶಾರ್ಣಾ, ಪುಣ್ಯಪ್ರದೆಯಾದ ಭೀಮರಥಿ ಮುಂತಾದ ನದಿಗಳಲ್ಲಿಯೂ ಸ್ನಾನಗಳನ್ನು ಮಾಡಿದನು.

೨೮. ಗಯೆ, ಕುರುಕ್ಷೇತ್ರ, ನೈಮಿಷಾರಣ್ಯ, ಪುಷ್ಕರ, ಅಟ್ಟಹಾಸ, ಪ್ರಭಾಸ, ಕೇದಾರ, ಅಮರೇಶ್ವರ ಮೊದಲಾದ ಕ್ಷೇತ್ರಗಳಲ್ಲಿಯೂ ಪ್ರವಾಸವನ್ನು ಮಾಡಿದನು.

೨೯. ಯಾತ್ರೆಗಳನ್ನೆಲ್ಲ ಮಾಡಿದರೂ ತನ್ನ ದುಃಖವು ಕೊನೆಗಾಣದಿರಲು ಭಾರ್ಗವರಾಮನು ಚಿಂತಿಸತೊಡಗಿದನು. "ಭೂಲೋಕದಲ್ಲಿ ಈಗ ನಿಜವಾಗಿಯೂ ತೀರ್ಥಗಳಲ್ಲಿ ಮಾಹಾತ್ಮ್ಯವಿಲ್ಲವಾಗಿರುವುದು.

೩೦. ನನ್ನ ಬ್ರಹ್ಮಹತ್ಯೆಯು ಕಳೆಯಲಿಲ್ಲ. ನಾನು ಮಾಡಿದ ಧರ್ಮಕಾರ್ಯವೆಲ್ಲ ನಿರರ್ಥಕವಾಯಿತು. ತೀರ್ಥಯಾತ್ರೆ, ದಾನಗಳೇ ಮುಂತಾದ ಕೆಲಸಗಳಿಂದ ಪಾಪವು ಹೋಗುವುದೆಂಬ ಶಾಸ್ತ್ರದ ಮಾತುಗಳೆಲ್ಲವೂ ಸುಳ್ಳಾದವು-

ಏತಸ್ಮಿನ್ನೇವ ಕಾಲೇ ತು ನಾರದೋ ಮುನಿಪುಂಗವಃ ।
ಆಜಗಾಮ ತಮುದ್ದೇಶಂ ಯತ್ರ ರಾಮೋ ವ್ಯವಸ್ಥಿತಃ ॥ ೩೧ ॥
ವಿಷಣ್ಣವದನೋ ದೀನಶ್ಚಿಂತಯಾನಃ ಪುನಃ ಪುನಃ ।
ದೃಷ್ಟ್ವಾ ತಥಾವಿಧೋ ರಾಮಃ ಪ್ರತ್ಯುವಾಚಾಽಥ ನಾರದಂ ॥ ೩೨ ॥
ಭೋ ಭೋ ನಾರದ ದೇವರ್ಷೇ ಶೃಣು ಮೇ ಪರಮಂ ವಚಃ ।
ಜನನೀ ನಿಹತಾ ಪೂರ್ವಂ ಪಿತುರ್ವಾಕ್ಯಾದ್ದ್ವಿಜೋತ್ತಮ ॥ ೩೩ ॥
ಪಿತುಃ ಪರಾಭವಾದ್ಭೂಮೌ ಭೂಮಿಪಾಲಾ ಮಯಾ ಹತಾಃ ।
ಗರ್ಭಾ ವಿದಾರಿತಾಃ ಸ್ತ್ರೀಣಾಂ ಬಾಲಾ ವೃದ್ಧಾಶ್ಚ ಯೋಷಿತಃ ॥ ೩೪ ॥
ನಿರಂತರಾ ಹತಾ ಲೋಕಾ ವಿಶೋಕೇನಾಽದಯಾಲುನಾ ।
ಪಶ್ಚಾದ್ಘೃಣಾ ಸಮುತ್ಪನ್ನಾ ಪರಲೋಕಂ ಸಮೀಕ್ಷತಃ ॥ ೩೫ ॥
ಯಜ್ಞಃ ಕೃತೋಽಶ್ವಮೇಧಶ್ಚ ದತ್ತಂ ದಾನಮನೇಕಧಾ ।
ಸ್ನಾತೋಽಹಂ ಸರ್ವತೀರ್ಥೇಷು ಸರ್ವಪ್ರಸ್ರವಣೇಷು ಚ ॥ ೩೬ ॥

---

ಅವುಗಳು ಸತ್ಯವಾಗಿದ್ದಲ್ಲಿ ನಷ್ಟವಾಗಬೇಕಾಗಿದ್ದ ನನ್ನ ಪಾಪರಾಶಿಯು ಇನ್ನೂ ಏಕೆ ಅಂಟಿಕೊಂಡಿರುವುದು ?''

೩೧. ಹೀಗೆ ಆ ಭಾರ್ಗವನು ಚಿಂತಿಸುತ್ತಿದ್ದ ಸಮಯಕ್ಕೆ ಸರಿಯಾಗಿ ಆ ಪ್ರದೇಶವನ್ನು ಕುರಿತು ಮುನಿಶ್ರೇಷ್ಠನಾದ ನಾರದನು ಬಂದನು.

೩೨. ಕಳೆಗುಂದಿದ ಮುಖವುಳ್ಳವನೂ, ದೀನನೂ ಆಗಿ ಪರಶುರಾಮನು ಮತ್ತೆ ಮತ್ತೆ ಚಿಂತಿಸುತ್ತ ನಾರದನ ಆಗಮನವನ್ನು ಕಂಡು ಆತನಿಗಿಂತೆಂದನು.

೩೩. ''ಅಯ್ಯಾ, ದೇವರ್ಷಿಯಾದ ನಾರದನೆ! ಬ್ರಾಹ್ಮಣೋತ್ತಮನೆ! ಆರ್ತನಾದ ನನ್ನ ಮಾತನ್ನು ಕೇಳು. ತಂದೆಯ ವಾಕ್ಯದಲ್ಲಿ ಗೌರವದಿಂದ ಹಿಂದೆ ನಾನು ತಾಯಿಯನ್ನು ಸಂಹರಿಸಿದೆನು.

೩೪. ತಂದೆಗೆ ಪರಾಭವವಾದ ಕಾರಣದಿಂದ ನಾನು ಸಮಸ್ತ ಕ್ಷತ್ರಿಯರನ್ನೂ ಕೊಂದುಹಾಕಿದೆನು. ಸ್ತ್ರೀಯರ ಗರ್ಭಗಳನ್ನು ಸೀಳಿದೆನು. ಬಾಲಕರು, ವೃದ್ಧರು, ಹೆಂಗಸರು ಮುಂತಾದವರನ್ನೆಲ್ಲ ಕೊಂದೆನು.

೩೫. ಪರಿತಾಪವೂ, ಭೂತದಯೆಯೂ ಇಲ್ಲದ ನನ್ನಿಂದ ಅನೇಕರು ನಿರಂತರವಾಗಿ ಹತರಾದರು. ಬಳಿಕ ಪರಲೋಕದ ಗತಿಯನ್ನು ಕುರಿತು ಯೋಚಿಸಿದ ನನಗೆ ಪಶ್ಚಾತ್ತಾಪವುಂಟಾಯಿತು.

೩೬. ಅಶ್ವಮೇಧಯಜ್ಞವನ್ನು ಮಾಡಿದೆನು. ಅನೇಕ ವಿಧಗಳಾದ ದಾನಗಳನ್ನಿತ್ತೆನು. ಸಮಸ್ತ ತೀರ್ಥಗಳಲ್ಲಿಯೂ ಸಕಲ ನದಿಗಳಲ್ಲಿಯೂ ಸ್ನಾನ ಮಾಡಿದೆನು.

ಪರ್ವತೇಷು ತಪಸ್ತಪ್ತಂ ಹುತಂ ಜಪ್ತಂ ನಿರಂತರಂ ।
ಬ್ರಹ್ಮಹತ್ಯಾವಿನಾಶಾರ್ಥಂ ಕಿಂ ಕಿಂ ನಾಽತ್ರ ಮಯಾ ಕೃತಂ ॥ ೩೭ ॥
ಪರಂ ನೈವ ಗತಾ ಹತ್ಯಾ ತಸ್ಮಾತ್ಸರ್ವಂ ನಿರರ್ಥಕಂ ॥ ೩೮ ॥
ಇತಿ ತಸ್ಯ ವಚಃ ಶ್ರುತ್ವಾ ನಾರದೋ ಭಗವಾನೃಷಿಃ ।
ಪ್ರತ್ಯುವಾಚ ಹಿತಂ ಸತ್ಯಂ ಚಿರಂ ಧ್ಯಾತ್ವಾ ವಚಸ್ತದಾ ।
ಭೋ ಭೋ ರಾಮ ಕಿಮಾತ್ಮಾನಂ ನ ಸ್ಮರಸ್ಯಧುನಾ ಹರಿಂ ॥ ೩೯ ॥
ತ್ವಯೈವ ಕಥಿತಂ ಪೂರ್ವಂ ಬ್ರಹ್ಮಹತ್ಯಾವಿನಾಶನಂ ।
ಮಹಾಕಾಲವನಕ್ಷೇತ್ರಂ ಕ್ಷೇತ್ರಾಣಾಮುತ್ತಮಂ ಪರಂ ।
ತಸ್ಮಿನ್ಕ್ಷೇತ್ರೇ ಮಹಾಲಿಂಗಂ ಬ್ರಹ್ಮಹತ್ಯಾವಿನಾಶನಂ ॥ ೪೦ ॥
ಜಟೇಶ್ವರೋ ಮಹಾಭಾಗ ವಿದ್ಯತೇ ಸರ್ವಸಿದ್ಧಿದಂ ।
ಕೃತಾಽವತಾರ ರಾಮ ತ್ವಂ ತತ್ರ ಗಚ್ಛಾಽವಿಲಂಬಿತಂ ॥ ೪೧ ॥
ನಾರದಸ್ಯ ವಚಃ ಶ್ರುತ್ವಾ ಸ್ಮೃತ್ವಾ ಕ್ಷೇತ್ರಮನುತ್ತಮಂ ।
ಜಗಾಮ ತ್ವರಿತಂ ದೇವಿ ಮಹಾಕಾಲವನೇ ತತಃ ॥ ೪೧-ಅ ॥

---

೩೭. ಪರ್ವತಗಳಲ್ಲಿ ಅಖಂಡವಾಗಿ ತಪಸ್ಸನ್ನಾಚರಿಸಿರುವೆನು. ಹೋಮಗಳನ್ನೂ ಜಪಗಳನ್ನೂ ಮಾಡಿರುವೆನು. ಈ ಬ್ರಹ್ಮಹತ್ಯೆಯ ಪಾಪವನ್ನು ಕಳೆಯಲು ನಾನು ಯಾವ ಯಾವ ಪ್ರತೀಕಾರವನ್ನು ತಾನೆ ಮಾಡಲಿಲ್ಲ?

೩೮. ಆದರೂ ಈ ಹತ್ಯಾದೋಷವು ಹೋಗಲೇ ಇಲ್ಲವಾದುದರಿಂದ ನಾನು ಮಾಡಿದುದೆಲ್ಲವೂ ನಿಷ್ಪ್ರಯೋಜನವೇ ಆಯಿತು.''

೩೯. ಇಂತೆಂದ ಪರಶುರಾಮನ ಮಾತುಗಳನ್ನು ಕೇಳಿ ಭಗವಂತನಾದ ನಾರದಮಹರ್ಷಿಯು ಕೆಲವುಕಾಲ ಧ್ಯಾನಾಸಕ್ತನಾಗಿದ್ದು, ಆ ಬಳಿಕ ಹಿತವೂ, ಸತ್ಯವೂ ಆದ ಮಾತುಗಳನ್ನಾಡಿದನು. ''ಪರಶುರಾಮನೆ! ನಿನ್ನ ಸ್ವರೂಪವನ್ನು ಸ್ಮರಿಸಲಾರೆಯ? ನೀನು ಶ್ರೀಹರಿಯೇ ಆಗಿರುವೆ.

೪೦. ಬ್ರಹ್ಮಹತ್ಯೆಯನ್ನು ಹೋಗಲಾಡಿಸುವ ಸಾಧನವನ್ನು ನೀನೇ ಮೊದಲು ಹೇಳಿರುವೆ. ಕ್ಷೇತ್ರಗಳಲ್ಲೆಲ್ಲ ಉತ್ತಮವೂ ಪವಿತ್ರವೂ ಆದ ಮಹಾಕಾಲವನದಲ್ಲಿ ಬ್ರಹ್ಮಹತ್ಯಾದೋಷವನ್ನು ಕಳೆಯುವ ಮಹಾಲಿಂಗವೊಂದಿರುವುದು.

೪೧–೪೧–ಅ. ಮಹಾಭಾಗ್ಯಶಾಲಿಯೆ! ಸಕಲಾಭೀಷ್ಟಗಳನ್ನೂ ಕೊಡುವ ಜಟೇಶ್ವರಮಹಾಲಿಂಗವಿರುವುದಷ್ಟೆ. ಶ್ರೀಹರಿಯ ಅವತಾರವಾದ ನೀನು ತಡಮಾಡದೆ ಅಲ್ಲಿಗೆ ಹೋಗು.'' ದೇವಿಯೆ! ನಾರದಮುನಿಯ ಮಾತನ್ನು ಕೇಳಿ ಭಾರ್ಗವರಾಮನು ಸರ್ವೋತ್ತಮವಾದ ಆ ಕ್ಷೇತ್ರವನ್ನು ಜ್ಞಾಪಿಸಿಕೊಂಡು ಮಹಾಕಾಲವನಕ್ಕೆ ಶೀಘ್ರವಾಗಿ ಬಂದು ಸೇರಿದನು.

ಲಿಂಗಮಾರಾಧಯಾಮಾಸ ತತೋ ಹತ್ಯಾ ಗತಾ ಕ್ಷಯಂ ।
ಲಿಂಗಮಧ್ಯಾದಹಂ ದೇವಿ ಪ್ರಸನ್ನೋ ನಿರ್ಗತಸ್ತದಾ ।
ಜಾಮದಗ್ನ್ಯೋ ಮಯಾ ಪ್ರೋಕ್ತಃ ಕಾಂತ ಕಾಮಂ ದದಾಮ್ಯಹಂ ॥೪೨॥
ಸ ಪ್ರೋವಾಚ ತತೋ ರಾಮೋ ಭಕ್ತಿನಮ್ರಾತ್ಮಕಂಧರಃ ॥ ೪೩ ॥
ತ್ವತ್ಪಾದಪಂಕಜೇ ಭೂಯಾದ್ಭಕ್ತಿರ್ಮೇ ವಿಪುಲಾ ಸದಾ ।
ವರಮೇತಂ ಪ್ರಯಚ್ಛಾಽದ್ಯ ಯದಿ ತುಷ್ಟೋ ಮಹೇಶ್ವರ ॥ ೪೪ ॥
ಇತ್ಯುಕ್ತೋಽಹಂ ತದಾ ತೇನ ಯಥಾ ತುಷ್ಟೇನ ಪಾರ್ವತಿ ।
ತಸ್ಮೈ ದತ್ತಾ ಮಯಾಽಭೀಷ್ಟಾ ವರಾ ಕೀರ್ತಿಕರಾ ಸ್ಥಿತಿಃ ॥ ೪೫ ॥
ಅದ್ಯ ಪ್ರಭೃತಿ ತೇ ನಾಮ್ನಾ ದೇವಃ ಖ್ಯಾತೋ ಭವಿಷ್ಯತಿ ।
ತದಾ ರಾಮೇಶ್ವರ ಇತಿ ತ್ರಿಷು ಲೋಕೇಷು ಗೀಯತೇ ॥ ೪೬ ॥
ಭಕ್ತ್ಯಾ ಯೇ ಪೂಜಯಿಷ್ಯಂತಿ ದೇವಂ ರಾಮೇಶ್ವರಂ ಪರಂ ।
ಆಜನ್ಮಪ್ರಭವಂ ಪಾಪಂ ತೇಷಾಂ ನಶ್ಯತಿ ತತ್ಕ್ಷಣಾತ್ ॥ ೪೭ ॥

---

೪೨. ಆ ಲಿಂಗವನ್ನು ಪೂಜಿಸಲು ಆತನ ಬ್ರಹ್ಮಹತ್ಯೆಯು ನಾಶವಾಯಿತು. ಪಾರ್ವತಿಯೆ! ಆ ಲಿಂಗದ ಮಧ್ಯದಿಂದ ನಾನು ಪ್ರಸನ್ನನಾಗಿ ಕಾಣಿಸಿಕೊಂಡು, ಆ ಜಾಮದಗ್ನ್ಯನನ್ನು ಕುರಿತು, "ಎಲೈ ಪ್ರಿಯನೆ! ನಿನಗೆ ಬೇಕಾದ ಇಷ್ಟಾರ್ಥವನ್ನು ಕೊಡುವೆನು" ಎಂದು ಹೇಳಿದೆನು.

೪೩. ಆಗ ಪರಶುರಾಮನು ಭಕ್ತಿಭಾರದಿಂದ ಬಗ್ಗಿದ ಕಂಠವುಳ್ಳವನಾಗಿ ಹೇಳಿದನು.

೪೪. "ಮಹೇಶ್ವರನೆ! ನಿನ್ನ ಪಾದಕಮಲಗಳಲ್ಲಿಯೇ ನಿಶ್ಚಲವೂ, ಅಪಾರವೂ ಆದ ಭಕ್ತಿಯು ನನಗುಂಟಾಗಲಿ. ನೀನು ನನ್ನಲ್ಲಿ ಸಂತುಷ್ಟನಾಗಿರುವೆಯಾದರೆ ಈ ಒಂದು ವರವನ್ನು ಕೊಡು."

೪೫. ಪಾರ್ವತಿಯೆ! ಆತನಿಂತು ಪ್ರಾರ್ಥಿಸಿಕೊಳ್ಳಲು, ನಾನು ಸಂತುಷ್ಟನಾಗಿ ಯಾವಾಗಲೂ ಕೀರ್ತಿಯು ಸ್ಥಿರವಾಗಿ ನೆಲಸಿರುವ ಅಭೀಷ್ಟವರವನ್ನು ಆತನಿಗೆ ಕೊಟ್ಟೆನು.

೪೬. ಈ ದೇವನು ಇಂದು ಮೊದಲಾಗಿ ನಿನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವನು. ಮತ್ತು ಮೂರು ಲೋಕಗಳಲ್ಲಿಯೂ ರಾಮೇಶ್ವರನೆಂದು ಕರೆಯಲ್ಪಡುವನು.

೪೭. ಯಾರು ಪರಮಭಕ್ತಿಯಿಂದ ರಾಮೇಶ್ವರಮಹಾದೇವನನ್ನು ಪೂಜಿಸುವರೊ, ಅವರು ಹುಟ್ಟಿದಂದಿನಿಂದ ಮಾಡಿದ ಪಾಪಗಳೆಲ್ಲವೂ ನಾಶವಾಗುವುವು.

ಸ ಏವ ಪುಣ್ಯವಾನ್ ಪೂಜ್ಯ ಇಹಲೋಕೇ ಪರತ್ರ ಚ ।
ಯಃ ಪಶ್ಯತಿ ನರೋ ಭಕ್ತ್ಯಾ ದೇವಂ ರಾಮೇಶ್ವರಂ ಶಿವಂ ॥ ೪೮ ॥
ಯೇಽನುಮೋದಂತಿ ದೇವಸ್ಯ ದರ್ಶನಂ ಯಜನಂ ತಥಾ ।
ತೇಽಪಿ ಪಾಪವಿನಿರ್ಮುಕ್ತಾಃ ಪ್ರಯಾಂತಿ ಮಮ ಮಂದಿರಂ ॥ ೪೯ ॥
ಯಚ್ಚಾಽಪಿ ಪಾತಕಂ ಘೋರಂ ಬ್ರಹ್ಮಹತ್ಯಾಸಹಸ್ರಕಂ ।
ತತ್ಪಾಪಂ ವಿಲಯಂ ಯಾತಿ ರಾಮೇಶ್ವರಸಮರ್ಚನಾತ್ ॥ ೫೦ ॥
ದುಷ್ಪ್ರಾಪ್ಯಂ ಯತ್ಫಲಂ ವಿಪ್ರೈರ್ವಾಜಪೇಯಾದಿಭಿರ್ಮಖೈಃ ।
ಪ್ರಾಪ್ಯತೇ ತತ್ಸುಖೇನೈವ ಶ್ರೀರಾಮೇಶ್ವರದರ್ಶನಾತ್ ॥ ೫೧ ॥
ಯೇ ಹತಾಽಭಿಮುಖಾಃ ಶೂರಾ ಗೋವಿಪ್ರಾರ್ಥೇ ರಣಾಜಿರೇ ।
ಗತಿರಭ್ಯಧಿಕಾ ತೇಭ್ಯೋ ದೃಷ್ಟ್ವಾ ರಾಮೇಶ್ವರಂ ಶಿವಂ ॥ ೫೨ ॥
ಜಿತಾಸ್ತೇನ ಸದಾ ಲೋಕಾ ರಾಮೇಣೇವ ಜಗತ್ತ್ರಯಂ ।
ದೃಷ್ಟಂ ಯೇನ ಸದಾ ಭಕ್ತ್ಯಾ ಲಿಂಗಂ ರಾಮೇಶ್ವರಂ ಶಿವಂ ॥ ೫೩ ॥

---

೪೮. ಯಾವ ಮಾನವನು ಭಕ್ತಿಯಿಂದ ರಾಮೇಶ್ವರಮಹಾಲಿಂಗದ ದರ್ಶನವನ್ನು ಮಾಡುವನೊ, ಅವನೇ ಪುಣ್ಯವಂತನು. ಇಹಲೋಕ ಪರಲೋಕಗಳೆರಡರಲ್ಲಿಯೂ ಆತನು ಪೂಜೆಗೊಳ್ಳುವನು.

೪೯. ಮಾಡಲಶಕ್ತರಾದರೂ ಯಾರು ಈ ಮಹಾದೇವನ ದರ್ಶನ ಪೂಜೆಗಳನ್ನು ಅನುಮೋದಿಸುವರೊ, ಅವರೂ ತಮ್ಮ ಪಾತಕಗಳನ್ನು ಕಳೆದುಕೊಂಡು ನನ್ನ ಲೋಕವನ್ನು ಸೇರುವರು.

೫೦. ಸಾವಿರಾರು ಬ್ರಹ್ಮಹತ್ಯೆಗಳನ್ನು ಮಾಡಿದ ಮಹಾ ಘೋರವಾದ ಪಾತಕವೂ ಸಹ ಈ ರಾಮೇಶ್ವರನಿಗೆ ಮಾಡುವ ಪೂಜೆಯ ಫಲವಾಗಿ ನಾಶವಾಗುವುದು.

೫೧. ಬ್ರಾಹ್ಮಣರು ವಾಜಪೇಯವೇ ಮೊದಲಾದ ಮಹಾಯಜ್ಞಗಳಿಂದಲೂ ಯಾವ ಮನೋಭೀಷ್ಟಗಳನ್ನು ಹೊಂದಲಾರರೊ, ಅವುಗಳೆಲ್ಲವನ್ನೂ ಸುಲಭವಾಗಿಯೇ ಶ್ರೀರಾಮೇಶ್ವರನ ಪೂಜೆಯಿಂದ ಪಡೆಯಬಹುದು.

೫೨. ಗೋವುಗಳಿಗಾಗಿಯೂ ಬ್ರಾಹ್ಮಣರಿಗಾಗಿಯೂ ಯುದ್ಧವನ್ನು ಮಾಡುತ್ತ ಹಿಮ್ಮೆಟ್ಟದೆ ಹತರಾದವರಿಗೆ ಯಾವ ಸದ್ಗತಿಯು ಲಭಿಸುವುದೊ, ಅದಕ್ಕೂ ಹೆಚ್ಚಿನ ಗತಿಯೇ ಶ್ರೀರಾಮೇಶ್ವರನ ಅರ್ಚನೆಯನ್ನು ಮಾಡಿದವರಿಗೆ ಸಿಕ್ಕುವುದು.

೫೩. ಯಾವನು ನಿತ್ಯವೂ ರಾಮೇಶ್ವರವೆಂಬ ಶುಭಪ್ರದವಾದ ಲಿಂಗವನ್ನು ನೋಡುತ್ತಿರುವನೊ, ಅವನು ಮೂರು ಲೋಕಗಳನ್ನೂ ಗೆದ್ದ ಪರಶುರಾಮನಂತೆಯೇ ಸಕಲ ಪುಣ್ಯಲೋಕಗಳನ್ನೂ ಜಯಿಸುವನು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ರಾಮೇಶ್ವರಸ್ಯ ದೇವಸ್ಯ ಶೃಣು ತ್ವಂ ಚ್ಯವನೇಶ್ವರಂ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ರಾಮೇಶ್ವರಮಾಹಾತ್ಮ್ಯವರ್ಣನಂ" ನಾಮೈಕೋನತ್ರಿಂಶೋಽಧ್ಯಾಯಃ

---

೫೪. ದೇವಿ! ಇಂತು ಪಾಪನಾಶಕವೂ, ಮಹಿಮಾನ್ವಿತವೂ ಆದ ರಾಮೇಶ್ವರನ ದಿವ್ಯಚರಿತ್ರೆಯನ್ನು ನಿನಗೆ ಹೇಳಿರುವೆನು. ಇನ್ನು ಚ್ಯವನೇಶ್ವರನ ಮಾಹಾತ್ಮ್ಯವನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ರಾಮೇಶ್ವರಮಾಹಾತ್ಮ್ಯವರ್ಣನ"ವೆಂಬ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಂಶೋಽಧ್ಯಾಯಃ

### ಚ್ಯವನೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ವಿಶ್ವನಾಥ ಉವಾಚ :—**

**ತ್ರಿಂಶತ್ತಮಂ ವಿಜಾನೀಹಿ ತ್ವಂ ದೇವಿ ಚ್ಯವನೇಶ್ವರಂ ।**
**ಯಸ್ಯ ದರ್ಶನಮಾತ್ರೇಣ ಸ್ವರ್ಗಭ್ರಂಶೋ ನ ಜಾಯತೇ ॥ ೧ ॥**
**ಭೃಗೋರ್ಮಹರ್ಷೇಃ ಪುತ್ರಶ್ಚ ಚ್ಯವನೋ ನಾಮ ಪಾರ್ವತಿ ।**
**ಸ್ಥಾಣುಭೂತಸ್ತಪಸ್ತೇಪೇ ನಿರಾಹಾರೋ ಮಹಾಮುನಿಃ ॥ ೨ ॥**
**ವಿತಸ್ತಾಯಾಸ್ತಟೇ ರಮ್ಯೇ ಬಹುವರ್ಷಗಣಾನ್ಕಿಲ ।**
**ಸವಲ್ಮೀಕೋಽಭವದ್ವಿಪ್ರೋ ಲತಾಭಿರಭಿಸಂವೃತಃ ॥ ೩ ॥**
**ಕಾಲೇನ ಮಹತಾ ದೇವಿ ಸಮಾಕೀರ್ಣಃ ಪಿಪೀಲಕೈಃ ।**
**ತಥಾ ಸ ಸಂವೃತೋ ಧೀಮಾನ್ ಮೃತ್ಪಿಂಡ ಇವ ಸರ್ವಶಃ ॥ ೪ ॥**
**ಆಜಗಾಮ ತಮುದ್ದೇಶಂ ವಿಹರ್ತುಂ ವನ ಉತ್ತಮೇ ।**
**ಶರ್ಯಾತಿರ್ನಾಮ ಧರ್ಮಾತ್ಮಾ ಸಕುಟುಂಬೋ ಮುದಾನ್ವಿತಃ ॥ ೫ ॥**

---

### ಕನ್ನಡದ ಅನುವಾದ

#### ಚ್ಯವನೇಶ್ವರಮಾಹಾತ್ಮ್ಯವರ್ಣನ

೧. ಮಹೇಶ್ವರನು ಹೇಳುತ್ತಾನೆ:—ದೇವಿಯೆ! ಮೂವತ್ತನೆಯದಾದ ಚ್ಯವನೇಶ್ವರ ಮಹಾಲಿಂಗದ ದರ್ಶನವನ್ನು ಮಾಡುವುದರಿಂದ ಮನುಷ್ಯನಿಗೆ ಪುನರಾವೃತ್ತಿರಹಿತವಾದ ಸ್ವರ್ಗವಾಸವು ಲಭಿಸುವುದು.

೨. ಪಾರ್ವತಿ! ಭೃಗುಮುನಿಗೆ ಚ್ಯವನನೆಂಬ ಪುತ್ರನೊಬ್ಬನಿದ್ದನು. ಆತನು ನಿಶ್ಚಲನಾಗಿ ಆಹಾರವನ್ನು ಬಿಟ್ಟು ತಪಸ್ಸನ್ನಾಚರಿಸಿದ ಮಹಾಮುನಿಯು.

೩. ಅನೇಕ ವರ್ಷಗಳವರೆಗೂ ಮನೋಹರವಾದ ವಿತಸ್ತಾನದಿಯ ತೀರದಲ್ಲಿ ತಪಸ್ಸನ್ನು ಮಾಡುತ್ತಿದ್ದ ಆತನ ಸುತ್ತಲೂ ಹುತ್ತವು ಬೆಳೆದು ಬಳ್ಳಿಗಳೂ ಬೆಳೆದಿದ್ದುವು.

೪. ಇಂತು ಅನೇಕ ವರ್ಷಗಳು ಕಳೆದುಹೋಗಲು ಗೆದ್ದಲುಹುಳುಗಳೂ ಆತನ ದೇಹಕ್ಕೆ ಮುತ್ತಿದವು. ಮಹಾಮುನಿಯಾದ ಆತನು ಮಣ್ಣಿನ ಮುದ್ದೆ ಯಂತೆಯೇ ಕಾಣುತ್ತಿದ್ದನು.

೫. ಒಮ್ಮೆ ಶರ್ಯಾತಿಯೆಂಬ ಧರ್ಮಾತ್ಮನಾದ ರಾಜನೊಬ್ಬನು ಕುಟುಂಬ ಸಹಿತನಾಗಿ ಆ ಉತ್ತಮಾರಣ್ಯದಲ್ಲಿ ವಿಹರಿಸುವುದಕ್ಕಾಗಿ ಸಂತೋಷದಿಂದ ಬಂದನು.

ತಸ್ಯ ಸ್ತ್ರೀಣಾಂ ಸಹಸ್ರಾಣಿ ಚತ್ವಾರ್ಯಾಸನ್ಪರಿಗ್ರಹಃ ।
ಏಕೈವ ತು ಸುತಾ ಸುಭ್ರೂಃ ಸುಕನ್ಯಾ ನಾಮ ನಾಮತಃ ॥ ೬ ॥
ಸಾ ಸಖೀಭಿಃ ಪರಿವೃತಾ ಸರ್ವಾಭರಣಭೂಷಿತಾ ।
ಸಾ ಭ್ರಮ್ಯಮಾಣಾ ವಲ್ಮೀಕೇ ದೃಷ್ಟ್ವಾ ಭಾರ್ಗವಚಕ್ಷುಷೀ ॥ ೭ ॥
ಸಾ ಕೌತುಕಾತ್ಕಂಟಕೇನ ಬುದ್ಧಿಮೋಹವತೀ ತದಾ ।
ಕಿಂ ನು ಖಲ್ವಿದಮಿತ್ಯುಕ್ತ್ವಾ ನಿರ್ಬಿಭೇದಾಽಸ್ಯ ಲೋಚನೇ ॥ ೮ ॥
ಅಭವತ್ಸ ತಯಾ ವಿದ್ಧೋ ನೇತ್ರಯೋಃ ಪರಮಾರ್ತಿಮಾನ್ ।
ತತಃ ಶರ್ಯಾತಿಸೈನ್ಯಸ್ಯ ಶಕೃನ್ಮೂತ್ರಂ ಸಮಾರುಣತ್ ॥ ೯ ॥
ತತೋ ರುದ್ಧೇ ಶಕೃನ್ಮೂತ್ರೇ ಪರ್ಯತಪ್ಯತ ಪಾರ್ಥಿವಃ ।
ಪ್ರತ್ಯುವಾಚ ತತಃ ಕ್ರುದ್ಧೋ ರಾಜಾ ಗದ್ಗದಯಾ ಗಿರಾ ॥ ೧೦ ॥
ಕೇನಾಽಪಕೃತಮದ್ಯೇಹ ಭಾರ್ಗವಸ್ಯ ಮಹಾತ್ಮನಃ ।
ತಪೋನಿತ್ಯಸ್ಯ ವೃದ್ಧಸ್ಯ ರೋಷಣಸ್ಯ ವಿಶೇಷತಃ ॥ ೧೧ ॥

---

೬. ಆತನಿಗೆ ನಾಲ್ಕುಸಾವಿರ ಪತ್ನಿಯರಿದ್ದರೂ ಸರ್ವಾಂಗಸುಂದರಿಯಾದ ಸುಕನ್ಯೆಯೆಂಬ ಹೆಸರಿನ ಒಬ್ಬಳೇ ಮಗಳು ಜನಿಸಿದ್ದಳು.

೭. ಆಕೆಯು ಸಕಲಾಭರಣಗಳಿಂದ ಭೂಷಿತೆಯಾಗಿ ತನ್ನ ಸಖಿಯರೊಡನೆ ಕೂಡಿ ಆ ವನದಲ್ಲಿ ಸಂಚರಿಸುತ್ತ ಆ ಹುತ್ತದಲ್ಲಿ ಹೊಳೆಯುತ್ತಿರುವ ಮುನಿಯ ಕಣ್ಣುಗಳನ್ನು ಕಂಡಳು.

೮. ಕುತೂಹಲದಿಂದಲೂ ಬುದ್ಧಿಮೋಹದಿಂದಲೂ ಪ್ರೇರಿತಳಾಗಿ ಆಕೆಯು ಇದು ಏನೆಂದು ತನ್ನಲ್ಲಿಯೇ ಯೋಚಿಸುತ್ತ ಒಂದು ಮುಳ್ಳನ್ನು ತೆಗೆದುಕೊಂಡು ಆ ಮಹರ್ಷಿಯ ಕಣ್ಣುಗಳನ್ನು ಚುಚ್ಚಿದಳು.

೯. ನೇತ್ರಗಳು ಆಕೆಯಿಂದ ಚುಚ್ಚಲ್ಪಡಲು ಆತನು ಬಹಳ ಸಂಕಟಕ್ಕೀಡಾದನು. ಆಗ ಶರ್ಯಾತಿರಾಜನ ಸೈನ್ಯವೆಲ್ಲಕ್ಕೂ ಮಲಮೂತ್ರಗಳು ಕಟ್ಟಿಹೋಯಿತು.

೧೦. ಮಲಮೂತ್ರಗಳ ಬಂಧನವಾಗಲು ರಾಜನು ಬಹಳವಾಗಿ ಪರಿತಪಿಸಿದನು. ರಾಜನು ಆಗ ಕೋಪದಿಂದಲೂ, ಗದ್ಗದಧ್ವನಿಯಿಂದಲೂ ಹೇಳತೊಡಗಿದನು.

೧೧. "ಇಲ್ಲಿರುವ ಮಹಾತ್ಮನೂ, ತಪೋನಿರತನೂ, ವೃದ್ಧನೂ, ವಿಶೇಷ ಕೋಪಸ್ವಭಾವವುಳ್ಳವನೂ ಆದ ಚ್ಯವನಮಹರ್ಷಿಗೆ ಯಾರಾದರೂ ಅಪಕಾರವನ್ನು ಮಾಡಿರುವಿರಾ?

ಜ್ಞಾತಂ ವಾ ಯದಿ ವಾಽಜ್ಞಾತಂ ತದಿದಂ ಬ್ರೂತ ಮಾ ಚಿರಂ ।
ತಮೂಚುಃ ಸೈನಿಕಾಃ ಸರ್ವೇ ನವಿದ್ಮೋಽಪಕೃತಂ ವಯಂ ॥ ೧೨ ॥
ತತಃ ಸ ಪೃಥಿವೀಪಾಲಃ ಸಾಮ್ನಾ ಚೋಗ್ರೇಣ ಚ ಸ್ವಯಂ ।
ಪರ್ಯಪೃಚ್ಛತ್ಸ್ವವರ್ಗಂ ಚ ಭೂಯೋ ಭೂಯಃ ಸುದುಃಖಿತಃ ॥ ೧೩ ॥
ಪಿತರಂ ದುಃಖಿತಂ ದೃಷ್ಟ್ವಾ ಸುಕನ್ಯಾ ತಮಥಾಽಬ್ರವೀತ್ ।
ಮಯಾ ಕಿಂಚಿಚ್ಚ ವಲ್ಮೀಕೇ ದೃಷ್ಟಂ ಸತ್ವಮತಿಚ್ಛವಿ ॥ ೧೪ ॥
ಖದ್ಯೋತವದಭಿಜ್ಞಾತಂ ತನ್ಮಯಾ ವಿದ್ಧಮಂತಿಕಂ ।
ಏತಚ್ಛ್ರುತ್ವಾ ತು ಶರ್ಯಾತಿರ್ವಲ್ಮೀಕಂ ಕ್ಷಿಪ್ರಮಭ್ಯಗಾತ್ ॥ ೧೫ ॥
ತತ್ರಾಽಪಶ್ಯತ್ತಪೋವೃದ್ಧಂ ವಯೋವೃದ್ಧಂ ಚ ಭಾರ್ಗವಂ ।
ಪ್ರಾರ್ಥಯಾಮಾಸ ಸೈನ್ಯಾರ್ಥೇ ಪ್ರಾಂಜಲಿಃ ಸ ಮಹೀಪತಿಃ ॥ ೧೬ ॥
ಅಜ್ಞಾನಾದ್ಬಾಲಯಾ ಯತ್ತೇಽಪಕೃತಂ ತು ಮಹೀಸುರ ।
ಇಮಾಮೇವ ಚ ತೇ ಕನ್ಯಾಂ ದದಾಮಿ ಸುದೃಢವ್ರತಾಂ ॥ ೧೭ ॥
ಭಾರ್ಯಾರ್ಥೇ ತ್ವಂ ಗೃಹಾಣೇಮಾಂ ಪ್ರಸೀದ ದ್ವಿಜಸತ್ತಮ ।
ತತೋಽಬ್ರವೀನ್ಮಹೀಪಾಲಂ ಚ್ಯವನೋ ಭಾರ್ಗವಸ್ತಥಾ ॥ ೧೮ ॥

---

೧೨. ತಿಳಿದಾಗಲಿ ತಿಳಿಯದೆ ಆಗಲಿ ಇದನ್ನು ಮಾಡಿದ್ದರೆ ತಡಮಾಡದೆ ನನಗೆ ತಿಳಿಸಿರಿ.'' ಆಗ ಸೈನಿಕರೆಲ್ಲರೂ ''ನಾವು ಯಾವ ಅಪಕಾರವನ್ನೂ ತಿಳಿದಿಲ್ಲ'' ಎಂದು ಹೇಳಿದರು.

೧೩. ಆಗ ರಾಜನು ಬಹಳ ದುಃಖಾಕುಲನಾಗಿ ಸಾಂತ್ವವಚನಗಳಿಂದಲೂ ದಂಡದಿಂದಲೂ ಪರಿವಾರವನ್ನೆಲ್ಲ ತಾನೇ ಸ್ವತಃ ಪ್ರಶ್ನಿಸಲುಪಕ್ರಮಿಸಿದನು.

೧೪-೧೫. ತಂದೆಯು ಅತಿ ದುಃಖಿತನಾಗಿರುವುದನ್ನು ಕಂಡು ಸುಕನ್ಯೆಯು ಹೇಳಿದಳು. ''ತಂದೆಯೆ! ನಾನು ಒಂದು ಹುತ್ತದಲ್ಲಿ ಅತ್ಯಂತ ತೇಜೋಯುಕ್ತವಾದ ಏನನ್ನೋ ಕಂಡೆನು. ಅದು ಮಿಂಚುಹುಳುವಿನಂತೆ ನನಗೆ ತೋರಲು ನಾನು ಅದಕ್ಕೆ ಮುಳ್ಳನ್ನು ಚುಚ್ಚಿದೆನು.'' ಇದನ್ನು ಕೇಳಿ ರಾಜೇಂದ್ರನು ಬೇಗ ಆ ಹುತ್ತದ ಬಳಿಗೆ ಬಂದನು.

೧೬. ಅಲ್ಲಿ ತಪಸ್ಸಿನಿಂದ ವೃದ್ಧನೂ, ವಯೋಧಿಕನೂ ಆಗಿದ್ದ ಆ ಭೃಗುಪುತ್ರನನ್ನು ನೋಡಿ ಶರ್ಯಾತಿಮಹಾರಾಜನು ತನ್ನ ಸೈನ್ಯದ ಸಲುವಾಗಿ ಆತನನ್ನು ಪ್ರಾರ್ಥಿಸಿಕೊಂಡನು.

೧೭. ''ಮಹಾಮುನಿಯೆ! ಯಾವ ಬಾಲಕಿಯು ತಿಳುವಳಿಕೆಯಿಲ್ಲದೆ ನಿನಗೆ ಈ ಅಪಚಾರವನ್ನೆಸಗಿದಳೊ, ಆ ಕನ್ಯೆಯನ್ನೇ ನಿನಗೆ ದಾನಮಾಡುವೆನು. ಅವಳು ನಿನ್ನ ಸೇವೆಯಲ್ಲಿ ದೃಢವ್ರತಳಾಗಿರುವಳು.

೧೮. ಬ್ರಾಹ್ಮಣೋತ್ತಮನೆ! ಈಕೆಯನ್ನು ಪತ್ನಿಯಾಗಿ ಸ್ವೀಕರಿಸಿ ನಮ್ಮಲ್ಲಿ ಅನುಗ್ರಹವನ್ನು ಮಾಡು.'' ಆಗ ಚ್ಯವನಮಹರ್ಷಿಯು ಆ ರಾಜನಿಗಿಂತೆಂದನು.

ಯದ್ಯೇವಂ ಪ್ರತಿಗೃಹ್ಯೈತಾಂ ಕ್ಷಮಿಷ್ಯಾಮಿ ಮಹೀಪತೇ ।
ದದೌ ದುಹಿತರಂ ತಸ್ಮೈ ಚ್ಯವನಾಯ ಮಹೀಪತಿಃ ॥ ೧೯ ॥
ಪ್ರತಿಗೃಹ್ಯ ಚ ತಾಂ ಕನ್ಯಾಂ ಭಗವಾನ್ ಪ್ರಸಸಾದ ಹ ।
ಪ್ರಾಪ್ತೇ ಪ್ರಸಾದೇ ರಾಜಾಽಥ ಸಸೈನ್ಯೋ ವಿಷಯಂ ಗತಃ ॥ ೨೦ ॥
ಸುಕನ್ಯಾಽಪಿ ಪತಿಂ ಲಬ್ಧ್ವಾ ತಪಸ್ವಿನಮನಿಂದಿತಾ ।
ನಿತ್ಯಂ ಪರ್ಯಚರತ್ಪ್ರೀತ್ಯಾ ತಪಸಾ ನಿಯಮೇನ ಚ ॥ ೨೧ ॥
ಕಸ್ಯಚಿತ್ತ್ವಥ ಕಾಲಸ್ಯ ನಾಸತ್ಯಾವಶ್ವಿನೌ ಪ್ರಿಯೇ ।
ಕೃತಾಭಿಷೇಕಾಂ ವಿವೃತಾಂ ಸುಕನ್ಯಾಂ ತಾಮಪಶ್ಯತಾಂ ॥ ೨೨ ॥
ತಾಂ ದೃಷ್ಟ್ವಾ ದರ್ಶನೀಯಾಂಗೀಂ ದೇವರಾಜಸುತಾಮಿವ ।
ಊಚತುಃ ಸಮುಪದ್ರುತ್ಯ ಕಸ್ಯ ತ್ವಮತಿಶೋಭನೇ ॥ ೨೩ ॥
ಸಾ ಪ್ರೋವಾಚ ಮಹಾಭಾಗಾ ಪತಿವ್ರತಪರಾಯಣಾ ।
ಶರ್ಯಾತಿತನಯಾಂ ಚೈವ ಭಾರ್ಯಾಂ ಚ ಚ್ಯವನಸ್ಯ ಹಿ ॥ ೨೪ ॥

---

೧೯. "ಮಹಾರಾಜ! ಹಾಗಾದರೆ ನಾನು ಈಕೆಯನ್ನು ಮದುವೆಯಾಗಿ ನಿನ್ನ ಅಪರಾಧವನ್ನು ಕ್ಷಮಿಸುವೆನು." ಆ ರಾಜನೂ ತನ್ನ ಮಗಳಾದ ಸುಕನ್ಯೆಯನ್ನು ಚ್ಯವನನಿಗೆ ದಾನಮಾಡಿದನು.

೨೦. ಆ ಕನ್ಯೆಯನ್ನು ಪ್ರತಿಗ್ರಹಿಸಿ ಮುನಿಯು ರಾಜನನ್ನು ಅನುಗ್ರಹಿಸಿದನು. ರಾಜನೂ ಸ್ವಸ್ಥನಾದ ತನ್ನ ಸೈನ್ಯದೊಡಗೂಡಿ ತನ್ನ ರಾಜ್ಯಕ್ಕೆ ಹಿಂದಿರುಗಿದನು.

೨೧. ಸುಕನ್ಯೆಯೂ ತಪಸ್ವಿಶ್ರೇಷ್ಠನಾದ ಪತಿಯನ್ನು ಹೊಂದಿ ಪ್ರೀತಳಾಗಿ ತಪಸ್ಸಿನಿಂದಲೂ, ನಿಯಮದಿಂದಲೂ ನಿತ್ಯವೂ ಆತನ ಸೇವೆಯಲ್ಲಿಯೇ ನಿರತಳಾಗಿರುತ್ತಿದ್ದಳು.

೨೨. ಕೆಲವು ಕಾಲದಮೇಲೆ ಒಂದು ದಿನ ಅಶ್ವಿನೀ ದೇವತೆಗಳು ಆಗತಾನೆ ಸ್ನಾನವನ್ನು ಮಾಡಿ ಒದ್ದೆಯಲ್ಲಿ ಅಂಗಾಂಗಗಳೂ ಕಾಣಿಸುತ್ತಿದ್ದ ಅವಸ್ಥೆಯಲ್ಲಿ ಆಕೆಯನ್ನು ಕಂಡರು.

೨೩. ಸರ್ವಾಂಗಸುಂದರಿಯೂ, ದೇವತಾಸ್ತ್ರೀಸಮಾನಳೂ ಆದ ಆಕೆಯನ್ನು ಕಂಡು ಸಂಭ್ರಮದಿಂದ ಹತ್ತಿರಕ್ಕೆ ಬಂದು, "ಎಲೌ ಮಂಗಳಾಂಗಿಯೆ! ನೀನು ಯಾರ ಪತ್ನಿಯು?" ಎಂಬುದಾಗಿ ಪ್ರಶ್ನೆಮಾಡಿದರು.

೨೪. ಮಹಾಭಾಗ್ಯವಂತೆಯೂ, ಪತಿವ್ರತಪರಾಯಣಳೂ ಆದ ಆಕೆಯು "ನಾನು ಶರ್ಯಾತಿರಾಜನ ಪುತ್ರಿಯೂ, ಚ್ಯವನಮಹಾಮುನಿಯ ಪತ್ನಿಯೂ ಆಗಿರುವೆನು" ಎಂದು ಹೇಳಿದಳು.

ತತೋಽಶ್ವಿನೌ ಪ್ರಹಸ್ಯೈನಾಮಬ್ರೂತಾಂ ಪುನರೇವ ತು ।
ಕಸ್ಮಾದೇವಂವಿಧಾ ಭೂತ್ವಾ ಜರಾಜರ್ಜರಿತಂ ಪತಿಂ ॥ ೨೫ ॥
ತ್ವಮುಪಾಸ್ಸೇಹ ಕಲ್ಯಾಣಿ ಕಾಮಭೋಗಬಹಿಷ್ಕೃತಾ ।
ವೃದ್ಧಂ ಚ್ಯವನಮುತ್ಸೃಜ್ಯ ವರಯಸ್ವೈಕಮಾವಯೋಃ ॥ ೨೬ ॥
ಪತ್ಯರ್ಥಂ ದೇವಗರ್ಭಾಭೇ ಮಾ ವೃಥಾ ಯೌವನಂ ಕೃಥಾಃ ।
ಏವಮುಕ್ತಾ ಸುಕನ್ಯಾ ತು ದಸ್ರೌ ತಾವಿದಮಬ್ರವೀತ್ ॥ ೨೭ ॥
ರತಾಽಹಂ ಚ್ಯವನೇ ದೇವೇ ನೈವಂ ಮಾ ಪರ್ಯಶಂಕತಂ ।
ತತೋಽಬ್ರೂತಾಂ ಪುನಸ್ತ್ವೇನಾಮಾವಾಂ ದೇವಭಿಷಗ್ವರೌ ॥ ೨೮ ॥
ಯುವಾನಂ ರೂಪಸಂಪನ್ನಂ ಕರಿಷ್ಯಾವಃ ಪತಿಂ ತವ ।
ಏತೇನ ಸಮಯೇನಾವಾಮಾಮಂತ್ರಯ ಸುಮಧ್ಯಮೇ ॥ ೨೯ ॥
ಸಾ ತಯೋರ್ವಚನಂ ಶ್ರುತ್ವಾ ಕಥಯಾಮಾಸ ಭಾರ್ಗವೇ ।
ತಚ್ಛ್ರುತ್ವಾ ಚ್ಯವನೋ ಭಾರ್ಯಾಂ ಕ್ರಿಯತಾಮಿತ್ಯಭಾಷತ ॥ ೩೦ ॥
ಊಚತೂ ರಾಜಪುತ್ರೀಂ ತಾಂ ಪತಿಸ್ತವ ವಿಶತ್ವಪಃ ।
ತತೋಽಪ್ಸು ಚ್ಯವನಃ ಶೀಘ್ರಂ ರೂಪಾರ್ಥೀ ಪ್ರವಿವೇಶ ಹ ॥ ೩೧ ॥

---

೨೫–೨೬. ಆಗ ಅಶ್ವಿನೀ ದೇವತೆಗಳು ನಗುತ್ತ ಮತ್ತೆ ಆಕೆಗೆ ಹೇಳಿದರು. ಇಂತಹ ಸುಂದರಿಯಾದ ನೀನು ಮುದಿತನದಿಂದ ಶಿಥಿಲವಾದ ದೇಹವುಳ್ಳ ಪತಿಯನ್ನಾಶ್ರಯಿಸಿಕೊಂಡು ಮನ್ಮಥಭೋಗಗಳನ್ನೇಕೆ ಕಳೆದುಕೊಂಡಿರುವೆ? ಮುದುಕನಾದ ಈ ಚ್ಯವನನನ್ನು ಬಿಟ್ಟು ನಮ್ಮಿಬ್ಬರಲ್ಲಿ ಯಾರನ್ನಾದರೂ ವರಿಸು.

೨೭. ದೇವಸ್ತ್ರೀಸಮಾನಳೆ! ಗಂಡನಿಗಾಗಿ ನಿನ್ನ ಯೌವನವನ್ನು ವ್ಯರ್ಥವಾಗಿ ಕಳೆಯಬೇಡ.'' ಇಂತೆಂದ ಆ ನಾಸತ್ಯರನ್ನು ಕುರಿತು ಸುಕನ್ಯೆಯು ಉತ್ತರವನ್ನು ಹೇಳಿದಳು.

೨೮. "ನಾನು ಚ್ಯವನನಲ್ಲಿಯೇ ಅನುರಾಗವುಳ್ಳವಳಾಗಿರುವೆನು. ನನ್ನ ವಿಷಯದಲ್ಲಿ ನೀವು ಅನುಮಾನವನ್ನು ಬಿಟ್ಟುಬಿಡಿ.'' ಆಕೆಗೆ ಅವರು ಪುನಃ ಹೇಳಿದರು. "ನಾವು ದೇವತೆಗಳಿಗೆ ವೈದ್ಯರಾದ ಅಶ್ವಿನೀದೇವತೆಗಳು.

೨೯. ನಿನ್ನ ಪತಿಯನ್ನು ಯೌವನವಂತನೂ, ಸುಂದರನೂ ಆಗುವಂತೆ ಮಾಡುವೆವು. ಈ ನಿಯಮದಿಂದ ನಮ್ಮನ್ನು ನೀನು ಕರೆದುಕೊಂಡುಹೋಗು.''

೩೦. ಅವರ ಮಾತನ್ನು ಕೇಳಿ ಆಕೆಯು ನಡೆದುದೆಲ್ಲವನ್ನೂ ಮಹರ್ಷಿಗೆ ತಿಳಿಸಿದಳು. ಆತನೂ ಕೇಳಿ ಹಾಗೆಯೇ ಆಗಲೆಂದು ಹೆಂಡತಿಗೆ ಅಂಗೀಕಾರವನ್ನು ಸೂಚಿಸಿದನು.

೩೧. ಅವರು ರಾಜಪುತ್ರಿಯಾದ ಆಕೆಗೆ "ನಿನ್ನ ಗಂಡನು ಸರೋವರದಲ್ಲಿ ಮುಳುಗಲಿ'' ಎಂದರು. ಚ್ಯವನನೂ ಸುರೂಪವನ್ನು ಬಯಸಿ ನೀರಿನಲ್ಲಿ ಮುಳುಗಿದನು.

ಅಶ್ವಿನಾವಪಿ ತತ್ಕಾಲೇ ಸರಃ ಪ್ರಾವಿಶತಾಂ ಪ್ರಿಯೇ ।
ತತೋ ಮುಹೂರ್ತಾದುತ್ತೀರ್ಣಾಃ ಸರ್ವೇ ತೇ ಸರಸಸ್ತದಾ ॥ ೩೨ ॥
ದಿವ್ಯರೂಪಧರಾಃ ಸರ್ವೇ ಯುವಾನೋ ದಿವ್ಯಕುಂಡಲಾಃ ।
ತುಲ್ಯವೇಷಧರಾಶ್ಚೈವ ಮನಸಃ ಪ್ರೀತಿವರ್ಧನಾಃ ॥ ೩೩ ॥
ತೇಽಬ್ರುವನ್ ಸಹಿತಾಃ ಸರ್ವೇ ವೃಣೀಷ್ವಾನ್ಯತಮಂ ಶುಭಂ ।
ಅಸ್ಮಾಕಮೀಪ್ಸಿತಂ ಭದ್ರೇ ಪತಿತ್ವೇ ವರವರ್ಣಿನಿ ॥ ೩೪ ॥
ಸಾ ಸಮೀಕ್ಷ್ಯ ತು ತಾನ್ಸರ್ವಾಂಸ್ತುಲ್ಯರೂಪಧರಾನ್ ಸ್ಥಿತಾನ್ ।
ನಿಶ್ಚಿತ್ಯ ಮನಸಾ ಬುದ್ಧ್ಯಾ ದೇವೀ ವವ್ರೇ ಸ್ವಕಂ ಪತಿಂ ॥ ೩೫ ॥
ಲಬ್ಧ್ವಾ ತು ಚ್ಯವನೋ ಭಾರ್ಯಾಂ ವಯೋ ರೂಪಂ ತು ವಾಂಛಿತಂ ।
ಹೃಷ್ಟೋಽಬ್ರವೀನ್ಮಹಾತೇಜಾಸ್ತೌ ನಾಸತ್ಯಾವಿದಂ ವಚಃ ॥ ೩೬ ॥
ಯದಹಂ ರೂಪಸಂಪನ್ನೋ ವಯಸಾ ಚ ಸಮನ್ವಿತಃ ।
ಕೃತೋ ಭವದ್ಭ್ಯಾಂ ವೃದ್ಧಃ ಸನ್ಭಾರ್ಯಾಂ ಚ ಪ್ರಾಪ್ತವಾನಿಮಾಂ॥ ೩೭ ॥

---

೩೨. ಪ್ರಿಯಳೆ! ಅದೇ ಸಮಯದಲ್ಲಿಯೇ ಅಶ್ವಿನೀದೇವತೆಗಳೂ ಆ ಸರೋವರದಲ್ಲಿಯೇ ಮುಳುಗಿದರು. ಒಂದು ಮುಹೂರ್ತವಾದ ಮೇಲೆ ಮೂವರೂ ನೀರಿನಿಂದ ಮೇಲಕ್ಕೆದ್ದರು.

೩೩. ಎಲ್ಲರೂ ದಿವ್ಯರೂಪಗಳನ್ನು ಸ್ವೀಕರಿಸಿ, ದಿವ್ಯಕುಂಡಲಗಳಿಂದ ಅಲಂಕೃತರಾಗಿ, ಒಂದೇ ವಿಧವಾದ ವೇಷಭೂಷಣಗಳನ್ನು ಧರಿಸಿ ಮನಸ್ಸಿಗೆ ಆನಂದವನ್ನುಂಟುಮಾಡುತ್ತಿದ್ದರು.

೩೪. ಅಲ್ಲದೆ, ಅವರೆಲ್ಲರೂ ಏಕಕಾಲದಲ್ಲಿಯೇ "ಸುಂದರಿ! ನಮ್ಮಲ್ಲಿ ನಿನಗಿಷ್ಟಬಂದ ಯಾರೊಬ್ಬನನ್ನಾದರೂ ಪತಿಯಾಗಿ ಸ್ವೀಕರಿಸು" ಎಂದು ಹೇಳಿದರು.

೩೫. ಆಕೆಯಾದರೋ ಸಮಾನರೂಪಧಾರಿಗಳಾದ ಆ ಮೂವರನ್ನೂ ಕಂಡು ಮನಸ್ಸಿನಿಂದಲೂ, ಬುದ್ಧಿಶಕ್ತಿಯಿಂದಲೂ ನಿಶ್ಚಯವನ್ನು ತಿಳಿದು ತನ್ನ ಪತಿಯನ್ನೇ ವರಿಸಿಕೊಂಡಳು.

೩೬. ಚ್ಯವನಮಹರ್ಷಿಯು ಇಂತು ತನ್ನ ಹೆಂಡತಿಯನ್ನೂ, ಪೂರ್ವ ವಯಸ್ಸನ್ನೂ, ಸುಂದರರೂಪವನ್ನೂ ಹೊಂದಿ ಮಹಾತೇಜಸ್ಸಿನಿಂದ ಹೊಳೆಯುತ್ತ ಸಂತೋಷದಿಂದ ಅಶ್ವಿನೀದೇವತೆಗಳಿಗಿಂತೆಂದನು.

೩೭. "ನಿಮ್ಮ ಅನುಗ್ರಹದಿಂದ ನಾನು ರೂಪವನ್ನು ಪಡೆದೆನು. ಯೌವನ ದಶೆಯೂ ಪ್ರಾಪ್ತವಾಯಿತು. ವೃದ್ಧನಾಗಿದ್ದರೂ ಈಕೆಯನ್ನೇ ಮತ್ತೆ ಹೆಂಡತಿ ಯಾಗಿ ಪಡೆಯುವಂತಾಯಿತು.

ತಸ್ಮಾದ್ಯುವಾಂ ಕರಿಷ್ಯಾಮಿ ಪ್ರೀತ್ಯಾಽಹಂ ಸೋಮಪಾಯಿನೌ ।
ಸತ್ಯಮೇತನ್ನ ಸಂದೇಹೋ ದೇವರಾಜಸ್ಯ ಪಶ್ಯತಃ ॥ ೩೮ ॥
ತಚ್ಛ್ರುತ್ವಾ ಹೃಷ್ಟಮನಸೌ ದಿವಂ ದೇವೌ ಪ್ರಜಗ್ಮತುಃ ।
ಯಾಜಯಾಮಾಸ ಸೋಮಾರ್ಹೌ ನಾಸತ್ಯಾವಶ್ವಿನಾವಿತಿ ॥ ೩೯ ॥
ಭಿಷಜೌ ದೇವತಾನಾಂ ಹಿ ಕರ್ಮಣಾ ತೇನ ಗರ್ಹಿತೌ ।
ಆಭ್ಯಾಮರ್ಥಾಯ ಸೋಮಂ ತ್ವಂ ಪ್ರದಾಸ್ಯಸಿ ಯದಿ ಸ್ವಯಂ ।
ವಜ್ರಂ ತೇ ಪ್ರಹರಿಷ್ಯಾಮಿ ಘೋರರೂಪಂ ಸುದಾರುಣಂ ॥ ೪೦ ॥
ಏವಮುಕ್ತಃ ಸ್ಮಯನ್ನಿಂದ್ರಮಭಿವೀಕ್ಷ್ಯ ಸ ಭಾರ್ಗವಃ ।
ಬಲಿನಂ ವಾಸವಂ ಜ್ಞಾತ್ವಾ ಚಿಂತಯಾಮಾಸ ಸತ್ವರಂ ॥ ೪೧ ॥
ದೇವಮಾರಾಧಯಿಷ್ಯಾಮಿ ಮಹಾದೇವಂ ಮಹೇಶ್ವರಂ ।
ಯಸ್ಯ ಕರ್ಮಕರಃ ಶಕ್ರೋ ಯಸ್ಯ ದೇವಾ ವಶಾನುಗಾಃ ।
ಯಃ ಸಮರ್ಥೋ ಜಗದ್ಗೋಪ್ತಾ ಸೃಷ್ಟಿಸಂಹಾರಕಾರಕಃ ॥ ೪೨ ॥

---

೩೮. ಆದುದರಿಂದ ನಾನು ಸಂತುಷ್ಟನಾಗಿದ್ದೇನಲ್ಲದೆ, ಮಹೇಂದ್ರನು ನೋಡುತ್ತಿರುವಂತೆಯೇ ನಿಮ್ಮಿಬ್ಬರಿಗೂ ಸೋಮಪಾನವನ್ನು ಮಾಡಿಸುವೆನು. ಇದು ಸತ್ಯವು. ಸಂದೇಹಗೊಳ್ಳಬೇಡಿ.”

೩೯. ಈ ಮಾತನ್ನು ಕೇಳಿ ಅವರೀರ್ವರೂ ಸಂತುಷ್ಟಾಂತರಂಗರಾಗಿ ಸ್ವರ್ಗಲೋಕಕ್ಕೆ ಹೊರಟುಹೋದರು. ಚ್ಯವನನು ಅಶ್ವಿನೀ ದೇವತೆಗಳೂ ಸಹ ಸೋಮಪಾನಕ್ಕೆ ಅರ್ಹರೆಂದು ಸಂಕಲ್ಪಿಸಿ ಅಂತೆಯೇ ಯಜ್ಞಗಳನ್ನು ಮಾಡಿಸುತ್ತಿದ್ದನು.

೪೦. ಈ ಕರ್ಮದಿಂದ ದೇವವೈದ್ಯರಾದ ಅವರು ನಿಂದೆಗೊಳಗಾದರು. ಮಹೇಂದ್ರನು ಚ್ಯವನನಿಗೆ “ನೀನು ಇವರಿಬ್ಬರಿಗಾಗಿ ಸೋಮರಸವನ್ನು ಕೊಡುವೆಯಾದರೆ ಮಹಾಘೋರವೂ, ಸಹಿಸಲಶಕ್ಯವೂ ಆದ ನನ್ನ ವಜ್ರಾಯುಧದಿಂದ ನಿನ್ನನ್ನು ಹೊಡೆದುಹಾಕುವೆನು” ಎಂದು ಹೇಳಿದನು.

೪೧. ಇಂತೆಂದ ಇಂದ್ರನನ್ನು ನೋಡಿ ಮುಗುಳ್ನಗೆಯಿಂದ ಕೂಡಿದ ಚ್ಯವನಮುನಿಯು ಆತನು ಮಹಾಪರಾಕ್ರಮಿಯೆಂಬುದನ್ನು ತಿಳಿದು ತನ್ನಲ್ಲಿಯೇ ಯೋಚಿಸತೊಡಗಿದನು.

೪೨. “ಈ ಇಂದ್ರನೂ ಯಾವನ ಆಜ್ಞಾಕರನೂ, ಯಾವನಿಗೆ ದೇವತೆಗಳೂ ವಶವರ್ತಿಗಳಾಗಿರುವರೊ, ಅಂತಹ ದೇವೋತ್ತಮನಾದ ಮಹಾದೇವನನ್ನೇ ಪೂಜಿಸುತ್ತೇನೆ. ಸರ್ವಶಕ್ತನಾದ ಆತನೇ ಪ್ರಪಂಚವನ್ನು ರಕ್ಷಿಸುವುದಕ್ಕೂ, ಸೃಜಿಸುವುದಕ್ಕೂ, ಲಯಗೊಳಿಸುವುದಕ್ಕೂ ಸಾಮರ್ಥ್ಯವುಳ್ಳವನಾಗಿರುವನು.

ಇತ್ಯುಕ್ತ್ವಾ ಚ್ಯವನೋ ದೇವಿ ಮಹಾಕಾಲವನಂ ಗತಃ ।
ರಾಮೇಶ್ವರಸ್ಯ ದೇವಸ್ಯ ಲಿಂಗಮೀಶಾನತಃ ಸ್ಥಿತಂ ।
ಶ್ರದ್ಧಯಾಽಽರಾಧಿತಂ ತೇನ ಚ್ಯವನೇನ ಮಹಾತ್ಮನಾ ॥ ೪೩ ॥
ತಸ್ಯ ಪ್ರಸನ್ನೋ ರುದ್ರಸ್ತು ಸ ವಜ್ರಾದಭಯಂ ದದೌ ।
ತಸ್ಯ ಪ್ರಹರತೋ ಬಾಹುಂ ಸ್ತಂಭಯಾಮಾಸ ಭಾರ್ಗವಃ ॥ ೪೪ ॥
ಸಪೂಜಾರಾಧನತುಷ್ಟಸ್ಯ ಲಿಂಗಸ್ಯಾಽಸ್ಯ ಪ್ರಭಾವತಃ ।
ಏತಸ್ಮಿನ್ನಂತರೇ ಜ್ವಾಲಾ ನಿಃಸೃತಾ ಲಿಂಗಮಧ್ಯತಃ ॥ ೪೫ ॥
ತಯಾ ದೇವಗಣಾಃ ಸರ್ವೇ ದಹ್ಯಮಾನಾ ವಿಚೇತಸಃ ।
ಪ್ರೋಚುರ್ಗದ್ಗದಯಾ ವಾಚಾ ಧೂಮೇನಾಂಧೀಕೃತೇಕ್ಷಣಾಃ ।
ಕ್ರಿಯೇತಾಂ ಸೋಮಪಾವೇತಾವಶ್ವಿನೌ ಬಲಸೂದನ ॥ ೪೬ ॥
ದೇವಾನಾಂ ವಚನಂ ಶ್ರುತ್ವಾ ಚ್ಯವನಂ ಭಯಪೀಡಿತಃ ।
ಪ್ರತ್ಯುವಾಚ ತತಃ ಶಕ್ರಃ ಪ್ರಣಾಮಾನತಕಂಧರಃ ॥ ೪೭ ॥
ಸೋಮಪಾವಶ್ವಿನಾವೇತಾವದ್ಯಪ್ರಭೃತಿ ಭಾರ್ಗವ ।
ಭವಿಷ್ಯತಸ್ತತಃ ಸರ್ವಮೇತತ್ಸತ್ಯಂ ಬ್ರವೀಮಿ ತೇ ॥ ೪೮ ॥

---

೪೩. ದೇವಿಯೆ! ಇಂತೆಂದು ಚ್ಯವನನು ಮಹಾಕಾಲವನಕ್ಷೇತ್ರಕ್ಕೆ ಹೋದನು. ಮಹಾತ್ಮನಾದ ಆತನು ರಾಮೇಶ್ವರನಿಗೆ ಈಶಾನ್ಯದಿಕ್ಕಿನಲ್ಲಿರುವ ಒಂದು ಲಿಂಗವನ್ನು ಶ್ರದ್ಧೆಯಿಂದ ಪೂಜಿಸುತ್ತಿದ್ದನು.

೪೪. ಆತನಲ್ಲಿ ಪ್ರಸನ್ನನಾಗಿ ಮಹಾದೇವನಾದ ನಾನು ವಜ್ರಾಯುಧದಿಂದ ಅಭಯವನ್ನನುಗ್ರಹಿಸಿದೆನು. ಉತ್ತಮಪೂಜೆಯಿಂದ ಸಂತೋಷಗೊಂಡ ಆ ಲಿಂಗದ ಮಹಿಮೆಯಿಂದ ಚ್ಯವನಮಹರ್ಷಿಯು ತನ್ನನ್ನು ಹೊಡೆಯಲು ಬಂದ ಮಹೇಂದ್ರನ ಕೈಯನ್ನು ಸ್ತಂಭನಮಾಡಿದನು.

೪೫. ಈ ಸಮಯದಲ್ಲಿಯೇ ಆ ಲಿಂಗದ ಮಧ್ಯದಿಂದ ಒಂದು ಮಹಾ ಜ್ವಾಲೆಯು ಹೊರಟಿತು. ಅದರಿಂದ ಸಕಲ ದೇವಗಣಗಳೂ ಸುಡಲ್ಪಟ್ಟು ನಿಶ್ಚೇಷ್ಟರಾಗತೊಡಗಿದರು.

೪೬. ಹೊಗೆಯಿಂದ ಕುರುಡಾದ ಕಣ್ಣುಗಳುಳ್ಳವರಾಗಿ ಗದ್ಗದಧ್ವನಿಯಿಂದ ಮಹೇಂದ್ರನನ್ನು ಕುರಿತು ಇಂತೆಂದರು. "ಎ ಬಲಮರ್ದನ! ಈ ಅಶ್ವಿನೀ ದೇವತಗಳೂ ಸೋಮಪಾನಕ್ಕೆ ಅರ್ಹರಾಗುವಂತಾಗಲಿ."

೪೭. ದೇವತೆಗಳ ಈ ಮಾತನ್ನು ಕೇಳಿ ಮಹೇಂದ್ರನು ಭಯಸಂಭ್ರಾಂತನಾಗಿ ಚ್ಯವನಮಹರ್ಷಿಗೆ ಪ್ರಣಾಮವನ್ನು ಮಾಡಿ ತಲೆಯನ್ನು ಬಗ್ಗಿಸಿಕೊಂಡು ವಿಜ್ಞಾಪಿಸಿಕೊಂಡನು.

೪೮. "ಭೃಗುಪುತ್ರನೆ! ಇಂದಿನಿಂದ ಅಶ್ವಿನೀ ದೇವತೆಗಳೂ ಸೋಮ

ಮಾ ತೇಽತಿಧ್ಯಾಭಿಸಂರಂಭೋ ಭವಿಷ್ಯತಿ ತಪೋಧನ ।
ಲಿಂಗಸ್ಯಾಽಸ್ಯ ಪ್ರಭಾವೋಽಯಂ ಯದಹಂ ನಿಷ್ಪ್ರಭೀಕೃತಃ ॥ ೪೯ ॥
ತತಸ್ತ್ವನ್ನಾಮಧೇಯೇನ ಪ್ರಸಿದ್ಧಿರ್ಭುವಿ ಯಾಸ್ಯತಿ ।
ಆರಾಧಿತಂ ಯತೋ ದೇವಿ ಚ್ಯವನೇನ ಮಹಾತ್ಮನಾ ।
ಚ್ಯವನೇಶ್ವರಮೇತದ್ವೈ ಖ್ಯಾತಂ ತ್ರಿಭುವನೇಽಭವತ್ ॥ ೫೦ ॥
ಭಕ್ತ್ಯಾ ಯೇ ಪೂಜಯಿಷ್ಯಂತಿ ದೇವೇಶಂ ಚ್ಯವನೇಶ್ವರಂ ।
ಆಜನ್ಮಪ್ರಭವಂ ಪಾಪಂ ತೇಷಾಂ ನಶ್ಯತಿ ತತ್ಕ್ಷಣಾತ್ ॥ ೫೧ ॥
ಯಃ ಪಶ್ಯತಿ ನರೋ ನಿತ್ಯಂ ಚ್ಯವನೇಶ್ವರಸಂಜ್ಞಕಂ ।
ಜನ್ಮದುಃಖಜರಾರೋಗೈರ್ಮುಕ್ತೋ ಮುಕ್ತಿಮವಾಪ್ನುಯಾತ್ ॥ ೫೨ ॥
ಯಂ ಯಂ ಕಾಮಮಭಿಧ್ಯಾಯೇನ್ಮನಸಾಭಿಮತಂ ನರಃ ।
ತಂ ತಂ ದುರ್ಲಭಮಾಪ್ನೋತಿ ಚ್ಯವನೇಶ್ವರದರ್ಶನಾತ್ ॥ ೫೩ ॥
ನಿಯಮೇನ ಪ್ರಪಶ್ಯಂತಿ ಯೇ ದೇವಂ ಚ್ಯವನೇಶ್ವರಂ ।
ತೇ ಪ್ರಯಾಂತಿ ತನುಂ ತ್ಯಕ್ತ್ವಾ ಮದೀಯೇ ಭುವನೇ ಪ್ರಿಯೇ ॥ ೫೪ ॥

---

ಪಾನಾರ್ಹರಾಗಿರುವರು. ನಾನಂದುದೆಲ್ಲವೂ ಸತ್ಯವೆಂದು ಶಪಥಪೂರ್ವಕವಾಗಿ ನಿನಗೆ ಹೇಳುತ್ತಿರುವೆನು.

೪೯–೫೦. ತಪೋಧನನೆ! ನನ್ನನ್ನು ಕರೆಸಿದ ಈ ಸಂರಂಭವು ನಿನಗೆ ಸೇರ ತಕ್ಕುದಲ್ಲ. ನಾನು ನಿಸ್ತೇಜಸ್ಕನಾಗಲು ಈ ಮಹಾಲಿಂಗದ ಪ್ರಭಾವವೇ ಕಾರಣ ವಾಗಿರುವುದು. ಮತ್ತು ನಿನ್ನ ಹೆಸರಿನಿಂದಲೇ ಇದು ಭೂಲೋಕದಲ್ಲಿ ಪ್ರಸಿದ್ಧಿ ಯನ್ನು ಪಡೆಯುವುದು.'' ಪಾರ್ವತಿಯೆ! ಮಹಾತ್ಮನಾದ ಚ್ಯವನಮಹರ್ಷಿಯು ಪೂಜೆ ಮಾಡಿದುದರಿಂದ ಮೂರು ಲೋಕಗಳಲ್ಲಿಯೂ ಈ ಲಿಂಗವು ಚ್ಯವನೇಶ್ವರ ವೆಂದು ಪ್ರಖ್ಯಾತವಾಯಿತು.

೫೧. ದೇವದೇವನಾದ ಚ್ಯವನೇಶ್ವರನನ್ನು ಯಾರು ಭಕ್ತಿಯುಕ್ತರಾಗಿ ಪೂಜಿಸುವರೊ, ಅವರು ಆಜನ್ಮದಿಂದ ಮಾಡಿದ ಪಾತಕಗಳೆಲ್ಲವೂ ನಿಮಿಷಮಾತ್ರ ದಲ್ಲಿ ನಾಶವಾಗುವುವು.

೫೨. ಯಾವ ಮಾನವನು ಚ್ಯವನೇಶ್ವರನಾಮಕವಾದ ಈ ಲಿಂಗವನ್ನು ನಿತ್ಯವೂ ನೋಡುವನೊ, ಅವನು ಜನನ, ಮರಣ, ಮುಪ್ಪು, ರೋಗಗಳಿಂದ ಮುಕ್ತನಾಗಿ ಮೋಕ್ಷವನ್ನು ಪಡೆಯುವನು.

೫೩. ಯಾವ ಯಾವ ಅಭಿಲಾಷೆಗಳನ್ನು ಮನಸ್ಸಿನಲ್ಲಿ ಮನುಷ್ಯನು ಮಾಡಿ ಕೊಳ್ಳುವನೊ, ಅವುಗಳನ್ನೆಲ್ಲ ಚ್ಯವನೇಶ್ವರನ ದರ್ಶನದಿಂದ ದುರ್ಲಭಗಳಾದರೂ ಪಡೆಯುವನು.

೫೪. ಪ್ರಿಯಳೆ! ಯಾರು ಚ್ಯವನೇಶ್ವರದೇವನನ್ನು ನಿಯಮದಿಂದ ನೋಡಿ ಸೇವಿಸುವರೊ, ಅವರು ದೇಹವನ್ನು ಬಿಡುವಾಗ ನನ್ನ ಲೋಕವನ್ನೇ ಸೇರುವರು.

ಯಃ ಶೃಣೋತಿ ಕಥಾಂ ಪುಣ್ಯಾಂ ಸರ್ವಪಾಪಹರಾಂ ಶುಭಾಂ ।
ಸ ಪುಣ್ಯಾತ್ಮಾ ಪರಂ ಸ್ಥಾನಂ ಯಾತಿ ದಿವ್ಯಂ ನ ಸಂಶಯಃ ॥ ೫೫ ॥
ಭಕ್ತಿಹೀನಃ ಕ್ರಿಯಾಹೀನೋ ಯಃ ಪಶ್ಯತಿ ಪ್ರಸಂಗತಃ ।
ಸ ಪುಣ್ಯಾಂ ಗತಿಮಾಪ್ನೋತಿ ಯೋಗಿಗಮ್ಯಾಂ ಯಶಸ್ವಿನಿ ॥ ೫೬ ॥
ಪುಷ್ಪೈರ್ವಿಚಿತ್ರೈರ್ಯೇ ದೇವಂ ಯಜಂತೇ ಚ್ಯವನೇಶ್ವರಂ ।
ಸಂಸಾರಾರ್ಣವಮುಲ್ಲಂಘ್ಯ ತೇ ಯಾಂತಿ ಪರಮಂ ಪದಂ ॥ ೫೭ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಚ್ಯವನೇಶ್ವರದೇವಸ್ಯ ಶೃಣು ಖಂಡೇಶ್ವರಂ ಶಿವೇ ॥ ೫೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಚ್ಯವನೇಶ್ವರಮಾಹಾತ್ಮ್ಯವರ್ಣನಂ"
ನಾಮ ತ್ರಿಂಶೋಽಧ್ಯಾಯಃ

---

೫೫. ಪುಣ್ಯಪ್ರದವೂ ಸಕಲ ಪಾತಕಪರಿಹಾರಕವೂ ಆದ ಈ ಕಥೆಯನ್ನು ಯಾವನು ಕೇಳುವನೊ, ಆ ಪುಣ್ಯಾತ್ಮನು ಉತ್ತಮವೂ ದಿವ್ಯವೂ ಆದ ಸ್ಥಾನವನ್ನು ಪಡೆಯುವುದರಲ್ಲಿ ಸಂದೇಹವಿಲ್ಲ.

೫೬. ಭಕ್ತಿಹೀನನೂ, ಕ್ರಿಯಾರಹಿತನೂ ಆಗಿದ್ದರೂ ಯಾವನು ಪ್ರಸಂಗದಿಂದಲಾದರೂ ಈ ಲಿಂಗವನ್ನು ನೋಡುವನೊ, ಅವನೂ ಯೋಗಿಗಳಿಗೆ ಪ್ರಾಪ್ತವಾಗುವ ಪುಣ್ಯಗತಿಯನ್ನೇ ಹೊಂದಿ ಸುಖಿಸುವನು.

೫೭. ಯಾರು ವಿವಿಧ ಪುಷ್ಪಗಳಿಂದ ಚ್ಯವನೇಶ್ವರಮಹಾದೇವನಿಗೆ ಪೂಜೆಯನ್ನು ಮಾಡುವರೊ, ಅವರು ಈ ಸಂಸಾರವೆಂಬ ಸಮುದ್ರವನ್ನು ದಾಟಿಕೊಂಡು ಪರಮಪದವನ್ನು ಸೇರುವರು.

೫೮. ದೇವಿಯೆ! ಇಂತು ನಿನಗೆ ಚ್ಯವನೇಶ್ವರಮಹಾಲಿಂಗದ ಪಾಪನಾಶಕವಾದ ಪ್ರಭಾವವನ್ನು ತಿಳಿಸಿರುವೆನು. ಪಾರ್ವತಿಯೆ! ಇನ್ನು ಖಂಡೇಶ್ವರನ ಚರಿತ್ರೆಯನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಚ್ಯವನೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕತ್ರಿಂಶೋऽಧ್ಯಾಯಃ

## ಖಂಡೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಮಹಾದೇವ ಉವಾಚ :—**

**ಏಕತ್ರಿಂಶತ್ತಮಂ ವಿದ್ಧಿ ದೇವಂ ಖಂಡೇಶ್ವರಂ ಪ್ರಿಯೇ ।**
**ಸಂಪೂರ್ಣಂ ಜಾಯತೇ ಯಸ್ಯ ದರ್ಶಾದ್ದಾನವ್ರತಾದಿಕಂ ॥ ೧ ॥**
**ಆಸೀತ್ತ್ರೇತಾಯುಗೇ ದೇವಿ ಭದ್ರಾಶ್ವೋ ನಾಮ ಪಾರ್ಥಿವಃ ।**
**ಯಸ್ಯ ನಾಮ್ನಾऽಭವದ್ವರ್ಷಂ ಭದ್ರಾಶ್ವಂ ನಾಮ ನಾಮತಃ ॥ ೨ ॥**
**ತಸ್ಯಾऽಗಸ್ತ್ಯಃ ಕದಾಚಿತ್ತು ಗೃಹಮಾಗಮ್ಯ ಸತ್ತಮಃ ।**
**ಉವಾಚ ಸಪ್ತರಾತ್ರಂ ತು ವಸಾಮಿ ಭವತೋ ಗೃಹೇ ॥ ೩ ॥**
**ತಂ ರಾಜಾ ಶಿರಸಾ ನತ್ವಾ ಸ್ವಾಸ್ಯತಾಮಿತ್ಯಭಾಷತ ।**
**ತಸ್ಯ ಕಾಂತಿಮತೀನಾಮ ಭಾರ್ಯಾ ಪರಮಶೋಭನಾ ॥ ೪ ॥**
**ತಸ್ಯಾಸ್ತೇಜಃ ಸಮಭವದ್ದ್ವಾದಶಾದಿತ್ಯಸನ್ನಿಭಂ ।**
**ಸಪತ್ನೀನಾಂ ಶತಂ ತಸ್ಯಾ ವಿದ್ಯತೇ ವರವರ್ಣಿನಿ ॥ ೫ ॥**

---

## ಕನ್ನಡದ ಅನುವಾದ

### ಖಂಡೇಶ್ವರಮಾಹಾತ್ಮ್ಯವರ್ಣನ

೧. ಮಹೇಶ್ವರನು ಹೇಳುತ್ತಾನೆ :—ಪ್ರಿಯಳೆ! ಮೂವತ್ತೊಂದನೆಯ ಮಹಾಲಿಂಗವೇ ಖಂಡೇಶ್ವರಲಿಂಗವೆಂದು ತಿಳಿ. ಅದನ್ನು ದರ್ಶನಮಾಡುವುದರಿಂದ ದಾನ, ವ್ರತಗಳೇ ಮೊದಲಾದ ಸತ್ಕರ್ಮಗಳು ಸಂಪೂರ್ಣಗಳೂ ಅಚ್ಛಿದ್ರಗಳೂ ಆಗುವುವು.

೨. ಪಾರ್ವತಿಯೆ! ತ್ರೇತಾಯುಗದಲ್ಲಿ ಹಿಂದೆ ಭದ್ರಾಶ್ವನೆಂಬ ಮಹಾರಾಜನೊಬ್ಬನಿದ್ದನು. ಆತನ ಹೆಸರಿನಿಂದಲೇ ಭದ್ರಾಶ್ವವೆಂಬ ವರ್ಷವೂ ಉಂಟಾಗಿರುವುದು.

೩. ಒಮ್ಮೆ ಆ ಚಕ್ರವರ್ತಿಯ ಅರಮನೆಗೆ ಅಗಸ್ತ್ಯಮುನಿಯು ಬಿಜಗೈದು "ನಿನ್ನ ಮನೆಯಲ್ಲಿ ಏಳು ರಾತ್ರಿಗಳು ವಾಸಮಾಡಬೇಕೆಂದಿರುವೆನು" ಎಂದು ಹೇಳಿದನು.

೪. ಆತನಿಗೆ ರಾಜನು ಶಿರಸಾಷ್ಟಾಂಗ ನಮಸ್ಕಾರವನ್ನು ಮಾಡಿ ಸುಖವಾಗಿರುವಂತೆ ಹೇಳಿದನು. ಆತನಿಗೆ ಸರ್ವಸದ್ಗುಣಭರಿತೆಯಾದ ಕಾಂತಿಮತಿಯೆಂಬ ಪತ್ನಿಯಿದ್ದಳು.

೫. ಆಕೆಯ ದೇಹಕಾಂತಿಯು ಹನ್ನೆರಡು ಸೂರ್ಯರ ತೇಜಸ್ಸನ್ನು ಮೀರಿದ್ದಿತು. ಸುಂದರಾಂಗಿಯೆ! ಆಕೆಗೆ ಒಂದುನೂರು ಜನ ಸವತಿಯರಿದ್ದರು.

ತಾ ದಾಸ್ಯ ಇವ ಕರ್ಮಾಣಿ ಕುರ್ವಂತ್ಯಹರಹಃ ಸದಾ ।
ಕಾಂತಿಮತ್ಯಾಃ ಪ್ರಭಾವೇಣ ಭಯೋತ್ತ್ರಸ್ತಾಃ ಸುಲೋಚನಾಃ ॥ ೬ ॥
ತಾಮಗಸ್ತ್ಯಸ್ತಥಾ ದೃಷ್ಟ್ವಾ ತನ್ಮುಖಾಸಕ್ತಲೋಚನಾಂ ।
ಏವಂ ಭೂತಾಂ ತಥಾ ದೃಷ್ಟ್ವಾ ರಾಜ್ಞೀಂ ಪರಮಶೋಭನಾಂ ।
ಸಾಧು ಸಾಧು ಜಗನ್ನಾಥೇತ್ಯಗಸ್ತ್ಯಃ ಪ್ರಾಹ ಹರ್ಷಿತಃ ॥ ೭ ॥
ದ್ವಿತೀಯೇ ದಿವಸೇಽಪ್ಯೇವಂ ರಾಜ್ಞೀಂ ದೃಷ್ಟ್ವಾ ಮಹಾಪ್ರಭಾಂ ।
ಅಹೋ ಹ್ಯಂಗನಯಾ ಮುಷ್ಟಂ ಜಗದೇತಚ್ಚರಾಚರಂ ॥ ೮ ॥
ಇತ್ಯಗಸ್ತ್ಯೋ ದ್ವಿತೀಯೇಽಹ್ನಿ ರಾಜ್ಞೀಂ ದೃಷ್ಟ್ವೋಪ್ಯುವಾಚ ಹ ।
ತೃತೀಯೇಽಹ್ನಿ ಚ ತಾಂ ದೃಷ್ಟ್ವಾ ಪುನರೇವಮುವಾಚ ಹ ॥ ೯ ॥
ಅಹೋ ಮೂಢಾ ನ ಜಾನಂತಿ ಲಿಂಗಮಾಹಾತ್ಮ್ಯಮುತ್ತಮಂ ।
ಮಹಾಕಾಲವನೇ ಕ್ಷೇತ್ರೇ ಚ್ಯವನೇಶಸ್ಯ ಪೂರ್ವತಃ ॥ ೧೦ ॥
ಖಂಡವ್ರತಾನಿ ಜಾಯಂತೇ ಪೂರ್ಣಾನಿ ದರ್ಶನಾದ್ಯತಃ ।
ಚತುರ್ಥೇ ದಿವಸೇ ಹಸ್ತಾವುತ್ಕ್ಷಿಪ್ಯ ಪುನರಬ್ರವೀತ್ ॥ ೧೧ ॥

---

೬. ಕಾಂತಿಮತಿಯ ಪ್ರಭಾವದಿಂದ ಭಯಗ್ರಸ್ತರಾಗಿ ಸುಂದರಿಯರಾದ ಅವರೆಲ್ಲರೂ ರಾಜಪತ್ನಿಯರಾದರೂ ದಾಸಿಯರಂತೆ ಆಕೆಯು ಹೇಳಿದ ಕೆಲಸಗಳನ್ನು ಪ್ರತಿನಿತ್ಯದಲ್ಲಿಯೂ ಮಾಡುತ್ತಿದ್ದರು.

೭. ಪತಿಯ ಮುಖವನ್ನವಲೋಕಿಸುವುದರಲ್ಲಿಯೇ ಆಸಕ್ತವಾಗಿದ್ದ ನೇತ್ರಗಳುಳ್ಳ ಆಕೆಯನ್ನು ಕಂಡು ಅಗಸ್ತ್ಯಮಹಾಮುನಿಯು "ಲೋಕೇಶ್ವರನೆ! ನೀನು ಬಹಳ ಯೋಗ್ಯನು" ಎಂದು ಸಂತೋಷದಿಂದ ಹೊಗಳಿದನು.

೮. ಎರಡನೆಯ ದಿನದಲ್ಲಿಯೂ ಹೀಗೆಯೇ ಮಹಾ ತೇಜೋವಂತಳಾದ ಆಕೆಯನ್ನು ಕಂಡು, "ಆಹಾ! ಈ ಸ್ತ್ರೀಯಳಿಂದ ಮೂರುಲೋಕಗಳೂ ಸ್ಥಾವರ ಜಂಗಮಗಳೊಡನೆ ಪರಾಭವವನ್ನು ಹೊಂದಿರುವುವು" ಎಂದನು.

೯. ಇಂತು ಮಹಾರಾಣಿಯನ್ನು ಕಂಡು ಎರಡನೆಯ ದಿನ ಅಗಸ್ತ್ಯಮುನಿಯು ಪ್ರಶಂಸಿಸಿದನು. ಮೂರನೆಯ ದಿವಸವೂ ಆಕೆಯನ್ನು ಕಂಡು ಮತ್ತೆ ಹೀಗೆಂದನು.

೧೦. "ಆಹಾ! ಜನರು ಎಷ್ಟು ಮೂಢರಾಗಿರುವರು! ಮಹಾಕಾಲವನ ಕ್ಷೇತ್ರದಲ್ಲಿ ಚ್ಯವನೇಶ್ವರನಿಗೆ ಪೂರ್ವದಿಕ್ಕಿನಲ್ಲಿರುವ ಉತ್ತಮ ಲಿಂಗದ ಮಾಹಾತ್ಮ್ಯವನ್ನು ತಿಳಿಯಲಾರರಲ್ಲ.

೧೧. ಅದರ ದರ್ಶನದಿಂದ ಅರ್ಧಮರ್ಧವಾಗಿ ಮಾಡಿದ ವ್ರತಾದಿಗಳೂ ಸಹ ಪರಿಪೂರ್ಣಗಳೆನಿಸುವುವು." ನಾಲ್ಕನೆಯ ದಿನ ಅಗಸ್ತ್ಯನು ತನ್ನ ಕೈಗಳನ್ನೆತ್ತಿ ಮತ್ತೆ ಹೇಳತೊಡಗಿದನು.

ಸಾಧು ಸಾಧು ಜಗನ್ನಾಥ ಸಾಧು ಭದ್ರಾಶ್ವ ಸುವ್ರತ ।
ಪಂಚಮೇ ದಿವಸೇಽಪ್ಯೇವಂ ಷಷ್ಠೇ ಚೈವ ಪುನಃ ಪುನಃ ॥ ೧೨ ॥
ನೃತ್ಯಂತಂ ಸಪ್ತಮೇ ದೃಷ್ಟ್ವಾ ದಿನೇ ಪತ್ನ್ಯಾ ಸಮನ್ವಿತಃ ।
ಪ್ರೋವಾಚ ಚೈನಂ ರಾಜಾ ಸ ವಿಸ್ಮಿತೇನಾಂತರಾತ್ಮನಾ ।
ಕಿಂ ಹರ್ಷಕಾರಣಂ ಬ್ರಹ್ಮನ್ಯೇನ ನೃತ್ಯಸಮನ್ವಿತಃ ॥ ೧೩ ॥

ಅಗಸ್ತ್ಯ ಉವಾಚ:—

ಅಹೋ ಭೂಪಾಲ ಮೂಢಸ್ತ್ವಂ ಮಹಾಮೂರ್ಖಾಶ್ಚ ಮಂತ್ರಿಣಃ ।
ಅಹೋ ಪುರೋಹಿತೋ ಮುಗ್ಧೋ ಯೇ ನ ಜಾನಂತಿ ಮೇ ಮತಂ॥೧೪॥
ಈದೃಶಾ ಅಪಿ ಜಾಯಂತೇ ರಾಜಾನೋ ಯಸ್ಯ ದರ್ಶನಾತ್ ।
ಏವಮುಕ್ತಸ್ತತೋ ರಾಜಾ ಕೃತಾಂಜಲಿರಭಾಷತ ॥ ೧೫ ॥
ನ ಜಾನೀಮೋ ವಯಂ ಬ್ರಹ್ಮನ್ನಭಿಪ್ರಾಯಂ ತವಾಽಧುನಾ ।
ಕಥಯಸ್ವ ಮಹಾಭಾಗ ಯದ್ಯನುಗ್ರಹಕೃದ್ಭವಾನ್ ॥ ೧೬ ॥

---

೧೨. "ಮಹಾರಾಜನೆ! ಭದ್ರಾಶ್ವನೆ! ಉತ್ತಮವ್ರತವನ್ನು ಮಾಡಿರುವ ನೀನೇ ಪರಮ ಧನ್ಯನು." ಇಂತು ಐದನೆಯ ದಿವಸದಲ್ಲಿಯೂ, ಆರನೆಯ ದಿನವೂ ಆತನು ಆ ದೊರೆಯನ್ನು ಶ್ಲಾಘಿಸಿದನು.

೧೩. ಏಳನೆಯ ದಿನದಲ್ಲಿ ಸಂತೋಷದಿಂದ ಕುಣಿದಾಡುತ್ತಿದ್ದ ಆ ಮಹರ್ಷಿಯನ್ನು ಕಂಡು ಮನಸ್ಸಿನಲ್ಲಿ ವಿಸ್ಮಯವನ್ನು ತಾಳಿದವನಾಗಿ ಪತ್ನೀ ಸಮೇತನಾದ ರಾಜನು ಆತನನ್ನು ಕೇಳಿದನು. "ಅಯ್ಯಾ ಬ್ರಾಹ್ಮಣನೆ! ನೀನು ಹೀಗೆ ಸಂತೋಷದಿಂದ ಕುಣಿದಾಡಲು ಕಾರಣವಾದರೂ ಏನು?"

೧೪. ಅಗಸ್ತ್ಯನು ಹೇಳುತ್ತಾನೆ:—"ಅಯ್ಯಾ ಚಕ್ರವರ್ತಿಯೆ! ನೀನು ಅಜ್ಞಾನಿಯೇ ಸರಿ. ನಿನ್ನ ಮಂತ್ರಿಗಳೂ ಮೂರ್ಖರೇ ಆಗಿರುವರು. ನಿನ್ನ ಪುರೋಹಿತನಂತೂ ಮೋಹಿತನೇ ಸರಿ. ನನ್ನ ಅಭಿಮತವನ್ನು ಯಾರೂ ತಿಳಿಯದವರಾಗಿರುವರು.

೧೫. ಆ ಮಹಾಲಿಂಗದ ದರ್ಶನದಿಂದ ಇಂತಹ ಚಕ್ರವರ್ತಿಗಳೂ ಸಹ ಹುಟ್ಟುತ್ತಿರುವರಲ್ಲವೆ." ಇಂತೆಂದ ಮುನಿಗೆ ರಾಜನು ಕೈಮುಗಿದುಕೊಂಡು ಹೇಳಿದನು.

೧೬. "ಬ್ರಾಹ್ಮಣೋತ್ತಮನೆ! ಮಹಾಭಾಗ್ಯಶಾಲಿಯೆ! ನಿನ್ನ ಅಭಿಪ್ರಾಯವನ್ನು ತಿಳಿಯಲು ಅಶಕ್ತರಾಗಿದ್ದೇವೆ. ನಮ್ಮಲ್ಲಿ ಅನುಗ್ರಹವನ್ನು ಮಾಡುವ ಇಚ್ಛೆಯಿದ್ದಲ್ಲಿ ಅದನ್ನು ಹೇಳುವವನಾಗು."

ಅಗಸ್ತ್ಯ ಉವಾಚ :—

ಇಯಂ ರಾಜ್ಞೀ ತ್ವದೀಯಾಽಭೂದ್ದಾಸೀ ವೈಶ್ಯಸ್ಯ ವೈದಿಶೇ ।
ನಗರೇ ಹರಿದತ್ತಸ್ಯ ತ್ವಮಸ್ಯಾಃ ಪತಿರೇವ ಚ ।
ಖಂಡವ್ರತಪ್ರಭಾವೇನ ಜಾತಃ ಕರ್ಮಕರೋ ಭವಾನ್ ॥ ೧೭ ॥
ಸ ಚ ವೈಶ್ಯೋ ಮಹಾಕಾಲೇ ಗತ್ವಾ ದೇವಂ ಮಹೇಶ್ವರಂ ।
ಅರ್ಚಯಾಮಾಸ ವಿಧಿವದ್ಗಂಧಪುಷ್ಪಾದಿಭಿಃ ಶುಭೈಃ ॥ ೧೮ ॥
ಅಭ್ಯರ್ಚ್ಯ ತು ಗೃಹಂ ಯಾವದ್ಭವಂತೌ ರಕ್ಷಪಾಲಕೌ ।
ತತಃ ಕಾಲೇನ ಮಹತಾ ಮೃತೌ ದ್ವಾವಪಿ ದಂಪತೀ ॥ ೧೯ ॥
ತೇನ ಪುಣ್ಯೇನ ತೇ ಜನ್ಮ ಪ್ರಿಯವ್ರತಗೃಹೇಽಭವತ್ ।
ಇಯಂ ಚ ಪತ್ನೀ ತೇ ಜಾತಾ ಪುರಾ ವೈಶ್ಯಪ್ರದಾಸಿಕಾ ॥ ೨೦ ॥
ಪರಕೀಯಪ್ರಸಂಗೇನ ಸಂಜಾತಾ ಭೂಮಿರುತ್ತಮಾ ।
ರಾಜ್ಯಂ ಪತ್ನೀ ಸುತಾ ಸಾಧುರಿತ್ಯುಕ್ತಂ ವಚನಂ ಮಯಾ ॥ ೨೧ ॥
ತಸ್ಯ ದೇವಸ್ಯ ಮಾಹಾತ್ಮ್ಯಾದ್ಯಜಂತಂ ವಿವಿಧೈರ್ಮಖೈಃ ।
ಪಶ್ಯಾಮಿ ತ್ವಾಂ ಮಹೀಪಾಲ ಭೂಪಾಲಶತವೇದಿತಂ ॥ ೨೨ ॥

---

೧೭. ಅಗಸ್ತ್ಯನು ಹೇಳುತ್ತಾನೆ:— ಈ ನಿನ್ನ ರಾಣಿಯು ಹಿಂದಿನ ಜನ್ಮದಲ್ಲಿ ವಿದಿಶಾನಗರದಲ್ಲಿ ಹರದತ್ತನೆಂಬ ವೈಶ್ಯನ ಮನೆಯಲ್ಲಿ ದಾಸಿಯಾಗಿದ್ದಳು. ನೀನು ಈಕೆಗೆ ಪತಿಯಾಗಿದ್ದೆ. ನೀನು ಆಚರಿಸಿದ ವ್ರತಗಳು ಸಂಪೂರ್ಣವಾಗಿರದಿದ್ದುದರಿಂದ ಸೇವಕನಾಗಿ ಜನಿಸಿದೆ.

೧೮. ಒಮ್ಮೆ ಆ ವೈಶ್ಯನು ಮಹಾಕಾಲವನಕ್ಷೇತ್ರಕ್ಕೆ ಹೋಗಿ ಅಲ್ಲಿ ಮಹಾದೇವನನ್ನು ವಿಧ್ಯುಕ್ತರೀತಿಯಲ್ಲಿ ಉತ್ತಮಗಳಾದ ಗಂಧಪುಷ್ಪಗಳೇ ಮುಂತಾದ ದ್ರವ್ಯಗಳಿಂದ ಪೂಜಿಸಿದನು.

೧೯. ಆತನ ಸಂರಕ್ಷಣೆಗಾಗಿ ಹೋಗಿದ್ದ ನೀವೂ ಸಹ ಪೂಜೆಯನ್ನು ಮಾಡಿ ಮನೆಗೆ ಹಿಂದಿರುಗಿದಿರಿ. ಬಳಿಕ ಕೆಲವು ಕಾಲದಮೇಲೆ ನೀವಿಬ್ಬರೂ ಮರಣವನ್ನು ಹೊಂದಿದಿರಿ.

೨೦. ಆ ಪೂಜೆಯ ಪುಣ್ಯದಿಂದಲೇ ನಿನಗೆ ಪ್ರಿಯವ್ರತಮಹಾರಾಜನ ಮನೆಯಲ್ಲಿ ಜನ್ಮವು ಲಭಿಸಿತು. ಹಿಂದೆ ವೈಶ್ಯರ ಮನೆಯ ದಾಸಿಯಾಗಿದ್ದ ಈಕೆಯೂ ನಿನ್ನ ಪತ್ನಿಯಾಗಿರುವಳು.

೨೧. ಮತ್ತೊಬ್ಬನ ಸಹವಾಸದಿಂದ ದೊರೆತ ಪೂಜೆಯಿಂದ ನಿಮಗೆ ಉತ್ತಮ ಜನ್ಮವು ಲಭಿಸಿತು. ನಿನಗೆ ರಾಜ್ಯವೂ, ಪತ್ನಿಯೂ, ಪುತ್ರರೂ ಲಭಿಸಿದುದು ಸಾಧುವೇ ಆಗಿರುವುದೆಂದು ನಾನು ಹೇಳಿದೆನು.

೨೨. ಚಕ್ರವರ್ತಿಯೆ! ಆ ಮಹೇಶ್ವರನ ಮಹಿಮೆಯನ್ನು ಕೇಳಿರುವ

ಅತಃ ಸಾಧು ಪುರಾ ಪ್ರೋಕ್ತಂ ಮಯಾ ತವ ಮಹೀಪತೇ ॥ ೨೩ ॥
ಇತಿ ತಸ್ಯ ವಚಃ ಶ್ರುತ್ವಾ ಕುಂಭಯೋನೇರ್ಮಹಾತ್ಮನಃ ।
ಮಹಾಕಾಲವನೇ ಗಂತುಂ ಮತಿಂ ಚಕ್ರೇ ಮಹೀಪತಿಃ ॥ ೨೪ ॥
ತತಃ ಸಾಂತಃಪುರಃ ಪ್ರಾಯಾತ್ತೇನ ಸಾರ್ಧಂಮಹರ್ಷಿಣಾ ।
ಅಗಸ್ತ್ಯಕಥಿತಂ ಲಿಂಗಂ ದದರ್ಶ ಶ್ರದ್ಧಯಾ ಪುನಃ ।
ಪೂಜಯಾಮಾಸ ವಿಧಿವತ್ಪತ್ನ್ಯಾ ಸಾರ್ಧಂ ಮಹೀಪತಿಃ ॥ ೨೫ ॥
ತತಸ್ತುಷ್ಟಸ್ತದಾ ದೇವೋ ನೃಪಂ ಪ್ರಾಹಾऽಮಿತದ್ಯುತಿಃ ।
ಮನೋऽಭೀಷ್ಟಂ ತಪಸ್ತೇऽಸ್ತು ಭೋಗಸ್ಯೈಶ್ವರ್ಯಮೇವ ಚ ॥ ೨೬ ॥
ಕುಲಂ ಪ್ರಭಾವಂ ಸೌಭಾಗ್ಯಂ ದೀರ್ಘಮಾಯುರರೋಗಿತಾಂ ।
ನಿಃಸಪತ್ನಂ ತತೋ ರಾಜ್ಯಂ ಕೃತ್ವಾ ಸ್ವರ್ಗಮವಾಪ್ಸ್ಯಸಿ ॥ ೨೭ ॥
ಇತ್ಯುಕ್ತೋ ದೇವದೇವೇನ ಗತೋऽಸೌ ವಿಷಯಂ ಸ್ವಕಂ ।
ನಿಷ್ಕಂಟಕಂ ತತೋ ರಾಜ್ಯಂ ಕೃತ್ವಾ ಸ್ವರ್ಗಂ ಗತಃ ಪ್ರಿಯೇ ॥ ೨೮ ॥

---

ನೀನು ನೂರಾರು ರಾಜರೊಡಗೂಡಿ ಬಹು ವಿಧ ಯಜ್ಞಾದಿಗಳಿಂದ ಆತನ ಸೇವೆಯನ್ನು ಮಾಡುತ್ತೀಯೆಂದು ತಿಳಿಯುತ್ತೇನೆ.

೨೩. ಭೂಕಾಂತನೆ! ಆದುದರಿಂದ ನಿನಗೆ ನಾನು ಮೊದಲು ಸಾಧುವಾದವನ್ನು ಮಾಡಿದೆನು.''

೨೪. ಇಂತೆಂದ ಮಹಾತ್ಮನೂ ಕುಂಭಸಂಭೂತನೂ ಆದ ಅಗಸ್ತ್ಯಮುನಿಯ ಮಾತುಗಳನ್ನು ಕೇಳಿ ಆ ರಾಜೇಂದ್ರನು ಮಹಾಕಾಲವನಕ್ಕೆ ಹೋಗುವುದಕ್ಕೆ ನಿಶ್ಚಯವನ್ನು ಮಾಡಿದನು.

೨೫. ಮತ್ತು ತನ್ನ ಅಂತಃಪುರದವರನ್ನೂ ಆ ಮಹರ್ಷಿಯನ್ನೂ ಕರೆದುಕೊಂಡು ಅಲ್ಲಿಗೆ ಹೋಗಿ ಅಗಸ್ತ್ಯನು ಪ್ರಶಂಸಿಸಿದ ಲಿಂಗವನ್ನು ನೋಡಿ ಭಕ್ತಿಯಿಂದಲೂ ವಿಧಿದೃಷ್ಟಕರ್ಮಗಳಿಂದಲೂ ಸಪತ್ನೀಕನಾಗಿ ಆ ರಾಜನು ಪೂಜೆಯನ್ನು ಮಾಡಿದನು.

೨೬. ಆಗ ಮಹಾದೇವನು ಸಂತುಷ್ಟನಾಗಿ ಅಪಾರಕಾಂತಿಯುಳ್ಳವನಾಗಿ ಕಾಣಿಸಿಕೊಂಡು ಹೇಳಿದನು. ''ನಿನಗೆ ಮನೋಭಿಲಾಷೆಯೂ, ತಪಸ್ಸೂ, ಭೋಗವೂ, ಐಶ್ವರ್ಯವೂ ಸಿದ್ಧಿಸಲಿ.

೨೭–೨೮. ಸಂತಾನವೃದ್ಧಿಯೂ, ಮಹಿಮೆಯೂ, ಸೌಭಾಗ್ಯವೂ, ದೀರ್ಘಾಯುಷ್ಯವೂ, ಆರೋಗ್ಯವೂ ಲಭಿಸುವುವು. ನೀನು ರಾಜ್ಯವನ್ನು ಕಂಟಕರಹಿತವಾಗಿ ಮಾಡಿ ಬಳಿಕ ಸ್ವರ್ಗಲೋಕಕ್ಕೆ ಹೋಗುವೆ.'' ಪ್ರಿಯಳೆ! ಇಂತು ಮಹಾದೇವನು ವರಗಳನ್ನೀಯಲು ಆತನು ತನ್ನ ದೇಶಕ್ಕೆ ಹಿಂದಿರುಗಿದನು.

**ಅನೇಕಜನ್ಮಚರಿತಂ ಖಂಡವ್ರತಕದಂಬಕಂ ।**
**ಸಂಪೂರ್ಣಮಭವದ್ದೇವಿ ಲಿಂಗಸ್ಯಾಽಸ್ಯ ಪ್ರಭಾವತಃ ॥ ೨೯ ॥**
**ಅತಃ ಖಂಡೇಶ್ವರೋ ದೇವೋ ವಿಖ್ಯಾತೋ ಭುವನತ್ರಯೇ ।**
**ಯೇ ಪಶ್ಯಂತಿ ನರಾ ದೇವಿ ದೇವಂ ಖಂಡೇಶ್ವರಂ ಶಿವಂ ।**
**ಖಂಡವ್ರತಾನಿ ಪೂರ್ಣಾನಿ ತೇಷಾಮಾಶು ಭವಂತಿ ಹಿ ॥ ೩೦ ॥**
**ತಪಃಖಂಡಂ ವ್ರತೇ ಖಂಡಂ ದಾನಖಂಡಂ ಚ ಯತ್ಕೃತಂ ।**
**ತತ್ಸರ್ವಂ ಪೂರ್ಣತಾಂ ಯಾತಿ ಶ್ರೀಖಂಡೇಶ್ವರದರ್ಶನಾತ್ ॥ ೩೧ ॥**
**ದೃಷ್ಟ್ವಾ ಖಂಡೇಶ್ವರಂ ದೇವಂ ಪಾಪನಿರ್ಮುಕ್ತಃ ಪ್ರಮುಚ್ಯತೇ ।**
**ಸಪ್ತಜನ್ಮಕೃತೈರ್ದೇವಿ ಮನೋವಾಕ್ಕಾಯಕರ್ಮಭಿಃ ॥ ೩೨ ॥**
**ದೃಷ್ಟ್ವಾ ಖಂಡೇಶ್ವರಂ ದೇವಂ ಕೃತಕೃತ್ಯತ್ವಮಾಪ್ಯತೇ ।**
**ತಸ್ಯ ನಶ್ಯತಿ ದೌರ್ಭಾಗ್ಯಂ ಸಪ್ತಜನ್ಮೋದ್ಭವಂ ಪ್ರಿಯೇ ॥ ೩೩ ॥**

---

ಮತ್ತು ನಿಷ್ಕಂಟಕವಾದ ರಾಜ್ಯವನ್ನಾಳುತ್ತಿದ್ದು ಕಡೆಯಲ್ಲಿ ಸ್ವರ್ಗವನ್ನು ಸೇರಿದನು.

೨೯. ಈ ಮಹಾಲಿಂಗದ ಪ್ರಭಾವದಿಂದ ಆತನು ಅನೇಕ ಜನ್ಮಗಳಲ್ಲಿ ಅಸಂಪೂರ್ಣವಾಗಿ ಮಾಡಿದ ವ್ರತಗಳ ಸಮೂಹವೆಲ್ಲವೂ ಸಂಪೂರ್ಣವಾಗಿ ಫಲವನ್ನು ಕೊಡುವುದಾಯಿತು.

೩೦. ಆದುದರಿಂದ ಈ ಮಹಾಲಿಂಗವು ಖಂಡೇಶ್ವರನೆಂದು ಮೂರು ಲೋಕಗಳಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವುದು. ದೇವಿಯೆ! ಯಾವ ಜನರು ಈ ಖಂಡೇಶ್ವರ ಮಹಾದೇವನನ್ನು ನೋಡುವರೊ, ಅವರು ಅರ್ಧವಾಗಿ ಆಚರಿಸಿರುವ ವ್ರತನಿಯಮಗಳೆಲ್ಲವೂ ಸಂಪೂರ್ಣಗಳಾಗುವುವು.

೩೧. ತಪಸ್ಸಿನಲ್ಲಾಗಲಿ, ವ್ರತದಲ್ಲಿಯಾಗಲಿ, ದಾನಗಳಲ್ಲಿಯಾಗಲಿ, ಸ್ವಲ್ಪವಾಗಿ ಮಾಡಿದುದೂ ಸಹ ಈ ಖಂಡೇಶ್ವರನ ದರ್ಶನದ ಫಲವಾಗಿ ಪೂರ್ಣಫಲದಾಯಕವಾಗುವುದು.

೩೨. ಈ ಖಂಡೇಶ್ವರಲಿಂಗವನ್ನು ನೋಡಿದ ಮಾನವನು ಏಳು ಜನ್ಮಗಳಲ್ಲಿ ಮನೋವಾಕ್ಕಾಯಗಳಿಂದ ಮಾಡಿದ ಸಕಲ ಪಾತಕಗಳ ಪ್ರತಿಬಂಧಕಗಳಿಂದಲೂ ಮುಕ್ತನಾಗುವನು.

೩೩. ಪ್ರಿಯಳೆ! ಈ ಖಂಡೇಶ್ವರನನ್ನು ನೋಡಿದವನು ಕೃತಕೃತ್ಯತೆಯನ್ನು ಪಡೆಯುವನು. ಆತನು ಏಳು ಜನ್ಮಗಳಲ್ಲಿ ಸಂಪಾದಿಸಿರುವ ದಾರಿದ್ರ್ಯವೆಲ್ಲವೂ ನಾಶವಾಗುವುದು.

ಖಂಡೇಶ್ವರೇಽರ್ಚಿತೇ ದೇವೇ ಸರ್ವೇ ದೇವಾಃ ಸವಾಸವಾಃ ।
ಸಂತುಷ್ಟಾ ವರದಾಶ್ಚೈವ ಭವಂತಿ ವರವರ್ಣಿನಿ ॥ ೩೪ ॥
ದೇವಂ ಖಂಡೇಶ್ವರಂ ಯೇ ವೈ ಯಜಂತಿ ಶ್ರದ್ಧಯಾ ಪ್ರಿಯೇ ।
ಪುಣ್ಯೈರ್ನಾನಾವಿಧೈಃ ಸ್ನಾನೈಃ ಸುಗಂಧೈಶ್ಚ ವಿಶೇಷತಃ ॥ ೩೫ ॥
ಧೂಪದೀಪೈರ್ನಮಸ್ಕಾರೈರ್ಜಪೈಃ ಸ್ತೋತ್ರೈಃ ಪೃಥಗ್ವಿಧೈಃ ।
ತೇ ಸರ್ವೇ ಕಾಮಸಂಪನ್ನಾಃ ಶ್ರೀಮಂತೋ ರಾಜ್ಯಸಂಯುತಾಃ ।
ದೀರ್ಘಾಯುಷಃ ಶುಭಾಚಾರಾ ಜಾಯಂತೇ ದೇಹಿನೋಽಮಲಾಃ ॥ ೩೬ ॥
ಅತಿಶ್ರೇಷ್ಠಾ ಗತಿಸ್ತೇಷಾಂ ವಿಶೋಕಾ ನಿತ್ಯಮಕ್ಷಯಾಃ ।
ಖಂಡೇಶ್ವರಪ್ರಸಾದೇನ ಜಾಯಂತೇ ನಾತ್ರ ಸಂಶಯಃ ॥ ೩೭ ॥
ಏತೇ ಚ ವಿಷ್ಣುಬ್ರಹ್ಮೇಂದ್ರಕುಬೇರದಹನಾದಯಃ ।
ಪರಾಂ ಸಿದ್ಧಿಂ ಸುಸಂಪ್ರಾಪ್ತಾಃ ಖಂಡೇಶ್ವರಸಮರ್ಚನಾತ್ ॥ ೩೮ ॥

---

೩೪. ಮಂಗಳಾಂಗಿಯೆ! ಈ ಖಂಡೇಶ್ವರಮಹಾದೇವನನ್ನು ಪೂಜಿಸಲು ಮಹೇಂದ್ರನೊಡಗೂಡಿದ ಸಮಸ್ತ ದೇವತೆಗಳೂ ಸಂತುಷ್ಟರಾಗಿ ಭಕ್ತನಿಗೆ ವರಗಳನ್ನೀಯುವರು.

೩೫. ಪ್ರಿಯಳೆ! ಭಕ್ತಿಯುಕ್ತರಾಗಿ ಪವಿತ್ರಗಳಾದ ನಾನಾವಿಧ ಸ್ನಾನಗಳಿಂದಲೂ, ವಿಶೇಷವಾಗಿ ಸುಗಂಧದ್ರವ್ಯಗಳಿಂದಲೂ ಖಂಡೇಶ್ವರನ ಪೂಜೆಯನ್ನು ಮಾಡಬೇಕು.

೩೬. ಧೂಪಗಳಿಂದಲೂ, ದೀಪೋತ್ಸವಗಳಿಂದಲೂ, ನಮಸ್ಕಾರಗಳಿಂದಲೂ, ಜಪಗಳಿಂದಲೂ, ವಿಧವಿಧಗಳಾದ ಸ್ತೋತ್ರಗಳಿಂದಲೂ ಖಂಡೇಶ್ವರನ ಪೂಜೆಯನ್ನು ನೆರವೇರಿಸುವವರು ಸಕಲಾಭೀಷ್ಟಗಳನ್ನೂ ಪಡೆದು ಶ್ರೀಮಂತರೂ, ಚಕ್ರವರ್ತಿಗಳೂ, ದೀರ್ಘಾಯುಷ್ಯವುಳ್ಳವರೂ, ಸದಾಚಾರಿಗಳೂ, ಪರಿಶುದ್ಧದೇಹಿಗಳೂ ಆಗಿ ಹುಟ್ಟುತ್ತಿರುವರು.

೩೭. ಅವರಿಗೆ ಸರ್ವೋತ್ತಮವಾದ ಗತಿಯು ಲಭಿಸುವುದು. ಖಂಡೇಶ್ವರನ ಪ್ರಸಾದದಿಂದ ಅವರಿಗೆ ಭೋಗಭೂಮಿಗಳು ಶೋಕರಹಿತಗಳೂ, ಶಾಶ್ವತಗಳೂ ಆಗಿರುವುದರಲ್ಲಿ ಸಂದೇಹವಿಲ್ಲ.

೩೮. ಈ ಮಹಾವಿಷ್ಣು, ಚತುರ್ಮುಖ, ಮಹೇಂದ್ರ, ಕುಬೇರ, ಅಗ್ನಿ ಮುಂತಾದವರೆಲ್ಲರೂ ಖಂಡೇಶ್ವರನ ಪೂಜೆಯಿಂದಲೇ ಉತ್ತಮ ಪದವಿಗಳನ್ನು ಪಡೆದಿರುವರು.

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ಖಂಡೇಶ್ವರಸ್ಯ ದೇವಸ್ಯ ಶೃಣು ವೈ ಪತ್ತ್ರನೇಶ್ವರಂ ॥ ೩೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಖಂಡೇಶ್ವರಮಾಹಾತ್ಮ್ಯವರ್ಣನಂ" ನಾಮೈಕತ್ರಿಂಶೋಽಧ್ಯಾಯಃ**

---

೩೯. ದೇವಿಯೆ! ಇಂತು ಖಂಡೇಶ್ವರನ ಪ್ರಭಾವದ ಪಾಪಪರಿಹಾರಕವಾದ ಚರಿತ್ರೆಯನ್ನು ನಿನಗೆ ಹೇಳಿರುವೆನು. ಇನ್ನು ಪತ್ತ್ರನೇಶ್ವರನ ಮಾಹಾತ್ಮ್ಯವನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಖಂಡೇಶ್ವರಮಹಾತ್ಮ್ಯವರ್ಣನ"ವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು

ಮಹಾಕಾಲವನೇ ಶೂನ್ಯೇ ನಾನಾಗುಲ್ಮಲತಾವೃತೇ ।
ಗಜೇಂದ್ರಗಜಶಾರ್ದೂಲಸಿಂಹಶಂಬರಸಂಕುಲೇ ॥ ೬ ॥
ಋಕ್ಷವಾನರಗೋಮಾಯುಜಂತುಕಾದಿವಿರಾಜಿತೇ ।
ಮಯೂರಸರ್ಪಮಾರ್ಜಾರಮೂಷಿಕಾದಿವಿರಾಜಿತೇ ॥ ೭ ॥
ಕಥಂ ವಾಸಃ ಕೃತೋ ದೇವ ಕೌತೂಹಲಮಿದಂ ಮಮ ॥ ೮ ॥
ಇತಿ ಪೃಷ್ಟಸ್ತ್ವಯಾ ದೇವಿ ಮಂದರೇ ಚಾರುಕಂದರೇ ।
ಮಯಾ ಪ್ರೋಕ್ತಂ ಪ್ರಸನ್ನೇನ ಪತ್ತನಂ ಚ ಮಮ ಪ್ರಿಯೇ ॥ ೯ ॥
ಮಹಾಕಾಲವನಂ ರಮ್ಯಂ ಸ್ವರ್ಗಾತ್ಸುಖಕರಂ ಪರಂ ।
ಸ್ಮಶಾನಪೀಠಸತ್ಕ್ಷೇತ್ರವನೋಷರಸಮಾಶ್ರಿತಂ ॥ ೧೦ ॥
ಅನೌಪಮ್ಯಗುಣಂ ವಿದ್ಧಿ ಪತ್ತನಂ ಪರ್ವತಾತ್ಮಜೇ ।
ಏವಂ ಪತ್ತನದೇವೋ ವೈ ನ ದೃಷ್ಟೋ ಭುವನತ್ರಯೇ ।
ಗೀತವಾದಿತ್ರಚಾತುರ್ಯೈಃ ಸ್ಪರ್ಧತೇ ಯಃ ಸುರಾಲಯಂ ॥ ೧೧ ॥

---

ಗಳಿಂದ ನಿಬಿಡಿತವಾಗಿ ಪುಣ್ಯಲೋಕದಂತೆ ಸುಖಮಯವಾಗಿ ಸ್ವರ್ಗಕ್ಕೂ ಭೂಷಣವೆನಿಸಿರುವುದು.

೬. ಮಹಾಕಾಲವನವಾದರೊ ಜನಶೂನ್ಯವೂ, ಬಹುವಿಧಗಳಾದ ಗಿಡಮರಗಳಿಂದಲೂ, ಬಳ್ಳಿಗಳಿಂದಲೂ ದಟ್ಟವಾದ ಕಾಡಾಗಿರುವುದು. ಮಹಾಗಜಗಳು, ಹೆಬ್ಬುಲಿಗಳು, ಸಿಂಹಗಳು, ಜಿಂಕೆಗಳು ಮುಂತಾದುವುಗಳಿಗೆ ಆವಾಸವಾಗಿರುವುದು.

೭. ಕರಡಿಗಳು, ಕಪಿಗಳು, ನರಿಗಳು, ಕ್ರಿಮಿಕೀಟಗಳೂ ಅಲ್ಲಿ ಸ್ವೇಚ್ಛೆಯಾಗಿ ತಿರುಗುತ್ತಿರುವುವು. ನವಿಲುಗಳು, ಹಾವುಗಳು, ಬೆಕ್ಕುಗಳು, ಇಲಿಗಳು ಮುಂತಾದ ಪ್ರಾಣಿಗಳೂ ತುಂಬಿರುವುವು.

೮. ದೇವದೇವ! ಇಂತಹ ಅರಣ್ಯದಲ್ಲಿ ನೀನು ಹೇಗೆ ವಾಸವನ್ನು ಮಾಡಲೆಳಸಿದೆ? ಇದು ನನಗೆ ಬಹಳ ಕುತೂಹಲದ ವಿಷಯವಾಗಿರುವುದು.''

೯. ದೇವಿಯೆ! ಇಂತು ನೀನು ಮಂದರಪರ್ವತದಲ್ಲಿ ಪ್ರಶ್ನೆಮಾಡಲು ನಾನು ಪ್ರಸನ್ನನಾಗಿ ಹೇಳಿದೆನು. ಪ್ರಿಯಳೆ! ಇದು ನನ್ನ ಪಟ್ಟಣವಾಗಿರುವುದು.

೧೦. ರಮ್ಯವಾದ ಈ ಮಹಾಕಾಲವನವು ಸರ್ವೋತ್ತಮವೂ ಸ್ವರ್ಗಕ್ಕಿಂತಲೂ ಸುಖಪ್ರದವೂ ಆಗಿರುವುದು. ಈ ಪ್ರದೇಶವು ಸ್ಮಶಾನವೂ, ಪೀಠವೂ, ಉತ್ತಮ ಕ್ಷೇತ್ರವೂ, ವನವೂ, ಊಷರಪ್ರದೇಶವೂ ಆಗಿರುವುದು.

೧೧. ಪರ್ವತಕುಮಾರಿಯೆ! ಈ ಪಟ್ಟಣವು ಅಸದೃಶಗುಣಗಳಿಂದ ಕೂಡಿರುವುದೆಂದು ತಿಳಿ. ಗೀತ, ವಾದ್ಯಗಳ ವೈಚಿತ್ರ್ಯಗಳಿಂದ ಸ್ವರ್ಗಲೋಕವನ್ನೂ ಸ್ಪರ್ಧಿಸುತ್ತಿರುವ ಈ ಪತ್ತನೇಶ್ವರನನ್ನು ಹೋಲುವ ಮಹಾದೇವನು ಮೂರು ಲೋಕಗಳಲ್ಲಿಯೂ ಕಾಣುವುದಿಲ್ಲ.

ಮಹಾಕಾಲವನೇ ಶೂನ್ಯೇ ನಾನಾಗುಲ್ಮಲತಾವೃತೇ ।
ಗಜೇಂದ್ರಗಜಶಾರ್ದೂಲಸಿಂಹಶಂಬರಸಂಕುಲೇ ॥ ೬ ॥
ಋಕ್ಷವಾನರಗೋಮಾಯುಜಂತುಕಾದಿವಿರಾಜಿತೇ ।
ಮಯೂರಸರ್ಪಮಾರ್ಜಾರಮೂಷಿಕಾದಿವಿರಾಜಿತೇ ॥ ೭ ॥
ಕಥಂ ವಾಸಃ ಕೃತೋ ದೇವ ಕೌತೂಹಲಮಿದಂ ಮಮ ॥ ೮ ॥
ಇತಿ ಪೃಷ್ಟಸ್ತ್ವಯಾ ದೇವಿ ಮಂದರೇ ಚಾರುಕಂದರೇ ।
ಮಯಾ ಪ್ರೋಕ್ತಂ ಪ್ರಸನ್ನೇನ ಪತ್ತನಂ ಚ ಮಮ ಪ್ರಿಯೇ ॥ ೯ ॥
ಮಹಾಕಾಲವನಂ ರಮ್ಯಂ ಸ್ವರ್ಗಾತ್ಸುಖಕರಂ ಪರಂ ।
ಸ್ಮಶಾನಪೀಠಸತ್ಕ್ಷೇತ್ರವನೋಷರಸಮಾಶ್ರಿತಂ ॥ ೧೦ ॥
ಅನೌಪಮ್ಯಗುಣಂ ವಿದ್ಧಿ ಪತ್ತನಂ ಪರ್ವತಾತ್ಮಜೇ ।
ಏವಂ ಪತ್ತನದೇವೋ ಪ್ಯೈ ನ ದೃಷ್ಟೋ ಭುವನತ್ರಯೇ ।
ಗೀತವಾದಿತ್ರಚಾತುರ್ಯೈಃ ಸ್ಪರ್ಧತೇ ಯಃ ಸುರಾಲಯಂ ॥ ೧೧ ॥

---

ಗಳಿಂದ ನಿಬಿಡಿತವಾಗಿ ಪುಣ್ಯಲೋಕದಂತೆ ಸುಖಮಯವಾಗಿ ಸ್ವರ್ಗಕ್ಕೂ ಭೂಷಣವೆನಿಸಿರುವುದು.

೬. ಮಹಾಕಾಲವನವಾದರೊ ಜನಶೂನ್ಯವೂ, ಬಹುವಿಧಗಳಾದ ಗಿಡಮರಗಳಿಂದಲೂ, ಬಳ್ಳಿಗಳಿಂದಲೂ ದಟ್ಟವಾದ ಕಾಡಾಗಿರುವುದು. ಮಹಾಗಜಗಳು, ಹೆಬ್ಬುಲಿಗಳು, ಸಿಂಹಗಳು, ಜಿಂಕೆಗಳು ಮುಂತಾದುವುಗಳಿಗೆ ಆವಾಸವಾಗಿರುವುದು.

೭. ಕರಡಿಗಳು, ಕಪಿಗಳು, ನರಿಗಳು, ಕ್ರಿಮಿಕೀಟಗಳೂ ಅಲ್ಲಿ ಸ್ವೇಚ್ಛೆಯಾಗಿ ತಿರುಗುತ್ತಿರುವುವು. ನವಿಲುಗಳು, ಹಾವುಗಳು, ಬೆಕ್ಕುಗಳು, ಇಲಿಗಳು ಮುಂತಾದ ಪ್ರಾಣಿಗಳೂ ತುಂಬಿರುವುವು.

೮. ದೇವದೇವ! ಇಂತಹ ಅರಣ್ಯದಲ್ಲಿ ನೀನು ಹೇಗೆ ವಾಸವನ್ನು ಮಾಡಲೆಳಸಿದ? ಇದು ನನಗೆ ಬಹಳ ಕುತೂಹಲದ ವಿಷಯವಾಗಿರುವುದು."

೯. ದೇವಿಯೆ! ಇಂತು ನೀನು ಮಂದರಪರ್ವತದಲ್ಲಿ ಪ್ರಶ್ನೆಮಾಡಲು ನಾನು ಪ್ರಸನ್ನನಾಗಿ ಹೇಳಿದೆನು. ಪ್ರಿಯಳೆ! ಇದು ನನ್ನ ಪಟ್ಟಣವಾಗಿರುವುದು.

೧೦. ರಮ್ಯವಾದ ಈ ಮಹಾಕಾಲವನವು ಸರ್ವೋತ್ತಮವೂ ಸ್ವರ್ಗಕ್ಕಿಂತಲೂ ಸುಖಪ್ರದವೂ ಆಗಿರುವುದು. ಈ ಪ್ರದೇಶವು ಸ್ಮಶಾನವೂ, ಪೀಠವೂ, ಉತ್ತಮ ಕ್ಷೇತ್ರವೂ, ವನವೂ, ಊಷರಪ್ರದೇಶವೂ ಆಗಿರುವುದು.

೧೧. ಪರ್ವತಕುಮಾರಿಯೆ! ಈ ಪಟ್ಟಣವು ಅನನ್ಯಸಗುಣಗಳಿಂದ ಕೂಡಿರುವುದೆಂದು ತಿಳಿ. ಗೀತ, ವಾದ್ಯಗಳ ವೈಚಿತ್ರ್ಯಗಳಿಂದ ಸ್ವರ್ಗಲೋಕವನ್ನೂ ಸ್ಪರ್ಧಿಸುತ್ತಿರುವ ಈ ಪತ್ತನೇಶ್ವರನನ್ನು ಹೋಲುವ ಮಹಾದೇವನು ಮೂರು ಲೋಕಗಳಲ್ಲಿಯೂ ಕಾಣುವುದಿಲ್ಲ.

ಏತಸ್ಮಿನ್ನಂತರೇ ದೇವಿ ದೇವರ್ಷಿರ್ನಾರದೋ ಮುನಿಃ ।
ದ್ರಷ್ಟುಕಾಮಃ ಸಮಾಯಾತೋ ಮಂದರೇ ಮಾಂ ಯಶಸ್ವಿನಿ ॥ ೧೨ ॥
ವಿನೋದಾರ್ಥಂ ಮಯಾ ಪೃಷ್ಟಸ್ತ್ವತ್ಪ್ರಿಯಾರ್ಥಂ ಕುತೂಹಲಾತ್ ।
ಕ್ವ ತ್ವಯಾ ಗಮಿತಃ ಕಾಲಃ ಕಲ್ಪಸಂಖ್ಯೋ ಮಹಾಮುನೇ ॥ ೧೩ ॥
ಕಸ್ಮಿನ್ನಾಶ್ರಮಸಂಸ್ಥಾನೇ ತಪಸಃ ಸಂಚಯಃ ಕೃತಃ ।
ತೀರ್ಥಾನಿ ಕಾನಿ ಭ್ರಾಂತಾನಿ ಕ್ವ ತೇ ರತಿರಭೂಚ್ಚಿರಂ ॥ ೧೪ ॥
ಕೌತುಕಂ ದೃಷ್ಟಪೂರ್ವಂ ತು ವದ ಮೇ ಮುನಿಸತ್ತಮ ।
ಇತಿ ಪೃಷ್ಟೋ ಮಯಾ ದೇವಿ ಬ್ರಹ್ಮಪುತ್ರೋ ಮಹಾಮುನಿಃ ।
ಕಥಯಾಮಾಸ ವೃತ್ತಾಂತಂ ಪತ್ತನಸ್ಯ ಪ್ರಯತ್ನತಃ ॥ ೧೫ ॥
ಬಹೂನಿ ಸಂಪರಿಕ್ರಮ್ಯ ತೀರ್ಥಾನ್ಯಾಯತನಾನಿ ಚ ।
ಪತ್ತನಾನಿ ವಿಚಿತ್ರಾಣಿ ದೇಶಾಶ್ಚ ನಗರಾಣಿ ಚ ॥ ೧೬ ॥
ಅಟನಾರ್ಥಂ ಮಹಾದೇವ ಜಂಬೂದ್ವೀಪೇ ಮನೋರಮೇ ।
ದೃಷ್ಟಃ ಪತ್ತನರಾಜಶ್ಚ ಸದಾನಂದಕರಃ ಪರಃ ॥ ೧೭ ॥

---

೧೨. ಯಶಸ್ವಿನಿಯೆ! ಈ ಸಮಯದಲ್ಲಿಯೇ ದೇವರ್ಷಿಯಾದ ನಾರದ ಮುನಿಯು ನನ್ನನ್ನು ನೋಡಲು ಮಂದರಪರ್ವತಕ್ಕೆ ಬಂದನು.

೧೩. ವಿನೋದಕ್ಕಾಗಿಯೂ, ಕುತೂಹಲದಿಂದಲೂ, ನಿನಗೆ ಪ್ರಿಯವನ್ನುಂಟುಮಾಡುವ ಇಚ್ಛೆಯಿಂದಲೂ ನಾನು ಆತನನ್ನು ಪ್ರಶ್ನೆಮಾಡಿದೆನು. "ಅಯ್ಯಾ ಮಹಾಮುನಿಯೆ! ಒಂದು ಕಲ್ಪಸಂಖ್ಯೆಯ ಇಷ್ಟು ವರ್ಷಗಳನ್ನು ನೀನು ಎಲ್ಲಿ ಕಳೆದೆ?

೧೪. ಯಾವ ಆಶ್ರಮ ಪ್ರದೇಶದಲ್ಲಿ ನೀನು ತಪೋರಾಶಿಯ ಸಂಗ್ರಹವನ್ನು ಮಾಡುತ್ತಿದ್ದೆ? ಯಾವ ತೀರ್ಥಗಳಲ್ಲಿ ತಿರುಗುತ್ತಿದ್ದೆ? ಎಲ್ಲಿ ನಿನಗೆ ಬಹಳ ಕಾಲವಿರಬೇಕೆಂಬ ಅಭಿಲಾಷೆಯಾಯಿತು?

೧೫. ಎಲೈ ಮುನಿಶ್ರೇಷ್ಠನೆ! ನೀನು ಹಿಂದೆ ನೋಡಿರುವ ಅತ್ಯಂತ ಕೌತುಕವಾದ ವಿಷಯವನ್ನು ನನಗೆ ಹೇಳು." ಇಂತೆಂದು ನಾನು ಪ್ರಶ್ನೆಮಾಡಲು ಬ್ರಹ್ಮಮಾನಸಪುತ್ರನಾದ ಆ ಮಹರ್ಷಿಯು ಪತ್ತನದ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದನು.

೧೬–೧೭. ಅಸಂಖ್ಯಾತಗಳಾದ ತೀರ್ಥಗಳನ್ನೂ, ದೇವಾಲಯಗಳನ್ನೂ, ವಿಚಿತ್ರಗಳಾದ ಪತ್ತನಗಳನ್ನೂ, ದೇಶಗಳನ್ನೂ, ನಗರಗಳನ್ನೂ, ತಿರುಗುತ್ತ ಮನೋಹರವಾದ ಜಂಬೂದ್ವೀಪದಲ್ಲಿ ಸಿತ್ಯದಲ್ಲಿಯೂ ಆನಂದವನ್ನುಂಟುಮಾಡುವ ಉತ್ಕೃಷ್ಟವಾದ ಪತ್ತನಶ್ರೇಷ್ಠವೊಂದನ್ನು ನೋಡಿದೆನು.

ಸ್ವೇಚ್ಛಾಕಲ್ಪಿತವಿನ್ಯಾಸಃ ಪ್ರಾಸಾದಶತಕಲ್ಪಿತಃ ।
ಇಚ್ಛಾಕಾಮಫಲಾವಾಪ್ತಿರನಿರ್ದೇಶ್ಯಸುಖಾವಹಃ ॥ ೧೮ ॥
ಸರ್ವರ್ತುಕುಸುಮಾಮೋದಸುಖಸ್ಪರ್ಶಾನಿಲಾವೃತಃ ।
ವೀಣಾವೇಣುರವೈರ್ಘುಷ್ಟೋ ಮನಃಪ್ರಹ್ಲಾದಕಾರಕಃ ॥ ೧೯ ॥
ವಜ್ರೇಂದ್ರನೀಲವೈಡೂರ್ಯಚಂದ್ರಕಾಂತಾದಿದೀಪಿತಃ ।
ಜರಾಮೃತ್ಯುಭಯೋಪೇತಃ ಸರ್ವವ್ಯಾಧಿವಿವರ್ಜಿತಃ ॥ ೨೦ ॥
ಶಕ್ರಾಽಗ್ನಿಯಮರಕ್ಷೋಽಬ್ಧಿವಾಯುಸೋಮೇಶಸೇವಿತಃ ।
ಊರ್ಧ್ವಾಧಃ ಸಪ್ತಲೋಕೇಷು ಪುಣ್ಯೇಷು ನಿವಸಂತಿ ಹಿ ॥ ೨೧ ॥
ಸದಾ ಪ್ರಮುದಿತಾ ದೇವಾಸ್ತೇಽಪಿ ಕಾಂಕ್ಷಂತಿ ಪತ್ತನಂ ।
ತತ್ರ ಶಾಂತಾ ಮಹಾತ್ಮಾನೋ ನಿವಸಂತಿ ಮಹೇಶ್ವರ ॥ ೨೨ ॥
ವಿದ್ಯೋತಿತದಿಶೋ ದಾಂತಾಃ ಸೂರ್ಯವೈಶ್ವಾನರಪ್ರಭಾಃ ।
ದಿವ್ಯಾಂಬರಧರಾ ಧೀರಾ ಜಟಾಮುಕುಟಧಾರಿಣಃ ॥ ೨೩ ॥

---

೧೮. ಆ ಪತ್ತನದ ವಿನ್ಯಾಸವು ಸ್ವೇಚ್ಛೆಯಿಂದಲೇ ಕಲ್ಪಿತವಾದಂತೆ ತೋರುವುದು; ನೂರಾರು ಪ್ರಾಸಾದಗಳಿಂದ ಕೂಡಿರುವುದಲ್ಲದೆ ಇಚ್ಛಿಸಿದ ಕೋರಿಕೆಗಳನ್ನೆಲ್ಲ ಕೊಡುವುದಾಗಿ ಹೇಳಲಳವಿಲ್ಲದ ಸುಖಕ್ಕೆ ನಿಲಯವೆನಿಸಿರುವುದು.

೧೯. ಸರ್ವಕಾಲಗಳ ಹೂವುಗಳ ಸುವಾಸನೆಯಿಂದಲೂ, ಸುಖಸ್ಪರ್ಶವಾದ ತಂಗಾಳಿಯಿಂದಲೂ ಕೂಡಿ ವೀಣೆ, ಕೊಳಲು ಮುಂತಾದುವುಗಳ ಧ್ವನಿಗಳಿಂದ ತುಂಬಿದ್ದು ಮನಸ್ಸಿಗೆ ಆನಂದವನ್ನುಂಟುಮಾಡುತ್ತಿರುವುದು.

೨೦. ವಜ್ರಗಳು, ಇಂದ್ರನೀಲ, ವೈಡೂರ್ಯ, ಚಂದ್ರಕಾಂತಗಳೇ ಮುಂತಾದ ರತ್ನಗಳಿಂದ ಬೆಳಗುತ್ತಿರುವುದು. ಮುಪ್ಪು ಮರಣಗಳ ಭಯವಿಲ್ಲದಿರುವುದು. ಸಕಲ ವ್ಯಾಧಿಗಳಿಂದ ರಹಿತವಾಗಿರುವುದು.

೨೧–೨೨. ಈ ಕ್ಷೇತ್ರವನ್ನು ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಚಂದ್ರ, ಮಹೇಶ್ವರರು ಸೇವಿಸುತ್ತಿರುವರು. ಮೇಲೂ ಕೆಳಗೂ ಏಳೇಳು ಲೋಕಗಳಲ್ಲಿಯೂ ನಿತ್ಯವೂ ಮಹದಾನಂದಭರಿತರಾಗಿ ದೇವತೆಗಳು ವಾಸಿಸುತ್ತಿರುವರಲ್ಲವೆ. ಅವರೂ ಈ ಪತ್ತನದ ವಾಸವನ್ನು ಆಶಿಸುತ್ತಿರುವರು. ಮಹೇಶ್ವರ! ಅಲ್ಲಿ ಪ್ರಶಾಂತಮನಸ್ಕರಾದ ಮಹಾತ್ಮರು ಮಾತ್ರ ವಾಸಮಾಡುತ್ತಿರುವರು.

೨೩. ಅವರು ಸೂರ್ಯ, ಅಗ್ನಿಗಳಿಗೆ ಸಮನಾದ ತೇಜಸ್ಸುಳ್ಳವರಾಗಿ ಹತ್ತು ದಿಕ್ಕುಗಳನ್ನೂ ಬೆಳಗುತ್ತ ಜಿತೇಂದ್ರಿಯರೂ, ದಿವ್ಯವಸ್ತ್ರಧಾರಿಗಳೂ, ನಿರ್ಭಯರೂ. ಜಟಾಮುಕುಟಗಳಿಂದಲಂಕೃತರೂ ಆಗಿರುವರು.

ವಿಪ್ರಾ ಮಹೇಶ್ವರಾಃ ಪುಣ್ಯಾಃ ಕ್ಷತ್ರಿಯಾ ಹರತತ್ಪರಾಃ ।
ಮುಮುಕ್ಷವಸ್ತಪೋನಿಷ್ಠಾ ವೈಶ್ಯಾಃ ಶೂದ್ರಾಶ್ಚಿರಾಯುಷಃ ॥ ೨೪ ॥
ಸ ಶುಭ್ರರೂಪಃ ಸ ಚ ಲೋಹಿತಾಕೃತಿಃ
ಸ ಚಾಽಪಿ ಪೀತಃ ಸ ಸಿತೇತರಃ ಕ್ವಚಿತ್ ।
ಸ ನಾಮಧೇಯಃ ಸ ಚ ನಾಮವರ್ಜ್ಯಃ
ಸೋಽದೃಶ್ಯರೂಪಃ ಸ ಚ ದೃಷ್ಟರೂಪಃ ॥ ೨೫ ॥
ಕ್ವಚಿದ್ರವಿಸಹಸ್ರಾಕ್ಷಃ ಕ್ವಚಿದೇಕರವಿಪ್ರಭಃ ।
ಕ್ವಚಿಚ್ಚಂದ್ರಾದ್ವಿಶಿಷ್ಯೇತ ಕ್ವಚಿದಂಗುಲಿಕಾಂತಿಮಾನ್ ॥ ೨೬ ॥
ಜನ್ಮಮೃತ್ಯು ಜರಾರೋಗೈರ್ದುಃಖಾನಿ ವಿವಿಧಾನಿ ಚ ।
ಪ್ರಯಾಂತಿ ವಿಲಯಂ ತಾನಿ ಪ್ರಸನ್ನೇ ಪತ್ತನೇಶ್ವರೇ ॥ ೨೭ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಪತ್ತನೇಶಸ್ಯ ದೇವಸ್ಯ ಆನಂದೇಶಮತಃ ಶೃಣು ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಪತ್ತನೇಶ್ವರಮಾಹಾತ್ಮ್ಯವರ್ಣನಂ"
ನಾಮ ದ್ವಾತ್ರಿಂಶೋಽಧ್ಯಾಯಃ

---

೨೪. ಬ್ರಾಹ್ಮಣರೆಲ್ಲರೂ ಮಾಹೇಶ್ವರವ್ರತವನ್ನು ಕೈಕೊಂಡ ಪುಣ್ಯವಂತರು. ಕ್ಷತ್ರಿಯರೂ ಶಿವಭಕ್ತಿತತ್ಪರರಾಗಿರುವರು. ವೈಶ್ಯರೂ ಮೋಕ್ಷವನ್ನಿಚ್ಛಿಸಿ ತಪೋನಿಷ್ಠೆಯಲ್ಲಿರುವರು. ಶೂದ್ರರೂ ದೀರ್ಘಾಯುಷ್ಯವಂತರಾಗಿರುವರು.

೨೫–೨೬. ಆ ಪತ್ತನೇಶ್ವರನು ಶುದ್ಧರೂಪನೂ, ಒಮ್ಮೆ ರಕ್ತವರ್ಣದವನೂ, ಹಳದಿಯ ಬಣ್ಣದವನೂ, ಕೆಲವುವೇಳೆ ಕಪ್ಪುಬಣ್ಣದವನೂ, ಆಗಿರುವನು. ಮತ್ತು ಹೆಸರುಳ್ಳವನೂ, ಹೆಸರಿಲ್ಲದವನೂ, ಅದೃಶ್ಯನೂ, ದರ್ಶನಕ್ಕೆ ವಿಷಯನೂ ಆಗಿರುವನು. ಕೆಲವುವೇಳೆ ಸಾವಿರ ಸೂರ್ಯರ ಕಾಂತಿಯಿಂದ ಬೆಳಗುತ್ತಿರುವನು. ಒಮ್ಮೆ ಒಂದೇ ಸೂರ್ಯನಂತಿರುವನು. ಒಮ್ಮೆ ಚಂದ್ರನಿಗಿಂತಲೂ ಹೆಚ್ಚು ಪ್ರಕಾಶವುಳ್ಳವನಾಗಿ ಮರುಕ್ಷಣದಲ್ಲಿಯೇ ಸೂಕ್ಷ್ಮಕಾಂತಿಯುವನಾಗುವನು.

೨೭. ಈ ಪತ್ತನೇಶ್ವರನು ಪ್ರಸನ್ನನಾದ ಮನುಷ್ಯನಿಗೆ ಜನನ, ಮರಣ, ಜರಾ, ರೋಗಗಳ ನಾನಾವಿಧ ದುಃಖಗಳು ಎಲ್ಲವೂ ನಾಶವನ್ನು ಹೊಂದುವುವು.

೨೮. ದೇವಿಯೆ! ಪತ್ತನೇಶ್ವರನ ಚರಿತ್ರೆಯನ್ನು ನಿನಗೆ ಹೇಳಿರುವೆನು. ಈ ಲಿಂಗದ ಪ್ರಭಾವವನ್ನು ಕೇಳುವುದರಿಂದಲೇ ಪಾಪವು ನಾಶವಾಗುವುದು. ಇನ್ನು ಆನಂದೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಪತ್ತನೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯಸ್ತ್ರಿಂಶೋಽಧ್ಯಾಯಃ

## ಆನಂದೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಹರ ಉವಾಚ:—**

**ತ್ರಯಸ್ತ್ರಿಂಶತ್ತಮಂ ದೇವಮಾನಂದೇಶ್ವರಮೀಶ್ವರಂ ।**
**ವಿದ್ಧಿ ಪಾಪಹರಂ ಪುಣ್ಯಂ ಸರ್ವಸಂಪತ್ಕರಂ ಸದಾ ॥ ೧ ॥**
**ಪುರಾ ರಾಥಂತರೇ ಕಲ್ಪೇ ಬಭೂವ ಪೃಥಿವೀಪತಿಃ ।**
**ಅನಮಿತ್ರ ಇತಿ ಖ್ಯಾತಃ ಸಾರ್ವಭೌಮೋ ಮಹೀತಲೇ ॥ ೨ ॥**
**ಸ ಧರ್ಮಾತ್ಮಾ ಮಹಾತ್ಮಾ ಚ ಪರಾಕ್ರಮಧನೋ ನೃಪಃ ।**
**ಅತೀತ್ಯ ಸರ್ವಭೂತಾನಿ ಬಭೌ ಭಾನುರಿವಾಽವ್ಯಯಃ ॥ ೩ ॥**
**ಸಮಃ ಶತ್ರೌ ಚ ಪುತ್ರೇ ಚ ಮಿತ್ರೇ ಚ ಪರಧರ್ಮವಿತ್ ।**
**ಗಿರಿಭದ್ರಾ ಗಿರೇಃ ಪುತ್ರೀ ತೇನೋಢಾ ವರವರ್ಣಿನೀ ॥ ೪ ॥**
**ಅತೀವ ವಲ್ಲಭಾ ಸಾ ಚ ಪ್ರಾಣೇಭ್ಯೋಽಪಿ ಗಿರೀಯಸೀ ।**
**ಆನಂದ ಇತಿ ಪುತ್ರೋಽಭೂತ್ತಸ್ಯ ಜ್ಞಾನರತಃ ಸುಧೀಃ ॥ ೫ ॥**

## ಕನ್ನಡದ ಅನುವಾದ

### ಆನಂದೇಶ್ವರಮಾಹಾತ್ಮ್ಯವರ್ಣನ

೧. ಮಹೇಶ್ವರನು ಹೇಳುತ್ತಾನೆ:—ಮೂವತ್ತಮೂರನೆಯ ಮಹಾಲಿಂಗವೇ ಆನಂದೇಶ್ವರವೆಂಬುದು. ಇದು ಸರ್ವಕಾಲಗಳಲ್ಲಿಯೂ ಪಾಪನಾಶಕವೂ, ಪುಣ್ಯಪ್ರದವೂ, ಸಕಲೈಶ್ವರ್ಯಪ್ರದವೂ ಆಗಿರುವುದು.

೨. ಹಿಂದೆ ರಥಂತರ ಕಲ್ಪದಲ್ಲಿ ಮಹಾರಾಜನೊಬ್ಬನಿದ್ದನು. ಅನಮಿತ್ರನೆಂದು ಪ್ರಖ್ಯಾತನಾದ ಆತನು ಭೂಮಂಡಲದಲ್ಲಿ ಸಾರ್ವಭೌಮನಾಗಿ ರಾಜ್ಯವನ್ನಾಳುತ್ತಿದ್ದನು.

೩. ಆತನು ಧರ್ಮಸಿರತನೂ, ಮಹಾತ್ಮನೂ, ಪರಾಕ್ರಮವೇ ಐಶ್ವರ್ಯವಾಗುಳ್ಳವನೂ ಆಗಿದ್ದನು. ಸಕಲ ಜನರಲ್ಲಿಯೂ ಆತನು ಶ್ರೇಷ್ಠನೆನಿಸಿ ಅಖಂಡಸೂರ್ಯನಂತೆ ಪ್ರಕಾಶಿಸುತ್ತಿದ್ದನು.

೪. ಶತ್ರುವಿನಲ್ಲಿಯೂ, ಪುತ್ರನಲ್ಲಿಯೂ, ಮಿತ್ರನಲ್ಲಿಯೂ ಸಮಬುದ್ಧಿಯುಳ್ಳವನಾಗಿ ಉತ್ತಮ ಧರ್ಮಗಳನ್ನೆಲ್ಲ ತಿಳಿದಿದ್ದನು. ಪರ್ವತೇಶ್ವರನ ಮಗಳಾದ ಗಿರಿಭದ್ರೆಯೆಂಬ ಸರ್ವಾಂಗಸುಂದರಿಯನ್ನು ಆತನು ಮದುವೆಯಾಗಿದ್ದನು.

೫. ಆಕೆಯು ಆತನಿಗೆ ಅತ್ಯಂತ ಪ್ರಿಯಳೂ, ಪ್ರಾಣಗಳಿಗಿಂತಲೂ ಹೆಚ್ಚಿ

ಜಾತಮಾತ್ರೋ ನಿಜೋತ್ಸಂಗೇ ಸ್ಥಿರಮುಲ್ಲಾಪ್ಯ ವೈ ಪುನಃ ।
ಪರಿಷ್ವಜತಿ ಹಾರ್ದೇನ ಉಲ್ಲಾಪಯತಿ ಪುನಃ ಪುನಃ ॥ ೬ ॥
ಸ ಜಾತಿಸ್ಮರಣೋ ಜಾತೋ ಮಾತುರುತ್ಸಂಗಮಾಸ್ಥಿತಃ ।
ಜಹಾಸ ಚ ತದಾ ಮಾತಾ ಸಂಕ್ಷುಬ್ಧಾ ವಾಕ್ಯಮಬ್ರವೀತ್ ॥ ೭ ॥
ಭೀತಾಽಸ್ಮಿ ಕಿಮಿದಂ ವತ್ಸ ಹಾಸೋ ಯದ್ವದನೇ ತವ ।
ಅಕಾಲಬೋಧಃ ಸಂಜಾತಃ ಕಿಂ ಸ್ವಿತ್ಪಶ್ಯಸಿ ಶೋಭನಂ ॥ ೮ ॥
ಇತ್ಯುಕ್ತೋ ಮಾತರಂ ಪ್ರಾಹ ಸರ್ವೋಽಪಿ ಸ್ವಾರ್ಥಮೀಹತೇ ।
ಮಾಂ ನೇತುಮಿಚ್ಛತಿ ಪುರೋ ಮಾರ್ಜಾರೀ ಕಿಂ ನ ಪಶ್ಯಸಿ ।
ಅಂತರ್ಧಾನಗತಾ ಚೇಯಂ ದ್ವಿತೀಯಾ ಜಾತಹಾರಿಣೀ ॥ ೯ ॥
ಪುತ್ರಪ್ರೀತ್ಯಾ ಚ ಮಾತಸ್ತ್ವಮತಃ ಸ್ವಾರ್ಥಂ ಸಮೀಹಸೇ ।
ಉಲ್ಲಾಪ್ಯೋಲ್ಲಾಪ್ಯ ಬಹುಶಃ ಪರಿಷ್ವಜಸಿ ಮಾಂ ಬತ ॥ ೧೦ ॥
ಉದ್ಭೂತೇ ಬಾಲಕೇ ಸ್ನೇಹಾತ್ಸಂಭ್ರಮಾತ್ಸ್ತ್ರೀಜನೋಽಸ್ತ್ಯಯಂ ।
ತತೋಽಯಮಾಗತೋ ಹಾಸಃ ಶೃಣು ಚಾಽಸ್ಯತ್ರ ಕಾರಣಂ ॥ ೧೧ ॥

---

ನವಳೂ ಆಗಿದ್ದಳು. ಆತನಿಗೆ ಜ್ಞಾನನಿರತನೂ, ಕುಶಾಗ್ರಬುದ್ಧಿಯೂ ಆದ ಆನಂದನೆಂಬ ಪುತ್ರನಾದನು.

೬. ಹುಟ್ಟಿದ ಕ್ಷಣದಲ್ಲಿಯೇ ಮಗುವು ತಾಯಿಯ ತೊಡೆಯಮೇಲೆ ಮತ್ತೆ ಮತ್ತೆ ಮುದ್ದುಮಾತುಗಳನ್ನಾಡುತ್ತ ಅಂತಃಕರಣದಿಂದ ತಾಯಿಯನ್ನು ಅಪ್ಪಿಕೊಳ್ಳುತ್ತಿದ್ದಿತು.

೭. ತಾಯಿಯ ಮಡಿಲಲ್ಲಿರುವಾಗಲೇ ಮಗುವು ಹಿಂದಿನ ಜನ್ಮಗಳ ಸ್ಮರಣೆಯುಳ್ಳವನಾದನು. ಅವನು ಗಟ್ಟಿಯಾಗಿ ನಗುತ್ತಿರಲು ತಾಯಿಯು ಕಳವಳಗೊಂಡು ಇಂತೆಂದಳು.

೮. "ಮಗುವೆ! ನನಗೆ ಭಯವಾಗುತ್ತಿರುವುದು. ನಿನ್ನ ಮುಖದಲ್ಲಿ ನಗೆಯು ತೋರುತ್ತಿರಲು ಕಾರಣವೇನು? ಅಕಾಲದಲ್ಲಿಯೇ ನಿನಗೆ ಜ್ಞಾನವುಂಟಾಗಿರುವುದು. ಈಗ ಶುಭವಾವುದನ್ನು ಕಾಣುತ್ತಿರುವೆ?"

೯. ಇಂತೆಂದ ತಾಯಿಗೆ ಆನಂದನು ಹೇಳಿದನು. "ಸಕಲರೂ ಸ್ವಾರ್ಥ ಸಾಧನೆಯಲ್ಲಿಯೇ ತತ್ಪರರಾಗಿರುವರು. ನನ್ನನ್ನು ಸೆಳೆದುಕೊಂಡು ಹೋಗಲು ಮುಂದೆ ನಿಂತಿರುವ ಹೆಣ್ಣುಬೆಕ್ಕು ನಿನಗೆ ಕಾಣುವುದಿಲ್ಲವೆ? ಎರಡನೆಯದಾಗಿ ಜಾತಹಾರಿಣಿಯೆಂಬ ಪಿಶಾಚಿಯು ಅದೃಶ್ಯಳಾಗಿ ಕಾದಿರುವಳು.

೧೦. ತಾಯಿಯೆ! ನೀನೂ ನಿನ್ನ ಪುತ್ರಪ್ರೇಮದ ನೆವದಿಂದ ಸ್ವಾರ್ಥವನ್ನೇ ಬಯಸುತ್ತಿರುವೆ. ಮತ್ತೆ ಮತ್ತೆ ಮಾತನಾಡುತ್ತ ನನ್ನನ್ನು ಆಲಿಂಗಿಸಿಕೊಳ್ಳುತ್ತಿರುವೆಯಲ್ಲವೆ.

೧೧. ಪುತ್ರನು ಹುಟ್ಟಿದ ಮಾತ್ರದಿಂದಲೇ ಸ್ತ್ರೀಯರು ಸ್ನೇಹಸಂಭ್ರಮ

**ಸ್ವಾರ್ಥೇ ಪ್ರಸಕ್ತಾ ಮಾರ್ಜಾರೀ ಲೋಲುಪಾ ಮಾಮವೇಕ್ಷತೇ ।**
**ತಥಾಂತರ್ಧಾನಗಾ ಚೇಯಂ ದ್ವಿತೀಯಾ ಜಾತಹಾರಿಣೀ ॥ ೧೨ ॥**
**ತ್ವಂ ತು ಕ್ರಮೇಣೋಪಭೋಗ್ಯಂ ಮತ್ತಃ ಫಲಮಭೀಪ್ಸಸಿ ।**
**ನ ಮಾಂ ಜಾನಾಸಿ ಕೋಽಪ್ಯೇವಂ ನ ವೈ ಚೋಪಕೃತಂ ಮಯಾ ॥ ೧೩ ॥**
**ಸಂಗತಿರ್ನಾಽತಿಬಾಲಾನಾಂ ಪಂಚಸಪ್ತದಿನಾತ್ಮಕಂ ।**
**ತಥಾಽಪಿ ಸ್ನಿಹ್ಯಸಿ ಪ್ರೀತ್ಯಾ ಪರಿಷ್ವಜಸಿ ಸಂತತಂ ॥ ೧೪ ॥**
**ತಥೇತಿ ವತ್ಸ ಭೋ ಭದ್ರ ಇತ್ಯಲೀಕಂ ಬ್ರವೀಷಿ ಮಾಂ ।**
**ಪುತ್ರಸ್ಯ ವಚನಂ ಶ್ರುತ್ವಾ ಕ್ರುದ್ಧಾ ಮಾತಾಽಬ್ರವೀದಿದಂ ॥ ೧೫ ॥**
**ನಾಽಹಂ ತ್ವಾಮುಪಕಾರಾರ್ಥಂ ವತ್ಸ ಪ್ರೀತ್ಯಾ ಪರಿಷ್ವಜೇ ।**
**ಸ್ವಾರ್ಥೋ ಮಯಾ ಪರಿತ್ಯಕ್ತೋ ಯಸ್ತ್ವತ್ತೋ ಮೇ ಭವಿಷ್ಯತಿ ॥ ೧೬ ॥**
**ಇತ್ಯುಕ್ತ್ವಾ ಸಾ ತಮುತ್ಸೃಜ್ಯ ನಿಷ್ಕ್ರಾಂತಾ ಸೂತಿಕಾಗೃಹಾತ್ ।**
**ಜಹಾರ ತತ್ಪರಿತ್ಯಕ್ತಂ ಸಾ ತದಾ ಜಾತಹಾರಿಣೀ ॥ ೧೭ ॥**

---

ಗಳಿಂದ ಕೂಡಿರುವರು. ಆದುದರಿಂದಲೇ ನನಗೆ ನಗುವು ಬಂದಿತು. ಅದಕ್ಕೆ ಕಾರಣವನ್ನು ಕೇಳು.

೧೨. ಸ್ವಾರ್ಥದಲ್ಲಿಯೇ ನಿರತವಾಗಿ ಮಾಂಸದಾಶೆಯಿಂದ ಈ ಹೆಣ್ಣುಬೆಕ್ಕು ನನ್ನನ್ನು ನೋಡುತ್ತಿರುವುದು. ಹಾಗೆಯೇ ಎರಡನೆಯ ಜಾತಹಾರಿಣಿಯೂ ನನ್ನನ್ನು ಹೊತ್ತುಕೊಂಡುಹೋಗಲು ಕಾದಿರುವುದು.

೧೩. ನೀನಾದರೂ ಮುಂದೆ ನನ್ನಿಂದ ಕ್ರಮವಾಗಿ ಸೌಖ್ಯವು ಲಭಿಸುವುದೆಂದು ಆಶೆಗೊಳ್ಳುತ್ತಿರುವೆ. ನಾನು ಯಾರೆಂಬುದನ್ನು ನೀನು ತಿಳಿಯೆ. ನನ್ನಿಂದ ನಿನಗೆ ಯಾವ ಉಪಕಾರವೂ ಆಗಿರುವುದಿಲ್ಲ.

೧೪. ಐದು, ಏಳು ದಿವಸಗಳ ಮಕ್ಕಳುಗಳೊಡನೆ ಸಹಾವಾಸವೆಂಬುದಿಲ್ಲವಷ್ಟೆ. ಹಾಗಾದರೂ ಪ್ರೀತಿಯನ್ನೂ, ಸ್ನೇಹವನ್ನೂ ನನ್ನಲ್ಲಿ ತೋರಿಸುತ್ತ ಆಲಿಂಗಿಸುತ್ತಿರುವೆಯಲ್ಲ!

೧೫. 'ತಾತ! ಮಗನೆ! ಚಿರಂಜೀವಿಯೆ!' ಮುಂತಾಗಿ ಮಿಥ್ಯಾಪ್ರೇಮದಿಂದಲೇ ನನ್ನನ್ನು ಕರೆಯುತ್ತಿರುವೆ." ಇಂತೆಂದ ಮಗನ ಮಾತನ್ನು ಕೇಳಿ ತಾಯಿಯು ಕೋಪಗೊಂಡು ಮಾತನಾಡಿದಳು.

೧೬. "ಮಗುವೆ! ನೀನು ಮುಂದೆ ಮಾಡುವ ಉಪಕಾರಕ್ಕಾಗಲಿ, ಪ್ರೀತಿಯಿಂದಾಗಲಿ ನಾನು ನಿನ್ನನ್ನು ಆಲಿಂಗಿಸಲಿಲ್ಲ. ಮುಂದಕ್ಕೆ ನಿನ್ನಿಂದ ಆಗಬಹುದಾದ ಸುಖಗಳಲ್ಲಿ ಇಗೋ ನನ್ನ ಸ್ವಾರ್ಥವನ್ನು ತ್ಯಜಿಸಿರುವೆನು."

೧೭. ಹೀಗೆಂದು ತಾಯಿಯು ಮಗುವನ್ನು ತ್ಯಜಿಸಿ ಸೂತಿಕಾಗೃಹದಿಂದ ಹೊರಟುಹೋದಳು. ತಾಯಿಯಿಲ್ಲದ ಆ ಮಗುವನ್ನು ರಾಕ್ಷಸಿಯಾದ ಜಾತಹಾರಿಣಿಯು ಆ ಕ್ಷಣದಲ್ಲಿಯೇ ಅಪಹರಿಸಿದಳು.

ಸಾ ಹೃತ್ವಾ ತಂ ತದಾ ಬಾಲಂ ಪೂರ್ವಜಾತಿಸ್ಮರಂ ಪ್ರಿಯೇ ।
ಹೈಮಿನ್ಯಾಃ ಶಯನೇ ನ್ಯಸ್ಯದ್ವಿಕ್ರಾಂತಸ್ಯ ಮಹೀಭೃತಃ ॥ ೧೮ ॥
ಮತ್ವಾ ಸ್ವಕೀಯಂ ಪುತ್ರಂ ತು ವಿಕ್ರಾಂತೇನ ಮಹೀಭೃತಾ ।
ಕೃತಂ ವೈ ನಾಮಕರಣಮಾನಂದ ಇತಿ ವಿಶ್ರುತಂ ॥ ೧೯ ॥
ವಿಕ್ರಾಂತಸ್ಯ ಸುತೋ ನೀತೋ ಬೋಧಸ್ಯ ಚ ದ್ವಿಜನ್ಮನಃ ।
ಚೈತ್ರನಾಮಾಕೃತಸ್ತೇನ ಸಂಸ್ಕೃತೋ ವೇದಮಂತ್ರಕೈಃ ॥ ೨೦ ॥
ತೃತೀಯಂ ಭಕ್ಷಯಾಮಾಸ ಬೋಧಪುತ್ರಂ ನಿಶಾಚರೀ ।
ಜಾತಿಸ್ಮರೋಽಪ್ಯಥಾನಂದಃ ಕೃತೋಪನಯನಸ್ತದಾ ॥ ೨೧ ॥
ಗುರುಣಾ ಸಮನುಜ್ಞಾತಂ ಕ್ರಿಯತಾಮಭಿವಾದನಂ ।
ಜನನ್ಯಾಃ ಸ್ಪ್ರಾಗುಪಸ್ಥಾನಮಿತ್ಯುಕ್ತೋ ವಾಕ್ಯಮಬ್ರವೀತ್ ॥ ೨೨ ॥
ವಂದ್ಯಾ ಮೇ ಕತಮಾ ಮಾತಾ ಜನಿತ್ರೀ ಪಾಲಿನೀ ಚ ವಾ ।
ಆನಂದಸ್ಯ ವಚಃ ಶ್ರುತ್ವಾ ಗುರುರ್ವಚನಮಬ್ರವೀತ್ ॥ ೨೩ ॥
ನನ್ವಿಯಂ ತೇ ಮಹಾಭಾಗ ಜನಿತ್ರೀ ಜನಕಾತ್ಮಜಾ ।
ವಿಕ್ರಾಂತಸ್ಯಾಗ್ರಮಹಿಷೀ ಹೈಮಿನೀ ನಾಮ ನಾಮತಃ ॥ ೨೪ ॥

---

೧೮. ಪಾರ್ವತಿಯೆ! ಪೂರ್ವಜನ್ಮಸ್ಮರಣ ಸಹಿತನಾಗಿದ್ದ ಆ ಬಾಲಕನನ್ನು ತೆಗೆದುಕೊಂಡು ಹೋಗಿ ವಿಕ್ರಾಂತನೆಂಬ ಮಹಾರಾಜನ ಮಡದಿಯಾದ ಹೈಮಿನಿಯ ಪರ್ಯಂಕದಲ್ಲಿ ಮಲಗಿಸಿದಳು.

೧೯. ವಿಕ್ರಾಂತನೆಂಬ ಮಹಾರಾಜನು ಆ ಬಾಲಕನನ್ನು ತನ್ನ ಮಗನೆಂದೇ ಬಗೆದು ಆನಂದನೆಂದು ನಾಮಕರಣವನ್ನು ಮಾಡಿದನು.

೨೦–೨೧. ವಿಕ್ರಾಂತನಿಗೆ ಆಗತಾನೆ ಹುಟ್ಟಿದ್ದ ಗಂಡುಮಗುವನ್ನು ಜಾತಹಾರಿಣಿಯು ಬೋಧನೆಂಬ ಬ್ರಾಹ್ಮಣನ ಮನೆಗೆ ತೆಗೆದುಕೊಂಡು ಹೋದಳು. ಆತನು ಮಗುವಿಗೆ ವೇದೋಕ್ತ ಮಂತ್ರಗಳಿಂದ ಜಾತಕರ್ಮಾದಿಗಳನ್ನು ಮಾಡಿ ಚೈತ್ರನೆಂದು ಹೆಸರನ್ನಿಟ್ಟನು. ಮೂರನೆಯ ಮಗುವಾದ ಬೋಧಬ್ರಾಹ್ಮಣನ ಮಗುವನ್ನು ಆ ರಾಕ್ಷಸಿಯು ತಿಂದುಹಾಕಿದಳು. ಜಾತಿಸ್ಮರನಾದ ಆನಂದನು ಕ್ರಮವಾಗಿ ಉಪನಯನ ಸಂಸ್ಕಾರವನ್ನು ಪಡೆದನು.

೨೨. ಗುರುಕುಲವಾಸಕ್ಕೆ ಹೊರಡುವುದಕ್ಕೆ ಮುಂಚೆ ಗುರುವು ಬಾಲಕನನ್ನು ಕುರಿತು, "ನಿನ್ನ ತಾಯಿಗೆ ನಮಸ್ಕಾರ ಮಾಡು" ಎಂದು ಅಪ್ಪಣೆಮಾಡಲು ಬಾಲಕನಿಂತೆಂದನು.

೨೩. "ನಾನು ಯಾವ ತಾಯಿಗೆ ನಮಸ್ಕಾರ ಮಾಡಲಿ? ಹಡೆದವಳಿಗೊ ಅಥವ ಸಾಕಿದವಳಿಗೊ?" ಆನಂಪನ ಮಾತನ್ನುಕೇಳಿ ಗುರುವು ಹೇಳತೊಡಗಿದನು.

೨೪. ಮಹಾತ್ಮನೆ! ಜನಕರಾಜನ ಮಗಳೂ ವಿಕ್ರಾಂತನ ಪಟ್ಟಮಹಿಷಿಯೂ ಆದ ಈ ಹೈಮಿನೀದೇವಿಯು ನಿನ್ನನ್ನು ಪಡೆದ ತಾಯಿಯಲ್ಲವೆಂದು ಹೇಳುವೆಯ?

ಆನಂದ ಉವಾಚ :—

ಚೈತ್ರಸ್ಯ ಪ್ರಸವಿತ್ರೀಯಂ ಚೈತ್ರೋಽಯಂ ದ್ವಿಜವೇಶ್ಮನಿ ।
ಸಂಸ್ಕೃತೋ ಬ್ರಾಹ್ಮಣೈರ್ಮಂತ್ರೈರ್ಗಿರಿಭದ್ರಾಸುತಸ್ತ್ವಹಂ ॥ ೨೫ ॥
ಗುರುರಾಹ ತತಃ ಕಸ್ತ್ವಂ ಚೈತ್ರಃ ಕೋವಾ ತ್ವಯೋಚ್ಯತೇ ।
ತತಃ ಸ ಕಥಯಾಮಾಸ ಪೂರ್ವವೃತ್ತಾಂತಮಾದಿತಃ ॥ ೨೬ ॥

ಗುರುರುವಾಚ :—

ಅತೀವ ಗಹನಂ ವತ್ಸ ಸಂಕಟಂ ಮಹದಾಗತಂ ।
ನ ವೇದ್ಮಿ ಕಿಂಚಿನ್ಮೋಹೇನ ಭ್ರಮಂತಿ ಮಮ ಬುದ್ಧಯಃ ॥ ೨೭ ॥

ಆನಂದ ಉವಾಚ :—

ಮೋಹಸ್ಯಾಽವಸರಃ ಕೋಽತ್ರ ಜಗತ್ಯೇವಂ ವ್ಯವಸ್ಥಿತಃ ।
ಕಃ ಕಸ್ಯ ಪುತ್ರೋ ವಿಪ್ರರ್ಷೇ ಕೋ ವಾ ಕಸ್ಯ ನ ಬಾಂಧವಃ ॥ ೨೮ ॥
ಅತಃ ಸಂಸಾರತಾ ಹಂತಿ ಸಂಸಾರಂ ಪ್ರಾಣಿನಾಮಿಹ ।
ಮಹಾಮೋಹಹತಂ ಚೇತಶ್ಚಿತ್ರಮತ್ರ ಕಥಂ ಗುರೋ ॥ ೨೯ ॥
ಬ್ರಹ್ಮಪುತ್ರಸ್ಯ ದುಷ್ಟಸ್ಯ ದುಃಸಹಸ್ಯ ಸುತಾ ಭುವಿ ।
ಜಾತಹಾರಿಣಿಕಾನಾಮ ಪರಿವರ್ತಯತೇ ಸುತಾನ್ ॥ ೩೦ ॥

---

೨೫. ಆನಂದನು ಹೇಳುತ್ತಾನೆ:—ಈಕೆಯು ನಿಜವಾಗಿ ಚೈತ್ರನನ್ನು ಪಡೆದವಳು. ಆ ಚೈತ್ರನು ಬ್ರಾಹ್ಮಣನ ಮನೆಯಲ್ಲಿ ವೇದಮಂತ್ರಗಳಿಂದ ಸಂಸ್ಕಾರವನ್ನು ಪಡೆದಿರುವನು. ನಾನು ನಿಜವಾಗಿಯೂ ಗಿರಿಭದ್ರಾದೇವಿಯ ಮಗನು.

೨೬. ಗುರುವು ಹೇಳಿದನು. ಹಾಗಾದರೆ ನೀನು ಯಾರು? ನೀನು ಹೇಳಿದ ಈ ಚೈತ್ರನು ಯಾರು? ಆಗ ಆನಂದನು ಸಕಲ ವೃತ್ತಾಂತವನ್ನೂ ಆಮೂಲಾಗ್ರವಾಗಿ ಹೇಳಿದನು.

೨೭. ಗುರುವು ಹೇಳುತ್ತಾನೆ:—ಮಗನೆ! ಈಗ ಅತ್ಯಂತ ಕಷ್ಟತರವೂ, ದುರ್ಭೇದ್ಯವೂ ಆದ ಸಂಕಟವೊದಗಿರುವುದು. ನಾನೇನನ್ನೂ ತಿಳಿಯಲಾರೆ. ಮೋಹದಿಂದ ನನ್ನ ಬುದ್ಧಿಯು ಭ್ರಮೆಗೊಳ್ಳುತ್ತಿರುವುದು.

೨೮. ಆನಂದನು ಹೇಳುತ್ತಾನೆ:—ಎಲೈ ಬ್ರಾಹ್ಮಣೋತ್ತಮನೆ! ಇದರಲ್ಲಿ ಮೋಹವುಂಟಾಗಲು ಕಾರಣವೇನು! ಲೋಕದ ವ್ಯವಸ್ಥೆಯೇ ಈ ವಿಧವಾಗಿರುವುದು. ಯಾರು ಯಾರಿಗೆ ಮಗನು? ಯಾರು ಯಾರಿಗೆ ಬಂಧುವಾಗಿಲ್ಲ?

೨೯. ಆದುದರಿಂದ ಪ್ರಾಣಿಗಳ ಸಂಸಾರವಾದ ಸ್ವರೂಪವನ್ನು ಸಂಸಾರವೇ ನಾಶಮಾಡುವುದು. ಮನುಷ್ಯನ ಚಿತ್ತವು ಮಹಾ ಮೋಹದಿಂದ ಹತವಾಗಿರುವುದು. ಗುರುವರ್ಯನೆ! ಇದರಲ್ಲಿ ಆಶ್ಚರ್ಯವೇನು?

೩೦. ಬ್ರಹ್ಮಬಂಧುವೂ, ದುಷ್ಟನೂ, ಸಹಿಸಲಶಕ್ಯನೂ ಆದ ಜನರ ಮಕ್ಕಳನ್ನು ಜಾತಹಾರಿಣಿಯೆಂಬ ರಾಕ್ಷಸಿಯು ವಿನಿಮಯಿಸುತ್ತಿರುವಳು.

ಮಾತೃದ್ವಯಂ ಮಯಾ ಪ್ರಾಪ್ತಮಸ್ಮಿನ್ನೇವ ಹಿ ಜನ್ಮನಿ ।
ಮಾತೃದ್ವಯಮಭೋ ಪ್ರಾಪ್ತಂ ಜಾತಿಂ ಸಂಸ್ಮರತಾ ಸತಾ ॥ ೩೧ ॥
ಸೋಽಹಂ ತಪಃ ಕರಿಷ್ಯಾಮಿ ಚೈತ್ರ ಆನೀಯತಾಮಿತಿ ।
ತತಃ ಸುವಿಸ್ಮಿತೋ ರಾಜಾ ಸಭಾರ್ಯಃ ಸಹ ಬಂಧುಭಿಃ ॥ ೩೨ ॥
ತಸ್ಮಾನ್ನಿವರ್ತ್ಯ ಮಮತಾಮನುಮೇನೇ ಚ ತಂ ಪ್ರತಿ ।
ಚೈತ್ರಮಾನೀಯ ತನಯಂ ರಾಜ್ಯಯೋಗ್ಯಂ ಚಕಾರ ಹ ॥ ೩೩ ॥
ಸನ್ಮಾನ್ಯ ಬ್ರಾಹ್ಮಣಂ ಯೇನ ಪುತ್ರಬುದ್ಧ್ಯಾ ಸ ಪಾಲಿತಃ ।
ಸೋಽಪ್ಯಾನಂದಸ್ತಪಸ್ತೇಪೇ ಮಹಾಕಾಲವನೇ ಶುಭೇ ॥ ೩೪ ॥
ಇಂದ್ರೇಶ್ವರಸ್ಯ ದೇವಸ್ಯ ಪಶ್ಚಿಮೇ ಲಿಂಗಮುತ್ತಮಂ ।
ಭಕ್ತ್ಯಾ ಹ್ಯಾರಾಧಯಾಮಾಸ ತಪಸಾ ದುಷ್ಕರೇಣ ತು ॥ ೩೫ ॥
ತಪಸ್ಯಂತಂ ತತಸ್ತಂ ತು ದೇವಃ ಪ್ರಾಹ ಶುಚಿಸ್ಮಿತೇ ।
ಕಿಮರ್ಥಂ ತಪ್ಯಸೇ ವತ್ಸ ತಪಸ್ತೀವ್ರಂ ಬ್ರವೀಮಿ ತೇ ॥ ೩೬ ॥

---

೩೧. ಈ ಒಂದು ಜನ್ಮದಲ್ಲಿಯೇ ನಾನು ಇಬ್ಬರು ತಾಯಿಯರನ್ನು ಪಡೆದೆನು. ಪೂರ್ವಜನ್ಮದ ಸ್ಮರಣೆಯ ಭಾಗ್ಯವುಳ್ಳ ನನಗೂ ಮಾತೃದ್ವಯವು ಪ್ರಾಪ್ತವಾಯಿತು.

೩೨. ಆದುದರಿಂದ ನಾನು ತಪಸ್ಸನ್ನು ಮಾಡಲು ತೆರಳುವೆನು. ನೀವು ಚೈತ್ರನನ್ನು ಕರೆದುಕೊಂಡು ಬನ್ನಿರಿ.'' ಈ ಮಾತನ್ನು ಕೇಳಿ ರಾಜನೂ, ಆತನ ಹೆಂಡತಿಯೂ, ಬಂಧುಜನಗಳೂ ಅತ್ಯಂತ ವಿಸ್ಮಿತರಾದರು.

೩೩. ಮತ್ತು ರಾಜನು ಆತನಲ್ಲಿ ತನ್ನ ಮಮತೆಯನ್ನು ದೂರಗೊಳಿಸಿ ಅನುಮತಿಯನ್ನಿತ್ತನು. ಚೈತ್ರನನ್ನು ಕರೆದುತಂದು ಮಗನಾದ ಅವನನ್ನೇ ರಾಜ್ಯಯೋಗ್ಯನನ್ನಾಗಿ ಮಾಡಿದನು.

೩೪. ಮತ್ತು ಹುಡುಗನನ್ನು ಮಗನೆಂಬ ಪ್ರೀತಿಯಿಂದ ಇಷ್ಟುದಿನವೂ ಸಲಹಿದ್ದ ಬ್ರಾಹ್ಮಣನಿಗೆ ಉಚಿತ ಮರ್ಯಾದೆಯನ್ನು ಮಾಡಿದನು. ಆ ಆನಂದನೂ ಪವಿತ್ರಕ್ಷೇತ್ರವಾದ ಆನಂದವನದಲ್ಲಿ ತಪಸ್ಸನ್ನಾಚರಿಸಿದನು.

೩೫. ಇಂದ್ರೇಶ್ವರನಿಗೆ ಪಶ್ಚಿಮದಿಕ್ಕಿನಲ್ಲಿರುವ ಒಂದು ಮಹಾಲಿಂಗವನ್ನು ಭಕ್ತಿಯಿಂದಲೂ ದುಸ್ಸಾಧ್ಯವಾದ ತಪಸ್ಸಿನಿಂದಲೂ ನಿತ್ಯವೂ ಪೂಜಿಸುತ್ತಿದ್ದನು.

೩೬. ಶುಚಿಸ್ಮಿತೆಯೆ! ಇಂತು ತಪಸ್ಸನ್ನು ಮಾಡುತ್ತಿರುವ ಆತನಿಗೆ ಮಹಾದೇವನು ಹೇಳಿದನು. ''ವತ್ಸ! ನೀನು ಈ ತೀವ್ರತರವಾದ ತಪಸ್ಸನ್ನಾಚರಿಸುತ್ತಿರುವೆಯೇಕೆ? ನಾನು ಹೇಳುವುದನ್ನು ಕೇಳು.

ಮನುನಾ ಭವತಾ ಭಾವ್ಯಂ ಷಷ್ಠೇನ ವ್ರಜ ತತ್ಕುರು ।
ಅಲಂ ತೇ ತಪಸಾ ತಸ್ಮಿಂಸ್ತತೋ ಮುಕ್ತಿಮವಾಪ್ಸ್ಯಸಿ ॥ ೩೭ ॥
ಇತ್ಯುಕ್ತೋ ದೇವದೇವೇನ ತಥೇತ್ಯಾಹ ಮಹಾಮತಿಃ ।
ಬಭೂವ ಸ ಮನುರ್ದೇವಿ ಬ್ರಹ್ಮತುಲ್ಯೋ ಮಹಾಯಶಾಃ ॥ ೩೮ ॥
ಪುತ್ರಾನುತ್ಪಾದಯಾಮಾಸ ಲಿಂಗಸ್ಯಾಸ್ಯ ಸಮರ್ಚನಾತ್ ।
ಕೃತಂ ನಾಮ ತದಾ ದೇವೈರಾನಂದೇಶ್ವರಮುತ್ತಮಂ ॥ ೩೯ ॥
ಆನಂದೇನ ಯತಃ ಪ್ರಾಪ್ತಾ ಸಿದ್ಧಿರ್ದೇವಿ ಸುದುರ್ಲಭಾ ।
ಅತೋ ನಾಮ ಸುವಿಖ್ಯಾತಮಾನಂದೇಶ್ವರಮಾಖ್ಯಾತಾಂ ॥ ೪೦ ॥
ಯೇ ಪಶ್ಯಂತಿ ವಿಶಾಲಾಕ್ಷಿ ಆನಂದೇಶ್ವರಮೀಶ್ವರಂ ।
ತೇ ಪುತ್ರಪೌತ್ರಸಂಪನ್ನಾ ಭವಿಷ್ಯಂತಿ ಮಹೀತಲೇ ॥ ೪೧ ॥
ಯೇಷಾಂ ಕ್ಷೀಣಂ ನೃಣಾಂ ಪಾಪಂ ಕೋಟಿಜನ್ಮಶತೋದ್ಭವಂ ।
ತೇಷಾಂ ಭವತಿ ಸಾ ಭಕ್ತಿರಾನಂದೇಶ್ವರದರ್ಶನಾತ್ ॥ ೪೨ ॥

---

೩೭. ಮುಂದೆ ನೀನು ಆರನೆಯ ಮನುವಾಗಬೇಕಾದವನು. ಇನ್ನು ನಡೆ. ಅದಕ್ಕೆ ಸಾಧನೆಯನ್ನು ಮಾಡಿಕೊ. ನಿನ್ನ ತಪಸ್ಸನ್ನು ಕೊನೆಗಾಣಿಸು. ಆ ಜನ್ಮದಲ್ಲಿ ನಿನಗೆ ಮೋಕ್ಷವುಂಟಾಗುವುದು.''

೩೮. ಇಂತೆಂದ ಮಹೇಶ್ವರನಿಗೆ ಮಹಾಪ್ರಾಜ್ಞನಾದ ಆನಂದನು ಹಾಗೆಯೇ ಆಗಲೆಂದನು. ದೇವಿಯೆ! ಕಾಲಕ್ರಮದಲ್ಲಿ ಆತನೇ ಬ್ರಹ್ಮನಿಗೆ ಸಮಾನನೂ ಮಹಾಕೀರ್ತಿಸಂಪನ್ನನೂ ಆದ ಮನುವಾಗಿ ಅವತರಿಸಿದನು.

೩೯. ಅವನು ಈ ಮಹಾಲಿಂಗದ ಪೂಜೆಯಿಂದಲೇ ಅನೇಕ ಪುತ್ರರನ್ನೂ ಪಡೆದನು. ಆಗಲೇ ದೇವತೆಗಳು ಈ ಉತ್ತಮಲಿಂಗಕ್ಕೆ ಆನಂದೇಶ್ವರವೆಂದು ಹೆಸರಿಟ್ಟರು.

೪೦. ದೇವಿಯೆ! ಆನಂದನಿಗೆ ಅತ್ಯಂತ ದುರ್ಲಭವಾದ ಸಿದ್ಧಿಯೂ ಇಲ್ಲಿ ದೊರೆತುದರಿಂದಲೇ ಈ ಲಿಂಗಕ್ಕೆ ಆನಂದೇಶ್ವರವೆಂದು ಪ್ರಖ್ಯಾತವಾದ ನಾಮಧೇಯವುಂಟಾಯಿತೆಂದು ತಿಳಿ.

೪೧. ವಿಶಾಲಾಕ್ಷಿಯೆ! ಯಾರು ಆನಂದೇಶ್ವರಮಹಾಲಿಂಗದ ದರ್ಶನವನ್ನು ಮಾಡುವರೊ, ಅವರು ಭೂಲೋಕದಲ್ಲಿ ಪುತ್ರಪೌತ್ರಾದಿ ಸಂಪದದಿಂದ ಕೂಡಿದವರಾಗುವರು.

೪೨. ಯಾವ ಮಾನವರಿಗೆ ನೂರಾರು ಕೋಟಿ ಜನ್ಮಗಳಲ್ಲಿ ಆರ್ಜಿಸಿದ ಪಾಪರಾಶಿಯು ನಶಿಸಿರುವುದೊ, ಅವರಿಗೆ ಮಾತ್ರ ಆನಂದೇಶ್ವರನ ದರ್ಶನದಿಂದ ಭಕ್ತಿಯುಂಟಾಗುವುದು.

ತದೈವ ಪುರುಷೋ ಮುಕ್ತೋ ಜನ್ಮಮೃತ್ಯುಜರಾದಿಭಿಃ ।
ಯದಾ ಪಶ್ಯತಿ ದೇವೇಶಮಾನಂದೇಶ್ವರಸಂಜ್ಞಕಂ ॥ ೪೩ ॥
ಮಯೋಕ್ತಂ ಮುಕ್ತಿದಂ ನೃಣಾಮಾನಂದೇಶ್ವರದರ್ಶನಂ ।
ಸ್ವರ್ಗಾಽಪವರ್ಗದಂ ದೇವಮಾನಂದಂ ಲಿಂಗಮುತ್ತಮಂ ।
ಅತ್ರ ದೇವೈರ್ವಿಶಾಲಾಕ್ಷಿ ಪೂಜಿತಂ ಲಿಂಗಮುತ್ತಮಂ ॥ ೪೪ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಆನಂದೇಶ್ವರದೇವಸ್ಯ ಶೃಣು ತ್ವಂ ಕಂಥಡೇಶ್ವರಂ ॥ ೪೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಆನಂದೇಶ್ವರಮಾಹಾತ್ಮ್ಯವರ್ಣನಂ"
ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

೪೩. ಯಾವಾಗ ಮನುಷ್ಯನಾದವನು ಆನಂದೇಶ್ವರನಾಮಕವಾದ ಆ ಮಹಾಲಿಂಗವನ್ನು ನೋಡುವನೊ, ಆಗ ಮಾತ್ರವೆ ಅವನಿಗೆ ಜನನಮರಣ ಜರಾದಿಗಳು ಕಳೆದು ಮೋಕ್ಷವು ಲಭಿಸುವುದು.

೪೪. ನನ್ನಿಂದ ಹೇಳಲ್ಪಟ್ಟ ಈ ಆನಂದೇಶ್ವರನ ದರ್ಶನವು ಜನರಿಗೆ ಮೋಕ್ಷಪ್ರದವಾದುದು. ಈ ಉತ್ತಮಲಿಂಗವು ಸ್ವರ್ಗಮೋಕ್ಷಗಳೆರಡನ್ನೂ ಕೊಡುವುದಾಗಿರುವುದು. ಎಲೌ ವಿಶಾಲಾಕ್ಷಿಯೆ! ಈ ಮಹಾಲಿಂಗವು ದೇವತೆಗಳಿಂದಲೂ ಪೂಜೆಯನ್ನು ಕೈಗೊಳ್ಳುತ್ತಿರುವುದು.

೪೫. ದೇವಿಯೆ! ಆನಂದೇಶ್ವರಮಹಾಲಿಂಗದ ಪ್ರಭಾವದ ಪಾಪನಾಶಕವಾದ ಚರಿತ್ರೆಯನ್ನು ಹೇಳಿರುವೆನು. ಇನ್ನು ಕಂಥಡೇಶ್ವರದೇವನ ಚರಿತ್ರೆಯನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಆನಂದೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಸ್ತ್ರಿಂಶೋಽಧ್ಯಾಯಃ

### ಕಂಥಡೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಹರ ಉವಾಚ :—**

**ಚತುಸ್ತ್ರಿಂಶತ್ತಮಂ ವಿದ್ಧಿ ದೇವಂ ವೈ ಕಂಥಡೇಶ್ವರಂ ।**
**ಯಸ್ಯ ದರ್ಶನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥ ೧ ॥**
**ವಿತಸ್ತಾಯಾಸ್ತಟೇ ರಮ್ಯೇ ಬ್ರಾಹ್ಮಣೋ ನಿವಸನ್ಪುರಾ ।**
**ಬಭೂವ ಪಾಂಡವೋನಾಮ ದರಿದ್ರೇಣಾತಿಪೀಡಿತಃ ॥ ೨ ॥**
**ಜ್ಞಾತಿಭಿಶ್ಚ ಪರಿತ್ಯಕ್ತೋ ದುಷ್ಟಯಾ ಭಾರ್ಯಯಾ ತಥಾ ।**
**ಕಂಥಾಪ್ಯೇಕಾ ಸ್ಥಿತಾ ಯಸ್ಯ ಸರ್ವಸ್ವಪ್ರೇಮಧಾರಿಣೀ ॥ ೩ ॥**
**ತೇನಾಽಹಂ ಸುತಕಾಮೇನ ತೋಷಿತೋ ಗಿರಿಗಹ್ವರೇ ।**
**ಮಯಾಽಪ್ಯುಕ್ತಂ ವಿಶಾಲಾಕ್ಷಿ ಪುತ್ರಸ್ತವ ಭವಿಷ್ಯತಿ ॥ ೪ ॥**
**ತಸ್ಯ ಪುತ್ರಃ ಸಮುತ್ಪನ್ನಃ ಕಂಥಾಮಧ್ಯಾದಯೋನಿಜಃ ।**
**ಶೀತೋಷ್ಣವಾರಿಣೀ ಕಂಥಾ ತಸ್ಯ ಪುತ್ರಸ್ಯ ಸಾಽಭವತ್ ॥ ೫ ॥**

---

### ಕನ್ನಡದ ಅನುವಾದ

#### ಕಂಥಡೇಶ್ವರಮಾಹಾತ್ಮ್ಯವರ್ಣನ

೧. ಮಹೇಶ್ವರನು ಹೇಳುತ್ತಾನೆ :—ಮೂವತ್ತನಾಲ್ಕನೆಯದೇ ಕಂಥಡೇಶ್ವರ ಮಹಾಲಿಂಗವೆಂದು ತಿಳಿ. ಅದರ ದರ್ಶನಮಾತ್ರದಿಂದಲೇ ಮನುಷ್ಯನು ಸಮಸ್ತ ಪಾತಕಗಳಿಂದಲೂ ಮುಕ್ತನಾಗುವನು.

೨. ಹಿಂದೆ ವಿತಸ್ತಾನದಿಯ ತೀರದಲ್ಲಿ ಬ್ರಾಹ್ಮಣನೊಬ್ಬನು ವಾಸಮಾಡುತ್ತಿದ್ದನು. ಪಾಂಡವನಾಮಕನಾದ ಆತನು ದಾರಿದ್ರ್ಯದಿಂದ ಬಹಳವಾಗಿ ಸಂಕಟಪಡುತ್ತಿದ್ದನು.

೩. ಆತನು ಜ್ಞಾತಿಗಳಿಂದಲೂ ದುಷ್ಟಳಾದ ಪತ್ನಿಯಿಂದಲೂ ಪರಿತ್ಯಕ್ತನಾಗಿದ್ದನು. ಆತನಿಗಿದ್ದ ಜೋಳಿಗೆಯೊಂದೇ ಆತನ ಸಕಲ ಪ್ರೀತಿಗೂ ಆಧಾರವಾಗಿದ್ದಿತು.

೪. ಪುತ್ರಕಾಮನಾಗಿ ಆತನು ಬೆಟ್ಟಗಳಲ್ಲಿಯೂ, ಗವಿಗಳಲ್ಲಿಯೂ ತಪಸ್ಸನ್ನಾಚರಿಸಿ ನನ್ನನ್ನು ಸಂತೋಷಗೊಳಿಸಿದನು. ವಿಶಾಲಾಕ್ಷಿಯೆ ! ನಾನೂ ಸಹ "ನಿನಗೆ ಒಬ್ಬ ಪುತ್ರನಾಗುವನು" ಎಂಬುದಾಗಿ ಅನುಗ್ರಹವನ್ನಿತ್ತೆನು.

೫. ಆತನ ಕಂಥೆಯ ಮಧ್ಯದಿಂದ ಅಯೋನಿಜನಾದ ಒಬ್ಬ ಪುತ್ರನು ಆವಿರ್ಭವಿಸಿದನು. ಆ ಕಂಥೆಯೇ ಆತನನ್ನು ಚಳಿಬಿಸಿಲುಗಳಿಂದ ಕಾಪಾಡುವ ಸಾಧನವಾಯಿತು.

ಸ ಚ ಲಬ್ಧಃ ಪ್ರಸಾದೇನ ಮದೀಯೇನ ವರಾನನೇ ।
ರುದ್ರೇಣ ಚ ವರೋ ದತ್ತಃ ಕಂಥಾಯಾ ಭವಿತಾ ಪುನಃ ॥ ೬ ॥
ಅಥ ಷಷ್ಠೇ ಗತೇ ವರ್ಷೇ ಮೌಂಜೀಬಂಧಮಚಿಂತಯತ್ ।
ತದಾಯಂತ್ರ್ಯ ಮುನೀನ್ ಸರ್ವಾನ್ಪ್ರಸಾದ್ಯ ಚ ಪುನಃ ಪುನಃ ।
ನಮಸ್ಕೃತ್ಯ ಋಷೀನ್ ಸರ್ವಾನ್ಪೂಜಯಾಮಾಸ ಭಕ್ತಿತಃ ॥ ೭ ॥
ಫಲೈರ್ವಿತ್ತಾನುಸಾರೇಣ ಮೌಂಜೀ ತಸ್ಯಾಽಪ್ಯಬಂಧತ ।
ತೇಽಪ್ಯುಕ್ತಾ ಮುನಯಃ ಸರ್ವೇ ಪ್ರಸಾದ್ಯ ಚ ಪುನಃ ಪುನಃ ॥ ೮ ॥
ದೀಯತಾಮಾಶಿಷೋ ಹ್ಯಸ್ಮೈ ಪುತ್ರಾಯ ಮುನಿಸತ್ತಮಾಃ ।
ಮಮಾಪುತ್ರಸ್ಯ ಪುತ್ರೋಽಯಂ ದೀರ್ಘಾಯುರ್ಜಾಯತಾಂ ಚಿರಂ ॥ ೯ ॥
ತೂಷ್ಣೀಂಭೂತಾಃ ಸ್ಥಿತಾಃ ಸರ್ವೇ ತಚ್ಛ್ರುತ್ವಾ ನೋತ್ತರಂ ದದುಃ ।
ಯದಾ ತೇ ನೋತ್ತರಂ ಪ್ರೋಚುಸ್ತದಾ ಮುನಿವರಃ ಸ್ವಯಂ ।
ಧ್ಯಾನೇನ ಚಿಂತಯಾಮಾಸ ನೂನಮಲ್ಪಾಯುಷಂ ಸುತಂ ॥ ೧೦ ॥
ಇತಿ ಜ್ಞಾತ್ವಾ ತು ಸಂಮೋಹಮಗಮತ್ಸಹಸಾ ಮುನಿಃ ।
ವಿಲಲಾಪ ಸದುಃಖಾರ್ತಃ ಸುತಸ್ನೇಹೇನ ದುಃಖಿತಃ ॥ ೧೧ ॥

---

೬. ರುದ್ರನ ವರಪ್ರಸಾದದಿಂದ ಲಭಿಸಿದ ಆತನು ಕಂಥೆಯಿಂದುದ್ಭವಿಸಿದನು. ಮಂಗಳಾನನೆಯೆ! ಅವನು ನನ್ನ ಪ್ರಸಾದದಿಂದಲೇ ಹುಟ್ಟಿ ಕಂಥನೆನಿಸಿಕೊಂಡನು.

೭. ಬಾಲಕನಿಗೆ ಆರನೆಯ ವರ್ಷವು ಕಳೆಯಲು ತಂದೆಯು ಉಪನಯನವನ್ನು ಮಾಡಲೆಳಸಿದನು. ಆಗ ಸಕಲಮುನಿಗಳನ್ನೂ ಕರೆಯಿಸಿ ಪುನಃ ಪುನಃ ಅವರನ್ನು ಸುಮುಖರನ್ನಾಗಿ ಮಾಡಿಕೊಂಡು, ಅವರೆಲ್ಲರಿಗೂ ನಮಸ್ಕರಿಸಿ ಭಕ್ತಿಯಿಂದ ಅತಿಥಿಪೂಜೆಗಳನ್ನು ಮಾಡಿ ಸತ್ಕರಿಸಿದನು.

೮. ತನ್ನ ವಿಭವಕ್ಕನುಸಾರವಾಗಿ ಫಲಾದಿಗಳಿಂದ ವಟುವಿಗೆ ಮೌಂಜೀಬಂಧನವೂ ನಡೆಯಿತು. ತಂದೆಯು ಸಕಲಮುನಿಗಳನ್ನೂ ಪ್ರಸನ್ನೀಕರಿಸಿಕೊಂಡು ಪ್ರಾರ್ಥಿಸಿದನು.

೯. "ಮುನಿಸತ್ತಮರಿರಾ! ಈ ಬಾಲಕನಿಗೆ ನಿಮ್ಮ ಕೃಪಾಪೂರ್ವಕಗಳಾದ ಆಶೀರ್ವಾದಗಳನ್ನು ಮಾಡಿರಿ. ಅಪುತ್ರನಾಗಿದ್ದ ನನ್ನ ಈ ಪುತ್ರನು ದೀರ್ಘಾಯುವಾಗಿ ಬಾಳಲಿ.

೧೦. ಅದನ್ನು ಕೇಳಿ ಅವರೆಲ್ಲರೂ ಸುಮ್ಮನಾಗಿ ಯಾವ ಉತ್ತರವನ್ನೂ ಕೊಡಲಿಲ್ಲ. ಅವರು ನಿರುತ್ತರರಾದುದನ್ನು ಕಂಡು ಆ ಬ್ರಾಹ್ಮಣೋತ್ತಮನು ಧ್ಯಾನಾಸಕ್ತನಾಗಿ ಮಗನು ಅಲ್ಪಾಯುಷ್ಯವಂತನಾಗಿರುವುದನ್ನು ತಿಳಿದನು.

೧೧. ಇದನ್ನು ತಿಳಿದುಕೊಂಡು ಆ ಕ್ಷಣದಲ್ಲಿಯೇ ಆತನು ಮೂರ್ಛೆ

ಬ್ರಾಹ್ಮಣ ಉವಾಚ :–

ದತ್ತಃ ಸ್ವಯಂ ಮಹೇಶೇನ ಮಮಾಲ್ಪಾಯುಃ ಕಥಂ ಸುತಃ ।
ರುದ್ರೇಣ ಚ ವರೋ ದತ್ತಃ ಪ್ರಸನ್ನೇನ ಪುರಾ ಮಮ ॥ ೧೨ ॥
ಮತ್ತುಲ್ಯವೀರ್ಯಃ ಪುತ್ರಸ್ತೇ ಕಂಥಾಮಧ್ಯಾದ್ಭವಿಷ್ಯತಿ ।
ಜಾತಂ ಚ ದತ್ವಾ ಹ್ಯಲ್ಪಾಯುಂ ಮಿಥ್ಯಾ ತ್ರ್ಯಕ್ಷಸ್ಯ ತದ್ವಚಃ ॥ ೧೩ ॥
ಪಿತರಂ ದುಃಖಿತಂ ದೃಷ್ಟ್ವಾ ತೂಷ್ಣೀಂಭೂತೋ ಮುನಿಸ್ತದಾ ।
ಸ ಬಾಲಃ ಸಹಸಾ ವಾಕ್ಯಂ ಬಭಾಷೇ ಹರ್ಷವರ್ಧನಂ ॥ ೧೪ ॥
ತ್ಯಜತ ಭಯಮಿದಾನೀಂ ಯನ್ಮದರ್ಥೇ ವಿಷಣ್ಣಾ
ವಿನಿಹತನಿಜಯತ್ನಂ ಪ್ರೇತರಾಜಂ ಕರೋಮಿ ।
ಶೃಣುತ ಮಮ ಗಿರಂ ಭೋಃ ಸೇಶ್ವರಾ ಲೋಕಪಾಲಾಃ
ಪಿತೃಪತಿವಿಜಯಾರ್ಥಂ ಸತ್ಪ್ರತಿಜ್ಞಾ ಮಮೈಷಾ ॥ ೧೫ ॥
ಅತಿವಿಷಮತಪೋಭಿಃ ಶಂಕರಂ ತೋಷಯಿತ್ವಾ
ಸ್ವಪಿತುರಪಿ ಚ ಭಕ್ತ್ಯಾ ಹನ್ಮಿ ಮೃತ್ಯೋರ್ಜಯಾಶಾಂ ।

---

ಯನ್ನು ಹೊಂದಿದನು. ಮಗನ ಮೇಲಿನ ಮಮತೆಯಿಂದ ದುಃಖಾಕ್ರಾಂತನಾಗಿ ಪ್ರಲಾಪವನ್ನು ಮಾಡಿದನು.

೧೨. ಬ್ರಾಹ್ಮಣನು ಹೇಳುತ್ತಾನೆ:—ನನಗೆ ಮಹೇಶ್ವರನು ತಾನೇ ಅನುಗ್ರಹಿಸಿದ ಮಗನು ಹೇಗೆ ಅಲ್ಪಾಯುವಾಗುವನು? ಹಿಂದೆ ರುದ್ರದೇವನೇ ಪ್ರಸನ್ನನಾಗಿ ನನಗೆ ವರವನ್ನಿತ್ತನಲ್ಲವೆ.

೧೩. "ನನಗೆ ಸಮಾನನಾಗಿ ಪರಾಕ್ರಮಿಯಾದ ಮಗನೊಬ್ಬನು ನಿನಗೆ ಕಂಥೆಯ ಮಧ್ಯದಿಂದ ಹುಟ್ಟುವನು" ಎಂದು ಹೇಳಿದ ಆತನ ಮಾತು ಅಲ್ಪಾಯುಷ್ಯವಂತನಾದ ಇವನು ಹುಟ್ಟಿದುದರಿಂದ ಕೇವಲ ಮಿಥ್ಯಾವಚನವೇ ಆಯಿತು.

೧೪. ಇಂತು ದುಃಖಿಸುತ್ತಿರುವ ತಂದೆಯನ್ನು ಕಂಡು ಇಲ್ಲಿಯವರೆಗೂ ಮಾತನಾಡದಿದ್ದ ಆ ಮುನಿಕುಮಾರನು ತಂದೆಯ ಆನಂದವನ್ನು ಹೆಚ್ಚಿಸುತ್ತ ಇಂತೆಂದನು.

೧೫. "ನನಗಾಗಿ ನೀವೇಕೆ ವಿಷಾದಗೊಳ್ಳುತ್ತೀರಿ? ನಿಮ್ಮ ಭಯವನ್ನು ತ್ಯಜಿಸಿರಿ. ಪ್ರೇತರಾಜನಾದ ಆ ಯಮನ ಪ್ರಯತ್ನಗಳೆಲ್ಲವೂ ನಿಷ್ಫಲಗಳಾಗುವಂತೆ ಮಾಡುವೆನು. ಈಶ್ವರಸಹಿತರಾದ ಲೋಕಪಾಲಕರಿರಾ! ನನ್ನ ಮಾತುಗಳನ್ನು ಕೇಳಿರಿ. ಯಮಧರ್ಮರಾಜನನ್ನು ಜಯಿಸುವುದಕ್ಕಾಗಿ ನಾನು ಈ ಪ್ರತಿಜ್ಞೆಯನ್ನು ಮಾಡುತ್ತಿದ್ದೇನೆ.

೧೬. ಅತ್ಯಂತ ದುಸ್ತರವಾದ ತಪಸ್ಸಿನಿಂದ ಮಹೇಶ್ವರನನ್ನು ಸಂತೋಷಗೊಳಿಸಿ ತಂದೆಯಲ್ಲಿರುವ ಭಕ್ತಿಯಿಂದಲೂ, ಮೃತ್ಯುದೇವತೆಯ ಜಯಾಶೆಯನ್ನು

ಕಿಮತಿಶಯವಿಷಾದವ್ಯಾಕುಲಾಸ್ತಾತ ಸರ್ವೇ
ಸಪದಿ ಪಿತೃಪತಿಂ ತಂ ಸ್ವೇ ವಶೇ ಸ್ಥಾಪಯಾಮಿ ॥ ೧೬ ॥
ಪ್ರಯಾಮಿ ರುದ್ರಂ ಶರಣಂ ಮಹೇಶ್ವರಂ
ದೇವಂ ವರಂ ಚಾಽಪ್ಯುಮಯಾಽವಿಹೀನಂ ।
ಶೃಣ್ವಂತು ಸರ್ವೇ ಮುನಯಃ ಸಮಂತಾ
ನ್ನ ಮಾದೃಶೇ ಮೃತ್ಯುಪರಾಭವೋಽಸ್ತಿ ॥ ೧೭ ॥
ತಪೋಭಿರುಗ್ರೈಃ ಶಿತಿಕಂಠಪಾದೌ
ಪ್ರಸಾದ್ಯ ಮೃತ್ಯುಂ ನ ಚಿರಾದ್ವಿನೇಷ್ಯೇ ।
ಕಂಥಾಜವಾಕ್ಯಾಽಮೃತಲೋಲನೇತ್ರಾಃ
ಸಂಜಾತರೋಮಾಂಚಲಸತ್ಸ್ವದೇಹಾಃ ॥ ೧೮ ॥
ಪಪ್ರಚ್ಛುರೇನಂ ಮುನಯಃ ಶಿಶುಂ ತಂ
ಜಾನಾಸಿ ರುದ್ರಂ ಪರಮಂ ಕಥಂ ತ್ವಂ ।
ವಯಂ ಚಿರಂ ಕಾಲಮುಪಾಸಮಾನಾ
ಸ್ತಪೋಭಿರುಗ್ರೈರ್ವ್ರತಸಂಚಯೈಶ್ಚ ॥ ೧೯ ॥

---

ಭಗ್ನಗೊಳಿಸುವೆನು. ತಂದೆಯೆ! ಎಲ್ಲರೂ ಅತಿಯಾಗಿ ವಿಷಾದದಿಂದೇಕೆ ವ್ಯಾಕುಲರಾಗಿರುವರು? ನಿಮಿಷಮಾತ್ರದಲ್ಲಿ ಆ ಯಮನನ್ನು ನನ್ನ ವಶದಲ್ಲಿ ನಿಲ್ಲಿಸಿಕೊಳ್ಳುವೆನು.

೧೭. ಭಯಂಕರನೂ, ಮಹೇಶ್ವರನೂ, ದೇವಾಧಿದೇವನೂ, ಉಮಾ ಸಮೇತನೂ ಆದ ಸ್ವಾಮಿಯನ್ನು ಶರಣುಹೋಗುತ್ತೇನೆ. ಮುನಿಗಳಿರಾ! ನೀವೆಲ್ಲರೂ ಕೇಳಿರಿ. ಎಂದಿಗೂ ನನ್ನಂತಹವರಲ್ಲಿ ಮೃತ್ಯುವಿಗೆ ಸೋಲುವುದೆಂಬ ಮಾತೇ ಇಲ್ಲ.

೧೮. ಉಗ್ರವಾದ ತಪಸ್ಸಿನಿಂದ ಸ್ವಲ್ಪಕಾಲದಲ್ಲಿಯೇ ಪರಮೇಶ್ವರನ ಪಾದ ಕಮಲಗಳನ್ನುಪ್ರಸನ್ನೀಕರಿಸಿಕೊಂಡು ಮೃತ್ಯುಗಂಡವನ್ನು ಕಳೆದುಕೊಳ್ಳುವೆನು.'' ಇಂತೆಂದ ಕಂಥಪುತ್ರನ ವಾಕ್ಯಾಮೃತದಿಂದ ಅರಳಿದ ಕಣ್ಣುಗಳುಳ್ಳ ಆ ಮುನಿಗಳೆಲ್ಲರೂ ದೇಹಗಳಲ್ಲಿ ರೋಮಾಂಚಗಳನ್ನು ತಳೆದರು.

೧೯. ಮುನಿಗಳು ಬಾಲಕನಾದ ಆತನನ್ನು ಪ್ರಶ್ನೆಮಾಡಿದರು. ''ಪರಾತ್ಪರನಾದ ಮಹಾದೇವನನ್ನು ನೀನು ಹೇಗೆ ಬಲ್ಲೆ? ನಾವು ಬಹಳಕಾಲದಿಂದಲೂ ಉಗ್ರತಪಸ್ಸುಗಳಿಂದಲೂ, ವ್ರತಸಮೂಹಗಳಿಂದಲೂ ಆತನನ್ನು ಉಪಾಸನೆ ಮಾಡುತ್ತಿರುವೆವು.

ತಥಾಽಪಿ ವಿದ್ಮೋ ನ ವಯಂ ಮಹೇಶಂ
ಜ್ಞಾತಸ್ತ್ವಯಾಽಸೌ ಕಥಮರ್ಭಕೇಣ ।
ಈಹಾಮಹೇ ತಂ ಕಿಲ ಪುತ್ರ ಸಮ್ಯ
ಕ್ಛ್ರೋತುಂ ಪ್ರಹರ್ಷಾದ್ಭುತಜಾತರೋಮಾಃ ॥ ೨೦ ॥
ಜ್ಞಾತಸ್ತ್ವಯಾ ಕುತ್ರ ಕಥಂ ಮಹೇಶೋ ।
ಮಹೇಶ್ವರೋ ವೈ ಭುವನೈಕನಾಥಃ ॥ ೨೧ ॥
ಇತಿ ತೇಷಾಂ ವಚಃ ಶ್ರುತ್ವಾ ಮುನೀನಾಂ ಭಾವಿತಾತ್ಮನಾಂ ।
ಸ ಬಾಲಃ ಕಥಯಾಮಾಸ ವೃತ್ತಾಂತಂ ಪರ್ವತಾತ್ಮಜೇ ॥ ೨೨ ॥
ಮಮಾಽತ್ರ ಕ್ರೀಡತಃ ಸಿದ್ಧಃ ಸಿದ್ಧಿದಃ ಸಮುಪಾಗತಃ ।
ವಿಜ್ಞಾಯಾಲ್ಪಾಯುಷಂ ಮಾಂ ತು ವಾತ್ಸಲ್ಯಾದಬ್ರವೀದಿದಂ ॥ ೨೩ ॥
ಗಚ್ಛ ಪುತ್ರ ಮಮಾದೇಶಾನ್ಮಹಾಕಾಲವನೋತ್ತಮೇ ।
ದಕ್ಷಿಣೇ ಚಾಽಸ್ತಿ ಯಲ್ಲಿಂಗಮಾನಂದೇಶ್ವರಲಿಂಗತಃ ॥ ೨೪ ॥
ತಮಾರಾಧಯ ಶೀಘ್ರಂ ತ್ವಂ ಚಿರಂಜೀವೀ ಭವಿಷ್ಯಸಿ ।
ತಸ್ಯೋಪದೇಶದಾನೇನ ಜ್ಞಾತಂ ಸಮ್ಯಙ್ಮಹೇಶ್ವರಾತ್ ॥ ೨೫ ॥

---

೨೦. ಹಾಗಾದರೂ ನಾವು ಮಹೇಶ್ವರನನ್ನು ಯಥಾರ್ಥವಾಗಿ ತಿಳಿಯಲಿಲ್ಲ. ಕೇವಲ ಬಾಲಕನಾದ ನೀನು ಆತನನ್ನು ತಿಳಿದುದು ಹೇಗೆ! ಆನಂದದಿಂದ ನಮಗೆ ವೈನವಿರೇಳುತ್ತಿರುವುವು. ಮಗುವೆ! ನಿನ್ನ ಚರಿತ್ರೆಯನ್ನೆಲ್ಲ ಕೇಳಲು ಬಹಳ ಕುತೂಹಲವುಳ್ಳವರಾಗಿರುವೆವು.

೨೧. ಸರ್ವೇಶ್ವರನೂ, ಹದಿನಾಲ್ಕು ಲೋಕಗಳಿಗೆ ಏಕಾಧಿಪತಿಯೂ ಆದ ಮಹೇಶ್ವರನು ನಿನಗೆ ತಿಳಿದುದು ಹೇಗೆ?"

೨೨. ಪರ್ವತರಾಜಪುತ್ರಿಯೆ! ಇಂತೆಂದ ಆತ್ಮಜ್ಞಾನನಿರತರಾಗಿದ್ದ ಆ ಮುನಿಗಳ ಮಾತನ್ನು ಕೇಳಿ ಆ ಬಾಲಕನು ತನ್ನ ವೃತ್ತಾಂತವನ್ನು ಹೇಳಿದನು.

೨೩. ನಾನಿಲ್ಲಿಯೇ ಆಡಿಕೊಂಡಿರಲು ಸಕಲಸಿದ್ಧಿಪ್ರದನಾದ ಸಿದ್ಧನೊಬ್ಬನು ಇಲ್ಲಿಗೆ ಬಂದನು. ನಾನು ಅಲ್ಪಾಯುವೆಂಬುದನ್ನು ತಿಳಿದು ವಾತ್ಸಲ್ಯದಿಂದ ಇಂತೆಂದನು.

೨೪. "ಪುತ್ರನೆ! ನನ್ನ ಅಪ್ಪಣೆಯಂತೆ ನೀನು ಉತ್ತಮವಾದ ಮಹಾಕಾಲವನಕ್ಷೇತ್ರಕ್ಕೆ ಹೋಗು. ಅಲ್ಲಿ ಆನಂದೇಶ್ವರಲಿಂಗದ ದಕ್ಷಿಣದಿಕ್ಕಿನಲ್ಲಿ ಒಂದು ಮಹಾಲಿಂಗವಿರುವುದು.

೨೫–೨೬. ನೀನು ಬೇಗನೆ ಹೋಗಿ ಅದನ್ನು ಪೂಜಿಸಲು ಚಿರಂಜೀವಿಯಾಗುವೆ." ಆತನ ಉಪದೇಶಭಾವದಿಂದಲೇ ನನಗೆ ಈ ತತ್ತ್ವವು ತಿಳಿಯಿತು. ಮೂರು ಲೋಕಗಳಲ್ಲಿಯೂ ಮಹೇಶ್ವರನನ್ನು ಮೀರಿಸಿದ ದೈವವೇ ಇಲ್ಲವು.

ನಾಽನ್ಯೋ ದೇವೋಽಸ್ತಿ ಲೋಕೇಷು ಸತ್ಯಂ ಸತ್ಯಂ ಮುನೀಶ್ವರಾಃ ।
ತಸ್ಮಾದದ್ಯೈವ ಯಾಸ್ಯಾಮಿ ಮಹಾಕಾಲವನೇ ಶುಭೇ ॥ ೨೬ ॥
ಲಿಂಗಮಾರಾಧಯಿಷ್ಯಾಮಿ ವಿಷಾದಸ್ತ್ಯಜ್ಯತಾಮಿಹ ।
ತಸ್ಯ ತದ್ವಚನಂ ಶ್ರುತ್ವಾ ತೇನ ಸಾರ್ಧಂ ಮಹರ್ಷಯಃ ॥ ೨೭ ॥
ಪಿತಾ ಚ ವಿಸ್ಮಿತೋ ದೇವಿ ಸರ್ವ ಏವ ಸಮಾಗತಾಃ ।
ದೇವಮಾರಾಧಯಾಮಾಸ ಬಾಲಃ ಕಾಲಜಿಘಾಂಸಯಾ ॥ ೨೮ ॥
ಲಿಂಗಮಧ್ಯಾತ್ತತೋ ವಾಣೀ ನಿಃಸೃತಾ ಪರ್ವತಾತ್ಮಜೇ ।
ಅಹೋ ತುಷ್ಟೋಽಸ್ಮಿ ತೇ ವತ್ಸ ಕಂ ಕಾಮಂ ಪ್ರದದಾಮ್ಯಹಂ ॥ ೨೯ ॥

ಬಾಲ ಉವಾಚ :—

ಯದಿ ತುಷ್ಟೋಽಸಿ ಮೇ ದೇವ ಯೇ ತ್ವಾಂ ಪಶ್ಯಂತಿ ಶಂಕರ ।
ಪಾಪಕಂಥಾವಿನಿರ್ಮುಕ್ತಾಸ್ತೇ ಸಂತು ಚಿರಜೀವನಃ ॥ ೩೦ ॥
ಬಾಲಸ್ಯ ಭಾಷಿತಂ ಶ್ರುತ್ವಾ ಲಿಂಗೇನೋಕ್ತಂ ಯಶಸ್ವಿನಿ ।
ಯೇ ಚ ಮಾಂ ಪೂಜಯಿಷ್ಯಂತಿ ಶ್ರದ್ಧಯಾ ಪರಯಾ ಯುತಾಃ ।
ತೇ ಭವಿಷ್ಯಂತಿ ಸತತಂ ಜರಾಮರಣವರ್ಜಿತಾಃ ॥ ೩೧ ॥

---

ಮುನೀಶ್ವರರಿರಾ! ಈ ಮಾತು ಸತ್ಯವು. ಆದುದರಿಂದ ಪವಿತ್ರವಾದ ಮಹಾಕಾಲವನಕ್ಕೆ ಈಗಲೇ ಹೊರಡುತ್ತೇನೆ.

೨೭–೨೮. ಆ ಲಿಂಗವನ್ನು ಪೂಜಿಸುತ್ತೇನೆ. ಇನ್ನು ನಿಮ್ಮ ವಿಷಾದವನ್ನು ಬಿಟ್ಟುಬಿಡಿರಿ.'' ದೇವಿಯೇ! ಬಾಲಕನ ಆ ಮಾತುಗಳನ್ನು ಕೇಳಿ ಆತನೊಡನೆ ಮಹರ್ಷಿಗಳೂ ವಿಸ್ಮಿತನಾದ ತಂದೆಯೂ ಎಲ್ಲರೂ ಕೂಡಿಯೇ ಹೊರಟರು. ಬಾಲಕನು ಅಲ್ಲಿ ಯಮನನ್ನು ಜಯಿಸುವ ಅಪೇಕ್ಷೆಯಿಂದ ಮಹಾಲಿಂಗವನ್ನು ಆರಾಧಿಸಿದನು.

೨೯. ಪರ್ವತಕುಮಾರಿಯೆ! ಆಗ ಲಿಂಗದ ಮಧ್ಯದಿಂದ ಒಂದು ವಾಣಿಯು ಹೊರಟಿತು. ''ವತ್ಸನೆ! ನಿನ್ನಲ್ಲಿ ಸಂತುಷ್ಟನಾಗಿರುವೆನು. ಯಾವ ಅಭಿಲಾಷೆಯನ್ನು ನೆರವೇರಿಸಿ ಕೊಡಲಿ?''

೩೦. ಬಾಲಕನು ಹೇಳುತ್ತಾನೆ:—''ದೇವದೇವನೆ! ನೀನು ಸಂತೋಷಗೊಂಡಿರುವೆಯಾದರೆ ನಿನ್ನನ್ನು ನೋಡುವವರೆಲ್ಲರೂ ತಮ್ಮ ಪಾಪರಾಶಿಯೆಂಬ ಕಂಥೆಯನ್ನು ಕಳೆದುಕೊಂಡು ಚಿರಂಜೀವಿಗಳಾಗಿ ಬಾಳಲಿ.''

೩೧. ಮಂಗಳೆಯೆ! ಬಾಲಕನ ಮಾತನ್ನು ಕೇಳಿ ಆ ಮಹಾಲಿಂಗವು ಹೇಳಿತು. '' ಯಾರು ಅತ್ಯಂತ ಶ್ರದ್ಧಾಳುಗಳಾಗಿ ನನ್ನ ಪೂಜೆಯನ್ನು ಮಾಡುವರೊ, ಅವರು ಎಂದಿಗೂ ಮುಪ್ಪು ಸಾವುಗಳಿಲ್ಲದವರಾಗುವರು.

ಲಪ್ಸ್ಯಂತೇ ಪರಮಾನ್ಕಾಮಾನ್ಭವಿಷ್ಯಂತಿ ಗಣೋತ್ತಮಾಃ ।
ಪೂಜ್ಯಾಃ ಸರ್ವೇಷು ಲೋಕೇಷು ಸರ್ವಾಲಂಕಾರಭೂಷಿತಾಃ ॥ ೩೨ ॥
ಏವಂ ಲಬ್ಧವರಃ ಕಂಥಃ ಪ್ರಾಂಜಲಿಃ ಸಮುಪಸ್ಥಿತಃ ।
ಲಿಂಗೇನೋಕ್ತಃ ಪ್ರಸನ್ನೇನ ಭೂಯೋ ವರಯ ಸುವ್ರತ ॥ ೩೩ ॥
ವರೋ ವೈ ದುರ್ಲಭೋ ಲೋಕೇ ದೇವದಾನವಗುಹ್ಯಕೈಃ ।
ಮಯಾಽವತಾರಿತೋ ಯಸ್ಮಾನ್ನಾಽಸ್ತ್ಯದೇಯಂ ತವಾಽಧುನಾ ॥ ೩೪ ॥
ಬಾಲೇನೋಕ್ತೋ ಮಹಾದೇವ ಯದಿ ದೇಯೋ ವರಃ ಪುನಃ ।
ಮನ್ನಾಮ್ನಾ ದೇವ ತೇ ಖ್ಯಾತಿರ್ಭೂಯಾತ್ತ್ರಿಭುವನೇ ಭುವಿ ॥ ೩೫ ॥
ಏವಮಸ್ತ್ವಿತಿ ಲಿಂಗೇನ ಪ್ರೋಕ್ತಂ ತುಷ್ಟೇನ ಪಾರ್ವತಿ ।
ತದಾಪ್ರಭೃತಿ ದೇವೇಶೋ ವಿಖ್ಯಾತಃ ಕಂಥಡೇಶ್ವರಃ ।
ಯಸ್ಯ ದರ್ಶನಮಾತ್ರೇಣ ಚಿರಾಯುರ್ಜಾಯತೇ ನರಃ ॥ ೩೬ ॥
ಯಃ ಸಮೀಕ್ಷ್ಯತಿ ತಲ್ಲಿಂಗಂ ಕಂಥಡೇಶ್ವರಮೀಶ್ವರಂ ।
ಪಾಪಕಂಥಾವಿನಿರ್ಮುಕ್ತೋ ಮುಕ್ತಿಂ ಯಾಸ್ಯತಿ ಗೌರಿ ಸಃ ॥ ೩೭ ॥

---

೩೨. ಪರಮಾಭಿಲಾಷೆಗಳನ್ನೆಲ್ಲ ಪಡೆಯುವರು. ನನ್ನ ಗಣಗಳಲ್ಲಿ ನಾಯಕರಾಗುವರು. ಸರ್ವಾಲಂಕಾರಭೂಷಿತರಾಗಿ ಸಮಸ್ತ ಲೋಕಗಳಲ್ಲಿಯೂ ಪೂಜಾರ್ಹರಾಗಿರುವರು.''

೩೩. ಇಂತು ವರವನ್ನು ಪಡೆದ ಕಂಥನು ಕೈಗಳನ್ನು ಮುಗಿದುಕೊಂಡು ನಿಂತಿರಲು ಆ ಲಿಂಗವು ಮತ್ತೆ ಪ್ರಸನ್ನವಾಗಿ, ''ಎಲೈ ವ್ರತನಿಷ್ಠನೆ! ಮತ್ತೊಂದು ವರವನ್ನು ಕೇಳಿಕೊ'' ಎಂದಿತು.

೩೪. ''ಲೋಕದಲ್ಲಿ ದೇವತೆಗಳು, ದಾನವರು, ಗುಹ್ಯಕರು ಮುಂತಾದವರಿಗೂ ನನ್ನಿಂದ ವರವು ಅತ್ಯಂತ ದುರ್ಲಭವಾಗಿರುವುದು. ನೀನು ನನ್ನಿಂದ ಅವತರಿಸಿರುವುದರಿಂದ ನಿನಗೆ ಕೊಡಬಾರದ ವರವು ಯಾವುದೂ ಇರುವುದಿಲ್ಲ.''

೩೫. ಬಾಲಕನು ಹೇಳುತ್ತಾನೆ:—''ಮಹಾದೇವನೆ! ಪುನಃ ನನಗೆ ಮತ್ತೊಂದು ವರವನ್ನು ಕೊಡುವೆಯಾದರೆ ಕೇಳುವೆನು. ಮೂರು ಲೋಕಗಳಲ್ಲಿಯೂ ನನ್ನ ಹೆಸರಿನಿಂದಲೇ ನಿನಗೆ ಪ್ರಖ್ಯಾತಿಯುಂಟಾಗಲಿ.''

೩೬. ಪಾರ್ವತಿಯೇ! ಲಿಂಗವು ಸಂತೋಷದಿಂದ ಹಾಗೆಯೇ ಆಗಲೆಂದು ಹೇಳಿತು. ಅಂದಿನಿಂದ ಆ ಮಹಾದೇವನು ಕಂಥಡೇಶ್ವರನೆಂದೇ ಪ್ರಖ್ಯಾತನಾದನು. ಅದನ್ನು ನೋಡುವ ಮಾತ್ರದಿಂದಲೇ ಮಾನವನು ದೀರ್ಘಾಯುವಾಗುವನು.

೩೭. ಗೌರಿಯೆ! ಕಂಥಡೇಶ್ವರವೆಂಬ ಆ ಮಹಾಲಿಂಗವನ್ನು ಯಾವ

ಪುಣ್ಯಂ ಯಶಸ್ಯಂ ಗೇಯಂ ತಲ್ಲಿಂಗಂ ಪಾಪಪ್ರಣಾಶನಂ ।
ಪುನಾತಿ ಪಾತಕಾನ್ಸರ್ವಾನ್ಮಮ ನಾಮನೋಽನುಕೀರ್ತನಾತ್ ॥ ೩೮ ॥
ತೇಽಧನ್ಯಾಃ ಪುರುಷಾ ಲೋಕೇ ತೇಷಾಂ ಜನ್ಮ ನಿರರ್ಥಕಂ ।
ಯೈರ್ನ ದೃಷ್ಟೋ ಮಹಾಕಾಲೇ ದೇವೋಽಸೌ ಕಂಥಡೇಶ್ವರಃ ॥ ೩೯ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಕಂಥಡೇಶ್ವರದೇವಸ್ಯ ಇಂದ್ರೇಶ್ವರಮಥೋ ಶೃಣು ॥ ೪೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕಂಥಡೇಶ್ವರಮಾಹಾತ್ಮ್ಯವರ್ಣನಂ"
ನಾಮ ಚತುಸ್ತ್ರಿಂಶೋಽಧ್ಯಾಯಃ

---

ನರನು ನೋಡುವನೊ, ಅವನು ತನ್ನ ಪಾಪದ ಮೂಟೆಯನ್ನೆಲ್ಲ ಕಳೆದುಕೊಂಡು ಮೋಕ್ಷಪದವಿಯನ್ನು ಹೊಂದುವನು.

೩೮. ಆ ಲಿಂಗವು ಪುಣ್ಯಪ್ರದವೂ, ಕೀರ್ತಿಕರವೂ, ಸ್ತೋತ್ರಾರ್ಹವೂ, ಪಾಪಪರಿಹಾರಕವೂ ಆಗಿರುವುದು. ನನ್ನ ಹೆಸರಿನ ಕೀರ್ತನದಿಂದ ಸಕಲ ಪಾತಕಗಳನ್ನೂ ಕಳೆಯುವುದು.

೩೯. ಮಹಾಕಾಲವನದಲ್ಲಿರುವ ಈ ಕಂಥಡೇಶ್ವರಮಹಾಲಿಂಗವನ್ನು ಯಾರು ನೋಡಿಲ್ಲವೊ, ಆ ಪುರುಷರೇ ಪಾಪಿಗಳು. ಅವರ ಜನ್ಮಗಳೇ ನಿರರ್ಥಕಗಳು.

೪೦. ದೇವಿಯೆ! ಇಂತು ಕಂಥಡೇಶ್ವರ ಮಹಾದೇವನ ಪಾಪಪರಿಹಾರಕ ವಾದ ಮಾಹಾತ್ಮ್ಯವನ್ನು ನಿನಗೆ ಹೇಳಿದೆನು. ಇನ್ನು ಇಂದ್ರೇಶ್ವರನ ಚರಿತ್ರೆ ಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕಂಥಡೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚತ್ರಿಂಶೋಽಧ್ಯಾಯಃ

## ಇಂದ್ರೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ :—

ಪಂಚತ್ರಿಂಶತ್ತಮಂ ದೇವಮಿಂದ್ರೇಶ್ವರಮನುತ್ತಮಂ ।
ಮಹಾಸಿದ್ಧಿಪ್ರದಂ ದೇವಿ ಬ್ರಹ್ಮಹತ್ಯಾವಿನಾಶನಂ ॥ ೧ ॥
ಆಸೀತ್ಪ್ರಜಾಪತಿಸ್ತ್ವಷ್ಟಾ ತಸ್ಯ ಪುತ್ರಃ ಕುಶಧ್ವಜಃ ।
ಸ್ವಕರ್ಮನಿರತೋ ದಾಂತೋ ವಾಸವೇನ ನಿಪಾತಿತಃ ॥ ೨ ॥
ತಸ್ಯ ಪುತ್ರಂ ಹತಂ ಶ್ರುತ್ವಾ ತ್ವಷ್ಟಾ ಕ್ರುದ್ಧಃ ಪ್ರಜಾಪತಿಃ ।
ಅಪಲುಂಚ್ಯ ಜಟಾಮೇಕಾಮಿದಂ ವಚನಮಬ್ರವೀತ್ ॥ ೩ ॥
ಅದ್ಯ ಪಶ್ಯಂತು ಮೇ ವೀರ್ಯಂ ತ್ರಯೋ ಲೋಕಾಃ ಸದೇವತಾಃ ।
ಸ ಚ ಪಶ್ಯತು ದುರ್ಬುದ್ಧಿರ್ಬ್ರಹ್ಮಹಾ ಪಾಕಶಾಸನಃ ॥ ೪ ॥
ಸ್ವಕರ್ಮನಿರತೋ ಯೇನ ಮತ್ಸುತೋ ವಿನಿಪಾತಿತಃ ।
ಇತ್ಯುಕ್ತ್ವಾ ಕೋಪರಕ್ತಾಕ್ಷೋ ಜಟಾಮಗ್ನೌ ಜುಹಾವ ತಾಂ ॥ ೫ ॥

---

## ಕನ್ನಡದ ಅನುವಾದ

### ಇಂದ್ರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ದೇವಿಯೆ! ಮೂವತ್ತೈದನೆಯದೇ ಸರ್ವೋತ್ತಮವಾದ ಇಂದ್ರೇಶ್ವರಲಿಂಗವು. ಅದು ಮಹಾಸಿದ್ಧಿಪ್ರದವೂ, ಬ್ರಹ್ಮಹತ್ಯೆಯನ್ನೂ ಹೋಗಲಾಡಿಸುವುದೂ ಆಗಿರುವುದು.

೨. ಹಿಂದೆ ತ್ವಷ್ಟೃವೆಂಬ ಪ್ರಜಾಪತಿಯೊಬ್ಬನಿದ್ದನು. ಆತನಿಗೆ ಕುಶಧ್ವಜನೆಂಬ ಪುತ್ರನಾದನು. ಸ್ವಕರ್ಮನಿರತನೂ, ಜಿತೇಂದ್ರಿಯನೂ ಆದ ಆ ಕುಶಧ್ವಜನು ಮಹೇಂದ್ರನಿಂದ ಹತನಾದನು.

೩. ತನ್ನ ಪುತ್ರನು ಹತನಾದುದನ್ನು ಕೇಳಿ ತ್ವಷ್ಟೃಪ್ರಜಾಪತಿಯು ಅತ್ಯಂತ ಕ್ರೋಧಗೊಂಡನು. ಮತ್ತು ತನ್ನ ಜಡೆಗಳನ್ನು ಕೆದರಿಕೊಂಡು ಶಪಥವನ್ನು ಮಾಡಿದನು.

೪. "ದೇವತೆಗಳೊಡಗೂಡಿದ ಮೂರು ಲೋಕಗಳ ನಿವಾಸಿಗಳೂ ಇಂದು ನನ್ನ ಪರಾಕ್ರಮವನ್ನು ನೋಡಲಿ. ದುರ್ಬುದ್ಧಿಯೂ, ಬ್ರಹ್ಮಘಾತಕನೂ ಆದ ಮಹೇಂದ್ರನೂ ನೋಡಲಿ.

೫. ವರ್ಣಾಶ್ರಮಧರ್ಮಗಳಲ್ಲಿ ನಿರತನಾಗಿದ್ದ ನನ್ನ ಪುತ್ರನನ್ನು ಅವನು ಕೊಂದನಲ್ಲವೆ." ಇಂತೆಂದು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ತನ್ನ ಜಡೆಯನ್ನು ಕಿತ್ತು ಅಗ್ನಿಯಲ್ಲಿ ಹೋಮವನ್ನು ಮಾಡಿದನು.

ತತೋ ವೃತ್ರಃ ಸಮುತ್ತಸ್ಥೌ ಜ್ವಾಲಾಮಾಲಾಸಮಾಕುಲಃ ।
ಮಹಾಕಾಯೋ ಮಹಾದಂಷ್ಟ್ರೋ ಭಿನ್ನಾಂಜನಚಯಪ್ರಭಃ ॥ ೬ ॥
ಇಂದ್ರಶತ್ರುರಮೇಯಾತ್ಮಾ ತ್ವಷ್ಟುಸ್ತೇಜೋಽಭಿಬೃಂಹಿತಃ ।
ಅಹನ್ಯಹನಿ ಸೋಽವರ್ಧದಿಷುಪಾತಂ ಮಹಾಬಲಂ ॥ ೭ ॥
ವಧಾಯ ಚಾತ್ಮನೋ ದೃಷ್ಟ್ವಾ ವೃತ್ರಂ ಶಕ್ರೋ ಮಹಾಽಸುರಂ ।
ಚಿಂತಯಾಮಾಸ ಸಹಸಾ ಕಿಂ ಕೃತಂ ಸುಕೃತಂ ಭವೇತ್ ॥ ೮ ॥
ಏತಸ್ಮಿನ್ನಂತರೇ ಪ್ರಾಪ್ತೋ ವೃತ್ರೋ ಬಲವತಾಂ ವರಃ ।
ದದರ್ಶ ವಾಸವಂ ತತ್ರ ದೇವೈಃ ಸಾರ್ಧಂ ವರಾನನೇ ॥ ೯ ॥
ದೈತ್ಯೋ ವೃತ್ರೋ ಮಹಾಕಾಯಶ್ಚಕ್ರೇ ಸಂಗ್ರಾಮಮುಲ್ಬಣಂ ।
ನಾನಾಶಸ್ತ್ರಾಸ್ತ್ರಸಂಕ್ಷೋಭಂ ಭಟಸಂಘಟ್ಟಸಂಕಟಂ ॥ ೧೦ ॥
ಛಿನ್ನಭಿನ್ನತನುತ್ರಾಣಕ್ರೋಧರಕ್ತಧರಾತಲಂ ।
ಲೂನಾನನಾಬ್ಜಪ್ರಕರಂ ಕರಪಲ್ಲವದುರ್ಗಮಂ ॥ ೧೧ ॥

---

೬. ಆ ಅಗ್ನಿಯಿಂದ ಹೊರಟ ಜ್ವಾಲೆಗಳಿಂದಾವೃತನಾಗಿ ವೃತ್ರನೆಂಬವನು ಎದ್ದುಬಂದನು. ಆತನು ದೊಡ್ಡ ದೇಹದವನೂ, ಉದ್ದವಾದ ಕೋರೆದಾಡೆಗಳವನೂ, ಕಾಡಿಗೆಯ ಮೈಬಣ್ಣದವನೂ ಆಗಿದ್ದನು.

೭. ಇಂದ್ರನಿಗೆ ಶತ್ರುವಾದ ಆತನು ವರ್ಣನಾತೀತನಾಗಿ ತ್ವಷ್ಟೃವಿನ ತೇಜಸ್ಸಿನಿಂದ ಮತ್ತೂ ಬಲಗೊಂಡನು. ಮಹಾಬಲಶಾಲಿಯಾದ ಆತನು ಒಂದೊಂದು ದಿವಸಕ್ಕೂ ಒಂದು ಬಾಣಪಾತದಷ್ಟು ಬೆಳೆಯುತ್ತಿದ್ದನು.

೮. ತನ್ನ ವಧೆಗಾಗಿಯೇ ಬೆಳೆಯುತ್ತಿರುವ ಆ ಮಹಾಸುರನನ್ನು ಕಂಡು ಇಂದ್ರನು ಯಾವುದನ್ನು ಮಾಡಿದರೆ ಇದಕ್ಕೆ ತಕ್ಕ ಉಪಾಯವಾಗಬಹುದೆಂದು ತೀವ್ರವಾಗಿ ಆಲೋಚಿಸಿದನು.

೯. ಮಂಗಳಾಂಗಿಯೆ! ಈ ಸಮಯದಲ್ಲಿಯೇ ಬಲಿಷ್ಠರಲ್ಲಿ ಅಗ್ರೇಸರನಾದ ವೃತ್ರಾಸುರನು ಸ್ವರ್ಗಲೋಕಕ್ಕೆ ಬಂದು ದೇವತೆಗಳಿಂದ ಪರಿವಾರಿತನಾಗಿದ್ದ ಇಂದ್ರನನ್ನು ಕಂಡನು.

೧೦. ದೊಡ್ಡ ದೇಹವುಳ್ಳ ಆ ರಾಕ್ಷಸನು ಅತ್ಯುಗ್ರವಾದ ಯುದ್ಧವನ್ನು ಮಾಡಿದನು. ಅದರಲ್ಲಿ ಅನೇಕ ಶಸ್ತ್ರಗಳೂ, ಅಸ್ತ್ರಗಳೂ ನಾಶವಾದುವು. ಭಟರ ಸಂಘಟ್ಟನದಿಂದ ರಣರಂಗವು ದುರ್ಗಮವಾಗಿದ್ದಿತು.

೧೧. ಕವಚಗಳು ಕತ್ತರಿಸಿಬಿದ್ದು ಕೋಪದಿಂದ ರಕ್ತದ ಪ್ರವಾಹಗಳು ಹರಿದು ಭೂಮಿಯನ್ನು ತೋಯಿಸಿದುವು. ಕತ್ತರಿಸಿದ ಮುಖಕಮಲಗಳಿಂದಲೂ ಕೈಗಳೆಂಬ ಚಿಗುರುಗಳಿಂದಲೂ ಕಾಲಿಡಲು ಸ್ಥಳವಿಲ್ಲದಂತಿದ್ದಿತು.

ಕಬಂಧಸಂಘಘಟನಂ ಘಟಿತಾಽಮರಸೈನಿಕಂ ।
ವಿಕೀರ್ಣಾಭರಣಸ್ಫೀತಸ್ಫುರದ್ಯೋಧಾಂಗಭೂಷಣಂ ॥ ೧೨ ॥
ಕಲ್ಲೋಲರುಧಿರೋದ್ಗಾರಪಾಟಲೀಕೃತದಿಙ್ಮುಖಂ ।
ತಸ್ಮಿನ್ರಣೇ ಮಹಾಭೀಮೇ ದೇವಾನ್ ಭಿತ್ವಾ ಸ ಗುಹ್ಯಕಾನ್ ॥ ೧೩ ॥
ವಾಸವಂ ಬಂಧಯಿತ್ವಾ ತು ಸ್ವರ್ಗಲೋಕಂ ಜಗಾಮ ಹ ।
ರಾಜ್ಯಂ ಚಕಾರ ನಿಃಶಂಕೋ ನಿಃಸಪತ್ನಂ ವರಾನನೇ ॥ ೧೪ ॥
ತತಸ್ತು ಬದ್ಧೇ ದೇವೇಂದ್ರೇ ಬೃಹಸ್ಪತಿರುದಾರಧೀಃ ।
ಆಜಗಾಮ ತಮುದ್ದೇಶಂ ಯತ್ರ ಬದ್ಧಃ ಶತಕ್ರತುಃ ॥ ೧೫ ॥
ದೃಷ್ಟ್ವಾ ತಥಾವಿಧಂ ಶಕ್ರಮಾಶೀರ್ಭಿರಭಿನಂದ್ಯ ಚ ।
ಬಂಧನಾನ್ಮೋಚಯಿತ್ವಾ ತು ಪ್ರೋವಾಚೇದಂ ವಚಸ್ತದಾ ॥ ೧೬ ॥
ಅನುಕೂಲೋ ನ ಕಾಲೋಽಯಂ ಸುರೇಶಸ್ಯ ತವಾಽಧುನಾ ।
ಉದ್ಯೋಗಃ ಸುಮಹಾನ್ ದೃಷ್ಟಃ ಸಂಘಾತಶ್ಚ ಸುರದ್ವಿಷಾಂ ।
ದೃಷ್ಟಾ ಹಿ ಪ್ರವರಾಃ ಸರ್ವೇ ಮಯಾ ತತ್ರ ಮಹಾಽಸುರಾಃ ॥ ೧೭ ॥

---

೧೨. ಮುಂಡಗಳ ರಾಶಿಗಳಿಂದ ಕೂಡಿದ ರಣರಂಗದಲ್ಲಿ ದೇವತೆಗಳ ಸೈನ್ಯಗಳು ಗುಂಪುಗೂಡಿದ್ದರು. ನೆಲದಲ್ಲೀಡಾಡಿದ ಆಭರಣಗಳ ಕಾಂತಿಗಳಿಂದ ಯೋಧರ ಅಲಂಕಾರಗಳು ಇಮ್ಮಡಿಸಿದಂತಿದ್ದುವು.

೧೩–೧೪. ತೆರೆ ತೆರೆಯಾಗಿ ಹರಿಯುತ್ತಿರುವ ರಕ್ತದ ಪ್ರವಾಹದ ಕೆಂಪಿನಿಂದ ಎಂಟು ದಿಕ್ಕುಗಳೂ ರಂಜಿತಗಳಾಗಿದ್ದುವು. ಇಂತಹ ಮಹಾಭಯಂಕರವಾದ ಯುದ್ಧದಲ್ಲಿ ದೇವತೆಗಳನ್ನೂ ಗುಹ್ಯಕರನ್ನೂ ಸದೆಬಡಿದು ಇಂದ್ರನನ್ನು ಕಟ್ಟಿ ಹಾಕಿಕೊಂಡು ಸ್ವರ್ಗಲೋಕಕ್ಕೆ ವೃತ್ರಾಸುರನು ಹೋದನು. ಪಾರ್ವತಿಯೆ! ಬಳಿಕ ಆತನು ನಿರ್ಭಯನಾಗಿ ಶತ್ರುಗಳ ಕಾಟವಿಲ್ಲದೆ ರಾಜ್ಯಭಾರವನ್ನು ಮಾಡುತ್ತಿದ್ದನು.

೧೫. ದೇವೇಂದ್ರನು ಶತ್ರುಗಳಿಂದ ಬಂಧಿತನಾದುದನ್ನು ತಿಳಿದು ವಿಶಾಲ ಬುದ್ಧಿಯಾದ ಬೃಹಸ್ಪತ್ಯಾಚಾರ್ಯನು ಆತನು ಬಂಧಿತನಾಗಿದ್ದ ಸ್ಥಳಕ್ಕೆ ಬಂದನು.

೧೬. ಸಂಕಟದಲ್ಲಿದ್ದ ಇಂದ್ರನನ್ನು ಕಂಡು ಅನೇಕಾಶೀರ್ವಾದಗಳಿಂದ ಸಂತೋಷಗೊಳಿಸಿ ಬಂಧನದಿಂದ ಬಿಡುಗಡೆಮಾಡಿ ಆತನಿಗೆ ಹೇಳತೊಡಗಿದನು.

೧೭. "ಸುರಾಧೀಶ್ವರನೆ! ಈಗ ನಿನಗೆ ಕಾಲವು ಅನುಕೂಲವಾಗಿಲ್ಲವು. ನಾನು ಮಹತ್ತರನಾದ ಪ್ರಯತ್ನವನ್ನು ಮಾಡಿರುವೆನು. ದೇವಶತ್ರುಗಳ ಸಮೂಹವೂ ಅಪಾರವಾಗಿರುವುದು. ಮಹಾಬಲಶಾಲಿಗಳೆನಿಸಿದ ಸಮಸ್ತ ರಾಕ್ಷಸಶ್ರೇಷ್ಠರನ್ನೂ ಅಲ್ಲಿ ನೋಡಿದೆನು.

ಏಕೈಕೋಽಪಿ ವಿಜೇತುಂ ತ್ವಾಂ ಶಕ್ತಃ ಸ್ಯಾದಿತಿ ಮೇ ಮತಿಃ ।
ನ ತಾದೃಕ್ ಸಂಗಮಃ ಶಕ್ರ ಕದಾಚಿತ್ಸುರವಿದ್ವಿಷಾಂ ।
ದೃಷ್ಟೋ ವಾಽಪಿ ಶ್ರುತೋ ವಾಽಪಿ ಯಾದೃಶೋ ಹ್ಯವಲೋಕಿತಃ॥ ೧೮ ॥
ಬೃಹಸ್ಪತಿವಚಃ ಶ್ರುತ್ವಾ ಶಕ್ರಃ ಸಂಭ್ರಮಮಾಗಮತ್ ।
ಧ್ಯಾತ್ವಾ ಮುಹೂರ್ತಂ ಪ್ರೋವಾಚ ಬೃಹದ್ಬುದ್ಧೇ ಬೃಹಸ್ಪತೇ ।
ಕಿಮತ್ರ ಪ್ರತಿಕರ್ತವ್ಯಂ ವದ ತಾವದ್ಬೃಹಸ್ಪತೇ ॥ ೧೯ ॥
ಬಹವೋ ಬಲವಂತಶ್ಚ ದಾನವಾಃ ಸ್ವಲ್ಪಕೈರ್ದಿನೈಃ ।
ಮತ್ಸಕಾಶಂ ಸಮೇಷ್ಯಂತಿ ಸ ಚ ವೃತ್ರೋ ಮಹಾಬಲಃ ॥ ೨೦ ॥
ಇತಿ ಶಕ್ರವಚಃ ಶ್ರುತ್ವಾ ಬೃಹಸ್ಪತಿರುವಾಚ ತಂ ।
ಉಪಾಯಃ ಕ್ರಿಯತಾಂ ತೂರ್ಣಂ ಗಚ್ಛ ಶಕ್ರ ಮಮಾಜ್ಞಯಾ ॥ ೨೧ ॥
ಮಹಾಕಾಲವನೇ ರಮ್ಯೇ ಖಂಡೇಶ್ವರಸ್ಯ ದಕ್ಷಿಣೇ ।
ಸರ್ವಸಂಪತ್ಕರಂ ಲಿಂಗಂ ವಿದ್ಯತೇ ತತ್ರ ವಾಸವ ॥ ೨೨ ॥
ತದಾರಾಧಯ ಯತ್ನೇನ ತತ್ತೇ ಕಾಮಂ ಪ್ರದಾಸ್ಯತಿ ।
ಬೃಹಸ್ಪತಿವಚಃ ಶ್ರುತ್ವಾ ಶಕ್ರಃ ಶೀಘ್ರತರಂ ಗತಃ ॥ ೨೩ ॥

---

೧೮. ಅವರಲ್ಲಿ ಒಬ್ಬೊಬ್ಬನೂ ನಿನ್ನನ್ನು ಜಯಿಸಲು ಶಕ್ತನೆಂದು ನನ್ನ ಬುದ್ಧಿಗೆ ತೋರುತ್ತಿರುವುದು. ಅಯ್ಯಾ ಇಂದ್ರನೆ! ಇಂತಹ ರಾಕ್ಷಸರ ಸಮೂಹವನ್ನು ನಾನೆಂದೂ ಕಂಡುದಿಲ್ಲ. ಕೇಳಿದುದೂ ಇಲ್ಲ.''

೧೯. ಬೃಹಸ್ಪತಿಯ ಮಾತನ್ನು ಕೇಳಿ ಆ ಮಹೇಂದ್ರನು ಸಂಭ್ರಾಂತನಾದನು. ಒಂದು ಮುಹೂರ್ತದ ಕಾಲ ಹಾಗೆಯೆ ಯೋಚಿಸುತ್ತಿದ್ದು ಆ ಬಳಿಕ ಇಂತೆಂದನು. ''ಮಹಾಬುದ್ಧಿಕುಶಲನಾದ ಬೃಹಸ್ಪತಿಯೆ! ಇದಕ್ಕೆ ಈಗ ನಾವು ಯಾವ ಪ್ರತಿಕ್ರಿಯೆಯನ್ನು ಮಾಡಬೇಕೆಂಬುದನ್ನು ಹೇಳು.

೨೦. ಅಸಂಖ್ಯಾತರೂ ಮಹಾಪರಾಕ್ರಮಿಗಳೂ ಆದ ದಾನವಶ್ರೇಷ್ಠರು ಸ್ವಲ್ಪ ದಿನಗಳಲ್ಲಿಯೇ ಮಹಾಬಲನಾದ ಆ ವೃತ್ರನೊಡಗೂಡಿ ನಾನಿರುವಲ್ಲಿಗೆ ಬಂದೇ ಬರುವರು.''

೨೧. ಇಂತೆಂದ ಮಹೇಂದ್ರನ ಮಾತನ್ನು ಕೇಳಿ ಬೃಹಸ್ಪತಿಯು ಹೇಳಿದನು. ''ಇದಕ್ಕೆ ಈ ಕ್ಷಣದಲ್ಲಿಯೇ ಉಪಾಯವನ್ನು ಮಾಡಬೇಕಾದರೆ ನನ್ನ ಆಜ್ಞೆಯಂತೆ ಈಗಲೇ ಹೊರಡು.

೨೨. ಮಹಾಕಾಲವನದಲ್ಲಿ ಖಂಡೇಶ್ವರವೆಂಬ ಒಂದು ಲಿಂಗವಿರುವುದು. ಅದರ ದಕ್ಷಿಣಕ್ಕೆ ಸಕಲಸಂಪತ್ಕಾರಕವಾದ ಮತ್ತೊಂದು ಲಿಂಗವು ನಿನಗೆ ಕಾಣುವುದು.

೨೩. ಆ ಲಿಂಗವನ್ನು ಪ್ರಯತ್ನದಿಂದ ಪೂಜಿಸಲು ಅದು ನಿನ್ನ ಅಭೀಷ್ಟವನ್ನು

ಮಹಾಕಾಲವನೇ ದೇವಿ ದೃಷ್ಟ್ವಾ ಲಿಂಗಮನುತ್ತಮಂ ।
ಸ್ತುತಿಂ ಚಕಾರ ಸಹಸಾ ಭಕ್ತಿನಮ್ರಾತ್ಮಕಂಧರಃ ॥ ೨೪ ॥
ನಮೋ ದೇವಾಧಿದೇವಾಯ ಶಂಕರಾಯ ವೃಷಾಯ ಚ ।
ಕಾಮ್ಯಾಯ ಬಹುರೂಪಾಯ ವ್ಯಾಲಯಜ್ಞೋಪವೀತಿನೇ ।
ವರೇಣ್ಯಾಯ ನಮೋ ನಿತ್ಯಂ ನಮಸ್ತೇ ಸರ್ವಕಾಮದ ॥ ೨೫ ॥

ಆದ್ಯಃ ಪ್ರಜಾಸೃಷ್ಟಿಕರಸ್ತ್ವಮೇವ
ಕಾಲಃ ಪ್ರಜಾಃ ಸಂಹರಿಸಿ ತ್ವಮೇವ ।
ಅಪಾಂ ಪತಿರ್ಭೂತಪತಿಸ್ತ್ವಮೇವ
ಧನೇಶ್ವರಸ್ತ್ವಂ ದಹನಸ್ತ್ವಮೇವ ॥ ೨೬ ॥
ಚಂದ್ರಶ್ಚ ಸೂರ್ಯಃ ಪವನಸ್ತ್ವಮೇವ
ಧಾತಾ ವಿಧಾತಾ ಪರಮಃ ಪುರಾಣಃ ।
ಜಲಾಶಯಸ್ತ್ವಂ ವರುಣಸ್ತ್ವಮೇವ
ಶೈಲೋತ್ತಮಸ್ತ್ವಂ ಭುಜಗೇಶ್ವರಶ್ಚ ॥
ಡಿಂಡಿರ್ಮಹಾಕಾಲ ವೃಷಸ್ತ್ವಮೇವ
ವಿನಾಯಕೋ ಗುಹ್ಯವರಸ್ತ್ವಮೇವ ॥ ೨೭ ॥

---

ನೆರವೇರಿಸಿಕೊಡುವುದು." ಗುರುವಿನ ಈ ವಾಕ್ಯವನ್ನು ಕೇಳಿ ಇಂದ್ರನು ಆ ಕ್ಷಣದಲ್ಲಿಯೇ ಮಹಾಕಾಲವನಕ್ಕೆ ಹೊರಟನು.

೨೪. ಎಲೌ ದೇವಿಯೆ! ಮಹಾಕಾಲವನದಲ್ಲಿ ಆತನು ನಿರೂಪಿಸಿದ್ದ ಸರ್ವೋತ್ತಮವಾದ ಲಿಂಗವನ್ನು ಕಂಡು ಸಂಭ್ರಮದಿಂದಲೂ ಭಕ್ತಿಯಿಂದಲೂ ಬಗ್ಗಿದ ಕುತ್ತಿಗೆಯುಳ್ಳವನಾಗಿ ಸ್ತೋತ್ರ ಮಾಡಿದನು.

೨೫. "ದೇವಾಧಿದೇವನೂ, ಸುಖಪ್ರದನೂ, ಅಗ್ರಗಣ್ಯನೂ, ಕಾಮಗಳನ್ನೀಡೇರಿಸುವವನೂ, ನಾನಾ ರೂಪಧಾರಿಯಾದವನೂ, ಸರ್ಪಯಜ್ಞೋಪವೀತವನ್ನು ತಾಳಿದವನೂ ಆದ ಪರಮಶಿವನಿಗೆ ನಮಸ್ಕಾರವು! ದೇವವರೇಣ್ಯನೂ ಸರ್ವಾಭೀಷ್ಟಪ್ರದನೂ ಆದ ನಿನಗೆ ನಮಸ್ಕಾರವಿರಲಿ!

೨೬. ಸನಾತನನೂ, ಪ್ರಜೆಗಳ ಸೃಷ್ಟಿಯನ್ನು ಮಾಡುವವನೂ ನೀನೇ. ಕಾಲನಾಗಿ ಅವರನ್ನು ಸಂಹರಿಸುವವನೂ ನೀನೇ. ಜಲಗಳಿಗೆ ಅಧಿಪತಿಯೂ, ಭೂತನಾಥನೂ, ಕುಬೇರನೂ, ಅಗ್ನಿದೇವನೂ ನೀನೇ ಆಗಿರುವೆ.

೨೭. ನೀನೇ ಚಂದ್ರನೂ, ಸೂರ್ಯನೂ, ವಾಯುವೂ, ಬ್ರಹ್ಮದೇವನೂ, ಜಗದುದ್ಧಾರಕನೂ, ಸರ್ವೋತ್ತಮನೂ, ಅನಾದಿ ಪುರುಷನೂ, ಸಮುದ್ರಗಳಿಗೆ ಅಧಿಪತಿಯಾದ ವರುಣನೂ, ಪರ್ವತರಾಜನೂ, ಸರ್ಪಶ್ರೇಷ್ಠನೂ ಆಗಿರುವೆ. ಡಮರುಗಧಾರಿಯೂ, ಕಾಲನನ್ನು ಗೆದ್ದ ಮಹಾಕಾಲನೂ, ಸರ್ವೋತ್ಕೃಷ್ಟನೂ, ಅನ್ಯನಾಯಕನಿಲ್ಲದವನೂ, ಗುಹ್ಯರಿಗೆ ನಿಯಾಮಕನೂ ಆದವನೂ ನೀನೇ."

ಇತೀರಿತಾಂ ಸ್ತುತಿಂ ಶ್ರುತ್ವಾ ಲಿಂಗೇನೋಕ್ತಃ ಶತಕ್ರತುಃ ।
ಗಚ್ಛ ಶಕ್ರ ಮಮಾದೇಶಾನ್ಮತ್ತೇಜೋಬೃಂಹಿತೋ ರಣೇ ।
ಹನಿಷ್ಯಸಿ ನ ಸಂದೇಹೋ ವೃತ್ರಂ ರಿಪುವಿದಾರಣ ॥ ೨೮ ॥
ತಸ್ಯ ಲಿಂಗಸ್ಯ ಮಾಹಾತ್ಮ್ಯಾದಸ್ಮಾಂ ಫೇನೇನ ಪಾರ್ವತಿ ।
ಜಘಾನ ಸಮರೇ ವೃತ್ರಂ ಪಶ್ಯತಾಂ ತ್ರಿದಶದ್ವಿಷಾಂ ॥ ೨೯ ॥
ನಿಹತ್ಯ ದಾನವಾನ್ ಪಶ್ಚಾಲ್ಲೀಲಯಾ ರಣಕರ್ಕಶಃ ।
ಉವಾಚೇಂದ್ರಸ್ತದಾ ದೇವಾನ್ಹತೋ ವೃತ್ರೋ ಮಹಾರಣೇ ॥ ೩೦ ॥
ತ್ರೈಲೋಕ್ಯಾಧ್ಯಕ್ಷತಾಂ ಪ್ರಾಪ್ತಾ ಭವಂತೋ ಮತ್ಪರಾಕ್ರಮಾತ್ ।
ಏವಮುಕ್ತಾಸ್ತು ಶಕ್ರೇಣ ತೇ ದೇವಾ ವಿಸ್ಮಯಾನ್ವಿತಾಃ ॥ ೩೧ ॥
ಅಸ್ಯ ದೇವಸ್ಯ ಮಾಹಾತ್ಮ್ಯಾದ್ಧತೋ ವೃತ್ರೋ ಮಹಾಸುರಃ ।
ಶರೀರೇ ಚ ಸ್ಥಿತಾಃ ಪಾಪಾ ದರ್ಶನಾತ್ಸಂಕ್ಷಯಂ ಗತಾಃ ॥ ೩೨ ॥
ಇಂದ್ರೇಣಾರಾಧಿತೋ ಯಸ್ಮಾದ್ದೇವದೇವೋ ಮಹೇಶ್ವರಃ ।
ತಸ್ಮಾದಿಂದ್ರೇಶ್ವರೋ ನಾಮ ಖ್ಯಾತೋ ಭುವಿ ಭವಿಷ್ಯತಿ ॥ ೩೩ ॥

---

೨೮. ಈ ವಿಧವಾದ ಸ್ತೋತ್ರವನ್ನು ಕೇಳಿ ಆ ಶಿವಲಿಂಗವು ಮಹೇಂದ್ರನನ್ನು ಕುರಿತು ಹೇಳಿತು. "ಎಲೈ ಶಕ್ರನೆ! ಶತ್ರುಸಂಹಾರಕನೆ! ಹೊರಡು. ನನ್ನ ಅನುಜ್ಞೆಯಿಂದಲೂ, ನನ್ನ ತೇಜಸ್ಸಿನ ಆಧಿಕ್ಯದಿಂದಲೂ ನೀನು ವೃತ್ರಾಸುರನನ್ನು ಸಂಹರಿಸುವೆ. ಇದರಲ್ಲಿ ಸಂದೇಹವಿಲ್ಲ."

೨೯. ಎಲೌ ಪಾರ್ವತಿಯೆ! ಆ ಲಿಂಗದ ಮಾಹಾತ್ಮ್ಯೆಯಿಂದ ಮಹೇಂದ್ರನು ರಾಕ್ಷಸರೆಲ್ಲರೂ ನೋಡುತ್ತಿದ್ದಂತೆಯೇ ಯುದ್ಧರಂಗದಲ್ಲಿ ಬರಿಯ ನೀರಿನ ನೊರೆಯಿಂದಲೇ ಆ ವೃತ್ರಾಸುರನನ್ನು ಹೊಡೆದು ಕೆಡವಿದನು.

೩೦. ಬಳಿಕ ಯುದ್ಧದಲ್ಲಿ ಭಯಂಕರನಾಗಿ ಅವಲೀಲೆಯಿಂದಲೇ ದಾನವರೆಲ್ಲರನ್ನೂ ಸಂಹರಿಸಿ ಆ ದೇವೇಂದ್ರನು ದೇವತೆಗಳಿದ್ದಲ್ಲಿಗೆ ಬಂದು "ವೃತ್ರಾಸುರನು ರಣದಲ್ಲಿ ಹತನಾದನು" ಎಂದು ತಿಳಿಸಿದನು.

೩೧. "ನೀವೆಲ್ಲರೂ ನನ್ನ ಪರಾಕ್ರಮದಿಂದ ಮೂರು ಲೋಕಗಳ ಆಧಿಪತ್ಯವನ್ನು ಪಡೆದಿರಿ" ಎಂಬ ಮಹೇಂದ್ರನ ಮಾತನ್ನು ಕೇಳಿ ದೇವತೆಗಳೆಲ್ಲರೂ ಆಶ್ಚರ್ಯಚಕಿತರಾದರು

೩೨. ಈ ಮಹಾದೇವನ ಪ್ರಭಾವದಿಂದ ಮಹಾದೈತ್ಯನಾದ ವೃತ್ರನು ಹತನಾದನು. ಆ ಸ್ವಾಮಿಯ ದರ್ಶನಮಾತ್ರದಿಂದಲೇ ನಮ್ಮ ದೇಹದಲ್ಲಿರುವ ಪಾಪಗಳೆಲ್ಲವೂ ನಾಶವನ್ನು ಹೊಂದಿದುವು.

೩೩. ದೇವದೇವನಾದ ಮಹಾದೇವನ ಈ ಮಹಾಲಿಂಗವನ್ನು ಇಂದ್ರನು

ದರ್ಶನಾದಸ್ಯ ಲಿಂಗಸ್ಯ ಪುರೀಮಿಂದ್ರಸ್ಯ ಶೋಭನಾಂ ।
ಪಾಪಿನೋಽಪಿ ಗಮಿಷ್ಯಂತಿ ಸರ್ವಪಾತಕವರ್ಜಿತಾಃ ॥ ೩೪ ॥
ಯಃ ಪಶ್ಯತಿ ನರೋ ನಿತ್ಯಂ ಶ್ರೀಮದಿಂದ್ರೇಶಸಂಜ್ಞಕಂ ।
ಸ ಮುಕ್ತಃ ಪಾತಕೈಃ ಸರ್ವೈರ್ದೇವಿ ಮೋದಿಷ್ಯತೇ ಚಿರಂ ॥ ೩೫ ॥
ಇಂದ್ರೇಣಾರಾಧಿತಂ ಲಿಂಗಂ ಭಕ್ತ್ಯಾ ಯಃ ಪೂಜಯಿಷ್ಯತಿ ।
ಸ ಯಾತಿ ವೈ ಪರಂ ಸ್ಥಾನಂ ದಿವ್ಯಕಲ್ಪಚತುಷ್ಟಯಂ ॥ ೩೬ ॥
ಯೇನ ಚೇಂದ್ರೇಶ್ವರೋ ದೇವೋ ಭಕ್ತ್ಯಾ ಸಮ್ಯಕ್ಪ್ರಪೂಜಿತಃ ।
ತೇನ ವಿಷ್ಣುಪ್ರಭೃತಯೋ ವಯಂ ಸರ್ವೇ ಸವಾಸವಾಃ ।
ಮುನಯೋ ಲೋಕಪಾಲಾಶ್ಚ ಪೂಜಿತಾಃ ಸ್ಯುರ್ನ ಸಂಶಯಃ ॥ ೩೭ ॥
ಇತ್ಯುಕ್ತಃ ಸ ಸುರೈಃ ಶಕ್ರೋ ವೈಕುಂಠಾದ್ಯೈಃ ಸಮಂತತಃ ।
ತೈರೇವ ಸಹಿತೋ ದೇವೋ ಜಗಾಮಾಥ ತ್ರಿವಿಷ್ಟಪಂ ॥ ೩೮ ॥

---

ಪೂಜಿಸಿದನಾದಕಾರಣದಿಂದ ಇದು ಇಂದ್ರೇಶ್ವರವೆಂಬ ಹೆಸರಿನಿಂದಲೇ ಭೂಲೋಕದಲ್ಲಿ ಪ್ರಸಿದ್ಧಿಯನ್ನು ಪಡೆಯುವುದು.

೩೪. ಎಂತಹ ಪಾಪಿಗಳಾದರೂ ಈ ಲಿಂಗದ ದರ್ಶನಮಾತ್ರದಿಂದಲೇ ತಮ್ಮ ಸಮಸ್ತ ಪಾತಕಗಳನ್ನೂ ಕಳೆದುಕೊಂಡು ಪರಮಸೌಭಾಗ್ಯಯುಕ್ತವಾದ ಮಹೇಂದ್ರನ ನಗರಿಗೆ ಹೋಗುವರು.

೩೫. ದೇವಿಯೆ! ಈ ಇಂದ್ರೇಶ್ವರನಾಮಕವಾದ ಲಿಂಗವನ್ನು ನಿತ್ಯವೂ ಯಾವನು ನೋಡುತ್ತಿರುವನೊ, ಅವನು ಸಕಲಪಾಪಗಳಿಂದಲೂ ಮುಕ್ತನಾಗಿ ಬಹುಕಾಲ ಆನಂದದಿಂದಿರುವನು.

೩೬. ಇಂದ್ರನಿಂದ ಪೂಜಿತವಾದ ಈ ಮಹಾಲಿಂಗವನ್ನು ಯಾವ ಮಾನವನು ಭಕ್ತಿಯಿಂದ ಅರ್ಚಿಸುವನೊ, ಅವನು ನಾಲ್ಕು ಮಹಾಕಲ್ಪಗಳವರೆಗೂ ಉತ್ತಮಸ್ಥಾನವನ್ನು ಹೊಂದಿರುವನು.

೩೭. ಯಾವನಿಂದ ಇಂದ್ರೇಶ್ವರಲಿಂಗವು ಭಕ್ತಿಯುಕ್ತವಾಗಿಯೂ, ವಿಧ್ಯುಕ್ತರೀತಿಯಿಂದಲೂ ಪೂಜಿತವಾಗಿರುವುದೊ, ಅವನಿಂದ ವಿಷ್ಣುವೇ ಮೊದಲಾದವರೂ, ಮಹೇಂದ್ರನೂ, ಮುನಿವರ್ಯರೂ, ಲೋಕಪಾಲಕರೂ, ಪೂಜೆಗೊಂಡವರಾಗುವರೆಂಬುದರಲ್ಲಿ ಸಂದೇಹವಿಲ್ಲ.

೩೮. ಇಂತೆಂದು ಹೇಳಿ ಆ ಮಹೇಂದ್ರನು ದೇವತೆಗಳನ್ನೂ, ಮಹಾವಿಷ್ಣುವನ್ನೂ ಪರಿವಾರವನ್ನಾಗಿ ಮಾಡಿಕೊಂಡು ಸ್ವಸ್ಥಾನವಾದ ಸ್ವರ್ಗಲೋಕಕ್ಕೆ ಹೊರಟುಹೋದನು.

ಇಂದ್ರೇಶ್ವರಸ್ಯ ದೇವಸ್ಯ ಪ್ರಭಾವಃ ಕಥಿತಸ್ತ್ವಯಂ ।
ಮಾರ್ಕಂಡೇಯೇಶ್ವರಂ ದೇವಂ ಶೃಣು ಪಾರ್ವತಿ ಸಾಂಪ್ರತಂ ॥ ೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಇಂದ್ರೇಶ್ವರಮಾಹಾತ್ಮ್ಯವರ್ಣನಂ"
ನಾಮ ಪಂಚತ್ರಿಂಶೋಽಧ್ಯಾಯಃ

---

೩೯. ಪಾರ್ವತಿಯೆ! ಹೀಗೆ ಇಂದ್ರೇಶ್ವರಮಹಾಲಿಂಗದ ಮಾಹಾತ್ಮ್ಯವು ವರ್ಣಿತವಾಯಿತು. ಇನ್ನು ಈಗ ಮಾರ್ಕಂಡೇಯೇಶ್ವರನ ಚರಿತ್ರೆಯನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಇಂದ್ರೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್ತ್ರಿಂಶೋಽಧ್ಯಾಯಃ

## ಮಾರ್ಕಂಡೇಯೇಶ್ವರಮಾಹಾತ್ಮ್ಯವರ್ಣನಂ

**ಶ್ರೀ ಹರ ಉವಾಚ :—**

**ಮಾರ್ಕಂಡೇಯೇಶ್ವರಂ ವಿದ್ಧಿ ಷಟ್ತ್ರಿಂಶತ್ತಮಮೀಶ್ವರಂ ।**
**ಯಸ್ಯ ದರ್ಶನಮಾತ್ರೇಣ ಪುತ್ರವಾನ್ ಜಾಯತೇ ನರಃ ॥ ೧ ॥**
**ಬ್ರಹ್ಮವಂಶಸಮುತ್ಪನ್ನೋ ಮೃಕಂಡುರ್ನಾಮ ತಾಪಸಃ ।**
**ವೇದಾಧ್ಯಯನಸಂಪನ್ನಃ ಸ ಚಾಽಪುತ್ರೋ ಬಭೂವ ಹ ॥ ೨ ॥**
**ಪುತ್ರಾರ್ಥಂ ಚಿಂತಯಾಮಾಸ ಕಥಂ ಪುತ್ರೋ ಭವೇದಿತಿ ।**
**ಅಪುತ್ರಸ್ಯ ಕುತೋ ಲೋಕ ಇತಿ ವೇದೇಷು ಪಠ್ಯತೇ ॥ ೩ ॥**
**ತಸ್ಮಾತ್ತಪಃ ಕರಿಷ್ಯಾಮಿ ಯೇನ ಮೇ ತನಯೋ ಭವೇತ್ ।**
**ಏವಂ ಸಂಚಿಂತ್ಯ ಬಹುಧಾ ಸ ಜಗಾಮ ಹಿಮಾಲಯಂ ।**
**ಚಕಾರ ವಸತಿಂ ಚಾಽಪಿ ತಪಸೇ ಭಾವಿತಾತ್ಮವಾನ್ ॥ ೪ ॥**
**ವಾಯುಭಕ್ಷೋಽಂಬುಭಕ್ಷಶ್ಚ ನಿರಾಹಾರೋರ್ಧ್ವಪಾದಕಃ ।**
**ಶಾಕಮೂಲಫಲಾಹಾರಃ ಪರ್ಣಾಶ್ಯೇಕದ್ವಿಪರ್ಣಭುಕ್ ॥ ೫ ॥**

---

## ಕನ್ನಡದ ಅನುವಾದ

### ಮಾರ್ಕಂಡೇಯೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಮೂವತ್ತಾರನೆಯ ಮಹಾಲಿಂಗವೇ ಮಾರ್ಕಂಡೇಯೇಶ್ವರನು. ಅದನ್ನು ನೋಡುವುದರಿಂದಲೇ ಮಾನವನು ಪುತ್ರವಂತನಾಗುವನು.

೨. ಹಿಂದೆ ಬ್ರಹ್ಮನ ವಂಶದಲ್ಲಿ ಮೃಕಂಡುವೆಂಬ ತಾಪಸೋತ್ತಮನಿದ್ದನು. ವೇದಾಧ್ಯಯನದಲ್ಲಿ ನಿರತನಾಗಿದ್ದ ಆತನಿಗೆ ಗಂಡುಮಕ್ಕಳಿರಲಿಲ್ಲ.

೩. ಪುತ್ರನಿಗಾಗಿಯೇ “ನಾನು ಹೇಗೆ ಪುತ್ರನನ್ನು ಪಡೆದೇನು ?” ಎಂದು ಚಿಂತಿಸುತ್ತಿದ್ದನು. “ಪುತ್ರಹೀನನಿಗೆ ಗತಿಯಿಲ್ಲವೆಂದು ವೇದಗಳಲ್ಲಿಯೂ ಹೇಳಲ್ಪಟ್ಟಿರುವುದು.

೪. ಆದುದರಿಂದ ನಾನು ತಪಸ್ಸನ್ನು ಮಾಡುವೆನು. ಅದರಿಂದ ನನಗೆ ಸತ್ಪುತ್ರನಾಗಬಹುದು.” ಇಂತೆಂದು ಬಹುವಾಗಿ ಯೋಚಿಸಿ ಆತನು ಹಿಮವತ್ಪರ್ವತಕ್ಕೆ ಹೋಗಿ ಆತ್ಮಸಂಯಮಸಹಿತನಾಗಿ ತಪಸ್ಸನ್ನು ಮಾಡಲು ಅಲ್ಲಿಯೇ ವಾಸಮಾಡುತ್ತಿದ್ದನು.

೫. ವಾಯುಭಕ್ಷಣದಿಂದಲೂ, ಜಲಪಾನದಿಂದಲೂ, ಉಪವಾಸಗಳಿಂದಲೂ, ತಲೆಕೆಳಗಾಗಿ ನಿಂತು ಗೆಡ್ಡೆ ಸೊಪ್ಪುಗಳನ್ನು ತಿನ್ನುತ್ತಲೂ,

ಏವಮಾದೀನಿ ಚಾಽನ್ಯಾನಿ ತಪಾಂಸಿ ಸುಬಹೂನ್ಯಪಿ ।
ಚಕಾರ ಸ ಮುನಿಸ್ತತ್ರ ವರ್ಷಾಣಿ ದ್ವಾದಶೈವ ತು ॥ ೬ ॥
ನ ತುಷ್ಟೋಽಹಂ ತದಾ ದೇವಿ ತಪಸಾ ದುಷ್ಕರೇಣ ತು ।
ತತೋ ಜ್ಞಾತ್ವಾ ಮತಿಂ ತಸ್ಯ ವಿಜ್ಞಪ್ತೋಽಹಂ ತದಾ ತ್ವಯಾ ॥ ೭ ॥
ಕರೋತ್ಯೇವ ತಪಃ ಕ್ರೂರಂ ಪುತ್ರಹೇತೋರ್ಮುನಿರ್ಮಹಾನ್ ।
ತೇಜಸಾ ದೀಪಯಂಶ್ಶೈಲಂ ಶೋಷಯನ್ ಸಲಿಲಾಶಯಾನ್ ॥ ೮ ॥
ತಪಸಾ ದುಷ್ಕರೇಣೈವ ಕ್ಷುಭಿತಾ ನಾಕವಾಸಿನಃ ।
ಸಮುದ್ರಾಃ ಕ್ಷುಭಿತಾಃ ಸರ್ವೇ ಚಂದ್ರಾದಿತ್ಯೌ ತಥೈವ ಚ ॥ ೯ ॥
ಋಷಯೋ ವಿಸ್ಮೃತಿಂ ಪ್ರಾಪ್ತಾಃ ಕಂಪೇತೇ ಚಾಽಪಿ ರೋದಸೀ ।
ಅಕಾಲಪ್ರಲಯೋ ದೇವ ಭವಿಷ್ಯತಿ ನ ಸಂಶಯಃ ।
ಮುನಯೇ ತನ್ಮೃಕಂಡಾಯ ಪುತ್ರೋ ವೈ ದೀಯತಾಮಿತಿ ॥ ೧೦ ॥
ಮಯಾ ಪ್ರೋಕ್ತಂ ವರಾರೋಹೇ ಪುತ್ರಮಿಚ್ಛತ್ಯಯೋನಿಜಂ ॥ ೧೧ ॥

---

ತರಗೆಲೆಗಳನ್ನು ಹೊಟ್ಟೆಗೊಂದೆರಡರಂತೆ ತಿನ್ನುತ್ತಲೂ ಕಾಲವನ್ನು ಕಳೆಯುತ್ತಲಿದ್ದನು.

೬. ಇವೇ ಮೊದಲಾಗಿ ಅನೇಕಗಳಾದ ತಪಸ್ಸುಗಳನ್ನು ಆ ಮುನಿವರ್ಯನು ಹಿಮಾಚಲಪ್ರಾಂತ್ಯದಲ್ಲಿ ಮಾಡುತ್ತ ಹನ್ನೆರಡು ವರುಷಗಳನ್ನು ಕಳೆದನು.

೭. ದೇವಿಯೆ! ಆದರೂ ನಾನು ಆತನ ದುಷ್ಕರವಾದ ತಪಸ್ಸಿನಿಂದ ಸಂತುಷ್ಟನಾಗಲಿಲ್ಲ. ಆಗ ಆತನ ಅಂತರಂಗವನ್ನು ತಿಳಿದು ನೀನು ನನ್ನಲ್ಲಿ ವಿಜ್ಞಾಪನೆಯನ್ನು ಮಾಡಿಕೊಂಡೆ.

೮. "ಮಹಾತ್ಮನಾದ ಈ ಮುನಿಯು ಪುತ್ರಸಂತಾನಕ್ಕಾಗಿ ಕ್ರೂರವಾದ ತಪಸ್ಸನ್ನಾಚರಿಸುತ್ತಿರುವನು. ತನ್ನ ತೇಜಸ್ಸಿನಿಂದ ಈ ಪರ್ವತವನ್ನೇ ಬೆಳಗಿಸುತ್ತ ಸಮುದ್ರಗಳನ್ನೂ ಶೋಷಿಸುತ್ತಿರುವನು.

೯. ದುಷ್ಕರವಾದ ಈ ತಪಸ್ಸಿನಿಂದ ಸ್ವರ್ಗಲೋಕದಲ್ಲಿರುವ ದೇವತೆಗಳೂ ತಳಮಳಿಸುತ್ತಿರುವರು. ಸಕಲ ಸಮುದ್ರಗಳೇ ಅಲ್ಲದೆ, ಸೂರ್ಯಚಂದ್ರರೂ ಕ್ಷುಭಿತರಾಗಿರುವರು.

೧೦. ಮಹರ್ಷಿಗಳಿಗೂ ಬುದ್ಧಿಭ್ರಮಣೆಯುಂಟಾಗುತ್ತಿರುವುದು. ಭೂಮ್ಯಾಕಾಶಗಳು ನಡುಗುತ್ತಿರುವುವು. ದೇವದೇವನೆ! ಅಕಾಲದಲ್ಲಿಯೇ ಪ್ರಳಯವು ಸಂಭವಿಸುತ್ತಿರುವುದು, ಸಂಶಯವಿಲ್ಲ. ಆದುದರಿಂದ ಮೃಕಂಡು ಮಹರ್ಷಿಗೆ ಪುತ್ರಸಂಪತ್ತನ್ನು ಕೊಡು" ಎಂದು ನೀನು ಕೇಳಿದೆ.

೧೧. ಸುಂದರಾಂಗಿಯೆ! ಅದಕ್ಕೆ ನಾನು ಉತ್ತರವನ್ನಿತ್ತೆನು. "ಎಲೌ ಪ್ರಿಯಳೆ! ಈತನು ಅಯೋನಿಜನಾದ ಮಗನನ್ನು ಅಪೇಕ್ಷಿಸುತ್ತಿರುವನು.

ಅಕ್ಷಯಂ ಸುವಿಶಾಲಾಕ್ಷಿ ಸಹಸ್ರಾಕ್ಷಮಿವಾಽಪರಂ ।
ಚಂದ್ರಾಭಂ ಚಂದ್ರವದನಂ ಚಂದ್ರವದ್ಭುವನಪ್ರಿಯಂ ॥ ೧೨ ॥
ನೀಲೋತ್ಪಲದಲಶ್ಯಾಮಂ ನೀಲೋತ್ಪಲದಲೇಕ್ಷಣಂ ।
ವಿಶಾಲಚಾರುಜಘನಂ ಚಾರುಕುಂಡಲಮಂಡಿತಂ ।
ಪುತ್ರಮಿಚ್ಛತಿ ದೇವೇಶಿ ಮೃಕಂಡೋಽಯಂ ಮಹಾಮುನಿಃ ॥ ೧೩ ॥
ತ್ವಯಾಽಪ್ಯುಕ್ತಂ ಪುನರ್ದೇವಿ ಕಾರುಣ್ಯಾದ್ಭಕ್ತವತ್ಸಲೇ ।
ನ ದದಾಸಿ ಮುನೇಃ ಪುತ್ರಂ ತಪ್ಯತೋ ವಿಷಮಂ ತಪಃ ॥ ೧೪ ॥
ಫಲಸ್ಯ ದಾತಾ ತಪಸಾಂ ಕಥಂ ತ್ವಂ ಗೀಯಸೇ ಬುಧೈಃ ।
ಕಸ್ತ್ವಾಂ ನು ಶರಣಂ ಗಚ್ಛೇಲ್ಲೋಕಾನಾಂ ಸಂಭವಂ ಭವಂ ॥ ೧೫ ॥
ಕರೋಷಿ ಸರ್ವದೈತ್ಯಾನಾಂ ಸರ್ವದೇವಾಕುಲಾಕುಲಂ ।
ತ್ವಯಾಽಹಂ ಸುಚಿರಂ ದೇವಂ ಸತ್ಕೃತಾ ಕರುಣಾಕರ ॥ ೧೬ ॥
ನಾಽನ್ಯೋ ಮಾಮನುಕಂಪಾರ್ಥಂ ಪ್ರಯಚ್ಛೇತ್ಪ್ರವರಂ ವರಂ ।
ಸ ತ್ವಂ ಸರ್ವಜಗನ್ನಾಥ ಪ್ರಭುಃ ಕರ್ತಾ ಪ್ರಶಾಸಿತಾ ॥ ೧೭ ॥

---

೧೨–೧೩. ವಿಶಾಲಾಕ್ಷಿಯೆ! ಆ ಮಗನು ಸಾವಿಲ್ಲದವನೂ, ಎರಡನೆಯ ಮಹೇಂದ್ರನಂತಿರುವವನೂ, ಶುಭ್ರವರ್ಣದವನೂ, ಚಂದ್ರನಂತೆ ಲೋಕಕ್ಕೆಲ್ಲ ಆಹ್ಲಾದಕರನೂ ಆಗಿರಬೇಕು. ಕನ್ನೈದಿಲೆಗಳ ದಳಗಳಂತೆ ಶ್ಯಾಮಲದೇಹನೂ, ಅವುಗಳನ್ನೇ ಹೋಲುವ ವಿಶಾಲನೇತ್ರಗಳುಳ್ಳವನೂ, ವಿಪುಲವೂ ಸುಂದರವೂ ಆದ ಜಘನದವನೂ, ರುಚಿರಕುಂಡಲಭೂಷಿತನೂ ಆದ ಮಗನನ್ನು ಈ ಮಹಾಮುನಿಯಾದ ಮೃಕಂಡುವು ಅಪೇಕ್ಷಿಸುತ್ತಿರುವನು.”

೧೪. ದೇವಿಯೆ! ಕಾರುಣ್ಯದಿಂದಲೂ ಭಕ್ತರಲ್ಲಿರುವ ವಾತ್ಸಲ್ಯದಿಂದಲೂ ನೀನು ಪುನಃ ಹೇಳಿದೆ. “ನೀನು ಈ ಮುನಿಗೆ ಮಗನನ್ನು ಕೊಡಲಿಲ್ಲ. ಆತನಾದರೊ ಅತಿದುಸ್ತರವಾದ ತಪಸ್ಸನ್ನಾಚರಿಸುತ್ತಿರುವನು.

೧೫. ಪ್ರಾಜ್ಞರೆಲ್ಲರೂ ನಿನ್ನನ್ನು ತಪಸ್ಸಿಗೆ ಫಲವನ್ನು ಕೊಡುವವನೆಂದು ಹೇಗೆ ಹೊಗಳುತ್ತಿರುವರೋ ಕಾಣೆ. ಲೋಕಗಳಿಗೆಲ್ಲ ಉತ್ಪತ್ತಿಕಾರಣನೂ ಪರಮೇಶ್ವರನೂ ಆದ ನಿನ್ನನ್ನು ಇನ್ನುಮೇಲೆ ಯಾರು ಶರಣುಹೋಗುವರು?

೧೬. ಸಕಲ ದೈತ್ಯರಿಗೂ ದೇವತೆಗಳ ಸಮೂಹದಿಂದ ಸಂಕಟವೊದಗುವಂತೆ ಮಾಡುವೆ. ಕರುಣಾಸಾಗರನೆ! ನಿನ್ನಿಂದ ನಾನು ಬಹುಕಾಲವಾಗಿ ಸತ್ಕಾರಗಳನ್ನು ಪಡೆಯುತ್ತಿರುವೆನು.

೧೭. ಅನುಕಂಪದಿಂದ ನನಗೆ ಉತ್ತಮ ವರವನ್ನು ಕೊಡುವವನು ಮತ್ತೊಬ್ಬನಿಲ್ಲ. ಸರ್ವಲೋಕೇಶ್ವರನೆ! ಅದಕ್ಕೆ ನೀನೊಬ್ಬನೇ ಸ್ವಾಮಿಯೂ ಕರ್ತೃವೂ, ನಿಯಾಮಕನೂ ಆಗಿರುವೆ.

ಹೇತುಃ ಸ್ವಾಮೀ ಮಹೇಶಾನೋ ದಯಾಲುರ್ಭಕ್ತವತ್ಸಲಃ ।
ಸರ್ವೇಶ್ವರ ಸ್ತುತೋಽಭೀಷ್ಟಂ ಕಿಂ ನ ವಿಪ್ರಾಯ ದೀಯತೇ ॥ ೧೮ ॥
ತಪಸಾ ಕ್ಷೀಣಪಾಪಸ್ಯ ಬ್ರಹ್ಮತ್ವೇ ಭಾವಿತಾತ್ಮನಃ ।
ಅಸ್ಯ ಪುತ್ರಪ್ರದಾನಂ ತ್ವಂ ಕುರು ಮದ್ವಚನಾಚ್ಛಿವ ॥ ೧೯ ॥
ಮಯಾ ತ್ವಂ ವರ್ಣಿತಾ ದೇವಿ ಸ್ನೇಹಾಕ್ಷರಪದೈಃ ಶುಭೈಃ ।
ಲೋಲಪಂಕಜಪತ್ರಾಕ್ಷಿ ಗೌರಿ ಭೂಧರಗಾತ್ರಜೇ ॥ ೨೦ ॥
ಸ್ಕಂದಮಾತಃ ಕಲಾಪೂರ್ಣಚಂದ್ರಬಿಂಬನಿಭಾನನೇ ।
ಕೃಶೋದರಿ ವಿನಿಃಸ್ಸೃಷ್ಟಚಾಮೀಕರನಿಭದ್ಯುತೇ ॥ ೨೧ ॥
ತ್ವಯೋಕ್ತಂ ಪ್ರಕರಿಷ್ಯಾಮಿ ವಾಕ್ಯಂ ದ್ವಿರದಗಾಮಿನಿ ।
ತ್ವಂ ಸಿದ್ಧಿಃ ಸಾಧಕಾ ಸಾಧ್ಯಂ ತ್ವಂ ಕ್ರಿಯಾ ಪ್ರಕ್ರಮಾಶ್ರಯಾ ॥ ೨೨ ॥
ತ್ವಂ ಮಾಯಾ ಶ್ರೀರ್ದ್ಯುತಿಃ ಶ್ರೀಮಚ್ಛ್ರದ್ಧಾ ರುಚಿರಸಂತತಿಃ ।
ಕೃತ್ವಾ ಮಾನಂ ಬಹುವಿಧಂ ಮಯ್ಯೇವ ಸಹ ಸುಂದರಿ ॥ ೨೩ ॥

---

೧೮. ನೀನು ಸಕಲಕ್ಕೂ ಕಾರಣನಾಗಿರುವೆ; ಪ್ರಭುವೂ, ಮಹೇಶ್ವರನೂ, ದಯಾಮಯನೂ, ಭಕ್ತಾನುಕಂಪಿಯೂ ಆಗಿರುವೆ. ಅಂತಹ ಸರ್ವಸ್ವಾಮಿಯಾದ ನೀನು ಬಹುಕಾಲದಿಂದ ಸ್ತುತಿಸಲ್ಪಡುತ್ತಿದ್ದರೂ ಬ್ರಾಹ್ಮಣನಿಗೇಕೆ ಅಭೀಷ್ಟವನ್ನು ಕೊಡದಿರುವೆ?

೧೯. ಎಲೈ ಶಿವನೆ! ಈತನು ತಪಸ್ಸಿನಿಂದ ತನ್ನ ಪಾಪಗಳನ್ನು ಕಳೆದುಕೊಂಡಿರುವನು. ವರ್ಣಾಶ್ರಮೋಚಿತ ಧರ್ಮಗಳಲ್ಲಿ ನಿರತನಾಗಿರುವನು. ನನ್ನ ಮಾತನ್ನು ಲಾಲಿಸಿ ಈತನಿಗೆ ಮಗನೊಬ್ಬನನ್ನು ಕರುಣಿಸು.''

೨೦–೨೧. ದೇವಿಯೆ! ನಾನೂ ನಿನ್ನನ್ನು ಬಹುವಾಗಿ ಶುಭವಚನಗಳಿಂದ ಹೊಗಳಿದೆನು. ''ಸುಂದರವಾದ ಕಮಲದಳದಂತಿರುವ ಕಣ್ಣುಗಳವಳೆ! ಗೌರಿಯೆ! ಪರ್ವತರಾಜಪುತ್ರಿಯೆ! ಷಣ್ಮುಖಮಾತೆಯೆ! ಪೂರ್ಣಕಲೆಗಳಿಂದ ಕೂಡಿದ ಚಂದ್ರನನ್ನು ಹೋಲುವ ಮುಖಕಾಂತಿಯುವಳೆ! ಬಡನಡುವಿನವಳೆ! ಪುಟಕ್ಕಿಟ್ಟ ಚಿನ್ನದ ಬಣ್ಣದವಳೆ!

೨೨. ಮದಗಜಗಾಮಿನಿ! ನೀನು ಹೇಳಿದುದನ್ನು ಶೀಘ್ರದಲ್ಲಿಯೇ ಮಾಡುತ್ತೇನೆ. ನೀನೇ ಸಿದ್ಧಿಯು, ಸಾಧಕಶಕ್ತಿಯು, ಸಾಧ್ಯವಸ್ತುವೂ ನೀನೇ ಆಗಿರುವೆ. ನೀನೇ ಉಪಕ್ರಮಕ್ಕೆ ಆಧಾರಳಾದ ಕ್ರಿಯಾಶಕ್ತಿಯೂ ಆಗಿರುವೆ.

೨೩. ನೀನೇ ಮಾಯೆಯು, ಸಂಪತ್ತರಳು, ಕಾಂತಿಯು, ಉತ್ತಮವಾದ ಶ್ರದ್ಧೆಯ ಸ್ವರೂಪಳಾದವಳು. ಸ್ಪೃಹಣೀಯವಾದ ಸಂತತಿಯುಳ್ಳವಳು. ಸುಂದರಿಯೆ! ಇಂತು ನಾನೇ ನಿನ್ನನ್ನು ಬಹುವಿಧವಾಗಿ ವರ್ಣಿಸಿ ಮರ್ಯಾದೆ ಮಾಡಿದೆನು.

ಭ್ರಾಜಸೇ ವಿವಿಧಾಕಾರಾ ಮೋಹಯಿತ್ವಾಽಖಿಲಂ ಜಗತ್ ।
ತ್ವಯಾಽಪ್ಯುಕ್ತಂ ಪುನರ್ದೇವಿ ಕ್ರಿಯತಾಂ ತು ವಚೋ ಮಮ ॥ ೨೪ ॥
ಮುನಯೇಽಸ್ಮೈ ತಪಃಕ್ಷೀಣಸರ್ವಗಾತ್ರಾಯ ಸಾಂಪ್ರತಂ ।
ವರಃ ಪ್ರದೀಯತಾಮಸ್ಮೈ ಬ್ರಾಹ್ಮಣಾಯ ಮಹೇಶ್ವರ ॥ ೨೫ ॥
ಮಯಾಽಪ್ಯುಕ್ತಂ ವಿಶಾಲಾಕ್ಷಿ ಶ್ರೂಯತಾಂ ವಚನಂ ಮಮ ।
ಅಸೌ ಗಚ್ಛತು ವಿಪ್ರೇಂದ್ರೋ ಮಹಾಕಾಲವನೋತ್ತಮೇ ॥ ೨೬ ॥
ಪತ್ತನೇಶ್ವರಪೂರ್ವೇ ತು ತತ್ರಾಽಽಸ್ತೇ ಲಿಂಗಮುತ್ತಮಂ ।
ಪುತ್ರಪ್ರದಂ ವಿಶಾಲಾಕ್ಷಿ ಮಹಾಪಾತಕನಾಶನಂ ॥ ೨೭ ॥
ಮದೀಯಂ ವಚನಂ ಶ್ರುತ್ವಾ ತ್ವಯಾಪ್ಯುಕ್ತೋ ದ್ವಿಜೋತ್ತಮಃ ।
ಮಹಾಕಾಲವನಂ ಗಚ್ಛ ಪುತ್ರಾರ್ಥಮೃಷಿಸತ್ತಮ ।
ತತ್ರ ಲಿಂಗಂ ಸಮಾರಾಧ್ಯ ಲಪ್ಸ್ಯಸೇ ಪುತ್ರಮುತ್ತಮಂ ॥ ೨೮ ॥
ತ್ವಯಾ ಸಂಪ್ರೇರಿತೋ ವಿಪ್ರಸ್ತಥೇತಿ ಕೃತನಿಶ್ಚಯಃ ।
ಆಶಯಾ ಪರಯಾ ಯುಕ್ತಃ ಪುತ್ರಕಾಮೋ ಜಗಾಮ ಸಃ ॥ ೨೯ ॥

---

೨೪. ನೀನು ಸಕಲಬ್ರಹ್ಮಾಂಡವನ್ನೂ ಮೋಹಗೊಳಿಸಿ ಅನೇಕರೂಪಗಳನ್ನು ತಳೆದು ಮೆರೆಯುತ್ತಿರುವೆ.'' ಇಂತೆಂದ ನನಗೆ ನೀನು ಮತ್ತೆ ''ನನ್ನ ಮಾತನ್ನು ನಡೆಸಿಕೊಡು'' ಎಂದು ಹೇಳಿದೆ.

೨೫. ''ಮಹೇಶ್ವರನೆ! ತಪಸ್ಸಿನಿಂದ ಸರ್ವಶರೀರವನ್ನೂ ಕ್ಷೀಣಗೊಳಿಸುತ್ತಿರುವವನೂ, ಬ್ರಾಹ್ಮಣನೂ ಆದ ಈ ಮುನಿವರ್ಯನಿಗೆ ಈ ಕ್ಷಣದಲ್ಲಿಯೇ ವರವನ್ನು ದಯಪಾಲಿಸು.''

೨೬. ವಿಶಾಲಾಕ್ಷಿಯೆ! ಅದಕ್ಕೆ ನಾನೆಂದೆನು. ''ಮಡದಿಯೆ! ನನ್ನ ಮಾತನ್ನು ಕೇಳು. ಈ ಬ್ರಾಹ್ಮಣೋತ್ತಮನು ಉತ್ತಮವಾದ ಮಹಾಕಾಲವನ ಕ್ಷೇತ್ರಕ್ಕೆ ಹೋಗಲಿ.

೨೭. ಅಲ್ಲಿ ಪತ್ತನೇಶ್ವರಲಿಂಗಕ್ಕೆ ಪೂರ್ವದಿಕ್ಕಿನಲ್ಲಿ ಉತ್ತಮಲಿಂಗವೊಂದಿರುವುದು. ಪಾರ್ವತಿಯೆ! ಅದು ಸಂತಾನಪ್ರದವೂ, ಮಹಾಪಾತಕಗಳನ್ನು ನಾಶಗೊಳಿಸುವುದೂ ಆಗಿರುವುದು.''

೨೮. ನನ್ನ ಮಾತನ್ನು ಕೇಳಿ ನೀನೂ ಸಹ ಆ ದ್ವಿಜಶ್ರೇಷ್ಠನಿಗೆ, ''ಅಯ್ಯಾ ಋಷಿಸತ್ತಮನೆ! ಪುತ್ರಾಭಿಲಾಷಿಯಾದ ನೀನು ಮಹಾಕಾಲವನಕ್ಕೆ ಹೋಗಿ ಅಲ್ಲಿರುವ ಲಿಂಗವನ್ನು ಚೆನ್ನಾಗಿ ಪೂಜಿಸು. ಉತ್ತಮಪುತ್ರನನ್ನು ಪಡೆಯುವೆ'' ಎಂದು ಪ್ರೇರಿಸಿದೆ.

೨೯. ನಿನ್ನ ಮಾತುಗಳಿಂದ ಚೋದಿತನಾದ ಆ ಬ್ರಾಹ್ಮಣನು ಹಾಗೆಯೇ ಆಗಲೆಂದು ಪುತ್ರಲಾಭದ ಆಶೆಯಿಂದ ಆ ಮಹಾಕ್ಷೇತ್ರಕ್ಕೆ ಹೊರಟುಬಂದನು.

ತತ್ರ ದೃಷ್ಟ್ವಾ ಮಹಾಲಿಂಗಂ ಪುತ್ರದಂ ಪಾಪನಾಶನಂ ।
ಭಕ್ತ್ಯಾ ಸಂಸೇವಯಾಮಾಸ ತಪಸಾ ದುಷ್ಕರೇಣ ತು ॥ ೩೦ ॥
ಅಥ ಕೇನಾಽಪಿ ಕಾಲೇನ ನಿಃಸೃತೋಽಹಂ ತ್ವಯಾ ಸಹ ।
ಲಿಂಗಮಧ್ಯಾದ್ವರಾರೋಹೇ ಸ ಚ ಪ್ರೋಕ್ತೋ ದ್ವಿಜೋತ್ತಮಃ ॥ ೩೧ ॥
ಶರ್ವೋಽಹಮಿತಿ ಜಾನೀಹಿ ಬ್ರೂಹಿ ಕಿಂ ಕರವಾಣಿ ತೇ ।
ಆವಾಂ ಪುರಾ ಪ್ರಸನ್ನೌ ತೇ ಜ್ಞಾತಂ ತವ ವಿಚೇಷ್ಟಿತಂ ॥ ೩೨ ॥
ಯಮಿಚ್ಛಸಿ ವರಂ ಬ್ರಹ್ಮಂಸ್ತದದ್ಯ ಪ್ರದದಾಮಿ ತೇ ।
ಮಯಾ ಪ್ರೋಕ್ತಃ ಪ್ರಸನ್ನೇನ ಮುನಿಃ ಪರಮವಿಸ್ಮಿತಃ ॥ ೩೩ ॥
ಪ್ರಹ್ವಃ ಪ್ರಾಹ ಸುಹೃದಯೋ ನ ಹೃಷ್ಟೋ ಮುನಿಸತ್ತಮಃ ।
ಅಪತ್ಯಹೇತೋರ್ದೇವೇಶೌ ಕಿಮಲಭ್ಯಂ ಭವೇನ್ಮಮ ॥ ೩೪ ॥
ಮಯಾ ಪ್ರೋಕ್ತಸ್ತದಾ ದೇವಿ ಮೃಕಂಡೋ ಮುನಿಸತ್ತಮಃ ।
ಅಯೋನಿಜಸ್ತೇ ತನಯೋ ಮಾನುಷೋ ವೈ ಭವಿಷ್ಯತಿ ।
ಐಶ್ವರ್ಯಜ್ಞಾನಸಂಪನ್ನೋ ದೀರ್ಘಾಯುಃ ಸರ್ವವಿತ್ಸುಧೀಃ ॥ ೩೫ ॥

---

೩೦. ಪುತ್ರಪ್ರದವೂ, ಪಾಪನೋದಕವೂ ಆದ ಆ ಮಹಾಲಿಂಗವನ್ನು ಕಂಡು ಆತನು ದುಸ್ಸಾಧ್ಯವಾದ ತಪಸ್ಸಿನಿಂದ ಕೂಡಿ ಭಕ್ತಿಯಿಂದ ಸೇವಿಸಿದನು.

೩೧. ಮಂಗಳಾಂಗಿಯೆ! ಹೀಗೆಯೇ ಕೆಲವು ಕಾಲವು ಕಳೆಯಲು ನಿನ್ನೊಡನೆ ನಾನು ಆ ಲಿಂಗದ ಮಧ್ಯದಿಂದಾವಿರ್ಭವಿಸಿ ಆ ದ್ವಿಜಶ್ರೇಷ್ಠನಿಗೆ ಹೇಳಿದೆನು.

೩೨. "ಎಲೈ ಮುನಿಯೆ! ನಾನೇ ಪರಮೇಶ್ವರನೆಂದು ತಿಳಿ. ನಿನಗೇನು ಬೇಕೆಂಬುದನ್ನು ತಿಳಿಸು. ನಾವಿಬ್ಬರೂ ನಿನ್ನಲ್ಲಿ ಮೊದಲೇ ಪ್ರಸನ್ನರಾಗಿದ್ದೆವು. ನಿನ್ನ ತಪಸ್ಸೇ ಮೊದಲಾದುವೆಲ್ಲವೂ ನಮಗೆ ಮುಂಚೆಯೇ ತಿಳಿದಿರುವುದು.

೩೩. ಎಲೈ ಬ್ರಾಹ್ಮಣೋತ್ತಮನೆ! ನೀನು ಅಪೇಕ್ಷಿಸಿದ ವರವನ್ನು ನಿನಗೆ ಈ ಕ್ಷಣದಲ್ಲಿಯೇ ಕೊಡಲುಳ್ಳವನು." ಇಂತು ನಾನು ಪ್ರಸನ್ನನಾಗಿ ಆಡಿದ ಮಾತಿನಿಂದ ಮುನಿಯು ಅತ್ಯಂತ ವಿಸ್ಮಿತನಾದನು.

೩೪. ಪ್ರಿಯಳೆ! ಆತನು ಆನಂದದಿಂದ ನಮಸ್ಕಾರವನ್ನು ಮಾಡುತ್ತ "ಪುತ್ರಾರ್ಥಿಯಾಗಿ ತಪಸ್ಸನ್ನು ಮಾಡುತ್ತಿರುವ ನೀವಿಬ್ಬರೂ ಪ್ರತ್ಯಕ್ಷರಾಗಿರುವ ನನಗೆ ಅಲಭ್ಯವಾದುದೇನು?" ಎಂದನು.

೩೫. ದೇವಿಯೆ! ಆಗ ಮುನಿಶ್ರೇಷ್ಠನಾದ ಮೃಕಂಡುವಿಗೆ ನಾನಿಂತೆಂದೆನು. "ನಿನಗೆ ಮನುಷ್ಯಸ್ವಭಾವದವನಾದರೂ ಅಯೋನಿಜನಾದ ಮಗನೊಬ್ಬನಾಗುವನು. ಆತನು ಐಶ್ವರ್ಯ ಜ್ಞಾನಗಳಿಂದ ಪರಿಪೂರ್ಣನಾಗಿ ದೀರ್ಘಾಯುಷ್ಮಂತನೂ, ಸರ್ವಜ್ಞನೂ ಆಗಿರುವನು."

ಏತಸ್ಮಿನ್ನಂತರೇ ದೇವಿ ಪ್ರಾದುರ್ಭೂತೋ ಮಹಾತಪಾಃ ।
ಪುತ್ರಃ ಪರಮಧರ್ಮಾತ್ಮಾ ಮಾರ್ಕಂಡೇಯೋ ಮಹಾಮುನಿಃ ॥ ೩೬ ॥
ಸ ಜಾತಮಾತ್ರೋ ಧರ್ಮಾತ್ಮಾ ತತ್ರೈವ ತಪಸಿ ಸ್ಥಿತಃ ।
ದೇವಮಾರಾಧಯಾಮಾಸ ಸ ತುಷ್ಟೋಽಥ ವರಂ ದದೌ ॥ ೩೭ ॥
ತ್ವಯಾಽಹಂ ಜಾತಮಾತ್ರೇಣ ತಪಸಾ ತೋಷಿತೋ ಯತಃ ।
ತಸ್ಮಾತ್ಖ್ಯಾತಿಂ ಗಮಿಷ್ಯಾಮಿ ತ್ವನ್ನಾಮ್ನಾ ದ್ವಿಜಸತ್ತಮ ॥ ೩೮ ॥
ಯೇ ಮಾಂ ಪಶ್ಯಂತಿ ವಿಪ್ರೇಂದ್ರ ಭಕ್ತ್ಯಾ ಪರಮಯಾ ಯುತಾಃ ।
ಪ್ರಾಪ್ನುವಂತಿ ಗತಿಂ ನಿತ್ಯಂ ತೇ ಸದಾನಂದದಾಯಿನೀಂ ॥ ೩೯ ॥
ಪ್ರಸಂಗಾದ್ಯೇ ಗಮಿಷ್ಯಂತಿ ತೇ ಸದಾ ದುಃಖವರ್ಜಿತಾಃ ।
ದೇವದೇವಂ ಸಮಾರಾಧ್ಯ ಮೋದಿಷ್ಯಂತಿ ಹಿ ತೇ ನರಾಃ ॥ ೪೦ ॥
ತ್ರ್ಯಕ್ಷಾ ಗಣೇಶ್ವರಾಃ ಸಿದ್ಧಾಃ ಸಿದ್ಧಗಂಧರ್ವಸೇವಿತಾಃ ।
ತೇ ಭವಿಷ್ಯಂತಿ ಸತತಂ ಮಮ ಭಕ್ತಾಶ್ಚ ಯೇ ನರಾಃ ॥ ೪೧ ॥

---

೩೬. ನಾನು ಹೇಳುತ್ತಿರುವಂತೆಯೇ ಮಹಾತಪಸ್ವಿಯೂ, ಪರಮಧರ್ಮಾತ್ಮನೂ, ಮಹಾಮುನಿಯೂ ಆದ ಮಾರ್ಕಂಡೇಯನೆಂಬ ಪುತ್ರನೊಬ್ಬನುದಯಿಸಿದನು.

೩೭. ಧರ್ಮಾತ್ಮನಾದ ಆತನು ಹುಟ್ಟಿದ ಕ್ಷಣದಿಂದ ಅಲ್ಲಿಯೇ ನಿಂತು ತಪಸ್ಸಿನಲ್ಲಿ ನಿರತನಾದನು. ಆ ಮಹಾಲಿಂಗವನ್ನೇ ಪೂಜಿಸುತ್ತಿರಲು ಸಂತುಷ್ಟನಾದ ಮಹೇಶ್ವರನು ಆತನಿಗೆ ವರವನ್ನಿತ್ತನು.

೩೮. "ದ್ವಿಜೋತ್ತಮನೆ! ಹುಟ್ಟಿದಕೂಡಲೆ ನೀನು ತಪಸ್ಸಿಗೆ ತೊಡಗಿ ನನ್ನನ್ನು ಸಂತೋಷಗೊಳಿಸಿರುವೆಯಾದುದರಿಂದ ನಾನು ನಿನ್ನ ಹೆಸರಿನಿಂದಲೇ ಪ್ರಖ್ಯಾತಿಯನ್ನು ಪಡೆಯುವೆನು.

೩೯. ವಿಪ್ರೇಂದ್ರನೆ! ಯಾರು ಪರಮಭಕ್ತಿಯಿಂದ ನನ್ನ ದರ್ಶನವನ್ನು ತೆಗೆದುಕೊಳ್ಳುವರೊ, ಅವರು ಶಾಶ್ವತವೂ, ಸದಾನಂದಪ್ರದವೂ ಆದ ಗತಿಯನ್ನು ಪಡೆಯುವರು.

೪೦. ಪ್ರಸಂಗವಶದಿಂದ ಯಾರು ನನ್ನಲ್ಲಿಗೆ ಬರುವರೊ, ಅವರೂ ದುಃಖರಹಿತರಾಗುವರು. ಮತ್ತು ದೇವಾಧಿದೇವನಾದ ನನ್ನನ್ನು ಪೂಜಿಸಿದವರು ಆನಂದಭರಿತರಾಗುವರು.

೪೧. ಯಾವ ನರರು ನನ್ನ ಭಕ್ತರಾಗಿರುವರೊ, ಅವರೆಲ್ಲರೂ ತ್ರಿಲೋಚನರೂ, ಗಣಾಧಿಪತಿಗಳೂ, ಸಿದ್ಧರೂ ಆಗಿ ನಿತ್ಯವೂ ಸಿದ್ಧಗಂಧರ್ವಾದಿಗಳಿಂದ ಸೇವೆಗಳನು ಸ್ವೀಕರಿಸುತ್ತಿರುವರು.

ಯೇ ಮಾಂ ಸಂಪೂಜಯಿಷ್ಯಂತಿ ಹೃದ್ಯೈಃ ಪುಷ್ಪೈಃ ಸುಗಂಧಿಭಿಃ ।
ದೀರ್ಘಾಯುಷೋ ಭವಿಷ್ಯಂತಿ ಸದಾ ದುಃಖವಿವರ್ಜಿತಾಃ ॥ ೪೨ ॥
ಇತ್ಯುಕ್ತ್ವೋ ತೇನ ಲಿಂಗೇನ ಮಾರ್ಕಂಡೇಯೋ ಮಹಾತಪಾಃ ।
ತಪಶ್ಚಚಾರ ತತ್ರೈವ ಮಹಾಕಾಲವನೇ ಸ್ಥಿತಃ ॥ ೪೩ ॥
ಪ್ರಭಾವಃ ಕಥಿತೋ ದೇವಿ ಮಾರ್ಕಂಡೇಯೇಶ್ವರಸ್ಯ ಚ ।
ಶಿವೇಶ್ವರಸ್ಯ ದೇವಸ್ಯ ಮಾಹಾತ್ಮ್ಯಂ ಶೃಣು ಸಾಂಪ್ರತಂ ॥ ೪೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಮಾರ್ಕಂಡೇಯೇಶ್ವರಮಾಹಾತ್ಮ್ಯವರ್ಣನಂ"
ನಾಮ ಷಟ್ತ್ರಿಂಶೋಽಧ್ಯಾಯಃ

---

೪೨. ಮನೋಹರಗಳೂ, ಸುಗಂಧಯುಕ್ತಗಳೂ ಆದ ಪುಷ್ಪಗಳಿಂದ ಯಾರು ನನ್ನನ್ನರ್ಚಿಸುವರೊ, ಅವರು ದೀರ್ಘಾಯುಗಳೂ ದುಃಖವಿಲ್ಲದವರೂ ಆಗಿರುವರು."

೪೩. ಇಂತೆಂದು ಆ ಮಹಾಲಿಂಗವು ವರಗಳನ್ನೀಯಲು ಮಹಾತಪಸ್ಸಂಪನ್ನನಾದ ಮಾರ್ಕಂಡೇಯನು ಆ ಮಹಾಕಾಲವನದಲ್ಲಿಯೇ ನಿಂತು ಆ ಲಿಂಗದ ಬಳಿಯಲ್ಲಿಯೇ ತಪಸ್ಸನ್ನು ಮಾಡುತ್ತಿದ್ದನು.

೪೪. ದೇವಿಯೆ! ಇಂತಿರುವ ಮಾರ್ಕಂಡೇಯನ ಮಹಾಮಹಿಮೆಯನ್ನು ನಿನಗರುಹಿದೆನು. ಇನ್ನು ಶಿವೇಶ್ವರಮಹಾದೇವನ ಮಾಹಾತ್ಮ್ಯವನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಮಾರ್ಕಂಡೇಯೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತತ್ರಿಂಶೋಽಧ್ಯಾಯಃ

## ಶಿವೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ :—

ಸಪ್ತತ್ರಿಂಶತ್ತಮಂ ವಿದ್ಧಿ ಶಿವೇಶ್ವರಮನಂತಕಂ ।
ಯಸ್ಯ ದರ್ಶನಮಾತ್ರೇಣ ಜಾಯಂತೇ ಸರ್ವಸಂಪದಃ ॥ ೧ ॥
ರಾಜಾ ರಿಪುಂಜಯೋ ನಾಮ ಬ್ರಹ್ಮಕಲ್ಪೇ ಪುರಾಽಭವತ್ ।
ಮಹಾಕಾಲವನೇ ರಮ್ಯೇ ಪ್ರಜಾಪಾಲನತತ್ಪರಃ ॥ ೨ ॥
ದೇವಪೂಜಾಂ ವ್ರತಂ ದಾನಂ ಧ್ಯಾನಂ ಸ್ವಾಧ್ಯಾಯಸತ್ಕ್ರಿಯಾಂ ।
ಪ್ರಜಾಪಾಲನಕಂ ಕೃತ್ವಾ ಸ ಸ ಜಾನಾತಿ ಕಿಂಚನ ॥ ೩ ॥
ಸ ಪ್ರಜಾಃ ಪಾಲಯಾಮಾಸ ಪುತ್ರವತ್ಪರಿಪಾಲಿತಾಃ ।
ಪ್ರಜಾಸ್ತಾಃ ಸುಖಸಂವೃದ್ಧಾ ಜರಾಮೃತ್ಯುವಿವರ್ಜಿತಾಃ ॥ ೪ ॥
ಪುತ್ರಿಣೋ ಧನಧಾನ್ಯಾಢ್ಯಾಃ ಸರ್ವಕಾಮಸಮನ್ವಿತಾಃ ।
ತಸ್ಯೈವ ತೇಜಸಾ ವ್ಯಾಪ್ತಂ ಮಹಾಕಾಲಪುರಂ ಪ್ರಿಯೇ ॥ ೫ ॥

---

## ಕನ್ನಡದ ಅನುವಾದ

### ಶಿವೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಮೂವತ್ತೇಳನೆಯ ಮಹಾಲಿಂಗವೇ ಅನಾದಿನಿಧನವಾದ ಶಿವೇಶ್ವರನೆಂದು ತಿಳಿ. ಅದನ್ನು ನೋಡಿದ ಮಾತ್ರದಿಂದಲೇ ಮನುಷ್ಯನಿಗೆ ಸಕಲೈಶ್ವರ್ಯಗಳೂ ಕರತಲಗತಗಳಾಗುವುವು.

೨. ಹಿಂದೆ ಬ್ರಹ್ಮಕಲ್ಪದಲ್ಲಿ ಈ ಮಹಾಕಾಲವನವೆಂಬ ರಮ್ಯಕ್ಷೇತ್ರವನ್ನು ಪ್ರಜಾಪಾಲನದಲ್ಲಿಯೇ ನಿರತನಾಗಿದ್ದ ರಿಪುಂಜಯನೆಂಬ ಹೆಸರಿನ ಮಹಾರಾಜನೊಬ್ಬನು ಪಾಲಿಸುತ್ತಿದ್ದನು.

೩. ದೇವತಾರ್ಚನೆ, ವ್ರತೋಪವಾಸಗಳು, ದಾನಗಳು, ಧ್ಯಾನ, ವೇದಾಧ್ಯಯನಾದಿ ಸತ್ಕಾರ್ಯ, ಪ್ರಜೆಗಳನ್ನು ಪೋಷಿಸುವುದು ಮುಂತಾದುವುಗಳಲ್ಲಿಯೆ ನಿರತನಾಗಿದ್ದ ಆತನು ಮತ್ತೇನನ್ನೂ ತಿಳಿದಿರಲಿಲ್ಲ.

೪. ಆತನು ಪ್ರಜೆಗಳನ್ನು ಚೆನ್ನಾಗಿ ಕಾಪಾಡುತ್ತಿದ್ದನು. ಆತನ ಆಳ್ವಿಕೆಯಲ್ಲಿ ಪ್ರಜೆಗಳೂ ಪುತ್ರರಂತೆ ಪರಿಪಾಲಿತರಾಗಿ ಸುಖಸಂತೋಷಗಳಲ್ಲಿಯೇ ಕಾಲವನ್ನು ಕಳೆಯುತ್ತ ಜರಾಮರಣಗಳನ್ನೂ ಗೆದ್ದಿದ್ದರು.

೫. ಎಲ್ಲರೂ ಪುತ್ರಸಂತಾನವಂತರೂ, ಧನಧಾನ್ಯಗಳಿಂದ ಕೂಡಿದವರೂ, ಸಕಲಾಭಿಲಾಷೆಗಳಿಂದ ತೃಪ್ತರಾದವರೂ ಆಗಿದ್ದರು. ಪ್ರಿಯಳೆ! ಈ ಮಹಾಕಾಲನಗರವೆಲ್ಲವೂ ಆತನ ತೇಜಸ್ಸಿನಿಂದಲೇ ವ್ಯಾಪ್ತವಾಗಿದ್ದಿತು.

ಏತಸ್ಮಿನ್ನಂತರೇ ಪೃಥ್ವೀಂ ತಸ್ಮಿಂಭಾಸತಿ ಪಾರ್ವತಿ ।
ಮಹಾಕಾಲವನಂ ದೇವಿ ಸ್ವಪುರಂ ಚಿಹ್ನಿತಂ ಮಯಾ ।
ವಿನಾ ಚೋಜ್ಜಯಿನೀಂ ಗಂತುಂ ನ ರತಿಂ ಪ್ರಾಪ ಕುತ್ರಚಿತ್ ॥ ೬ ॥
ತದಾ ಮಯಾ ಗಣೇಶಸ್ತು ಶಿವಸಂಜ್ಞೋ ಗಣಾಽಗ್ರಣೀಃ ।
ಚಿಂತಿತಸ್ತತ್ಕ್ಷಣಾತ್ಪ್ರಾಪ್ತಃ ಕಿಂ ಕರೋಮೀತ್ಯುವಾಚ ಹ ॥ ೭ ॥
ಮಯಾಪ್ಯುಕ್ತೋ ಗಣೇಶೋ ಹಿ ಗಚ್ಛ ಪುತ್ರ ಮಮ ಪ್ರಿಯಂ ।
ಮಹಾಕಾಲಪುರಂ ವ್ಯಾಪ್ತಂ ರಾಜ್ಞಾ ರಿಪುಂಜಯೇನ ಹಿ ॥ ೮ ॥
ಇತ್ಯುಕ್ತಃ ಸ ಮಯಾ ದೇವಿ ತಥೇತ್ಯುಕ್ತ್ವಾ ಕೃತಾಂಜಲಿಃ ।
ಗತೋಽಸೌ ಮಾನುಷೇ ಲೋಕೇ ಮಮಾಜ್ಞಾಹರ್ಷಿತಾನನಃ ॥ ೯ ॥
ಗತೇ ಶಿವಗಣೇ ದೇವಿ ಸಂತುಷ್ಟೋಽಹಂ ಶುಚಿಸ್ಮಿತೇ ।
ಯುಕ್ತಿಜ್ಞಾನವೃತೋ ದಕ್ಷಃ ಪ್ರಭೋರ್ಭೃತ್ಯೋ ಹಿ ದುರ್ಲಭಃ ॥ ೧೦ ॥
ತತಃ ಸ ಭಿಕ್ಷುರೂಪೇಣ ವನೌಷಧಿಪರಿಗ್ರಹಃ ।
ಗೃಹೀತ್ವಾ ದುಂದುಭಿಂ ಸ್ಕಂಧೇ ವಚನಂ ಚೇದಮಬ್ರವೀತ್ ॥ ೧೧ ॥

---

೬. ಪಾರ್ವತಿಯೆ! ಆತನು ಭೂಮಿಯನ್ನು ಏಕಾತಪತ್ರದಿಂದಾಳುತ್ತಿರುವ ಸಮಯದಲ್ಲಿಯೇ ಮಹಾಕಾಲವನವನ್ನು ನನ್ನ ವಾಸಸ್ಥಾನವನ್ನಾಗಿ ಮಾಡಿಕೊಳ್ಳಬೇಕೆಂಬ ಸಂಕಲ್ಪವುಂಟಾಯಿತು. ಆದರೆ ಆ ರಾಜನು ಉಜ್ಜಯಿನಿಯನ್ನು ಬಿಟ್ಟು ಮತ್ತೆಲ್ಲಿಗೂ ಹೋಗಲು ಇಷ್ಟವುಳ್ಳವನಾಗಲಿಲ್ಲ.

೭. ಆಗ ನಾನು ಗಣನಾಯಕನಾದ ಶಿವನಾಮಕನಾದವನೊಬ್ಬನನ್ನು ಕುರಿತು ಯೋಚಿಸಿದೆನು. ಆ ಕ್ಷಣದಲ್ಲಿಯೇ ಆತನು ಎದುರಿನಲ್ಲಿ ನಿಂತು "ಏನು ಮಾಡಲಿ?" ಎಂದು ಬಿನ್ನವಿಸಿಕೊಂಡನು.

೮. ನಾನೂ ಆ ಗಣೇಶನಿಗೆ ಹೇಳಿದೆನು. "ಪುತ್ರ! ನನಗೆ ಅತ್ಯಂತ ಪ್ರಿಯವೂ ರಿಪುಂಜಯ ಮಹಾರಾಜನ ತೇಜಸ್ಸಿನಿಂದ ಅಭಿಭೂತವೂ ಆದ ಮಹಾಕಾಲವನಕ್ಕೆ ಹೊರಡು."

೯. ಇಂತೆಂದ ನನ್ನ ಮಾತನ್ನು ಅಂಜಲಿಬಂಧದಿಂದ ಕೇಳಿ ಆನಂದದಿಂದರಳಿದ ಮುಖಕಮಲವುಳ್ಳವನಾಗಿ ಹಾಗೆಯೇ ಆಗಲೆಂದು ಆ ಗಣೇಶ್ವರನು ಮನುಷ್ಯಲೋಕಕ್ಕೆ ಹೋದನು.

೧೦. ಶುಚಿಸ್ಮಿತೆಯೆ! ಆತನು ಹೊರಟುಹೋಗಲು ನಾನು ಬಹಳ ಸಂತುಷ್ಟನಾದೆನು. ಯುಕ್ತಿಜ್ಞಾನಗಳಿಂದ ಕೂಡಿದವನೂ ಕಾರ್ಯದಕ್ಷನೂ ಆದ ಸೇವಕನು ಪ್ರಭುವಿಗೆ ದೊರಕುವುದು ದುರ್ಲಭವಷ್ಟೆ.

೧೧. ಬಳಿಕ ಆ ಗಣನಾಯಕನು ಭಿಕ್ಷುವಿನ ವೇಷವನ್ನು ಧರಿಸಿ ಅನೇಕ ಓಷಧಿ ವನಸ್ಪತಿಗಳನ್ನು ಸಂಗ್ರಹಿಸಿ ಆ ಮೂಟೆಯನ್ನೂ ದುಂದುಭಿಯನ್ನೂ ಹೆಗಲಮೇಲಿಟ್ಟುಕೊಂಡು ಕೂಗಿಡುತ್ತ ಹೊರಟನು.

ಕಶ್ಚ ಭೂತವಿಷಗ್ರಸ್ತೋ ನಾನಾದೋಷೈಃ ಸಮಾಶ್ರಿತಃ ।
ಕಸ್ಯ ಕೋ ವ್ಯಾಧಿರತ್ಯುಗ್ರೋ ಯಮಹಂ ಪ್ರಶಮಂ ನಯೇ ॥ ೧೨ ॥
ಕೋಽಪುತ್ರಃ ಪುತ್ರವಾನಸ್ತು ಮನ್ಮಂತ್ರಬಲಮಾಶ್ರಿತಃ ।
ವೈದ್ಯೋಽಸ್ಮಿ ಸರ್ವಯುಕ್ತಿಜ್ಞಃ ಸರ್ವಕಾಮಪ್ರದಾಯಕಃ ॥ ೧೩ ॥
ತಸ್ಯ ವಾಕ್ಯಂ ಸಮಾಕರ್ಣ್ಯ ಕೌತೂಹಲಸಮನ್ವಿತಃ ।
ಸವೃದ್ಧಬಾಲನಾರೀಕೋ ಜನಸ್ತಮಭಿಜಗ್ಮಿವಾನ್ ॥ ೧೪ ॥
ತೇಷಾಂ ಸ ನಾಶಯಾಮಾಸ ವ್ಯಾಧಿಂ ದುರ್ಜಯಮುಷ್ಯತಿ ।
ತೇ ಚ ತಸ್ಮೈ ಸುಮಹತೀಂ ಪೂಜಾಂ ಚಕ್ರುಃ ಸುಹರ್ಷಿತಾಃ ।
ಹೇಮರತ್ನಾಂಬರಧನೈರ್ಧಾನ್ಯಗ್ರಾಮಪುರಾದಿಭಿಃ ॥ ೧೫ ॥
ಏವಂ ಸ ನ್ಯವಸತ್ತತ್ರ ವರ್ಷಾಣಿ ಚ ಚತುರ್ದಶ ।
ನೃಪತೇರಂತರಪ್ರೇಕ್ಷೀ ನ ಚಾಂತರಮವಾಪ ಸಃ ॥ ೧೬ ॥
ಅಹೋಽತಿದುಷ್ಕರೋ ರಾಜಾ ಅಹೋ ಲೋಕಪರಾಯಣಃ ।
ಅಹೋ ತೇಜೋನಿಧಿರ್ವೀರೋ ದುರ್ಜಯೋಽಸೌ ಮಹಾಮತಿಃ ॥ ೧೭ ॥

---

೧೨. "ಯಾವನಿಗೆ ಭೂತ ಮತ್ತು ವಿಷಗಳ ಲೇಪವಿರುವುದು ? ಯಾವನು ದೇಹದಲ್ಲಿ ಅನೇಕ ದೋಷಗಳನ್ನು ತಾಳಿರುವನು ? ಯಾವನಿಗೆ ಯಾವ ಅತ್ಯುಗ್ರವಾದ ವ್ಯಾಧಿಯಿರುವುದು ? ಅದೆಲ್ಲವನ್ನೂ ನಾನು ನಾಶಮಾಡುವೆನು.

೧೩. ಅಪುತ್ರವಂತನಾದ ಯಾವನು ನನ್ನ ಮಂತ್ರಗಳ ಬಲವನ್ನಾಶ್ರಯಿಸಿ ಪುತ್ರಸಂತಾನವನ್ನು ಪಡೆಯಲಿಳಸುವನು ? ಸರ್ವೋಪಾಯಗಳನ್ನರಿತವನೂ, ಸರ್ವಾಭೀಷ್ಟಪ್ರದಾಯಕನೂ ಆದವನು ನಾನು."

೧೪–೧೫. ಆತನ ಮಾತುಗಳನ್ನು ಕೇಳಿ ಕುತೂಹಲದಿಂದ ಕೂಡಿ ವೃದ್ಧರೂ, ಬಾಲಕರೂ, ಸ್ತ್ರೀಯರೂ ಮೊದಲಾಗಿ ಎಲ್ಲ ಜನರೂ ಆತನನ್ನೇ ಹಿಂಬಾಲಿಸಿ ಬರುತ್ತಿದ್ದರು. ಅವರಿಗಿದ್ದ ಅತಿ ದುಸ್ಸಾಧ್ಯಗಳಾದ ರೋಗಗಳನ್ನೂ ಆತನು ನಾಶಮಾಡಿದನು. ಅವರೂ ಅತ್ಯಂತಾನಂದದಿಂದ ಚಿನ್ನ, ನವರತ್ನಗಳು, ವಸ್ತ್ರಗಳು, ಧನ, ಧಾನ್ಯಗಳು, ಗ್ರಾಮಗಳು, ಅಗ್ರಹಾರಗಳು ಮುಂತಾದುವುಗಳನ್ನಿತ್ತು ಆತನಿಗೆ ವಿಶೇಷ ಸತ್ಕಾರಗಳನ್ನು ಮಾಡುತ್ತಿದ್ದರು.

೧೬. ಇಂತು ಆತನು ಆ ಮಹಾಕಾಲನಗರದಲ್ಲಿ ರಾಜ್ಯಾಧಿಕಾರದಲ್ಲಿ ಛಿದ್ರವನ್ನರಸುತ್ತ ಹದಿನಾಲ್ಕು ವರ್ಷಗಳು ವಾಸಮಾಡಿದರೂ, ರಾಜನಲ್ಲಿ ಒಂದಾದರೂ ಲೋಪವು ಕಂಡುಬರಲಿಲ್ಲ.

೧೭. "ಆಹಾ ! ಈ ರಾಜನು ಎಷ್ಟು ದುಸ್ಸಾಧ್ಯನು. ಎಷ್ಟು ಪ್ರಜಾಕ್ಷೇಮಪರಾಯಣನು ! ಎಷ್ಟು ತೇಜೋವಂತನು ! ಎಂತಹ ವೀರನು ! ಮಹಾಮೇಧಾವಿಯಾದ ಈತನನ್ನು ಜಯಿಸುವುದು ಅಸಾಧ್ಯವೇ ಸರಿ.

ಏವಂ ಸ ಚಿಂತಯಂಸ್ತತ್ರ ಭಿಕ್ಷುರೂಪೀ ಶಿವೋ ಗಣಃ ।
ಜೀರ್ಣೋದ್ಯಾನಲತಾಜಾಲಗಹನೇ ಸಂವೃತಃ ಸ್ಥಿತಃ ॥ ೧೮ ॥
ಅತ್ರಾಂತರೇ ತು ನೃಪತೇಸ್ತಸ್ಯ ಲೋಕವ್ರತಸ್ಯ ತು ।
ಮಹಿಷೀ ನಿರ್ಜರಾ ರಾಜ್ಞಃ ಪ್ರಾಣೇಭ್ಯೋಽಪಿ ಗರೀಯಸೀ ॥ ೧೯ ॥
ರೂಪೇಣಾಪ್ರತಿಮಾ ಲೋಕೇ ಸಾ ಚಾಽಪುತ್ರಾ ಸುತಾರ್ಥಿನೀ ।
ಸಪತ್ನೀ ಬಹುಲಾ ದೇವೀ ಶ್ರುತ್ವಾ ಭಿಕ್ಷುಂ ಸಮಾಶ್ರಿತಾ ॥ ೨೦ ॥
ಸರ್ವಕಾಮಪ್ರದಂ ಜ್ಞಾತ್ವಾ ನಾಗರಾಣಾಂ ಸಕೌತುಕಂ ।
ಸ್ವಾಂ ಸಖೀಂ ಪ್ರೇಷಯಾಮಾಸ ಸುನಂದಾಂ ನಾಮ ಭಾಮಿನೀ ॥ ೨೧ ॥
ಭಿಕ್ಷೋರಾಯತನೇ ಗುಪ್ತಮಂತಃಪುರಮತಂದ್ರಿತಾ ।
ತಯಾ ಚಾಸಾದಿತೋ ಭಿಕ್ಷುರ್ವಿಚಿತ್ಯ ನಗರಂ ತದಾ ।
ಉವಾಚ ಚಿಂತಾಪರಮಂ ಭಿಕ್ಷುಂ ಭಿಕ್ಷಾಸಮನ್ವಿತಂ ॥ ೨೨ ॥
ಪ್ರಣಮ್ಯ ಪ್ರಾಂಜಲಿರ್ಭೂತ್ವಾ ಕಾರ್ಯಾರ್ಥಂ ವಿಗತವ್ಯಥಾ ।
ಭಗವನ್ಮಹಿಷೀ ರಾಜ್ಞಃ ಪ್ರಾಣೇಭ್ಯೋಽಪಿ ಗರೀಯಸೀ ।
ವಂಧ್ಯಾ ಪುತ್ರಾರ್ಥಿನೀ ದೇವೀ ಗುಪ್ತಂ ತ್ವಾಂ ದ್ರಷ್ಟುಮಿಚ್ಛತಿ ॥ ೨೩ ॥

---

೧೮. ಇಂತೆಂದು ಚಿಂತಿಸುತ್ತ ಭಿಕ್ಷುವೇಷಧಾರಿಯಾದ ಶಿವನೆಂಬ ಆ ಗಣನಾಯಕನು ಜೀರ್ಣೋದ್ಯಾನದಲ್ಲಿ ದಟ್ಟವಾಗಿ ಬೆಳೆದಿದ್ದ ಬಳ್ಳಿಗಳ ಪೊದೆಯಲ್ಲಿ ಅಗೋಚರನಾಗಿ ಕುಳಿತಿದ್ದನು.

೧೯–೨೦. ಆ ಸಮಯದಲ್ಲಿಯೇ ಲೋಕಸೇವಾಪರಾಯಣನಾದ ಆ ನೃಪತಿಯ ಪಟ್ಟಮಹಿಷಿಯೂ, ಯೌವನವತಿಯೂ, ಪತಿಗೆ ಪ್ರಾಣಗಳಿಗಿಂತಲೂ ಪ್ರಿಯತಮಳೂ, ಅಪ್ರತಿಮ ಸೌಂದರ್ಯವತಿಯೂ ಆದ ರಾಣಿಯು ಸಂತಾನರಹಿತಳಾಗಿದ್ದಳು. ಪುತ್ರಾರ್ಥಿನಿಯೂ, ಅನೇಕ ಸಪತ್ನೀಸಹಿತಳೂ ಆದ ಆಕೆಯು ಆ ಭಿಕ್ಷುವಿನ ಕಥೆಯನ್ನು ಕೇಳಿ ಆತನ ಬಳಿಗೆ ಹೋಗಬೆಳಸಿದಳು.

೨೧. ಆತನು ನಗರವಾಸಿಗಳ ಸಕಲಾಭೀಷ್ಟಗಳನ್ನೂ ನಡಸಿಕೊಡುತ್ತಿರುವನೆಂಬುದನ್ನು ತಿಳಿದು ಆ ರಾಣಿಯು ಸುನಂದೆಯೆಂಬ ಹೆಸರಿನ ತನ್ನ ಸಖಿಯನ್ನು ಕಳಿಸಿಕೊಟ್ಟಳು.

೨೨. ನಿಶ್ಶಂಕೆಯಿಂದ ಆತನನ್ನು ಗುಟ್ಟಾಗಿ ಅಂತಃಪುರಕ್ಕೆ ಕರೆದುತರಬೇಕೆಂದು ಹೇಳಿಕಳುಹಿಸಲು ಆ ಸಖಿಯು ಭಿಕ್ಷುವಿನ ಬಳಿಗೆ ಬಂದು ಹೇಳಿದಳು. ಭಿಕ್ಷೆಯನ್ನು ಪಡೆದು ಚಿಂತಾಪರನಾಗಿದ್ದ ಆತನನ್ನು ನಗರದಲ್ಲೆಲ್ಲ ಹುಡುಕಿ ಆತನಿಗೆಂದಳು.

**೨೩.** ತನ್ನ ಕಾರ್ಯದ ಗೌರವದಿಂದ ಆಕೆಯು ಆತನನ್ನು ನಮಸ್ಕರಿಸಿ ಅಂಜಲಿಬಂಧವನ್ನು ಮಾಡಿಕೊಂಡು ನಿಶ್ಚಿಂತೆಯಿಂದ ಪ್ರಾರ್ಥಿಸಿಕೊಂಡಳು.

ಭವಾನ್ಕೃಪಾಕರಃ ಪ್ರಾಯಃ ಪ್ರಜಾನಾಮಿಹಿತಪ್ರದಃ ।
ಏವಂ ಶ್ರುತ್ವಾ ಶಿವಗಣೋ ಲಬ್ಧ್ವಾ ರಂಧ್ರಮುವಾಚ ಹ ॥ ೨೪ ॥

ಭಿಕ್ಷುರುವಾಚ :—

ಭದ್ರೇ ಕೇಯಂ ತವ ಮತಿರ್ವಿಪರೀತಪ್ರಲಾಪಿನೀ ।
ಅವಿಜ್ಞಾತೋ ನರಪತೇರ್ಗೃಹಮೇಹೀತಿ ಭಾಷಸೇ ।
ಅವಿಜ್ಞಾತಃ ಪುರೇ ದೃಷ್ಟಃ ಸಾಹಸೀ ಪುರುಷೋ ಭವೇತ್ ॥ ೨೫ ॥
ಏವಂ ಮತ್ವಾ ವ್ರಜ ಕ್ಷಿಪ್ರಂ ಸ್ವಮೇವಾಂತಃಪುರಂ ಶುಭೇ ।
ನಾಽಹಂ ತತ್ರಾಗಮಿಷ್ಯಾಮಿ ಯಾವನ್ನ ನೃಪತೇರ್ವಚಃ ॥ ೨೬ ॥
ಸಾ ತು ತಸ್ಯ ವಚಃ ಶ್ರುತ್ವಾ ಭಿಕ್ಷೋಃ ಕ್ಷುಭಿತಮಾನಸಾ ।
ಜಗಾಮಾಂತಃಪುರಂ ತೂರ್ಣಂ ದೇವ್ಯೈ ತಚ್ಚ ನ್ಯವೇದಯತ್ ॥ ೨೭ ॥
ಸಖೀವಚಸ್ತು ಸಾ ಶ್ರುತ್ವಾ ದೇವೀ ದೀನಾ ಉವಾಚ ತಾಂ ।
ಸುನಂದೇ ಕ ಉಪಾಯೋಽಸ್ತಿ ರಾಜಾ ಯೇನ ಪ್ರವರ್ತತೇ ।
ಭಿಕ್ಷೋರಾನಯನೇ ಕ್ಷಿಪ್ರಂ ಯಾವನ್ನಾಽಸೌ ವ್ರಜೇತ್ಕ್ವಚಿತ್ ॥ ೨೮ ॥

---

"ಎಲೈ ಮಹಾತ್ಮನೆ! ರಾಜನಿಗೆ ಪ್ರಾಣಗಳಿಗಿಂತಲೂ ಪ್ರಿಯಳಾದ ಮಹಾರಾಣಿಯು ಬಂಜೆಯಾದರೂ ಪುತ್ರಸಂತಾನವನ್ನಪೇಕ್ಷಿಸುವವಳಾಗಿ ನಿನ್ನನ್ನು ಏಕಾಂತದಲ್ಲಿ ಅಂತಃಪುರದಲ್ಲಿ ನೋಡಲೆಳಸುವಳು.

೨೪. ನೀನು ಕೃಪಾಸಮುದ್ರನು. ಪ್ರಜೆಗಳ ಅಪೇಕ್ಷೆಗಳನ್ನು ಈಡೇರಿಸುವುದೇ ನಿನ್ನ ಸ್ವಭಾವವಾಗಿರುವುದು." ಇದನ್ನು ಕೇಳಿ ಶಿವಗಣನಾಯಕನು ತನಗೆ ಅವಕಾಶವು ದೊರೆಯಿತೆಂದು ತಿಳಿದು ಹೇಳಿದನು.

೨೫. ಭಿಕ್ಷುವು ಹೇಳುತ್ತಾನೆ:—ಭದ್ರೆಯೆ! ಸಲ್ಲದ ಮಾತುಗಳನ್ನಾಡುತ್ತಿರುವ ನಿನ್ನ ಬುದ್ಧಿಗೇನೆಂದು ಹೇಳಲಿ? ಯಾರಿಗೂ ತಿಳಿಯದಂತೆ ಮಹಾರಾಜನ ಮನೆಗೆ ಬಾರೆಂದು ಹೇಳುತ್ತಿರುವೆಯಲ್ಲ. ಏಕಾಂತದಲ್ಲಿ ಬಂದು ಅಂತಃಪುರದಲ್ಲಿ ಕಾಣಲ್ಪಡುವ ಪುರುಷನು ಮಹಾಸಾಹಸಿಯಾಗಬೇಕು.

೨೬. ಮಂಗಳಾಂಗಿಯೆ! ಇಂತು ತಿಳಿದುಕೊಂಡು ನೀನು ನಿನ್ನ ಅಂತಃಪುರಕ್ಕೆ ಹೊರಟುಹೋಗು. ನರಪತಿಯ ಅಪ್ಪಣೆಯು ನನಗೆ ಲಭಿಸುವವರೆಗೂ ನಾನು ಅಲ್ಲಿಗೆ ಬರುವುದಿಲ್ಲ.

೨೭. ಭಿಕ್ಷುವಿನ ಈ ಮಾತುಗಳನ್ನು ಕೇಳಿ ಆ ಸಖಿಯು ಕಲುಷಿತ ಹೃದಯಳಾಗಿ ವೇಗವಾಗಿ ಅಂತಃಪುರಕ್ಕೆ ಬಂದು ನಡೆದುದೆಲ್ಲವನ್ನೂ ತನ್ನ ಒಡತಿಗೆ ಬಿನ್ನವಿಸಿದಳು.

೨೮. ಸಖಿಯ ಮಾತುಗಳನ್ನು ಕೇಳಿ ಖಿನ್ನಳಾಗಿ ರಾಣಿಯು ಆಕೆಗಿಂತೆಂದಳು. "ಸುನಂದೆಯೆ! ಆ ಭಿಕ್ಷುವು ಹೊರಟುಹೋಗುವುದಕ್ಕೆ

ಉವಾಚ ಸಾ ತಾಂ ಯುಕ್ತ್ಯೈವಂ ಸುನಂದಾ ಯುಕ್ತಭಾಷಿಣೀ ।
ತ್ವಂ ತಸ್ಯ ವಲ್ಲಭಾ ರಾಜ್ಞಃ ಪ್ರಾಣೇಭ್ಯೋಽಪಿ ಗರೀಯಸೀ ॥ ೨೯ ॥
ತಸ್ಮಾದಸ್ವಸ್ಥಚಿತ್ತತ್ವಂ ರಾಜ್ಞಃ ಸ್ವಂ ಸಂಪ್ರದರ್ಶಯ ।
ಹೇತುನಾ ತೇನ ರಾಜಾ ಚ ವಾಕ್ಯಂ ತವ ಕರಿಷ್ಯತಿ ॥ ೩೦ ॥
ಏತಸ್ಮಿನ್ನೇವ ಕಾಲೇ ತು ದೇವ್ಯಾ ದರ್ಶನಲಾಲಸಃ ।
ಜಗಾಮಾಂತಃಪುರಂ ರಾಜಾ ಪ್ರಿಯಾಂ ದೀನಾಂ ದದರ್ಶ ಹ ।
ತಾಮಪೃಚ್ಛತ್ತತೋ ರಾಜಾ ಸ್ನೇಹಾರ್ದ್ರೀಕೃತಮಾನಸಃ ॥ ೩೧ ॥

ರಾಜೋವಾಚ :—

ಕಿಮಿದಂ ದೇವಿ ತೇ ರೂಪಂ ವಿಮನಸ್ಕೇವ ಭಾಷಸೇ ।
ಭಗ್ನಾಽಸಿ ಕೇನ ದುಃಖೇನ ಕಸ್ಯಾಽಪಕೃತಮೀದೃಶಂ ॥ ೩೨ ॥
ನೃಪಸ್ಯ ವಚನಂ ಶ್ರುತ್ವಾ ರಾಜ್ಞೀ ವಚನಮಬ್ರವೀತ್ ।
ನ ಪುತ್ರಾ ನೃಪ ಮೇ ಸಂತಿ ತೇನ ಮೇ ನಾಽಸ್ತಿ ನಿರ್ವೃತಿಃ ॥ ೩೩ ॥
ಕ್ರೀಡನಂ ಪೀಡನಾಯೈವ ತೇಷಾಂ ಯೇ ಪುತ್ರವರ್ಜಿತಾಃ ।
ಅಪುತ್ರಾ ಜಗತೋ ದೀನಾ ದುಃಖಿತಾಃ ಪುತ್ರವರ್ಜಿತಾಃ ।
ಅಪುತ್ರೇ ಚ ಗತಿರ್ನಾಽಸ್ತಿ ಸುತಾಪುತ್ರವಿವರ್ಜಿತೇ ॥ ೩೪ ॥

---

ಮುಂಚೆಯೇ ಇಲ್ಲಿಗೆ ಕರೆತರುವಂತೆ ರಾಜನಿಗೆ ಪ್ರೇರೇಪಿಸಲು ಈಗ ಯಾವ ಉತ್ತಮೋಪಾಯ ವಿರುವುದು ?''

೨೯. ಆಗ ಕಾಲೋಚಿತವಾದ ಮಾತಿನಿಂದ ಸುನಂದೆಯು ಮಹಾರಾಣಿಗೆ ಯುಕ್ತಿಯನ್ನರುಹಿದಳು. ನೀನು ಆ ರಾಜನಿಗೆ ಪ್ರಾಣಗಳಿಗಿಂತಲೂ ಪ್ರಿಯಳಾದ ಮಡದಿಯಾಗಿರುವೆ.

೩೦. ಆದುದರಿಂದ ನೀನು ದೇಹಾಲಸ್ಯವಿರುವುದೆಂಬಂತೆ ರಾಜನಿಗೆ ಕಾಣಿಸಿಕೊ. ಆ ಕಾರಣದಿಂದ ರಾಜನು ನಿನ್ನ ವಾಕ್ಯದಂತೆ ನಡೆದುಕೊಳ್ಳುತ್ತಾನೆ.

೩೧. ಈ ಸಮಯಕ್ಕೆ ಸರಿಯಾಗಿಯೇ ಮಹಾರಾಜನೂ ದೇವಿಯನ್ನು ನೋಡುವ ಅಭಿಲಾಷೆಯಿಂದ ಅಂತಃಪುರಕ್ಕೆ ಬಂದು ಮಡದಿಯು ದೀನಳಾಗಿರುವುದನ್ನು ಕಂಡು ಕರಗಿದ ಮನಸ್ಸುಳ್ಳವನಾಗಿ ಆಕೆಯನ್ನು ಕೇಳಿದನು.

೩೨. ರಾಜನು ಹೇಳುತ್ತಾನೆ:—''ಎಲೌ ದೇವಿ! ಹೀಗೇಕೆ ರೂಪುಗೆಟ್ಟಿರುವೆ! ಅನ್ಯಮನಸ್ಕಳಾಗಿರುವಂತೆ ಮಾತನಾಡುತ್ತಿರುವೆ. ನಿನ್ನನ್ನು ಯಾವ ದುಃಖವು ಪೀಡಿಸುತ್ತಿರುವುದು? ನಿನಗೆ ಇಂತಹ ಅಪಕಾರವನ್ನು ಮಾಡಿದವರು ಯಾರು ?''

೩೩. ರಾಜನ ಮಾತನ್ನು ಕೇಳಿ ರಾಣಿಯೆಂದಳು. ''ರಾಜೇಂದ್ರ ! ನನಗೆ ಸತ್ಪುತ್ರರಿಲ್ಲದಿರುವುದರಿಂದ ಮನಸ್ಸಿಗೆ ಸಮಾಧಾನವೇ ಇಲ್ಲವಾಗಿದೆ.

೩೪. ಯಾರು ಪುತ್ರರಹಿತರೊ, ಅವರ ಕ್ರೀಡಾಸಂಭೋಗಗಳೆಲ್ಲವೂ ಕೇವಲ

ಸುಖಿನಸ್ತೇ ಜನಾ ಲೋಕೇ ಯೇ ಬಾಲಂ ಪಾಂಸುಭೂಷಿತಂ ।
ಪರಿಷ್ವಜಂತಿ ಸ್ವಸುತಮುಸ್ಫುಟಾಕ್ಷರಭಾಷಕಂ ॥ ೩೫ ॥
ಅನೇನ ಕಾರಣೇನಾಽಸ್ಮಿ ನಿರ್ವೇದಂ ಪರಮಂ ಗತಾ ।
ಉಪಾಯೋ ಹಿ ಮಯಾ ದೃಷ್ಟಃ ಪುತ್ರಾರ್ಥೇ ಮಮ ಸಾಂಪ್ರತಂ ॥ ೩೬ ॥
ಇಹ ಭಿಕ್ಷುಃ ಸಮಾಯಾತೋ ದೇವರೂಪೀ ಸನಾತನಃ ।
ತಸ್ಯ ಚಾವ್ಯಾಹತಾ ಶಕ್ತಿಃ ಶ್ರೂಯತೇ ಸರ್ವವಸ್ತುಷು ॥ ೩೭ ॥
ಸಸ್ತ್ರೀಬಾಲೋ ಜನಶ್ಚಾಽತ್ರ ಶರಣಂ ಯಸ್ಯ ಗಚ್ಛತಿ ।
ತಸ್ಯ ಭಿಕ್ಷೋಃ ಪ್ರಸಾದೇನ ಸುತವತ್ಯೋ ವಯಂ ನೃಪ ।
ಭವಿಷ್ಯಾಮೋಽತ್ರ ಸಂದೇಹೋ ನ ಮೇ ಮನಸಿ ವರ್ತತೇ ॥ ೩೮ ॥
ತಸ್ಯಾಃ ಸ ವಚನಂ ಶ್ರುತ್ವಾ ಜೀರ್ಣೋದ್ಯಾನಂ ಜಗಾಮ ಹ ।
ಪ್ರಿಯಯಾ ಸಹಿತೋ ರಾಜಾ ತಂ ಚ ಭಿಕ್ಷುಂ ದದರ್ಶ ಹ ॥ ೩೯ ॥

---

ಪೀಡಾಕರಗಳೇ ಆಗುವುವು. ಅಪುತ್ರರು ಲೋಕದಲ್ಲಿ ದೀನರು. ಅವರೇ ಅತ್ಯಂತ ದುಃಖಭಾಗಿಗಳು. ಹೆಣ್ಣು ಗಂಡುಮಕ್ಕಳಿಲ್ಲದವನಿಗೆಂದಿಗೂ ಸದ್ಗತಿಯುಂಟಾಗುವುದಿಲ್ಲ.

೩೫. ಧೂಳೀಧೂಸರಿತಗಾತ್ರನೂ ತೊದಲುಮಾತನ್ನಾಡುತ್ತಿರುವವನೂ ಆದ ತಮ್ಮ ಎಳೆಗುವರನನ್ನು ಯಾರು ಪ್ರೀತಿಯಿಂದಾಲಿಂಗಿಸಿಕೊಳ್ಳುವರೊ, ಅವರೇ ಲೋಕದಲ್ಲಿ ಸುಖಿಗಳು.

೩೬. ಈ ಕಾರಣದಿಂದಲೇ ಈಗ ನಾನು ಅತ್ಯಂತ ದುಃಖಿತೆಯಾಗಿರುವೆನು. ಈಗತಾನೇ ಪುತ್ರಲಾಭಕ್ಕಾಗಿ ಒಂದು ಉಪಾಯವನ್ನೂ ನಾನು ಯೋಚಿಸಿರುವೆನು.

೩೭. ದೇವತೆಗಳಿಗೆ ಸಮನಾದವನೂ, ಸನಾತನನೂ ಆದ ಒಬ್ಬ ಭಿಕ್ಷುವು ಇಲ್ಲಿಗೆ ಬಂದಿರುವನಂತೆ. ಆತನಿಗೆ ಸಕಲ ಕಾರ್ಯಗಳಲ್ಲಿಯೂ ಅಪ್ರತಿಹತವಾದ ಶಕ್ತಿಯಿರುವುದೆಂದು ಕೇಳಿರುವೆನು.

೩೮. ಸ್ತ್ರೀ ಬಾಲಕರೇ ಮೊದಲಾಗಿ ಸಕಲಜನರೂ ಆತನನ್ನು ಶರಣು ಹೊಗುತ್ತಿರುವರು. ನೃಪತಿಯೆ! ಆ ಭಿಕ್ಷುವಿನ ಅನುಗ್ರಹದಿಂದ ನಾವೂ ಸಹ ಪುತ್ರವಂತರಾಗುವುದರಲ್ಲಿ ನನಗೆ ಮನಸ್ಸಿನಲ್ಲಿ ಯಾವ ಸಂಶಯವೂ ತೋರುವುದಿಲ್ಲ.''

೩೯. ಹೆಂಡತಿಯ ಮಾತನ್ನು ಕೇಳಿ ಮಹಾರಾಜನು ಆಕೆಯನ್ನು ಕರೆದುಕೊಂಡು ಜೀರ್ಣೋದ್ಯಾನಕ್ಕೆ ಹೋಗಿ ಆ ಭಿಕ್ಷುವಿನ ದರ್ಶನವನ್ನು ತೆಗೆದುಕೊಂಡನು.

ದೃಷ್ಟಮಾತ್ರೋ ನೃಪತಿನಾ ಭಿಕ್ಷುರ್ಲಿಂಗತ್ವಮಾಗತಃ ।
ದೃಷ್ಟ್ವಾ ಸುಮಹದಾಶ್ಚರ್ಯಂ ಭಕ್ತಿನಮ್ರೋ ಮಹೀಪತಿಃ ।
ಪೂಜಯಾಮಾಸ ವಿಧಿವತ್ತಲ್ಲಿಂಗಂ ಭಿಕ್ಷುರೂಪಕಂ ॥ ೪೦ ॥
ಅಪುತ್ರೋಽಸ್ಮೀತ್ಯುವಾಚೇದಂ ಧನ್ಯೇಯಂ ಮಹಿಷೀ ಮಮ ।
ದೇಹಿ ಮೇ ತನಯಂ ದೇವ ಶಿವೋ ಭವಾನ್ಮಹೇಶ್ವರಃ ॥ ೪೧ ॥
ಇತ್ಯುಕ್ತೋ ರಾಜಸಿಂಹೇನ ಭಿಕ್ಷುರ್ಲಿಂಗಾಕೃತಿಸ್ತದಾ ।
ಪ್ರತ್ಯುವಾಚ ಮಹೀಪಾಲಂ ಪುತ್ರಸ್ತೇ ಭವಿತಾ ನೃಪ ॥ ೪೨ ॥
ತತಃಪ್ರಭೃತಿ ರಾಜಾಽಸೌ ಸಕಲತ್ರೋ ಮಹಾಮತಿಃ ।
ಸರ್ವಭಾವೇನ ತಂ ದೇವಂ ಜಗಾಮ ಶರಣಂ ಮುದಾ ॥ ೪೩ ॥
ದೇವದೇವಸ್ಯ ಮಾಹಾತ್ಮ್ಯಾತ್ಪುತ್ರೋ ಜಾತೋ ಮಹಾಬಲಃ ।
ಧರ್ಮಾತ್ಮಾ ಚ ಯಶಸ್ವೀ ಚ ಸಾರ್ವಭೌಮೋ ಗುಣಾಧಿಕಃ ॥ ೪೪ ॥
ಅಥಾಽಹಂ ಮಂದರಾದ್ದೇವಿ ಕೌತುಕಾತ್ತು ಸಮಾಗತಃ ।
ಲಿಂಗಾಕಾರಂ ಗಣಂ ದೃಷ್ಟ್ವಾ ರಾಜಾನಂ ಸೇವಕಂ ತಥಾ ॥ ೪೫ ॥

---

೪೦. ಮಹಾರಾಜನು ತನ್ನನ್ನು ನೋಡಿದಮಾತ್ರದಿಂದಲೇ ಆ ಭಿಕ್ಷುವು ಲಿಂಗಾಕಾರವನ್ನು ತಾಳಿದನು. ಈ ಮಹದಾಶ್ಚರ್ಯವನ್ನು ಕಂಡ ಮಹಾರಾಜನು ಭಕ್ತಿಯಿಂದ ತಲೆಯನ್ನು ಬಗ್ಗಿಸಿಕೊಂಡು ಭಿಕ್ಷುರೂಪವಾದ ಆ ಲಿಂಗಕ್ಕೆ ವಿಧ್ಯುಕ್ತವಾದ ಪೂಜೆಯನ್ನು ಸಲ್ಲಿಸಿದನು.

೪೧. ದೇವೇಶ್ವರನೆ! ಪತಿವ್ರತೆಯಾದ ನನ್ನ ಮಡದಿಯು ನನ್ನನ್ನು ಅಪುತ್ರನೆಂದು ಕರೆದಿರುವಳು. ನೀನು ಮಂಗಳಪ್ರದನೂ, ಸರ್ವೇಶ್ವರನೂ ಆಗಿರುವೆಯಾದುದರಿಂದ ನನಗೆ ಪುತ್ರನೊಬ್ಬನನ್ನು ಕರುಣಿಸು.

೪೨. ಆ ರಾಜೇಂದ್ರನು ಇಂತು ಪ್ರಾರ್ಥಿಸಿಕೊಳ್ಳಲು ಲಿಂಗಸ್ವರೂಪಿಯಾದ ಆ ಭಿಕ್ಷುವು ಆತನಿಗಿಂತೆಂದನು. "ಮಹಾರಾಜನೆ! ನಿನಗೊಬ್ಬ ಮಗನಾಗುವನು.

೪೩. ಅಂದಿನಿಂದ ಆ ರಾಜನು ಪತ್ನೀಸಮೇತನಾಗಿ ಸಂತೋಷದಿಂದ ತ್ರಿಕರಣಶುದ್ಧಿಯಾಗಿ ಆ ಲಿಂಗವನ್ನೆ ಶರಣುಹೊಕ್ಕನು.

೪೪. ಆ ಮಹಾದೇವನ ಪ್ರಭಾವದಿಂದ ಆತನಿಗೆ ಮಹಾಪರಾಕ್ರಮಿಯೂ, ಧರ್ಮನಿರತನೂ, ಯಶಸ್ವಿಯೂ, ಸಾರ್ವಭೌಮನೂ, ಸಕಲಸದ್ಗುಣಭರಿತನೂ ಆದ ಮಗನೊಬ್ಬನಾದನು.

೪೫. ದೇವಿಯೆ! ನಾನೂ ಒಮ್ಮೆ ಕುತೂಹಲದಿಂದ ಮಂದರಪರ್ವತವನ್ನು ಬಿಟ್ಟು ಬಂದು ಲಿಂಗರೂಪಿಯಾಗಿದ್ದ ಈ ಗಣನಾಯಕನನ್ನೂ ಅದನ್ನು ಭಕ್ತಿಯಿಂದ ಸೇವಿಸುತ್ತಿದ್ದ ಈ ರಾಜನನ್ನೂ ನೋಡಿದೆನು.

ಯೋಗೈಶ್ವರ್ಯೇಣ ಚ ಮಯಾ ಕೃತಂ ವೈ ಪುರಮಾತ್ಮನಃ ।
ನಾನಾರತ್ನಪ್ರಭೋದ್ಯೋತಂ ನಾನಾಸಿದ್ಧಿನಿಷೇವಿತಂ ।
ತಚ್ಛಿವಂ ಶಾಶ್ವತಂ ಸ್ಥಾನಂ ದತ್ತಂ ದೇವಿ ತದಾ ಮಯಾ ॥ ೪೬ ॥
ಮಾರ್ಕಂಡೇಯೇಶ್ವರಾದ್ದೇವಾದುತ್ತರೇ ವರವರ್ಣಿನಿ ।
ತದಾಪ್ರಭೃತಿ ದೇವೋಽಸೌ ಶಿವೇಶ್ವರ ಇತಿ ಸ್ಮೃತಃ ॥ ೪೭ ॥
ಯೇಽರ್ಚಯಿಷ್ಯಂತಿ ಸತತಂ ಶಿವೇಶ್ವರಮನುತ್ತಮಂ ।
ನಿರ್ಧೂತಸರ್ವಪಾಪಾಸ್ತೇ ಭವಿಷ್ಯಂತಿ ಗಣೋತ್ತಮಾಃ ॥ ೪೮ ॥
ವಿದಿತ್ವಾಭಂಗುರಂ ಲೋಕಂ ಯೇ ದ್ರಕ್ಷ್ಯಂತಿ ಶಿವೇಶ್ವರಂ ।
ಅಂತಕಾಲೇ ಪ್ರದಾಸ್ಯಾಮಿ ತೇಷಾಂ ಜ್ಞಾನಮನುತ್ತಮಂ ॥ ೪೯ ॥
ಮೋಕ್ಷಂ ಸುದುರ್ಲಭಂ ಮತ್ವಾ ಸಂಸಾರಂ ಚಾತಿಭೀಷಣಂ ।
ಅಪುನರ್ಭವಹೇತುತ್ವಾತ್ಸಂಸೇವ್ಯೋಽಸೌ ಶಿವೇಶ್ವರಃ ॥ ೫೦ ॥
ಸರ್ವಾವಸ್ಥೋಽಪಿ ಯೋ ಮರ್ತ್ಯಃ ಸಂಶ್ರಯೇತ್ತಂ ಶಿವೇಶ್ವರಂ ।
ಸ ತಾಂ ಗತಿಮವಾಪ್ನೋತಿ ಯಜ್ಞೈರ್ದಾನೈರ್ಹಿ ಯಾ ಗತಿಃ ॥ ೫೧ ॥

೪೬. ಯೋಗಮಾಹಾತ್ಮ್ಯದಿಂದ ಆ ಪ್ರದೇಶವನ್ನೇ ನನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅನೇಕರತ್ನಗಳ ಕಾಂತಿಯಿಂದ ಬೆಳಗುತ್ತಿರುವುದೂ ಅನೇಕ ಸಿದ್ಧಿಗಳಿಗೆ ಆವಾಸವೂ ಎನಿಸಿದ ಅಲ್ಲಿಯೇ ಆ ಶಿವಗಣನಾಯಕನಿಗೆ ಶಾಶ್ವತಸ್ಥಾನವನ್ನಿತ್ತೆನು.

೪೭. ಸುಂದರಾಂಗಿಯೆ! ಮಾರ್ಕಂಡೇಯೇಶ್ವರನಿಗೆ ಉತ್ತರದಿಕ್ಕಿನಲ್ಲಿ ಅಂದಿನ ದಿನದಿಂದ ಆ ಮಹಾಲಿಂಗವು ಶಿವೇಶ್ವರನೆಂದು ಹೆಸರಾಗಿರುವುದು.

೪೮. ಅತ್ಯುತ್ತಮವಾದ ಈ ಶಿವೇಶ್ವರಲಿಂಗವನ್ನು ಯಾರು ನಿತ್ಯವೂ ಪೂಜಿಸುತ್ತಿರುವರೊ, ಅವರು ಸಕಲ ಪಾತಕಗಳನ್ನೂ ಕಳೆದುಕೊಂಡು ಗಣಶ್ರೇಷ್ಠರಾಗಿರುವರು.

೪೯. ಪ್ರಪಂಚವೆಲ್ಲವೂ ಬಾಲರಮಣೀಯವೆಂದು ಚೆನ್ನಾಗಿ ತಿಳಿದು ಶಿವೇಶ್ವರನ ದರ್ಶನದಲ್ಲಿಯೇ ಯಾರು ನಿರತರಾಗಿರುವರೊ, ಅವರಿಗೆ ಅಂತ್ಯಕಾಲದಲ್ಲಿ ನಾನು ಮೋಕ್ಷಜ್ಞಾನವನ್ನುಪದೇಶಿಸುತ್ತೇನೆ.

೫೦. ಮೋಕ್ಷವು ಅತ್ಯಂತ ದುರ್ಲಭವೆಂಬುದನ್ನೂ, ಸಂಸಾರವು ಮಹಾಭಯಂಕರವೆಂಬುದನ್ನೂ ಮನಗಂಡ ಮಾನವರು ಮತ್ತೆ ಜನ್ಮವಿಲ್ಲದಿರುವುದಕ್ಕಾಗಿ ಈ ಶಿವೇಶ್ವರನನ್ನು ಸೇವಿಸಬೇಕು.

೫೧. ಯಾವ ಅವಸ್ಥೆಯಲ್ಲಿರುವ ಮನುಜನೇ ಆಗಲಿ, ಶಿವೇಶ್ವರನನ್ನಾಶ್ರಯಿಸಲು ಸಮಸ್ತಯಜ್ಞಗಳನ್ನೂ ದಾನಗಳನ್ನೂ ಮಾಡಿದವನಿಗೆ ಯಾವ ಗತಿಯುಂಟೊ, ಅದನ್ನೇ ಪಡೆಯುವನು.

ಆಖ್ಯಾನಂ ಪ್ರಯತೋ ಮರ್ತ್ಯೋ ಯ ಇದಂ ಶ್ರಾವಯೇಚ್ಛುಚಿಃ ।
ಪಠೇದ್ವಾ ವಾಚಯೇದ್ವಾಽಪಿ ಸ ಮುಚ್ಯೇತ್ಸರ್ವಕಿಲ್ಬಿಷೈಃ ॥ ೫೨ ॥
ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಶಿವೇಶ್ವರಸ್ಯ ದೇವಸ್ಯ ಕುಸುಮೇಶಮತಃ ಶೃಣು ॥ ೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಶಿವೇಶ್ವರಮಾಹಾತ್ಮ್ಯವರ್ಣನಂ"
ನಾಮ ಸಪ್ತತ್ರಿಂಶೋಽಧ್ಯಾಯಃ

---

೫೨. ಈ ಮಹಾಖ್ಯಾನವನ್ನು ಯಾವ ನರನು ಪ್ರಯತ್ನಪೂರ್ವಕವಾಗಿಯೂ ಶೌಚಾಚಾರದಿಂದಲೂ ಇತರರಿಗೆ ಅನುವಾದಮಾಡಿ ಹೇಳುವನೊ, ಯಾವನು ಓದುವನೊ, ಯಾವನು ಪಂಡಿತರ ಕೈಯಿಂದ ಓದಿಸುವನೊ, ಅವರೆಲ್ಲರೂ ಸಕಲ ಪಾಪಗಳಿಂದಲೂ ಮುಕ್ತರಾಗುವರು.

೫೩. ದೇವಿಯೆ! ಇಂತು ನಿನಗೆ ಶಿವೇಶ್ವರಮಹಾಲಿಂಗದ ಪಾಪಪರಿಹಾರಕವಾದ ಪ್ರಭಾವವನ್ನು ವರ್ಣಿಸಿರುವೆನು. ಇನ್ನು ಕುಸುಮೇಶ್ವರನ ಮಹಿಮೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಶಿವೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟತ್ರಿಂಶೋಽಧ್ಯಾಯಃ

## ಕುಸುಮೇಶ್ವರಮಾಹಾತ್ಮ್ಯವರ್ಣನಂ

ಈಶ್ವರ ಉವಾಚ :—

ಅಷ್ಟತ್ರಿಂಶತ್ತಮಂ ವಿದ್ಧಿ ಕುಸುಮೇಶ್ವರಸಂಜ್ಞಕಂ ।
ದೇವಂ ಸ್ವರ್ಗಪ್ರದಂ ದೇವಿ ಮಹಾಪಾತಕನಾಶನಂ ॥ ೧ ॥
ಪುರಾ ವೈವಸ್ವತೇ ಕಲ್ಪೇ ಪ್ರಾಪ್ತೇ ವಾರಾಹಸಂಜ್ಞಕೇ ।
ಪ್ರಾದುರ್ಭೂತೇ ವಿಶಾಲಾಕ್ಷಿ ಕೈಲಾಸಾದಹಮಾಗತಃ ॥ ೨ ॥
ಮಹಾಕಾಲವನೇ ರಮ್ಯೇ ರಮಮಾಣಸ್ಯ ಪಾರ್ವತಿ ।
ತ್ವಯಾ ಸಾರ್ಧಂ ಮಮಾಕ್ಷ್ಯೈಶ್ಚ ಪ್ರಾದುರಾಸೀನ್ಮಹಾಸ್ವನಃ ॥ ೩ ॥
ಪೃಷ್ಟೋಽಹಂ ಚ ತದಾ ಶ್ರುತ್ವಾ ಶಬ್ದಂ ಚಾತೀವದುಃಸಹಂ ।
ಶಬ್ದೋತ್ಪತ್ತಿರ್ಮಯಾ ದೇವಿ ಕಥಿತಾ ಸಾ ತ್ವದಗ್ರತಃ ॥ ೪ ॥
ಏತೇ ಗಣೇಶಾಃ ಕ್ರೀಡಂತಿ ಮಧ್ಯೇ ವೈ ವೀರಕೋ ಗಣಃ ।
ಕುಸುಮೈರ್ಭೂಷಿತೋಽತ್ಯರ್ಥಂ ಮಮಾತೀವಸುವಲ್ಲಭಃ ॥ ೫ ॥

---

## ಕನ್ನಡದ ಅನುವಾದ

### ಕುಸುಮೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಕುಸುಮೇಶ್ವರನೆಂಬುವನೇ ಮೂವತ್ತೆಂಟನೆಯ ಮಹಾಲಿಂಗವೆಂದು ತಿಳಿ. ಈ ಲಿಂಗವು ಸ್ವರ್ಗಪ್ರದವೂ ಮಹಾಪಾತಕಗಳನ್ನು ಕಳೆಯುವುದೂ ಆಗಿರುವುದು.

೨. ಎಲೌ ವಿಶಾಲಾಕ್ಷಿಯೆ ! ಹಿಂದೆ ವೈವಸ್ವತಮನ್ವಂತರವು ಶ್ವೇತವರಾಹಕಲ್ಪದಲ್ಲಿ ಪ್ರಾಪ್ತವಾಗಲು ನಾನು ಕೈಲಾಸವನ್ನು ತ್ಯಜಿಸಿ ಇಲ್ಲಿಗೆ ಬಂದೆನು.

೩. ಮನೋಹರವಾದ ಮಹಾಕಾಲವನದಲ್ಲಿ ನಾನು ನಿನ್ನೊಡನೆ ಆನಂದದಿಂದ ಕ್ರೀಡಿಸುತ್ತಿರಲು ನನ್ನ ಪರಿವಾರದ ಸಮೂಹದಲ್ಲಿ ಮಹತ್ತರವಾದ ಕೋಲಾಹಲಧ್ವನಿಯುಂಟಾಯಿತು.

೪. ಅತ್ಯಂತ ದುಸ್ಸಾಧ್ಯವಾದ ಆ ಧ್ವನಿಯನ್ನು ಕೇಳಿ ನೀನು ನನ್ನನ್ನು ಪ್ರಶ್ನೆಮಾಡಲು ನಾನು ನಿನ್ನ ಮುಂದೆ ಶಬ್ದವುಂಟಾದುದಕ್ಕೆ ಕಾರಣವನ್ನು ನಿರೂಪಿಸಿದೆನು.

೫. ಇಲ್ಲಿ ಆಟವಾಡುತ್ತಿರುವ ಗಣನಾಯಕರ ಮಧ್ಯದಲ್ಲಿ ವೀರಕನೆಂಬುವನೊಬ್ಬನು ಹೂವುಗಳಿಂದ ಅತ್ಯಂತ ಭೂಷಿತನಾಗಿ ನನಗೆ ಬಹಳ ಬೇಕಾದವನಾಗಿರುವನು.

ಕುಸುಮೈರರ್ಹ್ಯತೇಽತ್ಯರ್ಥಂ ಪೂಜ್ಯತೇ ಕುಸುಮೋತ್ಕರೈಃ ।
ಸ ಏವ ವೀರಕೋ ದೇವಿ ಸದಾ ಮೇ ಹರ್ಷದಾಯಕಃ ।
ನಾನಾಶ್ಚರ್ಯಗುಣಾಧಾರೋ ಗಣೇಶ್ವರಶತಾರ್ಚಿತಃ ॥ ೬ ॥
ಮದೀಯಂ ವಚನಂ ಶ್ರುತ್ವಾ ತ್ವಯಾಽಪ್ಯುಕ್ತಂ ವರಾನನೇ ।
ನ ದೃಶ್ಯತೇ ವಿನಾ ಪುಣ್ಯೈಃ ಪುತ್ರಸ್ಯಾನನಪಂಕಜಂ ॥ ೭ ॥
ಈದೃಶಸ್ಯ ಸುತಸ್ಯಾಽಪಿ ಮಮೋತ್ಕಂಠಾ ಮಹೇಶ್ವರ ।
ಕದಾಽಹಮೀದೃಶಂ ಪುತ್ರಂ ದ್ರಕ್ಷ್ಯಾಮ್ಯಾನಂದದಾಯಕಂ ॥ ೮ ॥
ಮಯಾ ತವ ವಚಃ ಶ್ರುತ್ವಾ ಹಸಿತ್ವಾ ಚ ಪುನಃ ಪುನಃ ।
ಪ್ರೋಕ್ತಂ ಪಾರ್ವತಿ ಪುತ್ರೋಽಯಂ ಪ್ರದತ್ತೋ ವೀರಕೋಽಧುನಾ ॥೯॥
ಏಷ ಏವ ಸುತಸ್ತೇಽಸ್ತು ನಯನಾನಂದದಾಯಕಃ ।
ತ್ವಯಾ ಮಾತ್ರಾ ಕೃತಾರ್ಥಸ್ತು ವೀರಕಃ ಕುಸುಮಾರ್ಚಿತಃ ॥ ೧೦ ॥
ಮದೀಯಂ ವಚನಂ ಶ್ರುತ್ವಾ ಪ್ರೇಷಿತಾ ವಿಜಯಾ ತ್ವಯಾ ।
ದತ್ತೋ ಹರೇಣ ಮೇ ಪುತ್ರೋ ವಿಜಯೇ ಶೀಘ್ರಮಾನಯ ॥ ೧೧ ॥

---

೬. ಇತರರು ಇವನನ್ನು ಪುಷ್ಪಗಳಿಂದ ಪೂಜಿಸುತ್ತಿರುವರು. ಹೂಮಾಲೆಗಳಿಂದ ಪೂಜಿಸುತ್ತಿರುವರು. ಅವನೇ ನಿತ್ಯವೂ ನನಗೆ ಹರ್ಷವನ್ನುಂಟು ಮಾಡುವ ವೀರಕನೆಂಬುವನು, ಆಶ್ಚರ್ಯಕರಗಳಾದ ಅನೇಕ ಗುಣಗಳಿಗೆ ನಿಲಯನೂ, ನೂರಾರು ಗಣನಾಯಕರಿಂದ ಪೂಜೆಯನ್ನು ಕೊಳ್ಳುವವನೂ ಆಗಿರುವನು.

೭. ಸುಂದರಮುಖಿಯೆ! ನನ್ನ ಮಾತನ್ನು ಕೇಳಿ ನೀನೂ ಹೇಳತೊಡಗಿದೆ. ಪುಣ್ಯಗಳನ್ನು ಮಾಡಿದಲ್ಲದೆ ಪುತ್ರನ ಮುಖಕಮಲವನ್ನು ನೋಡಲಾಗುವುದಿಲ್ಲ.

೮. ಮಹೇಶ್ವರನೆ! ಇಂತಹ ಮಗನಲ್ಲಿ ನನಗೂ ಅಭಿಲಾಷೆಯುಂಟಾಗಿರುವುದು. ಆನಂದವನ್ನುಂಟುಮಾಡುವ ಇಂತಹ ಪುತ್ರನನ್ನು ನಾನು ಯಾವಾಗ ನೋಡುವೆನೊ!

೯–೧೦. ನಿನ್ನ ಮಾತನ್ನು ಕೇಳಿ ನಾನು ಗಟ್ಟಿಯಾಗಿ ನಗುತ್ತ ಹೇಳಿದೆನು. "ಎಲೌ ಪಾರ್ವತಿಯೆ! ಈ ವೀರಕನನ್ನೇ ನಿನಗೀಗ ಪುತ್ರನಾಗಿರಲು ನಾನು ಕೊಟ್ಟಿರುವೆನು. ಈತನೇ ನಿನ್ನ ನೇತ್ರಗಳಿಗೆ ಆನಂದವನ್ನುಂಟುಮಾಡುವ ಮಗನಾಗಲಿ." ನನ್ನ ಮಾತಿನಂತೆಯೇ ಪುಷ್ಪಾಲಂಕೃತನಾದ ವೀರಕನು ನಿನ್ನನ್ನು ತಾಯಿಯನ್ನಾಗಿ ಪಡೆದನು.

೧೧. ನನ್ನ ಮಾತನ್ನು ಕೇಳಿಯೇ ನೀನು ನಿನ್ನ ಸಖಿಯನ್ನು ಕುರಿತು, "ವಿಜಯೆ! ಮಹೇಶ್ವರನು ನನಗೊಬ್ಬ ಮಗನನ್ನು ಕೊಟ್ಟಿರುವನು; ಅವನನ್ನು ಬೇಗ ಕರೆದುಕೊಂಡು ಬಾ" ಎಂದು ಹೇಳಿಕಳುಹಿಸಿದೆ.

ವಿಜಯೋವಾಚ ಗಣಪಂ ಗಣಮಧ್ಯೇ ಚ ವರ್ತಿನಂ ।
ಏಹಿ ವೀರಕ ಚಾಪಲ್ಯಾತ್ತ್ವಯಾ ದೇವಃ ಪ್ರಕೋಪಿತಃ ।
ಕಿಮುನ್ಮತ್ತವದತ್ಯರ್ಥಂ ನೃತ್ಯರಾಗೇಣ ಮೋಹಿತಃ ॥ ೧೨ ॥
ಇತ್ಯುಕ್ತೋ ಭಯಸಂತ್ರಸ್ತಃ ಕುಸುಮೈರ್ಭೂಷಿತಸ್ತದಾ ।
ತ್ವತ್ಸಮೀಪಂ ಸಮಾಯಾತೋ ವಿಜಯಾನುಗತಃ ಶನೈಃ ॥ ೧೩ ॥
ಭೂಷಿತಂ ಕುಸುಮೈರ್ದೃಷ್ಟ್ವಾ ಭಯತ್ರಸ್ತಂ ಚ ವೀರಕಂ ।
ತ್ವಯಾ ಚಾಕಾರಿತೋ ದೇವಿ ಗಿರಾ ಮಧುರವರ್ಣಯಾ ॥ ೧೪ ॥

ಏಹ್ಯೇಹಿ ಜಾತೋಽಸಿ ಮೇ ಪುತ್ರಕಸ್ತ್ವಂ
ದೇವೇನ ದತ್ತೋಽಧುನಾ ವೀರಕೋಽಸಿ ।
ಉಕ್ತ್ವೇತ್ಯೇವಮಂಕೇ ನಿಧಾಯಾಥ ತಂ
ಪರ್ಯಚುಂಬಃ ಕಪೋಲೇ ಕಲಂ ವಾದಿನಂ ॥ ೧೫ ॥
ಮೂರ್ಧನ್ಯುಪಾಘ್ರಾಯ ಸಂಮಾರ್ಜ್ಯ ಗಾತ್ರಾಣಿ
ಸಾ ಭೂಷಯಾಮಾಸ ದಿವ್ಯೈಃ ಸ್ವಯಂ ಭೂಷಣೈಃ ।
ಕಿಂಕಿಣೀಮೇಖಲಾನೂಪುರೈಃ ಸನ್ಮಣೀ
ನಿಷ್ಕಕೇಯೂರ ಹಾರೋತ್ಕರೈಃ ಸದ್ಗುಣೈಃ ॥ ೧೬ ॥

೧೨. ವಿಜಯೆಯು ಹೋಗಿ ಗಣಸಮೂಹದ ಮಧ್ಯದಲ್ಲಿ ಓಡಾಡುತ್ತಿದ್ದ ಗಣನಾಯಕನಿಗೆ ಹೇಳಿದಳು. "ವೀರಕನೆ! ಇಲ್ಲಿ ಬಾ; ಚಾಪಲ್ಯದಿಂದ ನೀನು ಮಹಾದೇವನನ್ನು ಕೋಪಗೊಳಿಸಿರುವೆ. ಉನ್ಮತ್ತನಂತೆ ನೀನು ಬಹುವಾಗಿ ನೃತ್ಯಗೀತಗಳಿಂದ ಮೋಹಗೊಂಡಿರುವೆಯೋ ಏನು?"

೧೩. ಇಂತೆನ್ನಲು ಅವನು ಭಯದಿಂದ ನಡುಗುತ್ತ ಹೂವುಗಳ ಅಲಂಕಾರಗಳೊಡನೆಯೇ ವಿಜಯೆಯನ್ನು ಮೆಲ್ಲಮೆಲ್ಲಗೆ ಹಿಂಬಾಲಿಸುತ್ತ ನಿನ್ನ ಬಳಿಗೆ ಬಂದನು.

೧೪. ದೇವಿಯೆ! ಕುಸುಮಭೂಷಿತನೂ, ಭಯದಿಂದ ನಡುಗುತ್ತಿರುವವನೂ ಆದ ವೀರಕನನ್ನು ಕಂಡು ನೀನು ಸೌಮ್ಯವಾಗಿ ಮಧುರವಾಣಿಯಿಂದಲೇ ಹತ್ತಿರಕ್ಕೆ ಕರೆದೆ.

೧೫. "ವೀರಕ! ಹತ್ತಿರಕ್ಕೆ ಬಾ. ಇಂದು ನೀನು ನನಗೆ ಮಗನಾದೆ. ಮಹಾದೇವನೇ ನಿನ್ನನ್ನು ನನಗೆ ಕೊಟ್ಟಿರುವನು." ಇಂತೆಂದು ನೀನು ಕಲಭಾಷಿತಗಳನ್ನಾಡುತ್ತಿದ್ದ ಆತನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಕೆನ್ನೆಗಳಿಗೆ ಮುತ್ತುಗಳನ್ನು ಕೊಡುತ್ತಿದ್ದೆ.

೧೬. ತಲೆಯನ್ನು ಮೂಸಿನೋಡಿ, ಮೈಯನ್ನೆಲ್ಲ ತಡವುತ್ತ, ದಿವ್ಯಗಳೂ, ಉತ್ತಮಗಳೂ ಆದ ಕಿರುಕೆಜ್ಜೆಗಳು, ಒಡ್ಯಾಣ, ಕಾಲಂದಿಗೆಗಳು, ರತ್ನಾ

ಕೋಮಲೈಃ ಪಲ್ಲವೈಶ್ಚಿತ್ರಿತೈಶ್ಚಾರುಭಿ
ರ್ದಿವ್ಯಮಂತ್ರೋದ್ಭವೈಸ್ತಸ್ಯ ಶುಭ್ರೈಸ್ತತಃ ।
ಭೂತಿಭಿಶ್ಚಾಕರೋರ್ಮಿಶ್ರಸಿದ್ಧಾರ್ಥಕೈ
ರಂಗರಕ್ಷಾವಿಧೀಂಸ್ತಸ್ಯ ತುಷ್ಟಾ ಸತೀ ॥ ೧೭ ॥
ಏವಮಾಧಾಯ ಚೋಪಕ್ಷಃ ಕೃತ್ವಾ ಸ್ರಜಂ
ಮೂರ್ಧ್ನಿ ಗೋರೋಚನಾಪತ್ರಭಂಗೋಜ್ಜ್ವಲೈಃ ।
ವತ್ಸ ಗಚ್ಛಾಧುನಾ ಕ್ರೀಡ ಸಾರ್ಧಂ ಗಣೈ
ರಪ್ರಮತ್ತೋ ಯಥಾ ಬಾಲಚರ್ಯಾಂ ಶನೈಃ ॥ ೧೮ ॥
ಸೋಽಪಿ ಸಿದ್ಧ್ಯಾಕುಲೇ ಗಂಡಶೈಲೇ ಮಿಲ
ದ್ರತ್ನಜಾಲೇ ಬೃಹಚ್ಛಾಲತಾಲಾಕುಲೇ ।
ಕ್ಷಣಂ ಫುಲ್ಲಮಾಲಾತಮಾಲಾಲಿಮಾಲೇ
ಕ್ಷಣಂ ವೃಕ್ಷಮೂಲೇ ವಿಲೋಲಾಲಿಮಾಲೇ ॥ ೧೯ ॥
ಕ್ಷಣಂ ಸ್ವಲ್ಪಪಂಕೇ ಜಲೇ ಪಂಕಜಾಲೇ
ಕ್ಷಣಂ ವೃಕ್ಷಖಂಡೇ ಶುಭೇ ನಿಷ್ಕಲಂಕೇ ।
ಪರಿಕ್ರೀಡತೇ ಬಾಲಕೋ ನೈ ವಿಹಾರೀ
ಗಣೇಶಾಧಿಪೋ ದೇವತಾನಂದಕಾರೀ ॥ ೨೦ ॥

---

ಭರಣಗಳು, ಚಿನ್ನದ ಭುಜಬಂದಿಗಳು, ಹಾರಗಳು ಮುಂತಾದ ಸಿನ್ನ ಆಭರಣ ಗಳಿಂದಲೇ ಆ ಮಗುವಿಗೆ ಅಲಂಕಾರವನ್ನು ಮಾಡಿದೆ.

೧೭. ಸಂತುಷ್ಟಳಾದ ನೀನು ಎಳೆಯ ಚಿಗುರುಗಳಿಂದಲೂ, ವಿಧವಿಧಗಳಾದ ಚಿತ್ರಗಳಿಂದಲೂ. ದಿವ್ಯಮಂತ್ರಗಳಿಂದಲೂ. ಶುದ್ಧ ವಿಭೂತಿಗಳಿಂದಲೂ, ಅನರ್ಘ ಪದಾರ್ಥಗಳ ಮಿಶ್ರಣದ ಅಂಗಲೇಪನಗಳಿಂದಲೂ ಆ ಮಗುವಿಗೆ ಬಾಲರಕ್ಷೆ ಗಳನ್ನು ಮಾಡಿದೆ.

೧೮–೧೯. ಇಂತು ಗೋರೋಜನದಿಂದ ಕಮಲದಳಗಳ ಹೂಮಾಲೆ ಯೊಂದನ್ನು ಮಗುವಿನ ತಲೆಯಲ್ಲಿ ಬರೆದು, "ಮಗುವೆ! ಈಗ ಹೋಗಿ ಇತರ ಬಾಲಕರಂತೆ ನೀನೂ ಜಾಗರೂಕನಾಗಿ ಗಣಗಳೊಡನೆ ಆಡಿಕೊಂಡಿರು" ಎಂದು ಹೇಳಿಕಳುಹಿಸಿದೆ. ಅವನು ಸಿದ್ಧಿಗಳ ನೆಲೆಗಳಾದ ಕೋಡುಗಲ್ಲುಗಳಲ್ಲಿಯೂ,ನವರತ್ನ ಗಳು ಕಲೆತಿರುವಲ್ಲಿಯೂ, ವಿಸ್ತೃತವಾದ ಸಾಲತಾಲವೃಕ್ಷಗಳ ನೆರಳುಗಳಲ್ಲಿಯೂ, ಒಂದು ನಿಮಿಷ ಅರಳಿದ ಪುಷ್ಪಗಳ ತಮಾಲವನದಲ್ಲಿಯೂ, ಮತ್ತೊಂದು ಕ್ಷಣದಲ್ಲಿ ಹರಿದಾಡುತ್ತಿರುವ ದುಂಬಿವಿಂಡಿನಿಂದೊಡಗೂಡಿದ ವೃಕ್ಷಮೂಲ ಗಳಲ್ಲಿಯೂ ಆಡುತ್ತಿದ್ದನು.

೨೦. ಒಂದು ನಿಮಿಷ ಸ್ವಲ್ಪ ಕೆಸರಿರುವ ಜಲದಲ್ಲಿಯೂ, ಬಳಿಕ ಮಹಾ ಪಂಕದಲ್ಲಿಯೂ, ಒಮ್ಮೆ ಶುದ್ಧವೂ, ನಿಷ್ಕಳಂಕವೂ ಆದ ವೃಕ್ಷಸಮೂಹ

ಏವಂ ವಿಕ್ರೀಡತಸ್ತಸ್ಯ ವೀರಕಸ್ಯ ಗಣಸ್ಯ ಚ ।
ಸಂಧ್ಯಾ ತನೋಮಯೀ ಪ್ರಾಪ್ತಾ ವಿಜ್ಞಪ್ತೋಽಹಂ ತ್ವಯಾ ಪ್ರಿಯೇ॥
ಐಶ್ವರ್ಯಂ ದೀಯತಾಮಸ್ಯ ಮಮ ಪುತ್ರಸ್ಯ ಶಂಕರ ।
ಶರೀರಾರ್ಧಂ ಗಣೇಶತ್ವಂ ಲೋಕಪಾಲತ್ವಮಗ್ರತಃ ॥ ೨೨ ॥
ಲಿಂಗತ್ವಮಕ್ಷಯತ್ವಂ ಚ ಸ್ಥಾನಂ ದಿವ್ಯಂ ಸುದುರ್ಲಭಂ ।
ವಂದ್ಯಮಾನಂ ಯಥಾ ದೇವ ಸಿದ್ಧಗಂಧರ್ವಕಿನ್ನರೈಃ ।
ಬ್ರಹ್ಮೇಂದ್ರವರುಣಾದಿತ್ಯಲೋಕಪಾಲೇಶ್ವರೇಶ್ವರೈಃ ॥ ೨೩ ॥
ಏತೈರೇವ ಗಣೈಃ ಸಾರ್ಧಂ ಸ್ತೂಯಮಾನಂ ಮಹಾತ್ಮಭಿಃ ।
ಅಲಂಕೃತೋ ಮಯಾ ಯಸ್ಮಾತ್ಕುಸುಮೈರ್ವಿವಿಧೈಃ ಶುಭೈಃ ।
ಕುಸುಮೇಶ್ವರಸಂಜ್ಞಸ್ತು ತಸ್ಮಾತ್ಖ್ಯಾತೋ ಭವತ್ವಿತಿ ॥ ೨೪ ॥
ಮಯಾಽಪ್ಯುಕ್ತಂ ವಿಶಾಲಾಕ್ಷಿ ವೀರಕಂ ದಯಿತಂ ಮಮ ।
ಮತ್ಪ್ರಭಾವಸಮಂ ದಿವ್ಯಂ ಸೇವಿತಂ ಗಣಪೈಃ ಸದಾ ॥ ೨೫ ॥

---

ದಲ್ಲಿಯೂ, ಗಣನಾಯಕರಿಗೆ ಅಧೀಶ್ವರನಾದ ಆ ಬಾಲಕನು ದೇವತೆಗಳಿಗೆಲ್ಲ ಆನಂದವನ್ನುಂಟುಮಾಡುತ್ತ ಆಡುತ್ತಿದ್ದನು.

೨೧. ಇಂತು ವೀರಕಗಣನಾಯಕನು ಬಾಲಕ್ರೀಡೆಯಲ್ಲಿ ಆಸಕ್ತನಾಗಿರಲು ಲೋಕವನ್ನೆಲ್ಲ ಕತ್ತಲೆಯಲ್ಲಿ ಮುಳುಗಿಸುವ ಸಂಧ್ಯಾಸಮಯವು ಪ್ರಾಪ್ತವಾಗಲು ನೀನು ನನ್ನನ್ನು ಬೇಡಿಕೊಂಡೆ.

೨೨. "ಶಂಕರನೆ! ನನ್ನ ಮಗನಿಗೆ ಸಕಲೈಶ್ವರ್ಯವನ್ನೂ ಶರೀರಾರ್ಧವನ್ನೂ, ಗಣನಾಯಕ ಪದವಿಯನ್ನೂ, ಎಲ್ಲಕ್ಕೂ ಮೇಲಾಗಿ ಲೋಕಪಾಲಕನ ಅಧಿಕಾರವನ್ನೂ ಕೊಡು.

೨೩. ದೇವದೇವನೆ! ಈತನು ಲಿಂಗರೂಪಿಯೂ, ನಾಶರಹಿತನೂ ಆಗಿ ಅತಿ ದುರ್ಲಭವಾದ ದಿವ್ಯಸ್ಥಾನದಲ್ಲಿರಬೇಕು. ಸಿದ್ಧರೂ, ಗಂಧರ್ವರೂ, ಕಿನ್ನರರೂ, ಬ್ರಹ್ಮ, ಇಂದ್ರ, ವರುಣ, ಸೂರ್ಯ, ಲೋಕಪಾಲಕರೇ ಮುಂತಾದ ಐಶ್ವರ್ಯಾನ್ವಿತರೂ ಸಹ ನಿತ್ಯವೂ ಈತನನ್ನು ವಂದಿಸುತ್ತಿರಬೇಕು.

೨೪. ಈ ಗಣಗಳೊಡನೆಯೇ ಈತನು ಸಂಚರಿಸುತ್ತ ಮಹಾತ್ಮರಿಂದಲೂ ಸ್ತೋತ್ರಗಳಿಗೆ ಅರ್ಹನಾಗಬೇಕು. ನಾನು ಬಹುವಿಧಗಳೂ, ಶುದ್ಧಗಳೂ ಆದ ಪುಷ್ಪಗಳಿಂದ ಇವನಿಗೆ ಅಲಂಕಾರವನ್ನು ಮಾಡಿರುವೆನಾದುದರಿಂದ ಕುಸುಮೇಶ್ವರನೆಂದೇ ಈತನು ಪ್ರಖ್ಯಾತಿಯನ್ನು ಪಡೆಯಬೇಕು.

೨೫. ಎಲೌ ವಿಶಾಲಾಕ್ಷಿಯೆ! ನಾನು ನಿನಗೆ ಹೇಳಿದೆನು. ಈ ವೀರಕನು ನನಗೂ ಪರಮಪ್ರೇಮಾಸ್ಪದನು. ನನ್ನ ಮಹಿಮೆಗೆ ಸಮಾನವಾದ ಪ್ರಭಾವವುಳ್ಳವನಾಗಿ ನಿತ್ಯವೂ ಗಣೇಶ್ವರರಿಂದ ಸೇವಿತನಾಗಿರುವನು.

ಶೃಣು ಗಂಧರ್ವಗೀತಾನಾಂ ಮಾಧುರ್ಯಮಮೃತೋಪಮಂ ।
ಪಶ್ಯ ಕಿನ್ನರನಾರೀಣಾಂ ಗಾಯಂತೀನಾಂ ಮನೋರಮಂ ॥ ೨೬ ॥
ಪಶ್ಯಾಽಪ್ಸರಃಸಮೂಹಸ್ಯ ನೃತ್ಯಮೇತನ್ನಿರಂತರಂ ।
ವಿದ್ಯಾಧರೈಃ ಪರಿವೃತಃ ಕುಸುಮೇಶೋ ವರಾನನೇ ॥ ೨೭ ॥
ವಿಶೇಷತೋ ಮಯಾ ದೇವಿ ಪ್ರಥಮಂ ಪ್ರಮಥೇಶ್ವರಃ ।
ಕುಸುಮೇಶ್ವರತಾಂ ನೀತೋ ಯದಾ ಕುಸುಮಮಂಡಿತಃ ॥ ೨೮ ॥
ಸ್ಥಾನಂ ದತ್ತಂ ವಿಶಾಲಾಕ್ಷಿ ಶಿವಲಿಂಗಸ್ಯ ಚೋತ್ತರೇ ।
ವರೋ ದತ್ತೋ ಬಹುಮತೋ ದುಷ್ಪ್ರಾಪ್ಯಸ್ತ್ರಿದಶೈರಪಿ ॥ ೨೯ ॥
ಯೇ ತ್ವಾಂ ದ್ರಕ್ಷ್ಯಂತಿ ಗಣಪ ಕುಸುಮೇಶ್ವರಸಂಜ್ಞಕಂ ।
ನ ತೇಷಾಂ ಜಾಯತೇ ಪಾಪಂ ಪದ್ಮಪತ್ರೇ ಯಥಾ ಜಲಂ ॥ ೩೦ ॥
ಕುಸುಮೈರರ್ಚಯಿಷ್ಯಂತಿ ಯೇ ನರಾಃ ಕುಸುಮೇಶ್ವರಂ ।
ಮತ್ಸ್ಥಾನಂ ತೇ ಸಮಾಸಾದ್ಯ ಮೋದಿಷ್ಯಂತಿ ಗತವ್ಯಥಾಃ ॥ ೩೧ ॥

---

೨೬. ಅಮೃತಕ್ಕೆ ಸಮಾನವಾದ ಈ ಗಂಧರ್ವರ ಗಾಯನದ ಮಾಧುರ್ಯವನ್ನು ಕೇಳಿದೆಯಾ! ಮನೋಹರವಾಗಿ ಗಾನಮಾಡುತ್ತಿರುವ ಕಿನ್ನರಸ್ತ್ರೀಯರ ಸೌಂದರ್ಯವನ್ನು ನೋಡು.

೨೭. ಅಪ್ಸರೋಗಣಗಳು ನಿರಂತರವಾಗಿ ನೃತ್ಯಮಾಡುತ್ತಿರುವುದನ್ನೂ ನೋಡು. ಸುಂದರಮುಖಿಯೆ! ಕುಸುಮೇಶ್ವರನು ವಿದ್ಯಾಧರರಿಂದ ಪರಿವೃತನಾಗಿರುವನು.

೨೮. ದೇವಿಯೆ! ವಿಶೇಷವಾಗಿ ನಾನು ಇವನನ್ನೇ ಮೊದಲು ಪ್ರಮಥಗಣಗಳಿಗೊಡೆಯನನ್ನಾಗಿ ಮಾಡಿರುವೆನು. ಕುಸುಮಗಳಿಂದಲಂಕೃತನಾದ ಈತನನ್ನು ಕುಸುಮೇಶ್ವರನೆಂದೇ ಕರೆಸುವೆನು.

೨೯. ಪಾರ್ವತಿಯೆ! ಮಹಾಕಾಲವನದಲ್ಲಿ ಶಿವೇಶ್ವರನಿಗೆ ಉತ್ತರದಲ್ಲಿ ಇವನಿಗೆ ಒಂದು ಸ್ಥಾನವನ್ನೂ ನಾನು ಕೊಟ್ಟಿರುವೆನು. ದೇವತೆಗಳಿಗೂ ಅಪ್ರಾಪ್ಯವೆನಿಸಿದ ಮಾಹಾತ್ಮ್ಯಕಾರಕವಾದ ವರವನ್ನು ಕೊಟ್ಟಿರುವೆನು.

೩೦ ಗಣನಾಯಕನೆ! ಕುಸುಮೇಶ್ವರನಾಮಕನಾದ ನಿನ್ನನ್ನು ಯಾರು ನೋಡುವರೊ, ಕಮಲದಳದೊಳಗಿನ ಜಲಬಿಂದುವಿನಂತೆ ಅವರಿಗೆ ಪಾಪಲೇಪವಿರುವುದಿಲ್ಲ.

೩೧. ಯಾವ ಮಾನವರು ಕುಸುಮೇಶ್ವರನನ್ನು ಪುಷ್ಪಗಳಿಂದ ಪೂಜಿಸುವರೊ, ಅವರು ಸಕಲ ವ್ಯಥೆಗಳನ್ನೂ ನೀಗಿ ನನ್ನ ಲೋಕವನ್ನು ಹೊಂದಿ ಆನಂದದಿಂದಿರುವರು.

ಯೋಽಪ್ಯೇಕಂ ದಿವಸಂ ಮರ್ತ್ಯಸ್ತ್ವಾಂ ಪಶ್ಯತಿ ಸಮಾಹಿತಃ ।
ಸ ಮುಕ್ತಃ ಪಾತಕೈಃ ಸರ್ವೈರ್ಮಮ ಲೋಕಂ ಗಮಿಷ್ಯತಿ ॥ ೩೨ ॥
ಯಃ ಪೂಜಯತಿ ಭಾವೇನ ಕುಸುಮೈಃ ಕುಸುಮೇಶ್ವರಂ ।
ಸ ಪ್ರಾಪ್ಸ್ಯತಿ ಪರಂ ಸ್ಥಾನಂ ಪುನರಾವೃತ್ತಿದುರ್ಲಭಂ ॥ ೩೩ ॥
ಏವಮಾದಿವರೈಃ ಪುಷ್ಟಃ ಕೃತೋಽಯಂ ಕುಸುಮೇಶ್ವರಃ ।
ಕೃತಕೃತ್ಯೋ ಗಣೋ ದೇವಿ ಲಿಂಗೇನೇಶ್ವರತಾಂ ಗತಃ ॥ ೩೪ ॥
ಕುಸುಮೇಶ್ವರದೇವಸ್ಯ ಪ್ರಭಾವಃ ಕಥಿತಸ್ತ್ವಯಂ ।
ಅಕ್ರೂರೇಶಸ್ಯ ದೇವಸ್ಯ ಶ್ರೂಯತಾಂ ತದನಂತರಂ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಕುಸುಮೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟತ್ರಿಂಶೋಽಧ್ಯಾಯಃ

---

೩೨. ಯಾವ ಮನುಷ್ಯನು ಸಮಾಧಾನಚಿತ್ತದಿಂದ ಒಂದು ದಿನವಾದರೂ ನಿನ್ನ ದರ್ಶನವನ್ನು ತೆಗೆದುಕೊಳ್ಳುವನೊ, ಅವನು ಸಮಸ್ತ ಪಾತಕಗಳನ್ನೂ ಕಳೆದುಕೊಂಡು ನನ್ನ ಲೋಕಕ್ಕೆ ಹೋಗುವನು.

೩೩. ಯಾವನು ಭಕ್ತಿಭಾವಸಹಿತನಾಗಿ ಪುಷ್ಪಗಳಿಂದ ಕುಸುಮೇಶ್ವರನನ್ನು ಪೂಜಿಸುವನೊ, ಅವನು ಪುನರಾವೃತ್ತಿರಹಿತವೆನಿಸಿದ ಪರಮಪದವನ್ನು ಪಡೆಯುವನು.

೩೪. ದೇವಿಯೆ! ಇವೇ ಮೊದಲಾದ ವರಗಳಿಂದ ಈ ಕುಸುಮೇಶ್ವರನು ನನ್ನಿಂದ ಪರಿಪುಷ್ಟನಾಗಿರುವನು. ಲಿಂಗರೂಪದಿಂದ ಈಶ್ವರತ್ವವನ್ನು ಪಡೆದಿರುವ ಈ ಗಣೇಶ್ವರನೇ ಕೃತಕೃತ್ಯನು.

೩೫. ಈ ರೀತಿಯಾದ ಕುಸುಮೇಶ್ವರಮಹಾದೇವನ ಪ್ರಭಾವವು ಹೇಳಲ್ಪಟ್ಟಿತು. ಇನ್ನು ಅಕ್ರೂರೇಶ್ವರದೇವನ ಪ್ರಭಾವವನ್ನು ಕೇಳುವವಳಾಗು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಕುಸುಮೇಶ್ವರಮಾಹಾತ್ಮ್ಯವರ್ಣನ"ವೆಂಬ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು

# ಅಥೈಕೋನಚತ್ವಾರಿಂಶೋಽಧ್ಯಾಯಃ

## ಅಕ್ರೂರೇಶ್ವರಮಾಹಾತ್ಮ್ಯವರ್ಣನಂ

ಹರ ಉವಾಚ :—

ಅಕ್ರೂರೇಶ್ವರಮೇಕೋನಚತ್ವಾರಿಂಶತ್ತಮಂ ಶೃಣು ।
ಯಸ್ಯ ದರ್ಶನಮಾತ್ರೇಣ ಸುಬುದ್ಧಿರ್ಜಾಯತೇ ನೃಣಾಮ್ ॥ ೧ ॥
ಪುರಾ ತ್ವಯೈವ ಕಲ್ಪಾದೌ ಪರಯಾ ಶಕ್ತಿರೂಪಯಾ ।
ಕೃತಂ ಕೃತ್ಸ್ನಂ ವರಾರೋಹೇ ತ್ರೈಲೋಕ್ಯಂ ಸಚರಾಽಚರಂ ॥ ೨ ॥
ತತಸ್ತ್ವಂ ಸಂಸ್ತುತಾ ದೇವೈಃ ಸಕಿನ್ನರಮಹೋರಗೈಃ ।
ಪ್ರದಕ್ಷಿಣಾಂ ಪ್ರಕುರ್ವಂತಿ ಗಣಾ ನಾನಾವಿಧಾಸ್ತು ತೇ ॥ ೩ ॥
ನಮಸ್ಕಾರಂ ಪ್ರಕುರ್ವಂತಿ ಸ್ತೋತ್ರಂ ಕುರ್ವಂತಿ ಚಾಽಪರೇ ।
ನ ಕರೋತಿ ನಮಸ್ಕಾರಮೇಕೋ ಭೃಂಗಿರಿಟಿಸ್ತದಾ ॥ ೪ ॥
ಕ್ರೂರಾಂ ಬುದ್ಧಿಂ ಸಮಾಸಾದ್ಯ ಗರ್ವೇಣಾಽತೀವಗರ್ವಿತಃ ॥ ೫ ॥
ಏಕೋ ದೇವೋ ಮಹಾದೇವಃ ಸ್ತ್ರಿಯಾ ಕಿಮನಯಾ ಮಮ ।
ಯದಾ ನಾಽಽಯಾತಿ ತೇ ಪಾರ್ಶ್ವಂ ತದಾ ಪ್ರೋಕ್ತಸ್ತ್ವಯಾಗತಃ ॥ ೬ ॥

---

## ಕನ್ನಡದ ಅನುವಾದ

### ಅಕ್ರೂರೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ :—ಇನ್ನು ಮೂವತ್ತೊಂಬತ್ತನೆಯ ಮಹಾಲಿಂಗವಾದ ಅಕ್ರೂರೇಶ್ವರನ ಚರಿತ್ರೆಯನ್ನು ಕೇಳು. ಅದರ ದರ್ಶನ ಮಾತ್ರದಿಂದಲೇ ಜನರಿಗೆ ಸುದ್ಬುದ್ಧಿಯುಂಟಾಗುವುದರಲ್ಲಿ ಸಂಶಯವಿಲ್ಲ.

೨. ಸುಂದರಾಂಗಿಯೆ ! ಹಿಂದೆ ಶಕ್ತಿರೂಪಿಣಿಯಾದ ನಿನ್ನಿಂದಲೇ ಕಲ್ಪಾದಿಯಲ್ಲಿ ಚರಾಚರಾತ್ಮಕವಾದ ಸಮಸ್ತ ಬ್ರಹ್ಮಾಂಡವೂ ನಿರ್ಮಿತವಾಯಿತು.

೩. ಆಗ ದೇವತೆಗಳೂ, ಕಿನ್ನರರೂ, ಮಹಾನಾಗರೂ, ಬಹುವಿಧಗಳಾದ ಗಣಾಧಿಪತಿಗಳೂ ಸಹ ನಿನ್ನನ್ನು ಸ್ತೋತ್ರಮಾಡುತ್ತ ಪ್ರದಕ್ಷಿಣೆಯನ್ನೂ ಮಾಡಿದರು.

೪. ಕೆಲವರು ಪ್ರಣಾಮಗಳನ್ನು ಮಾಡಿದರು. ಹಲವರು ಸ್ತೋತ್ರಗಳನ್ನು ಹೇಳುತ್ತಿದ್ದರು. ಅವರಲ್ಲೆಲ್ಲ ಭೃಂಗಿರಿಟಿಯೊಬ್ಬನೇ ನಮಸ್ಕಾರವನ್ನು ಮಾಡಲಿಲ್ಲ.

೫. ಮಹತ್ತರವಾದ ಗರ್ವದಿಂದ ಕೂಡಿದವನಾಗಿ ಅವನು ಅತಿ ಕ್ರೂರ ಬುದ್ಧಿಯುವನಾದನು.

೬. "ಮಹಾದೇವನೊಬ್ಬನೇ ನನಗೆ ಪ್ರಭುವಾದವನು. ಈಕೆಯಿಂದ ನನಗಾಗಬೇಕಾದುದೇನು ?" ಇಂತೆಂದು ಯೋಚಿಸುತ್ತ ಅವನು ಬಳಿಗೆ ಬರದಿರಲು ನೀನು ಅವನಿಗೆ ಹೇಳಿದೆ.

ಕಸ್ಮಾನ್ನ ಕುರುಷೇ ಪೂಜಾಂ ಪ್ರದಕ್ಷಿಣಮಥೋ ಸ್ತುತಿಂ ।
ಮದ್ಭಕ್ತೋ ಮದಧೀನೋಽಸಿ ಮಮ ಪುತ್ರೋ ಮಯಾ ಕೃತಃ ।
ಇತ್ಥಂ ಭೂತಗಣೇಶ ತ್ವಂ ಕಿಂ ವೈ ಲೌಲ್ಯೇನ ವರ್ತಸೇ ॥ ೭ ॥
ಇತಿ ಭೃಂಗಿರಿಟಿಃ ಶ್ರುತ್ವಾ ಕ್ರುದ್ಧಸ್ತ್ವಾಮಾಹ ಗರ್ವಿತಃ ।
ನಾಽಹಂ ಪಾರ್ವತಿ ತೇ ಪುತ್ರಃ ಪುತ್ರೋಽಹಂ ಶಂಕರಸ್ಯ ತು ॥ ೮ ॥
ಏಷ ಏವ ಚ ಮೇ ಮಾತಾ ಏಷ ಏವ ಚ ಮೇ ಪಿತಾ ।
ಏವಂ ರಾತ್ರಿಂ ದಿವಂ ಯಾಮಿ ಶರಣಂ ಪರಮೇಷ್ಠಿನಂ ॥ ೯ ॥
ತ್ವಮಪ್ಯಸ್ಯೈವ ಶರಣಂ ನನು ಪಾರ್ವತಿ ಸಂಸ್ಥಿತಾ ।
ಯದಿ ಚ ತ್ವಾಮಹಂ ವಂದೇ ತದ್ವಂದೇ ಸಕಲಾನ್ಗಣಾನ್ ॥ ೧೦ ॥
ಇತಿ ಭೃಂಗಿರಿಟೇಃ ಶ್ರುತ್ವಾ ವಾಕ್ಯಂ ಕುಪಿತಯಾ ತ್ವಯಾ ।
ತಸ್ಯೋಕ್ತಂ ಪ್ರಮಥೇಶಸ್ಯ ಭೀರು ಭೃಂಗಿರಿಟೇರಿದಂ ॥ ೧೧ ॥
ಸುತೋ ಭೂತ್ವಾ ಭವಾನ್ಕಸ್ಮಾದದಾಕ್ಷಿಣ್ಯಂ ಬ್ರವೀಷಿ ಮಾಂ ।
ತ್ವಙ್ಮಾಂಸಶೋಣಿತಾಂತ್ರಂ ಚ ಮಾತೃಕಂ ತನಯಸ್ಯ ತು ॥ ೧೨ ॥

---

೭. "ನೀನೇಕೆ ನನಗೆ ಪೂಜೆಯನ್ನೂ, ಪ್ರದಕ್ಷಿಣೆಯನ್ನೂ ಮಾಡಿ ಸ್ತುತಿಸುವುದಿಲ್ಲ? ನನ್ನ ಭಕ್ತನೂ ಅಧೀನವರ್ತಿಯೂ ಆಗಿರುವೆ. ನಿನ್ನನ್ನೇ ನಾನು ಮಗನೆಂದು ತಿಳಿದಿರುವೆನು. ಇಂತಹ ಗಣನಾಯಕನಾದ ನೀನು ಹೀಗೇಕೆ ಚಪಲಚಿತ್ತನಾಗಿರುವೆ?"

೮. ಇಂತೆಂಬ ಮಾತನ್ನು ಕೇಳಿ ಕೋಪದಿಂದಲೂ, ಗರ್ವದಿಂದಲೂ ಆ ಭೃಂಗಿರಿಟಿಯು ಹೇಳಿದನು. "ಪಾರ್ವತಿಯೆ! ನಾನು ನಿನ್ನ ಮಗನಲ್ಲ. ನಾನು ಪರಮೇಶ್ವರನ ಪುತ್ರನು.

೯. ಆತನೇ ನನಗೆ ತಾಯಿಯು. ಆತನೇ ತಂದೆಯು. ಈ ಭಾವನೆಯಿಂದ ನಾನು ಹಗಲು ರಾತ್ರಿಗಳಲ್ಲಿಯೂ ಸರ್ವಶಕ್ತನಾದ ಆತನಲ್ಲಿಗೇ ಶರಣುಹೋಗುತ್ತಿರುವೆನು.

೧೦. ಪಾರ್ವತಿಯೆ! ನೀನೂ ಆತನ ಆಶ್ರಯದಲ್ಲಿಯೇ ನೆಲಸಿರುವೆಯಲ್ಲವೆ? ನಿನ್ನನ್ನು ನಾನು ವಂದಿಸಲು ಸಮಸ್ತ ಗಣಗಳನ್ನೂ ವಂದಿಸಬೇಕಾದೀತು."

೧೧. ಇಂತೆಂಬ ಭೃಂಗಿರಿಟಿಯ ಮಾತನ್ನು ಕೇಳಿ ನೀನು ಕುಪಿತಳಾಗಿ ಪ್ರಮಥಾಧಿಪನಾದ ಅವನಿಗೆ ಹೇಳತೊಡಗಿದೆ.

೧೨. "ಮಗನಾಗಿದ್ದರೂ ನೀನು ನನ್ನನ್ನಿಷ್ಟು ನಿಷ್ಠುರವಾಗಿ ಮಾತನಾಡಿಸುವುದೇಕೆ? ಮಗನ ದೇಹದ ಚರ್ಮ, ಮಾಂಸ, ರಕ್ತ, ಕರುಳುಗಳೆಲ್ಲವೂ ತಾಯಿಯಿಂದಲೇ ಬಂದುವಲ್ಲವೆ?

ನಖದಂತಾಽಸ್ಥಿಸಂಘಾತಃ ಶಿಶ್ನಂ ವಾಕ್ಚ ಶಿರಸ್ತಥಾ ।
ತಥೈವ ಶುಕ್ರಂ ಗಣಪ ಪೈತೃಕಂ ತು ಶರೀರಕಂ ॥ ೧೩ ॥
ಇತಿ ಭೃಂಗಿರಿಟಿಃ ಶ್ರುತ್ವಾ ಸದ್ಯೋ ಯೋಗಬಲೇನ ತು ।
ಮಾಂಸಾದಿ ತ್ಯಕ್ತವಾನ್ ಸರ್ವಂ ಮಾತೃಕಂ ಭಾಗಮೇವ ಹಿ ॥ ೧೪ ॥
ತತಃಪ್ರಭೃತಿ ವಾಮೋರು ನಖದಂತಾಸ್ಥಿನಾಸಿಕಃ ।
ಸ ಚ ಕ್ರೂರಾಂ ಮತಿಂ ಕೃತ್ವಾ ಕ್ರೋಧಸಂರಕ್ತಲೋಚನಃ ॥ ೧೫ ॥
ತ್ವಾಂ ಪರಿತ್ಯಜ್ಯ ದುಃಖಾರ್ತ ಆಜಗಾಮ ಮಮಾಂತಿಕಂ ।
ಅಥ ತ್ವಯಾ ತದಾ ಶಪ್ತೋ ಗಣೋ ಭೃಂಗಿರಿಟಿಃ ಪ್ರಿಯೇ ॥ ೧೬ ॥
ಕ್ರೂರಾ ಬುದ್ಧಿಃ ಕೃತಾ ಯಸ್ಮಾತ್ತ್ವಯಾ ಕುಮತಿನಾ ಭೃಶಂ ।
ತಸ್ಮಾತ್ತ್ವಂ ಮಾನುಷೇ ಲೋಕೇ ಗಮಿಷ್ಯಸಿ ನ ಸಂಶಯಃ ॥ ೧೭ ॥
ಇತ್ಯುಕ್ತಸ್ತು ತ್ವಯಾ ದೇವಿ ಗಣೋ ಭೃಂಗಿರಿಟಿಸ್ತಥಾ ।
ಪಪಾತ ಮಾನುಷಂ ಲೋಕಂ ಪುಣ್ಯಾಂತೇ ಸುಕೃತೀ ಯಥಾ ॥ ೧೮ ॥

೧೩. ಎಲೈ ಗಣನಾಯಕನೆ! ಹಾಗೆಯೇ ಉಗುರುಗಳು, ಹಲ್ಲುಗಳು, ಮೂಳೆಗಳು, ಶಿಶ್ನ, ಬಾಯಿ, ತಲೆಯು, ಶುಕ್ರ— ಇವುಗಳೆಲ್ಲವೂ ತಂದೆಯ ದೇಹದಿಂದ ಬರುವವುಗಳು.''

೧೪. ಇಂತೆಂದ ಪಾರ್ವತಿಯ ಮಾತುಗಳನ್ನು ಕೇಳಿ ಭೃಂಗಿರಿಟಿಯು ತನ್ನ ಯೋಗಸಾಮರ್ಥ್ಯದಿಂದ ದೇಹದ ಮಾಂಸವೇ ಮೊದಲಾದ ತಾಯಿಯ ಭಾಗ ವೆಲ್ಲವನ್ನೂ ತ್ಯಾಗಮಾಡಿದನು.

೧೫. ಮಂಗಳಾಂಗಿಯೆ! ಅಂದಿನಿಂದ ಅವನು ಉಗುರು, ಹಲ್ಲು, ಎಲುಬು ಗಳ ಪಂಜರವಾಗಿ ಕ್ರೂರಬುದ್ಧಿಯುವನೂ, ಕೋಪದಿಂದ ಕೆಂಪೇರಿದ ಕಣ್ಣು ಗಳುಳ್ಳವನೂ ಆದನು.

೧೬. ಪ್ರಿಯಳೆ! ಅವನು ನಿನ್ನನ್ನು ತ್ಯಜಿಸಿ ದುಃಖಾಕ್ರಾಂತನಾಗಿ ನನ್ನ ಬಳಿಗೆ ಬಂದನು. ಆಗ ನೀನು ಭೃಂಗಿರಿಟಿ ಗಣೇಶ್ವರನಿಗೆ ಶಾಪವನ್ನಿತ್ತೆ.

೧೭. ''ದುಷ್ಟಬುದ್ಧಿಯಾದ ನೀನು ನನ್ನ ವಿಷಯದಲ್ಲಿ ಕ್ರೂರಮನಸ್ಸನ್ನು ತಳೆದೆಯಾದ ಕಾರಣದಿಂದ ನೀನು ಮನುಷ್ಯಲೋಕದಲ್ಲಿ ಅವತಾರವನ್ನೆತ್ತು ವುದರಲ್ಲಿ ಸಂದೇಹವಿಲ್ಲ.''

೧೮. ದೇವಿಯೆ! ಇಂತು ನೀನು ಶಾಪವನ್ನೀಯಲು ಆ ಭೃಂಗಿರಿಟಿ ಗಣಪನು ಪುಣ್ಯಕ್ಷಯವನ್ನು ಹೊಂದಿದ ಸ್ವರ್ಗವಾಸಿಯಂತೆ ಮನುಷ್ಯಲೋಕ ದಲ್ಲಿ ಬಿದ್ದನು.

ಸ ಗತ್ವಾ ಪುಷ್ಕರದ್ವೀಪಂ ತಪಸೇ ಭಾವಿತಾತ್ಮವಾನ್ ।
ತತ್ರೈಕಪಾದೂರ್ಧ್ವಭುಜೋ ದಶಪದ್ಮಾನ್ಯವಸ್ಥಿತಃ ।
ದಗ್ಧೀಭೂತಂ ಚ ತಪಸಾ ಜಗದ್ವೈ ದುಷ್ಕರೇಣ ತು ॥ ೧೯ ॥
ತತೋ ಬ್ರಹ್ಮಾ ಚ ವಿಷ್ಣುಶ್ಚ ಶಕ್ರಶ್ಚ ತ್ರಿದಶೈಃ ಸಹ ।
ವಯಂ ಚ ಚಾರುಜಘನೇ ತತ್ಸಮೀಪಂ ಸಮಾಗತಾಃ ॥ ೨೦ ॥
ಉಪಗಮ್ಯ ತತಸ್ತಸ್ಯ ಕಥಿತಂ ಪುರತೋ ಮಯಾ ।
ಅಲಂ ಕ್ರೂರೇಣ ತಪಸಾ ಲೋಕಸ್ಯೋತ್ಸಾದನೇನ ವೈ ॥ ೨೧ ॥
ತ್ರೈಲೋಕ್ಯಮಪಿ ನಿಃಸಂಜ್ಞಂ ಜಾತಮೇವಂ ಸ್ಥಿತೇ ತ್ವಯಿ ।
ಸಂಹರಸ್ವ ತಪೋ ಘೋರಂ ಲೋಕಸಂತಾಪನಂ ಮಹತ್ ॥ ೨೨ ॥
ಪ್ರಾರ್ಥ್ಯತಾಂ ಪಾರ್ವತೀಪುತ್ರ ಸಾ ದಾಸ್ಯತಿ ವರಂ ಚ ತೇ ।
ಅಸ್ಯಾಃ ಪ್ರಸಾದಾನ್ಮುಕ್ತಿಸ್ತೇ ಶಾಪಾಚ್ಚೈವ ಭವಿಷ್ಯತಿ ॥ ೨೩ ॥
ಏವಮುಕ್ತಸ್ತದಾ ತೇನ ಪ್ರಾರ್ಥಿತಾ ತ್ವಂ ಮಹೇಶ್ವರಿ ।
ಗಣೇಸ ಭೃಂಗಿರಿಟಿನಾ ಭಕ್ತಿನಮ್ರೇಣ ಸಾದರಾತ್ ॥ ೨೪ ॥

---

೧೯. ಆತನು ಪುಷ್ಕರದ್ವೀಪವನ್ನು ಸೇರಿ ಆತ್ಮಸಂಯಮನದಿಂದ ತಪಸ್ಸನ್ನಾಚರಿಸತೊಡಗಿದನು. ಹತ್ತು ಪದ್ಮಗಳ ಕಾಲ ಒಂದೇ ಕಾಲಿನಮೇಲೆ ಕೈಗಳನ್ನೆತ್ತಿ ನಿಂತುಕೊಂಡಿರಲು ಆತನ ತಪಸ್ಸಿನಿಂದ ಪ್ರಪಂಚವೆಲ್ಲವೂ ಸುಟ್ಟು ಬೂದಿಯಾಗ ತೊಡಗಿತು.

೨೦. ಸುಂದರಿಯೆ ! ಆಗ ಚತುರ್ಮುಖನೂ, ಮಹಾವಿಷ್ಣುವೂ, ದೇವತೆಗಳೊಡಗೂಡಿದ ಮಹೇಂದ್ರನೂ, ನಾವೂ ಆತನ ಸಮೀಪಕ್ಕೆ ಹೊರಟೆವು.

೨೧. ಎಲ್ಲರೂ ಆತನೆದುರಿನಲ್ಲಿ ನಿಂತಿರಲು, ನಾನು ಹೇಳಿದೆನು : ಮೂರು ಲೋಕಗಳನ್ನೂ ನಾಶಗೊಳಿಸುತ್ತಿರುವ ನಿನ್ನ ಈ ಕ್ರೂರ ತಪಸ್ಸನ್ನು ಸಾಕುಮಾಡು.

೨೨. ನೀನು ಹೀಗೆ ನಿಂತಿರಲು ಮೂರು ಲೋಕಗಳೂ ನಿಶ್ಚೇಷ್ಟಗಳಾಗಿರುವುವು. ಭಯಂಕರವೂ, ಲೋಕಸಂತಾಪಕವೂ ಆದ ನಿನ್ನ ಈ ತಪಸ್ಸನ್ನು ಉಪಸಂಹರಿಸು.

೨೩. ಪುತ್ರನೆ! ನೀನು ಪಾರ್ವತಿಯನ್ನು ಬೇಡಿಕೊ. ಆಕೆಯು ನಿನಗೆ ವರವನ್ನು ಕೊಡುವಳು. ಆಕೆಯ ಅನುಗ್ರಹದಿಂದಲೇ ನಿನಗೆ ಶಾಪದಿಂದ ವಿಮೋಚನವಾಗುವುದು.

೨೪. ಮಹೇಶ್ವರಿಯೆ ! ನಾನಿಂತು ಅಪ್ಪಣೆಯನ್ನು ಮಾಡಲು ಆ ಭೃಂಗಿರಿಟಿ ಗಣನಾಯಕನು ಭಕ್ತಿಯಿಂದ ತಲೆಯನ್ನು ಬಗ್ಗಿಸಿಕೊಂಡು ಆದರದಿಂದ ನಿನ್ನನ್ನು

ತ್ವಯಾ ಪ್ರೋಕ್ತಂ ವಿಶಾಲಾಕ್ಷಿ ಪುತ್ರ ಗಚ್ಛ ಮಮಾಜ್ಞಯಾ ।
ಮಹಾಕಾಲವನೇ ರಮ್ಯೇ ತತ್ರಾಕ್ರೂರೋ ಭವಿಷ್ಯಸಿ ॥ ೨೫ ॥
ಪುನಃ ಪ್ರಾಪ್ಸ್ಯಸಿ ಕೈಲಾಸಂ ಸಿದ್ಧಗಂಧರ್ವಸೇವಿತಂ ।
ಅಂಕಪಾದಾಗ್ರತೋ ಲಿಂಗಂ ಸಪ್ತಕಲ್ಪಾನುಗಂ ಮಹತ್ ।
ಯಸ್ಯ ದರ್ಶನಮಾತ್ರೇಣ ಶುಭಾ ಬುದ್ಧಿಃ ಪ್ರಜಾಯತೇ ॥ ೨೬ ॥
ಕೃತಘ್ನಾ ನಾಸ್ತಿಕಾಃ ಕ್ರೂರಾ ಯೇ ಚ ವಿಶ್ವಾಸಘಾತಕಾಃ ।
ಮಹಾಪಾತಕಿನೋ ಯೇ ಚ ಯೇ ಚ ಶಾಪವಶಂಗತಾಃ ।
ದರ್ಶನಾತ್ತಸ್ಯ ಲಿಂಗಸ್ಯ ತೇಽಪಿ ಸ್ವರ್ಗಭುಜೋ ನರಾಃ ॥ ೨೭ ॥
ಕ್ರೂರಾಂ ಬುದ್ಧಿಂ ಸಮಾಸಾದ್ಯ ಕಂಸಂ ಹತ್ವಾ ಚ ಕೇಶಿಹಾ ।
ಬಲದೇವೇನ ಸಹಿತಸ್ತ್ಯಕ್ತ್ವಾ ತಾಂ ಮಥುರಾಂ ಪುರೀಂ ॥ ೨೮ ॥
ಮಹಾಕಾಲವನಂ ಗತ್ವಾ ತೋಷಯಿತ್ವಾ ಮಹೇಶ್ವರಂ ।
ಅಕ್ರೂರತ್ವಂ ಚ ಸಂಪ್ರಾಪ್ತಂ ಕೀರ್ತಿರ್ಲಬ್ಧಾ ಚ ಶಾಶ್ವತೀ ॥ ೨೯ ॥
ತ್ವದೀಯಂ ವಚನಂ ಶ್ರುತ್ವಾ ಗಣೋ ಭೃಂಗಿರಿಟಿಸ್ತದಾ ।
ತಥೇತಿ ಪ್ರತ್ಯಯಾ ಜಾತೋ ಮಹಾಕಾಲವನಂ ಗತಃ ।
ದೇವಮಾರಾಧಯಾಮಾಸ ತಪಸಾ ದುಷ್ಕರೇಣ ತು ॥ ೩೦ ॥

೨೫. ಎಲೌ ವಿಶಾಲಾಕ್ಷಿಯೆ! ನೀನೂ ಆತನಿಗೆ ಹೇಳಿದೆ. "ಪುತ್ರ! ನನ್ನ ಆಜ್ಞೆಯಂತೆ ರಮ್ಯವಾದ ಮಹಾಕಾಲವನಕ್ಕೆ ಹೋಗು. ಅಲ್ಲಿ ನೀನು ನಿನ್ನ ಕ್ರೌರ್ಯವನ್ನು ಕಳೆದುಕೊಳ್ಳುವೆ.

೨೬. ಸಿದ್ಧಗಂಧರ್ವರಿಂದ ಸೇವಿತವಾದ ಕೈಲಾಸವನ್ನು ಪುನಃ ಸೇರುವೆ. ಅಂಕಪಾದೇಶ್ವರನ ಇದಿರಿನಲ್ಲಿ ಏಳುಕಲ್ಪಗಳಿಂದ ನೆಲಸಿರುವ ಮಹತ್ತರವಾದ ಲಿಂಗವೊಂದಿರುವುದು. ಅದನ್ನು ನೋಡುವುದರಿಂದಲೇ ನಿನಗೆ ಶುಭಮತಿಯು ಉಂಟಾಗುವುದು.

೨೭. ಕೃತಘ್ನರಾಗಲಿ, ನಾಸ್ತಿಕರೂ, ಕ್ರೂರಿಗಳೂ, ವಿಶ್ವಾಸಘಾತಕರೂ, ಮಹಾಪಾತಕಗಳನ್ನು ಮಾಡಿದವರೂ, ಶಾಪಗಳಿಗೆ ಸಿಕ್ಕಿದವರೇ ಆಗಲಿ ಆ ಮಹಾ ಲಿಂಗವನ್ನು ನೋಡುವುದರಿಂದ ಸ್ವರ್ಗಲೋಕಭಾಜನರಾಗಿ ಸುಖಿಸುವರು.

೨೮–೨೯. ಶ್ರೀಕೃಷ್ಣನೂ ಕ್ರೂರಬುದ್ಧಿಯಿಂದೊಡಗೂಡಿ ಕಂಸನನ್ನು ನಿಗ್ರಹಿಸಿದ ಬಳಿಕ ಬಲದೇವಸಹಿತನಾಗಿ ಮಥುರಾನಗರಿಯನ್ನು ತ್ಯಜಿಸಿ ಮಹಾ ಕಾಲವನಕ್ಕೆ ಬಂದು ಮಹೇಶ್ವರನನ್ನು ಸೇವಿಸಿದುದರಿಂದಲೇ ಅವನಿಗೆ ಸೌಮ್ಯ ಬುದ್ಧಿಯುಂಟಾಯಿತು. ಶಾಶ್ವತವಾದ ಕೀರ್ತಿಯೂ ಆತನಿಗೆ ಲಭಿಸಿತು.

೩೦. ನಿನ್ನ ಮಾತುಗಳನ್ನು ಕೇಳಿ ಭೃಂಗಿರಿಟಿ ಗಣೇಶ್ವರನು ಹಾಗೆಯೇ ಆಗಲೆಂದು ವಿಶ್ವಾಸವನ್ನಿಟ್ಟವನಾಗಿ ಮಹಾಕಾಲವನಕ್ಕೆ ಹೊರಟು ಅಲ್ಲಿ ಅತ್ಯಂತ ದುಸ್ಸಾಧ್ಯವಾದ ತಪಸ್ಸಿನಿಂದ ಮಹಾದೇವನನ್ನು ಪೂಜಿಸುತ್ತಿದ್ದನು.

ಏತಸ್ಮಿನ್ನಂತರೇ ದೇವಿ ಲಿಂಗಮಧ್ಯಾತ್ತ್ವಮುತ್ಥಿತಾ ।
ಅರ್ಧಾಂಗಂ ಮಾಮಕಂ ಕೃತ್ವಾ ಸ್ವಕೀಯಾಂಗಮಥಾಽರ್ಧತಃ ।
ಫಣೀಂದ್ರಬದ್ಧಜೂಟಾರ್ಧಮರ್ಧಧಮ್ಮಿಲ್ಲಭೂಷಿತಂ ॥ ೩೧ ॥
ಪತ್ರವಲ್ಲೀವಿಚಿತ್ರಾರ್ಧಮರ್ಧಚಂದ್ರವಿರಾಜಿತಂ ।
ಮುಕ್ತಾಹಾರನಿಬದ್ಧಾಽರ್ಧಮರ್ಧಂ ಸರ್ಪೈಶ್ಚ ವೇಷ್ಟಿತಂ ॥ ೩೨ ॥
ತತೋ ಭೃಂಗಿರಿಟಿರ್ದೇವಿ ದೃಷ್ಟ್ವಾ ತನ್ಮಹದದ್ಭುತಂ ।
ಚಿಂತಯಾಮಾಸ ಹೃದಯೇ ಮಯಾಽಜ್ಞಾನಾದನುಷ್ಠಿತಂ ॥ ೩೩ ॥
ಉಮಾ ಚ ಶಂಕರಶ್ಚೈವ ದೇಹಮೇಕಂ ಸನಾತನಂ ।
ಏಕಾ ಮೂರ್ತಿರನಿರ್ದೇಶ್ಯಾ ದ್ವಿಧಾ ಭೇದೇನ ದೃಶ್ಯತೇ ॥ ೩೪ ॥
ಏವಂ ಚಿಂತಯತಸ್ತಸ್ಯ ಭಕ್ತ್ಯಾನಮ್ರಸ್ಯ ಪಾರ್ವತಿ ।
ಪ್ರೋಕ್ತಂ ತ್ವಯಾ ಪ್ರಸನ್ನಾಽಹಂ ವರಂ ವರಯ ಪುತ್ರಕ ॥ ೩೫ ॥
ತೇನೋಕ್ತಂ ಯದಿ ತುಷ್ಟಾಽಸಿ ಮಾತರ್ಮಮ ಮಹೇಶ್ವರಿ ।
ಅಸ್ಯ ಲಿಂಗಸ್ಯ ಮಾಹಾತ್ಮ್ಯಂ ತ್ವತ್ಕೃಪಾ ಬುದ್ಧಿರ್ಗತಾ ಮಮ ॥ ೩೬ ॥

೩೧. ದೇವಿಯೆ! ಆ ವೇಳೆಯಲ್ಲಿಯೇ ನೀನು ಆ ಲಿಂಗದ ಮಧ್ಯದಿಂದ ಹೊರಟುಬಂದು ದೇಹದ ಅರ್ಧದಲ್ಲಿ ನಿನ್ನ ಸಹಜರೂಪವನ್ನೂ, ಮತ್ತೊಂದು ಭಾಗದಲ್ಲಿ ನನ್ನ ರೂಪವನ್ನೂ ತೋರಿಸಿದೆ. ತಲೆಯ ಅರ್ಧವು ನಾಗೇಂದ್ರಬದ್ಧವಾದ ಜಟಾಜೂಟದಿಂದಲೂ, ಅರ್ಧವು ಸುಂದರವಾದ ಮುಡಿಗಂಟಿನಿಂದಲೂ ಶೋಭಿಸುತ್ತಿದ್ದಿತು.

೩೨. ಅರ್ಧವು ಎಲೆ ಬಳ್ಳಿಗಳಿಂದ ಬಂಧಿತವಾಗಿದ್ದು ಮತ್ತೊಂದು ಭಾಗವು ಅರ್ಧಚಂದ್ರನಿಂದ ಶೋಭಿಸುತ್ತಿದ್ದಿತು. ಅರ್ಧದೇಹವು ಮುತ್ತುಗಳ ಹಾರಗಳಿಂದಲಂಕೃತವಾಗಿ ಅರ್ಧವು ಸರ್ಪಗಳಿಂದ ವೇಷ್ಟಿತವಾಗಿದ್ದಿತು.

೩೩. ಆಗ ಭೃಂಗಿರಿಟಿಯು ಆ ಮಹಾಶ್ಚರ್ಯವನ್ನು ನೋಡಿ ತನ್ನಲ್ಲಿಯೇ ಇಂತೆಂದು ಚಿಂತಿಸಿದನು. "ನನ್ನ ಆಚರಣೆಯೆಲ್ಲವೂ ಅಜ್ಞಾನದಿಂದ ಮಾಡಿದುದಾಯಿತು.

೩೪. ನಿಜವಾಗಿ ಪಾರ್ವತಿಯೂ, ಪರಮೇಶ್ವರನೂ ಸನಾತನವಾದ ಒಂದೇ ದೇಹದವರಾಗಿರುವರು. ಇಂತಹುದೆಂದು ನಿರೂಪಿಸಲಾಗದ ಒಂದು ಮೂರ್ತಿಯೇ ಎರಡು ರೂಪಗಳಿಂದ ಕಾಣುತ್ತಿರುವುದು."

೩೫. ಇಂತು ಚಿಂತಿಸುತ್ತ ಭಕ್ತಿಯಿಂದ ತಲೆಬಾಗಿ ನಿಂತಿದ್ದ ಆ ಗಣೇಶ್ವರನನ್ನು ಕುರಿತು, "ಮಗನೆ! ನಾನು ಪ್ರಸನ್ನಳಾಗಿರುವೆನು; ನಿನಗೆ ಬೇಕಾದ ವರವನ್ನು ಬೇಡಿಕೊ" ಎಂದು ನೀನು ಹೇಳಿದೆ.

೩೬. ಆತನೆಂದನು. "ತಾಯಿಯಾದ ಮಹೇಶ್ವರಿಯೆ! ನೀನು ಸಂತುಷ್ಟ

ಅಕ್ರೂರೇಶ್ವರನಾಮೋಽಯಂ ದೇವಃ ಖ್ಯಾತೋ ಭವತ್ವಿತಿ ।
ತ್ವಂ ದೇವಿ ಸರ್ವಭಾವಾನಾಮೇಕಾ ಕಾರಣಮುಚ್ಯತೇ ॥ ೩೭ ॥
ತ್ವಂ ಮೂರ್ತಾ ಪುಣ್ಯನಿಚಯಾ ತ್ವಂ ಗತಿಃ ಪುಣ್ಯಸೇವಿನಾಂ ।
ಪಿತಾ ಮಾತಾ ಸುಹೃದ್ಬಂಧುಸ್ತ್ವಮೇಕಾ ಕಾರಣಂ ಪರಂ ॥ ೩೮ ॥
ಕುರು ಪುಣ್ಯತಮಂ ಸ್ಥಾನಂ ಬ್ರಹ್ಮಹತ್ಯಾದಿನಾಶನಂ ।
ಭುಕ್ತಿದಂ ಮುಕ್ತಿದಂ ಚೈವ ವಾಂಛಿತಾರ್ಥಪ್ರದಾಯಕಂ ॥ ೩೯ ॥
ತಥೇತಿ ಚ ತ್ವಯಾ ಪ್ರೋಕ್ತಂ ಗಿರಾ ಮಧುರಯಾ ತದಾ ।
ಯತ್ತೇ ಪ್ರಿಯತಮಂ ವತ್ಸ ತತ್ಸರ್ವಂ ಪ್ರಕರೋಮ್ಯಹಂ ।
ನ ಮೇಽಸ್ತಿ ದುಷ್ಕರಂ ಪುತ್ರ ತ್ವತ್ಕೃತೇ ಕನಕಪ್ರಭ ॥ ೪೦ ॥
ಅಸ್ಮಿನ್ ಸ್ಥಾನೇತು ಯೇ ದೇವಮಕ್ರೂರೇಶ್ವರಸಂಜ್ಞಕಂ ।
ಪ್ರಸಂಗಾದಪಿ ಪಶ್ಯಂತಿ ಅಪಿ ಪಾಪರತಾ ನರಾಃ
ತೇಽಪ್ಯವಶ್ಯಂ ಭವಿಷ್ಯಂತಿ ತ್ವತ್ಸಮಾ ನಿಯತಂ ಗಣಾಃ ॥ ೪೧ ॥

---

ಳಾಗಿರುವೆಯಾದರೆ ಹೇಳುವೆನು. ಈ ಲಿಂಗದ ಪ್ರಭಾವದಿಂದ ನನ್ನ ಕ್ರೂರ ಬುದ್ಧಿಯು ನಷ್ಟವಾಯಿತು.

೩೭. ಆದುದರಿಂದ ಈ ಲಿಂಗವು ಅಕ್ರೂರೇಶ್ವರನೆಂಬ ಹೆಸರಿನಿಂದಲೇ ಪ್ರಖ್ಯಾತವಾಗಲಿ. ದೇವಿಯು! ಸಕಲ ಮನೋಭಾವನೆಗಳಿಗೂ ನೀನೊಬ್ಬಳೇ ಏಕಾಂತಕಾರಣಳೆಂದು ಹೇಳುವರು.

೩೮. ಮೂರ್ತಿಗೊಂಡ ಪುಣ್ಯರಾಶಿಯೇ ನೀನು. ಪುಣ್ಯಗಳನ್ನು ಮಾಡಿದವರಿಗೆ ಸದ್ಗತಿಪ್ರದಾಯಕಳೂ ನೀನೇ. ತಂದೆಯೂ ತಾಯಿಯೂ ಸ್ನೇಹಿತಳೂ ಬಂಧುವೂ ನೀನೇ. ಅದ್ವಿತೀಯವಾದ ಪರಮಕಾರಣಳೂ ನೀನೆ!

೩೯. ಈ ಪ್ರದೇಶವನ್ನು ಪುಣ್ಯಪ್ರದವೂ, ಬ್ರಹ್ಮಹತ್ಯಾನಿವಾರಕವೂ, ಭೋಗಮೋಕ್ಷಪ್ರದವೂ, ವಾಂಛಿತಫಲದಾಯಕವೂ ಆಗಿರುವ ಸ್ಥಾನವನ್ನಾಗಿ ಮಾಡು.''

೪೦. ದೇವಿ! ಆಗ ನೀನೂ ಮೃದುಮಧುರಧ್ವನಿಯಿಂದ ಹಾಗೆಯೇ ಆಗಲೆಂದು ಅನುಗ್ರಹಿಸಿದೆ. ''ಪುತ್ರ! ನಿನಗೆ ಯಾವುದು ಬೇಕಾಗಿರುವುದೊ, ಅದೆಲ್ಲವನ್ನೂ ನಾನು ಸಮಗ್ರವಾಗಿ ನಡೆಸಿಕೊಡುವೆನು. ಚಿನ್ನದ ಬಣ್ಣವುಳ್ಳವನೆ, ವತ್ಸ! ನಿನಗಾಗಿ ನಾನು ಮಾಡುವ ಯಾವ ಕೆಲಸವೂ ಅಸಾಧ್ಯವಾದುದಲ್ಲ.

೪೧. ಈ ಮಹಾಕ್ಷೇತ್ರದಲ್ಲಿ ಯಾರು ಈ ಅಕ್ರೂರೇಶ್ವರದೇವನನ್ನು ಪ್ರಸಂಗವಶದಿಂದಾದರೂ ನೋಡುವರೊ, ಅವರು ಮಹಾಪಾತಕಗಳಲ್ಲಿ ನಿರತರಾದ ಜನರಾಗಿದ್ದರೂ, ಅವಶ್ಯಕವಾಗಿ ನಿನಗೆ ಸಮಾನರಾಗಿ ಗಣನಾಯಕರಾಗುವರು. ಇದು ನಿಜವು.

ಭಕ್ತ್ಯಾ ಸ್ತೋಷ್ಯಂತಿ ಯೇ ನಾಮ ಲಿಂಗಸ್ಯಾಸ್ಯ ಚ ಮಾನವಾಃ ।
ಮಾನಸೈಃ ಪಾತಕೈರ್ಮುಕ್ತಾ ಯಾಸ್ಯಂತಿ ಸ್ವರ್ಗಮಕ್ಷಯಂ ॥ ೪೨ ॥
ಸ್ನಾತ್ವಾ ತು ವಿಧಿವತ್ಪೂಜಾಂ ಯಃ ಕರಿಷ್ಯತಿ ಮಾನವಃ ।
ಸ ಮುಕ್ತಃ ಪಾತಕೈಃ ಸರ್ವೈಃ ಪ್ರಾಪ್ಸ್ಯತೇ ರವಿಮಂಡಲಂ ॥ ೪೩ ॥
ಆಯುರಾರೋಗ್ಯಮೈಶ್ವರ್ಯಂ ಕಾಮಮತ್ರ ಹಿ ವಾಂಛಿತಂ ।
ಗೋಸಹಸ್ರಫಲಂ ಚಾತ್ರ ಸ್ಪೃಷ್ಟ್ವಾ ಪ್ರಾಪ್ಸ್ಯತಿ ಮಾನವಃ ॥ ೪೪ ॥
ಸ್ನಾತ್ವಾ ಮಂದಾಕಿನೀಕುಂಡೇ ಯೋಽಕ್ರೂರೇಶ್ವರಮೀಶ್ವರಂ ।
ಪೂಜಯೇದ್ವಿವಿಧೈಃ ಪುಷ್ಪೈರ್ಮಹಾಪಾಪಹತೋಽಪಿ ವಾ ॥ ೪೫ ॥
ವಿಮಾನಂ ದಿವ್ಯಮಾರೂಢೋ ಯಾವತ್ಕಲ್ಪಚತುಷ್ಟಯಂ ।
ಗಂಧರ್ವೈರ್ಗೀಯಮಾನಸ್ತು ಸೋಽಪಿ ಸ್ವರ್ಗಂ ಗಮಿಷ್ಯತಿ ॥ ೪೬ ॥
ಇತ್ಯುಕ್ತಃ ಸ ಗಣೋ ದೇವಿ ಮತ್ಸಮೀಪಮುಪಾಗತಃ ।
ಶಾಪಾನ್ಮುಕ್ತಸ್ತ್ವಯಾ ಸಾರ್ಧಂ ವಿಸ್ಮೃತಾ ಕಿಂ ವರಾನನೇ ॥ ೪೭ ॥

---

೪೨. ಯಾವ ಮಾನವರು ಭಕ್ತಿಯಿಂದ ಈ ಲಿಂಗದ ಹೆಸರನ್ನು ಜಪಿಸುತ್ತಿರುವರೊ, ಅವರು ಮಾನಸಿಕಗಳಾದ ಪಾತಕಗಳನ್ನೂ ಕಳೆದುಕೊಂಡು ಶಾಶ್ವತವಾದ ಸ್ವರ್ಗಲೋಕವನ್ನು ಸೇರುವರು.

೪೩. ಯಾವ ಮನುಷ್ಯನು ಸ್ನಾನವನ್ನು ಮಾಡಿ ಪರಿಶುದ್ಧನಾಗಿ ವಿಧ್ಯುಕ್ತ ರೀತಿಯಿಂದ ಈ ಲಿಂಗವನ್ನು ಪೂಜಿಸುವನೊ, ಅವನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ಸೂರ್ಯಮಂಡಲವನ್ನು ಹೋಗಿ ಸೇರುವನು.

೪೪. ಈ ಮಹಾಲಿಂಗದ ಸ್ಪರ್ಶವನ್ನು ಮಾಡಿದ ಮಾನವನು ದೀರ್ಘಾಯುಷ್ಯ, ಆರೋಗ್ಯ, ಐಶ್ವರ್ಯ, ಸಕಲಾಭೀಷ್ಟಗಳು ಎಲ್ಲವನ್ನೂ ಪಡೆದು ಒಂದು ಸಾವಿರ ಗೋದಾನಗಳ ಪುಣ್ಯಕ್ಕೂ ಭಾಗಿಯಾಗುವನು.

೪೫–೪೬. ಮಂದಾಕಿನೀಕುಂಡದಲ್ಲಿ ಸ್ನಾನವನ್ನು ಮಾಡಿ ನಾನಾವಿಧ ಪುಷ್ಪಗಳಿಂದ ಯಾವನು ಈ ಅಕ್ರೂರೇಶ್ವರನ ಪೂಜೆಯನ್ನು ಮಾಡುವನೊ, ಅವನು ಮಹಾಪಾತಕಗಳನ್ನು ಮಾಡಿದವನಾದರೂ ದಿವ್ಯವಿಮಾನವನ್ನೇರಿ ಗಂಧರ್ವರ ಗಾನಗಳನ್ನು ಕೇಳುತ್ತ ಸ್ವರ್ಗವನ್ನು ಸೇರಿ ಅಲ್ಲಿಯೆ ನಾಲ್ಕುಕಲ್ಪಗಳ ಕಾಲ ನೆಲಸಿರುವನು.''

೪೭. ಮಂಗಳಮುಖಿಯೆ! ಇಂತೆಂದು ನೀನು ಹೇಳಲು ಆತನು ಸಂತುಷ್ಟನಾಗಿ ನನ್ನ ಬಳಿಗೆ ಬಂದು ಸೇರಿದನು. ಹೀಗೆ ಆತನು ನಿನ್ನಿಂದಲೇ ಶಪ್ತನಾಗಿ ನಿನ್ನಿಂದಲೇ ಆ ಶಾಪವನ್ನೂ ಕಳೆದುಕೊಂಡನು. ಈ ಕಥೆಯನ್ನು ನೀನು ಮರೆತೆಯಾ?

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ಅಕ್ರೂರೇಶ್ವರದೇವಸ್ಯ ಶೃಣು ಕುಂಡೇಶ್ವರಂ ಪರಂ ॥ ೪೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಅಕ್ರೂರೇಶ್ವರಮಾಹಾತ್ಮ್ಯವರ್ಣನಂ" ನಾಮೈಕೋನಚತ್ವಾರಿಂಶೋಽಧ್ಯಾಯಃ**

---

೪೮. ದೇವಿ ! ಇಂತು ಅಕ್ರೂರೇಶ್ವರಮಹಾದೇವನ ಪಾಪಪರಿಹಾರಕವಾದ ಮಹಿಮೆಯನ್ನು ನಿನಗೆ ಹೇಳಿದೆನು. ಇನ್ನು ಕುಂಡೇಶ್ವರದೇವನ ಚರಿತ್ರೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಅಕ್ರೂರೇಶ್ವರಮಾಹಾತ್ಮ್ಯವರ್ಣನ"ವೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತ್ವಾರಿಂಶೋಽಧ್ಯಾಯಃ

## ಕುಂಡೇಶ್ವರಮಾಹಾತ್ಮ್ಯವರ್ಣನಂ

**ಈಶ್ವರ ಉವಾಚ :—**

**ಚತ್ವಾರಿಂಶತ್ತಮಂ ವಿದ್ಧಿ ಕುಂಡೇಶ್ವರಮತಃ ಶೃಣು ।**
**ಯಸ್ಯ ದರ್ಶನಮಾತ್ರೇಣ ಲಭ್ಯತೇ ಸದ್ಗತಿಃ ಪರಾ ॥ ೧ ॥**
**ವಿಜ್ಞಪ್ತೋಽಹಂ ತ್ವಯಾ ದೇವಿ ಮಂದರೇ ಚಾರುಕಂದರೇ ।**
**ವೀರಕಂ ದ್ರಷ್ಟುಮಿಚ್ಛಾಮಿ ಕ್ವ ಗತೋ ಮಮ ಪುತ್ರಕಃ ॥ ೨ ॥**
**ಮಯಾ ಪ್ರೋಕ್ತಂ ವಿಶಾಲಾಕ್ಷಿ ಮಹಾಕಾಲವನೋತ್ತಮೇ ।**
**ಜಲಮಧ್ಯೇ ಸ್ಥಿತಸ್ತೇಪೇ ತಪಃ ಪರಮದಾರುಣಂ ॥ ೩ ॥**
**ಮುನಿಭಿಃ ಸಹಿತೋ ಧೀಮಾನ್ಭ್ರಾಜಮಾನೋಽಂಶುಮಾನಿವ ।**
**ಗಚ್ಛಾಮಸ್ತತ್ರ ತಂ ದ್ರಷ್ಟುಂ ಗಣೈಃ ಸಾರ್ಧಂ ವರಾನನೇ ॥ ೪ ॥**
**ಮದೀಯಂ ವಚನಂ ಶ್ರುತ್ವಾ ತ್ವಯಾಽಹಂ ಪ್ರೇರಿತಸ್ತದಾ ।**
**ಉತ್ತಿಷ್ಠ ಶಂಭೋ ಗಚ್ಛಾಮೋ ವೃಷಮಾರುಹ ಸತ್ವರಂ ॥ ೫ ॥**

---

## ಕನ್ನಡದ ಅನುವಾದ

### ಕುಂಡೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ನಲವತ್ತನೆಯ ಮಹಾಲಿಂಗವೇ ಕುಂಡೇಶ್ವರವೆಂಬುದು. ಅದರ ಚರಿತ್ರೆಯನ್ನು ಕೇಳು. ಅದನ್ನು ನೋಡುವುದರಿಂದಲೇ ಉತ್ತಮವಾದ ಸದ್ಗತಿಯು ಲಭಿಸುವುದು.

೨. ನಾವು ಸುಂದರಕಂದರಗಳಿಂದೊಪ್ಪುತ್ತಿರುವ ಮಂದರಪರ್ವತದಲ್ಲಿರಲೊಮ್ಮೆ ನೀನು, "ವೀರಕನನ್ನು ನೋಡಲೆಳಸುವೆನು; ಆ ನನ್ನ ಪುತ್ರನೆಲ್ಲಿ ಹೋಗಿರುವನೋ?" ಎಂದು ವಿಜ್ಞಾಪಿಸಿದೆ.

೩. ವಿಶಾಲಾಕ್ಷಿಯೆ! ಆಗ ನಾನೆಂದೆನು: "ಸರ್ವೋತ್ತಮವಾದ ಮಹಾಕಾಲವನಕ್ಷೇತ್ರದಲ್ಲಿ ನೀರಿನ ಮಧ್ಯದಲ್ಲಿ ನಿಂತು ಆತನು ಪರಮದುಸ್ಸಾಧ್ಯವಾದ ತಪಸ್ಸನ್ನು ಮಾಡುತ್ತಿರುವನು.

೪. ಆ ಮಹಾಬುದ್ಧಿಯು ಮುನಿವರ್ಯರೊಡಗೂಡಿ ಸೂರ್ಯನಂತೆ ತೇಜೋವಂತನಾಗಿರುವನು. ಸುಂದರಿ! ನಮ್ಮ ಗಣಗಳೊಡನೆ ಆತನನ್ನು ನೋಡಲು ಅಲ್ಲಿಗೆ ನಾವಿಬ್ಬರೂ ಹೊರಡೋಣ."

೫. ನನ್ನ ಮಾತನ್ನು ಕೇಳಿದ ನೀನು ನನ್ನನ್ನೇ ತ್ವರೆಗೊಳಿಸಿದೆ. "ಪರಮೇಶ್ವರ! ಏಳು, ಹೊರಡೋಣ. ಜಾಗ್ರತೆಯಾಗಿ ನಿನ್ನ ವೃಷಭವಾಹನವನ್ನು ಏರೋಣ."

ಸಪ್ರಸ್ನವೌ ಸ್ತನೌ ಜಾತೌ ಸದ್ಯಃ ಸಂಸ್ಮೃತ್ಯ ವೀರಕಂ ।
ಮಯಾ ಸ್ಮೃತೋ ವೃಷೋ ದೇವಿ ಧರ್ಮರೂಪೀ ಸನಾತನಃ ॥ ೬ ॥
ಮದೀಯಂ ಚಿಂತಿತಂ ಜ್ಞಾತ್ವಾ ಮಮ ಪಾರ್ಶ್ವಮುಪಾಗತಃ ।
ಆರೂಢೋಽಹಂ ತ್ವಯಾ ಸಾರ್ಧಂ ತಸ್ಮಿನ್ನೇವ ವೃಷೇ ತದಾ ॥ ೭ ॥
ಪ್ರಸ್ಥಿತಸ್ತತ್ಕ್ಷಣಾಚ್ಛೀಘ್ರಂ ಗಣೈರ್ನಾನಾವಿಧೈಃ ಸಹ ।
ವೇಗಾತ್ಪ್ರಯಾತೋ ವೃಷಭಸ್ಕಂಧಾಲಂಬಿತಯಾ ತ್ವಯಾ ॥ ೮ ॥
ರಣದ್ವಲಯಬಾಹುಭ್ಯಾಂ ಗಾಢಮಾಲಿಂಗಿತೋ ಹ್ಯಹಂ ।
ತ್ವಂ ಭೀತಾ ಚ ತದಾ ಜಾತಾ ಯದಾಽತೀವ ಪ್ರಣೋದಿತಃ ॥ ೯ ॥
ವೃಷೋ ಮಯಾ ವಿಶಾಲಾಕ್ಷಿ ಸ ಕೃಷ್ಟೋ ಗಣಪೈಸ್ತದಾ ।
ಕೃಷ್ಟಂ ಚ ಸತ್ವರಂ ದೃಷ್ಟ್ವಾ ಪ್ರೋಕ್ತಂ ಚ ಭೀತಯಾ ತದಾ ॥ ೧೦ ॥
ಶ್ರಾಂತಾಽಸ್ಮಿ ಸಾಂಪ್ರತಂ ದೇವ ವೇಗೇನಾಽನೇನ ಭೀಷಿತಾ ।
ತದ್ವಿಶ್ರಮಿತುಮಿಚ್ಛಾಮಿ ಭೂಧರಸ್ಯ ತಟೇ ವಿಭೋ ॥ ೧೧ ॥
ಕ್ಷಣಂ ಪದ್ಭ್ಯಾಂ ಗಮಿಷ್ಯಾಮಿ ವಿಷಮೋಽಹಂ ಗಿರಿರ್ಮಹಾನ್ ।
ತ್ವದೀಯಂ ವಚನಂ ಶ್ರುತ್ವಾ ಬಾಢಮುಕ್ತಂ ಪ್ರಿಯೇ ಮಯಾ ॥ ೧೨ ॥

---

೬. ವೀರಕನನ್ನು ಸ್ಮರಿಸಿಕೊಂಡ ನಿಮಿಷದಲ್ಲಿಯೇ ಪುತ್ರವಾತ್ಸಲ್ಯದಿಂದ ನಿನ್ನ ಸ್ತನಗಳು ಹಾಲು ಸೂಸತೊಡಗಿದುವು. ಎಲೌ ದೇವಿಯೆ! ಆಗ ನಾನು ಅನಾದಿಯೂ, ಧರ್ಮಸ್ವರೂಪವೂ ಆದ ವೃಷಭವನ್ನು ಸ್ಮರಿಸಿದೆನು.

೭. ನಾನು ಚಿಂತಿಸಿದುದನ್ನು ತಿಳಿದು ವೃಷಭವು ನನ್ನ ಪಾರ್ಶ್ವದಲ್ಲಿ ಬಂದು ನಿಂತುಕೊಂಡಿತು. ಆಗ ಅದರ ಮೇಲೆಯೇ ನಾನು ನಿನ್ನೊಡನೆ ಹತ್ತಿ ಕುಳಿತೆನು.

೮. ಆ ವೃಷಭವು ಕ್ಷಣಮಾತ್ರದಲ್ಲಿಯೇ ಅನೇಕ ವಿಧಗಳಾದ ಗಣಗಳಿಂದ ಪರಿವಾರಿತವಾಗಿ ಹೊರಟಿತು. ವೇಗದಿಂದ ಪ್ರಯಾಣವನ್ನು ಮಾಡುತ್ತಿದ್ದ ಆ ವಾಹನದ ಕೊರಳನ್ನು ನೀನು ಹಿಡಿದುಕೊಂಡಿದ್ದೆ.

೯. ಬಳಿಕ ವಾಹನವನ್ನು ನಾನು ವೇಗವಾಗಿ ತುರುಬಲು ಧ್ವನಿಗೈಯುತ್ತಿರುವ ಕಡಗಗಳ ಕೈಗಳಿಂದ ನನ್ನನ್ನು ಭಯಭ್ರಾಂತಳಾಗಿ ಗಾಢವಾಗಿ ಆಲಿಂಗಿಸಿದೆ.

೧೦. ಓ ವಿಶಾಲಾಕ್ಷಿಯೆ! ನಾನು ಆ ವೃಷಭವನ್ನು ಗಣನಾಯಕರೊಡನೆ ವೇಗವಾಗಿ ಸೆಳೆದು ನಿಲ್ಲಿಸಿದೆನು. ಆ ವೇಗದ ಸೆಳೆತವನ್ನು ಕಂಡು ನೀನು ಭಯಗೊಂಡು ನನ್ನಲ್ಲಿ ಹೀಗೆ ವಿಜ್ಞಾಪಿಸಿದೆ.

೧೧. " ದೇವದೇವ! ಈ ಮಹಾವೇಗದಿಂದ ನಾನು ಆಯಾಸಗೊಂಡವಳೂ ಭಯಭ್ರಾಂತಳೂ ಆಗಿರುವೆನು. ಆದುದರಿಂದ ಈ ಪರ್ವತದ ತಪ್ಪಲಿನಲ್ಲಿ ವಿಶ್ರಾಂತಿಯನ್ನು ಪಡೆಯಲೆಳಸುವೆನು.

೧೨. ಈ ಮಹಾಪರ್ವತವು ಬಹಳ ದುರ್ಗಮವಾಗಿರುವುದು. ಒಂದು

ಮುಹೂರ್ತಂ ಚಾರುಜಘನೇ ಶೈಲಪಾದಮುಪಾಶ್ರಿತಾ ।
ಕುರು ಶ್ರಮಾಪನಯನಂ ಯಾವದ್ವೇಗಾತ್ವ್ರಯಾಮ್ಯಹಂ ॥ ೧೩ ॥
ಪಂಥಾನಂ ತ್ವತ್ಸುಖಂ ಯತ್ರ ತಂ ವಯಂ ಮೃಗಯಾಮಹೇ ।
ಏಷ ಕುಂಡೋ ಗಣಾಧ್ಯಕ್ಷಸ್ತ್ವತ್ಸಮೀಪೇ ವಸಿಷ್ಯತಿ ।
ತ್ವದಾಜ್ಞಾವಶವರ್ತೀ ಚ ಕಿಂಕರಃ ಸ್ಥಾಪಿತೋ ಮಯಾ ॥ ೧೪ ॥
ಏವಮುಕ್ತ್ವಾ ತತೋ ದೇವಿ ಸಂಸ್ಥಾಪ್ಯ ಗಣರಕ್ಷಕಂ ।
ಆರೂಢೋಽಹಂ ಗಿರೇಃ ಪ್ರಾಂತಮುದಯಾದ್ರಿಂ ರವಿರ್ಯಥಾ ॥ ೧೫ ॥
ತತೋಽವಲೋಕಿತೋಽತ್ಯರ್ಥಂ ರಮಣೀಯೋ ಮಹಾಗಿರಿಃ ।
ಇದಂ ರಮ್ಯಮಿದಂ ರಮ್ಯಮಿತ್ಯಸ್ಮಿನ್ಪರಪರ್ವತೇ ॥ ೧೬ ॥
ಪಶ್ಯತೋ ಮಮ ಶೈಲೇಂದ್ರಂ ಗತಾಃ ಸಂವತ್ಸರಾ ದಶ ।
ತ್ವಯಾಽಥ ಚಿಂತಿತಂ ದೇವಿ ಕ್ವ ಗತಸ್ತ್ರಿಪುರಾಂತಕಃ ॥ ೧೭ ॥
ನೂನಂ ನ ಮದನಾತಪ್ತಾಂ ವೇತ್ತಿ ಮಾಂ ರತಿವರ್ಜಿತಾಂ ।
ಮಾಂ ವಿಹಾಯ ಮಹಾದೇವೋ ನಿರ್ವಿಶಂಕಃ ಕ್ವ ವರ್ತತೇ ॥ ೧೮ ॥

---

ಕ್ಷಣಕಾಲ ಕಾಲ್ನಡಿಗೆಯೆಂದಲೇ ಬರುತ್ತೇನೆ.'' ಪ್ರಿಯಳೆ! ನಿನ್ನ ಮಾತನ್ನು ಕೇಳಿ ನಾನು ಹಾಗೆಯೇ ಆಗಲೆಂದೆನು.

೧೩. ''ಸುಂದರಾಂಗಿಯೆ! ಈ ಪರ್ವತದ ತಪ್ಪಲುಗಳಲ್ಲಿ ಒಂದು ಮುಹೂರ್ತದವರೆಗೂ ನಿಂತು ಶ್ರಮವನ್ನು ಪರಿಹರಿಸಿಕೊ. ನಾನು ಮಾತ್ರ ವೇಗದಿಂದ ಹೊರಡಬೇಕಾಗಿರುವುದು.

೧೪. ನಿನಗೆ ಯಾವ ದಾರಿಯು ಸುಗಮವಾದುದೆಂಬುದನ್ನು ನಾವು ಹುಡುಕುವೆವು. ಗಣನಾಯಕನಾದ ಈ ಕುಂಡನು ನಿನ್ನ ಸಮೀಪದಲ್ಲಿರುತ್ತಾನೆ. ನಿನ್ನ ಅಪ್ಪಣೆಯನ್ನೇ ಪಾಲಿಸುತ್ತಿರುವ ಕಿಂಕರನನ್ನಾಗಿ ಇವನನ್ನು ನಿನ್ನ ಬಳಿಯಲ್ಲಿಯೇ ಬಿಟ್ಟಿರುವೆನು.''

೧೫. ದೇವಿಯೆ! ಇಂತೆಂದು ಹೇಳಿ ಆ ಗಣಾಧ್ಯಕ್ಷನನ್ನು ನಿನ್ನ ಬಳಿಯಲ್ಲಿ ಬಿಟ್ಟು ಸೂರ್ಯನು ಉದಯಾದ್ರಿಯನ್ನೇರುವಂತೆ ನಾನು ಆ ಪರ್ವತವನ್ನೇರಿದೆನು.

೧೬. ಬಳಿಕ ನಾನು ಮನೋಹರವಾದ ಆ ಪರ್ವತವನ್ನು ಸುತ್ತುತ್ತ ಅದರಲ್ಲಿ ''ಈ ಪ್ರದೇಶವು ರಮಣೀಯವಾಗಿದೆ; ಇದು ಅದಕ್ಕಿಂತಲೂ ಸುಂದರವಾಗಿದೆ'' ಎಂದು ಸುತ್ತುತ್ತಿದ್ದೆನು.

೧೭. ಇಂತು ಮಹಾಪರ್ವತವನ್ನು ನಾನು ನೋಡುತ್ತಿರಲು ಹತ್ತು ವರ್ಷಗಳು ಕಳೆದುಹೋದುವು. ನೀನು, ''ಮಹೇಶ್ವರನೆಲ್ಲಿಗೆಹೋದನೋ?'' ಎಂದು ಚಿಂತಿಸತೊಡಗಿದೆ.

೧೮. ''ನಾನು ಮನ್ಮಥಪೀಡಿತೆಯೂ, ಸುರತಸೌಖ್ಯವರ್ಜಿತೆಯೂ ಆಗಿರುವೆ

ಹರಸ್ಯ ಕ್ವಾಽಪಿ ಯಾತಸ್ಯ ವೈರಂ ಸಂಸ್ಮೃತ್ಯ ಚಿತ್ತಜಃ ।
ಬಾಧತೇ ಮಾಮನಂಗೋಽಪಿ ಚಾಪಾರೋಪಿತಮಾರ್ಗಣಃ ।
ವಿಲೋಕಯಂತೀಂ ಹಾ ದೃಷ್ಟ್ವಾ ವಿಲಪಂತೀಂ ಪುನಃ ಪುನಃ ॥ ೧೯ ॥
ತತಃ ಕುಂಡೋ ಗಣಾಧ್ಯಕ್ಷೋ ಜ್ಞಾತ್ವಾ ಭಾವಂ ತ್ವದೀಯಕಂ ।
ಉತ್ಕೃಷ್ಟೇನ ಸ್ವರೇಣೋಕ್ತಂ ಮಾ ದೇವಿ ವಿಮನಾ ಭವ ॥ ೨೦ ॥
ಆಯಾತಿ ಏಷ ತೇ ಭರ್ತಾ ಮಾ ಚೇತಃ ಕಲುಷಂ ಕುರು ।
ಏತಚ್ಛ್ರುತ್ವಾ ವಚಸ್ತಸ್ಯ ಕುಂಡಸ್ಯ ಕಮಲಾನನೇ ॥ ೨೧ ॥
ದುಃಖಾರ್ತಯಾ ತ್ವಯಾ ಪ್ರೋಕ್ತಃ ಕುಂಡ ವೇದ್ಮಿ ನ ಶಂಕರಂ ।
ಕ್ವ ಗತಃ ಕಿಂ ಚ ಕುರುತೇ ಕಾಲಂ ದೀರ್ಘಮಿಮಂ ಶಿವಃ ।
ದರ್ಶಯಸ್ವ ಮಹಾದೇವಮಿತ್ಯುಕ್ತೋಽಸೌ ಪುನಃ ಪುನಃ ॥ ೨೨ ॥
ಯದಾ ನ ದರ್ಶಿತಸ್ತೇನ ಕುಂಡೇನಾಽಹಂ ವರಾನನೇ ।
ತದಾ ಶಪ್ತಸ್ತ್ವಯಾ ದೇವಿ ಕ್ರುದ್ಧಯಾ ಗಣರಕ್ಷಕಃ ॥ ೨೩ ॥

---

ನೆಂಬುದನ್ನು ಆತನು ನಿಜವಾಗಿಯೂ ತಿಳಿದಿರುವನಲ್ಲವೆ. ಇಂತಹ ನನ್ನನ್ನು ತ್ಯಜಿಸಿ ನಿಶ್ಚಿಂತೆಯಿಂದ ಮಹಾದೇವನೆಲ್ಲಿ ನಿಂತುಬಿಟ್ಟನು ?

೧೯. ಮಹೇಶ್ವರನು ಎಲ್ಲಿಗೋ ಹೊರಟುಹೋಗಿರುವನೆಂಬುದನ್ನು ತಿಳಿದು ಅಶರೀರಿಯಾದ ಆ ಮನ್ಮಥನು ಬಿಲ್ಲಿನಲ್ಲಿ ಪುಷ್ಪಬಾಣಗಳನ್ನು ಹೂಡಿ ಆತನನ್ನೇ ಇದಿರುನೋಡುತ್ತಿರುವವಳೂ, ಪ್ರಲಾಪಿಸುತ್ತಿರುವವಳೂ ಆದ ನನ್ನನ್ನು ಪ್ರಹರಿಸಿ ಬಾಧಿಸುತ್ತಿರುವನು.''

೨೦. ಆಗ ಪರಿವಾರದವನಾದ ಕುಂಡನೆಂಬ ಗಣನಾಯಕನು ನಿನ್ನ ಮನಸ್ಸಿನ ಅಂತರವನ್ನು ತಿಳಿದು ಸುಸಂಸ್ಕೃತವಾದ ಧ್ವನಿಯಲ್ಲಿ ಹೇಳಿದನು. "ಎಲೌ ದೇವಿ! ಹೀಗೆ ನೀನು ದೀನಮನಸ್ಕಳಾಗಬೇಡ.

೨೧. ನಿನ್ನ ಪತಿಯು ಇಲ್ಲಿಯೇ ಬರುತ್ತಿರುವನು. ಮನಸ್ಸನ್ನು ಕಲುಷಿತವನ್ನಾಗಿ ಮಾಡಿಕೊಳ್ಳಬೇಡ.'' ಎಲೌ ಕಮಲಮುಖಿಯೆ! ಕುಂಡನ ಈ ಮಾತುಗಳನ್ನು ಕೇಳಿ ನೀನು ದುಃಖಾಕುಲೆಯಾಗಿ ಆತನಿಗೆ ಹೇಳಿದೆ. "ಕುಂಡನೆ! ಶಂಕರನೆಲ್ಲಿರುವನೋ ಕಾಣೆನಲ್ಲ!

೨೨. ಆತನೆಲ್ಲಿಗೆಹೋದನೋ? ಇಷ್ಟು ದೀರ್ಘಕಾಲದಿಂದ ಶಿವನೇನು ಮಾಡುತ್ತಿರಬಹುದು ? ಮಹಾದೇವನನ್ನು ನನಗೆ ತೋರಿಸು.'' ಇಂತೆಂದು ನೀನು ಆತನಿಗೆ ಮತ್ತೆ ಮತ್ತೆ ಹೇಳಿಕೊಂಡೆ.

೨೩. ದೇವಿಯೆ! ಕುಂಡನೆಂಬ ಆ ಗಣಾಧ್ಯಕ್ಷನು ನನ್ನನ್ನು ನಿನಗೆ ತೋರಿಸಲಿಲ್ಲವೆಂಬ ಕಾರಣದಿಂದ ನೀನು ಕೋಪಗೊಂಡು ಆತನಿಗೆ ಶಾಪವನ್ನು ಕೊಡುವವಳಾದೆ.

ಗಚ್ಛ ತ್ವಂ ಮಾನುಷಂ ಲೋಕಂ ಯಸ್ಮಾನ್ನ ಕಥಿತೋ ಹರಃ ।
ಏತಸ್ಮಿನ್ನಂತರೇ ದೇವಿ ಪ್ರಾಪ್ತೋಽಹಂ ತ್ವತ್ಸಮೀಪತಃ ॥ ೨೪ ॥
ಪೃಷ್ಟಶ್ಚಾಽಹಂ ತ್ವಯಾ ದೇವಿ ವಿಹಾಯ ಕ್ವ ಗತೋಽಸಿ ಮಾಂ ।
ದುರ್ಗಮೇ ಪರ್ವತೇ ಶೂನ್ಯೇ ತಸ್ಮಾತ್ತ್ಯಕ್ಷ್ಯಾಮಿ ಜೀವಿತಂ ॥ ೨೫ ॥
ಗತ್ವಾಽಗ್ರೇ ಭೂಧರಸ್ಯಾಽಸ್ಯ ಕಿಂ ಕೃತಂ ಚ ತ್ವಯಾ ವಿಭೋ ।
ಮಯಾ ತವ ವಚಃ ಶ್ರುತ್ವಾ ಕಥಿತಂ ಸರ್ವಮೇವ ತತ್ ॥ ೨೬ ॥
ದುರಾಧರ್ಷತರಃ ಶೈಲಃ ಸಮಂತಾದುದ್ಧರತಿಕ್ರಮಃ ।
ತ್ವತ್ಪ್ರಿಯಾರ್ಥಂ ಮಹಾಭಾಗೇ ಮಯಾ ಮಾರ್ಗೋಽವಲೋಕಿತಃ ॥ ೨೭ ॥
ಯೇನ ಮಾರ್ಗೇಣ ವಿಶ್ರಬ್ಧಂ ಗಮಿಷ್ಯಾಮಃ ಸುಮಧ್ಯಮೇ ।
ಅಯಂ ಕುಂಡೋ ಗಣೋ ದೇವಿ ವಿಷಣ್ಣೋ ವ್ಯಾಕುಲಃ ಕೃತಃ ॥ ೨೮ ॥
ತ್ವಯಾಪ್ಯುಕ್ತಂ ಮಹಾದೇವ ಕುಂಡಃ ಶಪ್ತೋ ಮಯಾ ಗಣಃ ।
ಮಮಾಜ್ಞಾ ನ ಕೃತಾ ಯಸ್ಮಾದ್ವಿಫಲಂ ನ ವಚೋ ಮಮ ।
ತಸ್ಮಾದ್ಯಾತು ಮಮಾದೇಶಾನ್ಮಹಾಕಾಲವನಂ ಶುಭಂ ॥ ೨೯ ॥

---

೨೪. "ನೀನು ಮಹಾದೇವನೆಲ್ಲಿರುವನೆಂಬುದನ್ನು ನನಗೆ ಹೇಳಲಿಲ್ಲವಾದುದರಿಂದ ಮನುಷ್ಯಲೋಕದಲ್ಲಿ ಜನಿಸು" ಎಂದು ಶಾಪವನ್ನೀಯುತ್ತಿರುವಾಗಲೇ ನಾನು ನಿನ್ನ ಬಳಿಗೆ ಬಂದು ಸೇರಿದೆನು.

೨೫. ಆಗ ನೀನು ನನ್ನನ್ನು ಪ್ರಶ್ನೆಮಾಡಿದೆ. "ದುರ್ಗಮವೂ ಜನಶೂನ್ಯವೂ ಆದ ಈ ಪರ್ವತದಲ್ಲಿ ನನ್ನನ್ನೊಬ್ಬಳನ್ನೇ ತ್ಯಜಿಸಿ ನೀನೆಲ್ಲಿಗೆ ಹೊರಟುಹೋದೆ? ನಾನೀಗ ಪ್ರಾಣವನ್ನು ತೊರೆಯುವೆನು.

೨೬. ಸ್ವಾಮಿ! ನೀನೀ ಪರ್ವತದ ಶಿಖರವನ್ನೇರಿ ಮಾಡುತ್ತಿದ್ದುದೇನು?" ನಾನು ನಿನ್ನ ಮಾತನ್ನು ಕೇಳಿ ಸರ್ವಸ್ವವನ್ನೂ ಆಮೂಲಾಗ್ರವಾಗಿ ಹೇಳಿದೆನು.

೨೭. "ಈ ಪರ್ವತವು ಏರುವುದಕ್ಕೆ ದುಸ್ಸಾಧ್ಯವೂ, ನಡೆದು ಕಡೆಹಾಯುವುದಕ್ಕೆಡೆಯಿಲ್ಲದುದೂ ಆಗಿರುವುದರಿಂದ ನಿನಗೆ ಪ್ರಿಯವನ್ನುಂಟುಮಾಡಲು ಒಂದು ಸುಗಮವಾದ ಮಾರ್ಗವನ್ನು ಹುಡುಕುತ್ತಿದ್ದೆನು.

೨೮. ಸುಂದರಿ! ಈ ಮಾರ್ಗದಿಂದ ನಾವು ಸುಲಭವಾಗಿ ಮುಂದಕ್ಕೆ ಹೋಗಬಲ್ಲೆವು. ದೇವಿಯೆ! ಗಣಾಧ್ಯಕ್ಷನಾದ ಈ ಕುಂಡನು ದೀನನೂ ವ್ಯಾಕುಲಿತನೂ ಆಗಿರಲು ಕಾರಣವೇನು?"

೨೯. ನಾನಿಂತು ಕೇಳಲು ನೀನು ಹೇಳಿದೆ. "ಮಹಾದೇವ! ಈ ಕುಂಡನು ನನ್ನ ಶಾಪಕ್ಕೊಳಗಾಗಿರುವನು. ಇವನು ನನ್ನ ಆಜ್ಞೆಯನ್ನು ಪರಿಪಾಲಿಸಲಿಲ್ಲ. ನನ್ನ ಮಾತು ಸುಳ್ಳಾಗಲಾರದು. ಆದುದರಿಂದ ನನ್ನ ಆಜ್ಞೆಯಂತೆ ಈತನು ಮಹಾಕಾಲವನಕ್ಕೆ ಹೊರಡಲಿ.

ಭೈರವಂ ರೂಪಮಾಸ್ಥಾಯ ಯತ್ರ ತ್ವಂ ಚೋತ್ತರೇ ಸ್ಥಿತಃ ।
ತಸ್ಯಾಽಗ್ರತಃ ಸ್ಥಿತಂ ಲಿಂಗಂ ವರ್ತತೇ ಕಾಮದಂ ಸದಾ ॥ ೩೦ ॥
ತಸ್ಯ ದರ್ಶನಮಾತ್ರೇಣ ಗಣಪೋಽಯಂ ಭವಿಷ್ಯತಿ ।
ಕುಂಡೇಶ್ವರೇತಿ ವಿಖ್ಯಾತಃ ಸ ದೇವೋ ವೈ ಭವಿಷ್ಯತಿ ॥ ೩೧ ॥
ಇತ್ಯುಕ್ತಃ ಸ ತ್ವಯಾ ದೇವಿ ಸಮಾಸಾದ್ಯ ಪುನಃ ಪುನಃ ।
ಪ್ರಸ್ಥಾಪಿತಸ್ತ್ವಯಾದೇಶಾದ್ವ್ರಜ ಕುಂಡ ಮಮಾಜ್ಞಯಾ ॥ ೩೨ ॥
ಮಹಾಕಾಲವನಂ ಶೀಘ್ರಂ ಲಿಂಗಮಾರಾಧ್ಯ ಸತ್ವರಂ ।
ಕೀರ್ತಿಸ್ತೇ ಭವಿತಾ ಪುತ್ರ ತ್ರಿಷು ಲೋಕೇಷು ಶಾಶ್ವತೀ ॥ ೩೩ ॥
ಇತ್ಯುಕ್ತಸ್ತತ್ಕ್ಷಣಾತ್ಪ್ರಾಪ್ತೋ ದೃಷ್ಟ್ವಾ ಲಿಂಗಂ ತು ಶಾಶ್ವತಂ ।
ಉತ್ತರಸ್ಯ ಶಿವಸ್ಯಾಽಗ್ರೇ ಪೂಜಯಾಮಾಸ ಭಕ್ತಿತಃ ॥ ೩೪ ॥
ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ಯಕ್ಷಾಶ್ಚಾಽಪ್ಸರಸಶ್ಚೈವ ಸಮಾಜಗ್ಮುಃ ಸಹಸ್ರಶಃ ॥ ೩೫ ॥
ಅಥಾಽಹಂ ತತ್ಕ್ಷಣಾತ್ಪ್ರಾಪ್ತಸ್ತ್ವಯಾ ಸಾರ್ಧಂ ಗಣೈರ್ವೃತಃ ।
ದೃಷ್ಟ್ವಾ ಕುಂಡಂ ಗಣೇಶಂ ತು ಲಿಂಗಾರಾಧನತತ್ಪರಂ ।
ಸಮಾಧಿಧ್ಯಾನನಿರತಂ ಪ್ರೋಕ್ತಮಸ್ಮಾಭಿರಾದರಾತ್ ॥ ೩೬ ॥

---

೩೦. ಆ ಕ್ಷೇತ್ರದ ಉತ್ತರದಿಕ್ಕಿನಲ್ಲಿ ನೀನು ಭೈರವರೂಪವನ್ನು ತಾಳಿ ನೆಲಸಿರುವೆಯಷ್ಟೆ. ಆ ಮೂರ್ತಿಯ ಸಮ್ಮುಖದಲ್ಲಿಯೇ ನಿತ್ಯವೂ ಸರ್ವಾಭೀಷ್ಟಗಳನ್ನು ಕೊಡುವ ಲಿಂಗವೊಂದಿರುವುದು.

೩೧. ಅದನ್ನು ನೋಡುವುದರಿಂದಲೇ ಈತನು ಪುನಃ ಗಣಾಧಿಪತಿಯಾಗುವನು. ಆ ದೇವೇಶ್ವರನೂ ಕುಂಡೇಶ್ವರನೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆಯುವನು.''

೩೨. ಇಂತೆಂದ ನಿನ್ನನ್ನು ಆತನು ಮತ್ತೆ ಮತ್ತೆ ಬಳಿಸೇರಲು ನೀನು ಆತನನ್ನು ಸಂತೈಸಿ ಕಳುಹಿಸಿಕೊಟ್ಟೆ. "ಕುಂಡ! ನನ್ನ ಅಪ್ಪಣೆಯಂತೆ ಹೊರಡು.

೩೩. ಪುತ್ರ! ವೇಗವಾಗಿ ಮಹಾಕಾಲವನಕ್ಕೆ ಹೋಗಿ ಆ ಉತ್ತಮ ಲಿಂಗವನ್ನು ಪೂಜಿಸಲು ನಿನಗೆ ಮೂರು ಲೋಕಗಳಲ್ಲಿಯೂ ಶಾಶ್ವತವಾದ ಕೀರ್ತಿಯು ಲಭಿಸುವುದು.''

೩೪. ಇಂತು ಹೇಳಲ್ಪಟ್ಟ ಆತನು ನಿಮಿಷಮಾತ್ರದಲ್ಲಿಯೇ ಅನಾದಿಯಾದ ಆ ಲಿಂಗವು ಉತ್ತರದಿಕ್ಕಿನಲ್ಲಿ ಭೈರವೇಶ್ವರನೆದುರಿನಲ್ಲಿರುವುದನ್ನು ಕಂಡು ಭಕ್ತಿಯಿಂದ ಪೂಜೆಯನ್ನು ಮಾಡಿದನು.

೩೫. ಆಗ ದೇವತೆಗಳೂ, ಗಂಧರ್ವರೂ, ಸಿದ್ಧರೂ, ಮಹರ್ಷಿಗಳೂ, ಯಕ್ಷರೂ, ಅಪ್ಸರೆಯರೂ ಅಲ್ಲಿ ಅಸಂಖ್ಯಾತರಾಗಿ ಬಂದು ಸೇರಿದರು.

೩೬. ನಾನೂ ನಿನ್ನೊಡನೆ ಪ್ರಮಥಗಣಪರಿವಾರಿತನಾಗಿ ಬಂದೆನು.

**ತುಷ್ಟಾ ತೇ ಪಾರ್ವತೀಪುತ್ರ ಪ್ರಾರ್ಥ್ಯತಾಂ ವರಮುತ್ತಮಂ ।**
**ಅಕ್ಷಯಂ ತು ಪದಂ ಪ್ರಾಪ್ತಂ ತ್ವಯಾ ಲಿಂಗಸ್ಯ ದರ್ಶನಾತ್ ॥ ೩೭ ॥**
**ಅದ್ಯಪ್ರಭೃತಿ ದೇವೋಽಯಂ ಖ್ಯಾತೋ ಭುವಿ ಭವಿಷ್ಯತಿ ।**
**ನಾಮ್ನಾ ಕುಂಡೇಶ್ವರೋ ಯಸ್ಮಾತ್ಸರ್ವಸಂಪತ್ಕರಃ ಸದಾ ॥ ೩೮ ॥**
**ಕುಂಡೇಶ್ವರಮನಾದಿಂ ತು ಭಕ್ತ್ಯಾ ಪಶ್ಯತಿ ಯೋ ನರಃ ।**
**ಸೋಽಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ಸ್ಯತಿ ನಾಽನ್ಯಥಾ ॥ ೩೯ ॥**
**ತಸ್ಯ ದಾನಫಲಂ ಸರ್ವಂ ಸರ್ವತೀರ್ಥಫಲಂ ಸದಾ ।**
**ಲಿಂಗಂ ಕುಂಡೇಶ್ವರಂ ಯಸ್ತು ಭಕ್ತ್ಯಾ ಸಂಪೂಜಯಿಷ್ಯತಿ ॥ ೪೦ ॥**
**ದಶಾನಾಮಶ್ವಮೇಧಾನಾಮಗ್ನಿಷ್ಟೋಮಶತಸ್ಯ ಚ ।**
**ಸ್ಪರ್ಶನಾತ್ಫಲಮಾಪ್ನೋತಿ ಕುಂಡೇಶ್ವರಸ್ಯ ಸರ್ವದಾ ॥ ೪೧ ॥**
**ಪ್ರಾತಃ ಪಶ್ಯಂತಿ ಯೇ ಭಕ್ತ್ಯಾ ಕೃತ್ವಾ ನಿಯಮಪೂರ್ವಕಂ ।**
**ಸಿದ್ಧಿಂ ಸುಕಾಮಿಕೀಂ ಹೃಷ್ಟಾಃ ಸಂಪ್ರಾಪ್ಸ್ಯಂತಿ ನ ಸಂಶಯಃ ॥ ೪೨ ॥**

---

ಮಹಾಲಿಂಗದ ಆರಾಧನೆಯಲ್ಲಿಯೇ ತತ್ಪರನೂ, ಧ್ಯಾನಸಮಾಧಿಗಳಲ್ಲಿ ನಿರತನೂ ಆಗಿದ್ದ ಆ ಕುಂಡಗಣನಾಯಕನನ್ನು ನೋಡಿ ನಾವಿಬ್ಬರೂ ವಾತ್ಸಲ್ಯದಿಂದ ಹೇಳಿದೆವು.

೩೭. ''ಪುತ್ರನೆ! ನಿನ್ನ ಪೂಜೆಯಿಂದ ಪಾರ್ವತಿಯು ಸಂತುಷ್ಟಳಾಗಿರುವಳು. ಉತ್ತಮವಾದ ವರವನ್ನು ಕೇಳಿಕೊ. ಈ ಲಿಂಗಸಂದರ್ಶನದಿಂದ ನಿನಗೆ ಶಾಶ್ವತವಾದ ಪದವಿಯು ಲಭಿಸಿತು.

೩೮. ಇಂದಿನಿಂದ ಈ ಮಹಾದೇವನು ಭೂಲೋಕದಲ್ಲಿ ಕುಂಡೇಶ್ವರನೆಂಬ ಹೆಸರಿನಿಂದಲೇ ಪ್ರಖ್ಯಾತನಾಗುವನು. ಯಾವಾಗಲೂ ಸಕಲೈಶ್ವರ್ಯಪ್ರದನಾಗಿರುವನು.

೩೯. ಅನಾದಿಯಾಗಿ ನೆಲಸಿರುವ ಈ ಕುಂಡೇಶ್ವರನನ್ನು ಭಕ್ತಿಯಿಂದ ಸಂದರ್ಶಿಸಿದ ಮಾನವನು ಒಂದುಸಾವಿರ ಅಶ್ವಮೇಧಗಳನ್ನು ಮಾಡಿದ ಫಲವನ್ನು ಪಡೆಯುವನು. ಇದು ಸುಳ್ಳಲ್ಲವು.

೪೦. ಯಾವನು ಈ ಕುಂಡೇಶ್ವರಮಹಾಲಿಂಗವನ್ನು ಭಕ್ತಿಯಿಂದ ಪೂಜಿಸುವನೊ, ಅವನಿಗೆ ಸಕಲದಾನಗಳ ಫಲವೂ ಸಮಸ್ತತೀರ್ಥಸ್ನಾನಗಳ ಪುಣ್ಯವೂ ಲಭಿಸುವುವು.

೪೧. ಕುಂಡೇಶ್ವರಲಿಂಗವನ್ನು ಸ್ಪರ್ಶಿಸಿದವನಿಗೆ ಹತ್ತು ಅಶ್ವಮೇಧಯಜ್ಞಗಳನ್ನೂ, ನೂರು ಅಗ್ನಿಷ್ಟೋಮಗಳನ್ನೂ ಮಾಡಿದ ಫಲವು ಕೈಗೂಡುವುದು.

೪೨. ಯಾರು ನಿಯಮಪೂರ್ವಕವಾಗಿ ಸ್ನಾನಾದಿಗಳನ್ನು ಮಾಡಿ ಭಕ್ತಿ

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ಕುಂಡೇಶ್ವರಸ್ಯ ದೇವಸ್ಯ ಶೃಣು ಲುಂಪೇಶ್ವರಂ ಶಿವಂ ॥ ೪೩ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಕುಂಡೇಶ್ವರಮಾಹಾತ್ಮ್ಯವರ್ಣನಂ" ನಾಮ ಚತ್ವಾರಿಂಶೋಽಧ್ಯಾಯಃ**

---

ಯಿಂದ ಈ ಲಿಂಗವನ್ನು ನೋಡುವರೊ, ಅವರು ಸರ್ವಾಭೀಷ್ಟಗಳ ಸಿದ್ಧಿಯನ್ನೂ ಪಡೆದು ಸುಖಿಸುವರು. ಇದರಲ್ಲಿ ಸಂಶಯವಿಲ್ಲ.

೪೩. ಪಾರ್ವತಿಯೆ! ಇಂತು ನಿನಗೆ ಕುಂಡೇಶ್ವರಮಹಾದೇವನ ಪಾಪನಾಶಕವಾದ ಮಹಿಮೆಯ ಕಥೆಯನ್ನು ಹೇಳಿರುವೆನು. ಇನ್ನು ಲುಂಪೇಶ್ವರನ ಚರಿತ್ರೆಯನ್ನು ಕೇಳು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಕುಂಡೇಶ್ವರವರ್ಣನ"ವೆಂಬ ನಲವತ್ತನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥೈಕಚತ್ವಾರಿಂಶೋಽಧ್ಯಾಯಃ

## ಲುಂಪೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಮಹಾದೇವ ಉವಾಚ:—

ಚತ್ವಾರಿಂಶತ್ತಮಂ ಸ್ವೈಕಮೀಶ್ವರಂ ವಿದ್ಧಿ ಪಾರ್ವತಿ ।
ಲುಂಪೇಶ್ವರಮಿತಿ ಖ್ಯಾತಂ ನಾಮ ಯಸ್ಯ ಮಹೀತಲೇ ॥ ೧ ॥
ದೇಶೇ ಮ್ಲೇಚ್ಛಗಣಾಕೀರ್ಣೇ ಬಭೂವ ಜಗತೀಪತಿಃ ।
ಲುಂಪಾಧಿಪ ಇತಿ ಖ್ಯಾತೋ ಮಹೇಂದ್ರಸಮವಿಕ್ರಮಃ ॥ ೨ ॥
ತಸ್ಯಾಸೀದ್ದಯಿತಾ ಭಾರ್ಯಾ ವಿಶಾಲಾ ನಾಮ ನಾಮತಃ ।
ಸಾ ಯೌವನಗುಣೋಪೇತಾ ರೂಪೇಣಾಽಪ್ರತಿಮಾ ಭುವಿ ॥ ೩ ॥
ಸ ಯುದ್ಧಕಾಮೋ ನೃಪತಿಃ ಪರ್ಯಪೃಚ್ಛದ್ದ್ವಿಜೋತ್ತಮಾನ್ ॥ ೪ ॥
ಅಥ ಕೇನಾಽಪಿ ಕಥಿತಮಾಶ್ರಮೇ ಸಾಮಗೋ ದ್ವಿಜಃ ।
ತೇನ ಸಾರ್ಧಂ ಮಹಾಬಾಹೋ ಯುಧ್ಯಸ್ವ ತ್ವಂ ನೃಪೋತ್ತಮ ॥ ೫ ॥

---

## ಕನ್ನಡದ ಅನುವಾದ

### ಲುಂಪೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಪಾರ್ವತಿಯೆ! ಇನ್ನು ನಲವತ್ತೊಂದನೆಯ ಮಹಾಲಿಂಗವೊಂದಿರುವುದು. ಭೂಲೋಕದಲ್ಲಿ ಅದರ ಹೆಸರು ಲುಂಪೇಶ್ವರವೆಂದು ಪ್ರಖ್ಯಾತವಾಗಿರುವುದು.

೨. ಮ್ಲೇಚ್ಛಸಮೂಹಗಳಿಂದ ತುಂಬಿದ ಒಂದು ದೇಶದಲ್ಲಿ ಹಿಂದೊಮ್ಮೆ ಲುಂಪನೆಂಬ ಪ್ರಖ್ಯಾತನಾದ ಚಕ್ರವರ್ತಿಯೊಬ್ಬನಿದ್ದನು. ಆತನು ಮಹೇಂದ್ರನಿಗೆ ಸಮನಾದ ಪರಾಕ್ರಮವಂತನಾಗಿದ್ದನು.

೩. ಆತನಿಗೆ ವಿಶಾಲೆಯೆಂಬ ಹೆಸರಿನ ಪರಮಪ್ರೀತಿಪಾತ್ರಳಾದ ಹೆಂಡತಿಯಿದ್ದಳು. ಯೌವನವಂತೆಯಾದ ಆಕೆಯು ಭೂಲೋಕವಲ್ಲಿಯೇ ಅನನ್ಯಸಾಧಾರಣವಾದ ಸೌಂದರ್ಯದಿಂದ ಕೂಡಿದ್ದಳು.

೪. ಯುದ್ಧಾಭಿಲಾಷಿಯಾದ ಆ ಮ್ಲೇಚ್ಛರಾಜನಾದರೊ ಬ್ರಾಹ್ಮಣರನ್ನೇ ಶತ್ರುಪಕ್ಷದವರನ್ನಾಗಿ ತಿಳಿದಿದ್ದನಾಗಿ ಯಾವ ಬ್ರಾಹ್ಮಣನೊಡನೆ ಯುದ್ಧಮಾಡುವುದೆಂದು ದ್ವಿಜೋತ್ತಮರನ್ನೇ ಕೇಳಿದನು.

೫. ಆಗ ಒಬ್ಬನು ಹೇಳಿದನು. "ಮಹಾಪರಾಕ್ರಮಿಯಾದ ಚಕ್ರವರ್ತಿಯೆ! ಸಮೀಪದ ಆಶ್ರಮದಲ್ಲಿ ಸಾಮಗನೆಂಬ ಬ್ರಾಹ್ಮಣನೊಬ್ಬನಿರುವನು. ಆತನೊಡನೆ ಯುದ್ಧವನ್ನು ಮಾಡು.

ತತಃ ಸ ಪ್ರಸ್ಥಿತೋ ರಾಜಾ ಮ್ಲೇಚ್ಛೈಃ ಸಾರ್ಧಂ ಸಹಸ್ರಶಃ ।
ತುಷಾರೈರ್ಬರ್ಬರೈರ್ಲುಂಪೈಃ ಪಲ್ಲವೈಃ ಶ್ವಗಣೈಸ್ತಥಾ ॥ ೬ ॥
ದಸ್ಯುಭಿಃ ಸಂವೃತಃ ಕ್ರೂರೈಃ ಕ್ರೋಧೇನಾಕುಲಿತೇಂದ್ರಿಯಃ ।
ಆಜಗಾಮಾಶ್ರಮಂ ಪುಣ್ಯಂ ಸಾಮುಗಸ್ಯ ಮುನೇಸ್ತದಾ ॥ ೭ ॥
ಮುನಿನಾ ಪೂಜಿತಸ್ತೇನ ಮಧುಪರ್ಕಾದಿವಿಷ್ಟರೈಃ ।
ಏತಸ್ಮಿನ್ನಂತರೇ ರಾಜಾ ಹೋಮಧೇನುಂ ದದರ್ಶ ಹ ॥ ೮ ॥
ಪ್ರಾರ್ಥಯಾಮಾಸ ಸಹಸಾ ನ ದತ್ತಾ ಮುನಿನಾ ತದಾ ।
ಪ್ರಮಥ್ಯ ಚಾಶ್ರಮಂ ತಸ್ಯ ಹೋಮಧೇನುಂ ಜಹಾರ ಸಃ ।
ವನಂ ಬಭಂಜ ಸಕಲಂ ತಸ್ಯ ವಿಪ್ರಸ್ಯ ಪಶ್ಯತಃ ॥ ೯ ॥
ಕಾಲ್ಯಮಾನಾಂ ಚ ಗಾಂ ದೃಷ್ಟ್ವಾ ವತ್ಸಂ ಚಾತೀವ ದುಃಖಿತಂ ।
ಉವಾಚ ವಚನಂ ವಿಪ್ರೋ ಮಾ ರಾಜನ್ಸಾಹಸಂ ಕುರು ॥ ೧೦ ॥
ಏವಂ ವದಂತಂ ವಿಪ್ರೇಂದ್ರಂ ಶರೈಸ್ತೀಕ್ಷ್ಣೈರ್ಜಘಾನ ಹ ।
ಲುಂಪಃ ಕ್ರೋಧಸಮಾವಿಷ್ಟೋ ದುಷ್ಟೋ ದುಷ್ಟಜನೈರ್ವೃತಃ ॥ ೧೧ ॥

---

೬. ಆದನ್ನು ಕೇಳಿ ರಾಜನು ಸಾವಿರಾರು ಮ್ಲೇಚ್ಛರು, ತುಷಾರರು, ಬರ್ಬರರು, ಲುಂಪರು, ಮುಂತಾದವರಿಂದಲೂ, ಬೇಟೆನಾಯಿಗಳಿಂದಲೂ ಪರಿವೃತನಾಗಿ ಹೊರಟನು.

೭. ಕೋಪದಿಂದ ಇಂದ್ರಿಯಪರವಶನಾದ ಆತನು ಕ್ರೂರರಾದ ಮ್ಲೇಚ್ಛ ಗಣದೊಡಗೂಡಿ ವೇಗವಾಗಿ ಆ ಸಾಮುಗಮುನಿವರ್ಯನ ಪಾವನವಾದ ಆಶ್ರಮ ಪ್ರದೇಶಕ್ಕೆ ಬಂದನು.

೮–೯. ಮುನಿಯು ಆತನಿಗೆ ಮಧುಪರ್ಕಾಸನಾದಿಗಳನ್ನಿತ್ತು ಅತಿಥಿಸತ್ಕಾರ ಗಳನ್ನು ಮಾಡಿದನು. ಇಷ್ಟರಲ್ಲಿಯೇ ರಾಜನು ಮಹರ್ಷಿಯ ಹೋಮಧೇನು ವನ್ನು ಕಂಡನು. ಬಹುವಿಧವಾಗಿ ಅದನ್ನು ಬೇಡಿದರೂ ಮುನಿಯು ಅದನ್ನು ಕೊಡಲೊಪ್ಪಲಿಲ್ಲ. ಆಗ ರಾಜನು ಕುಪಿತನಾಗಿ ಆಶ್ರಮವೆಲ್ಲವನ್ನೂ ಧ್ವಂಸ ಗೊಳಿಸಿ ಆ ಆಕಳನ್ನು ಸೆಳೆದುಕೊಂಡುಹೋದನು. ಇಷ್ಟೆಯಲ್ಲದೆ ಆ ಮುನಿಯು ನೋಡುತ್ತಿದ್ದಂತೆಯೇ ಸಮಸ್ತ ತಪೋವನವನ್ನೂ ನಾಶಮಾಡಿದನು.

೧೦. ಸೆಳೆಯಲ್ಪಟ್ಟ ಗೋವನ್ನೂ, ದುಃಖಗೊಂಡಿರುವ ಕರುವನ್ನೂ ಕಂಡು ಬ್ರಾಹ್ಮಣನು, "ರಾಜೇಂದ್ರ! ಇಂತಹ ಸಾಹಸಕಾರ್ಯವನ್ನು ಮಾಡಬೇಡ" ಎಂದು ಹೇಳಿದನು.

೧೧. ಇಂತು ನುಡಿಯುತ್ತಿರುವ ಆ ಬ್ರಾಹ್ಮಣೋತ್ತಮನನ್ನು ಕೋಪಾನ್ವಿತನೂ, ದುಷ್ಟನೂ, ದುಷ್ಟಪರಿವಾರಿತನೂ ಆದ ಲುಂಪಮಹಾರಾಜನು ತೀಕ್ಷ್ಣ ಗಳಾದ ಬಾಣಗಳಿಂದ ಹೊಡೆದನು.

ಅಸಕೃತ್ಪುತ್ರಪುತ್ರೇತಿ ವಿಲಪಂತಮನಾಥವತ್ ।
ಹತ್ವಾ ಚ ಸಾಮಗಂ ವಿಪ್ರಂ ಜಗಾಮ ಸ್ವಗೃಹಂ ನೃಪಃ ॥ ೧೨ ॥
ಏತಸ್ಮಿನ್ನಂತರೇ ಪುತ್ರಃ ಸಮಿತ್ಪಾಣಿರುಪಾಗತಃ ।
ದೃಷ್ಟ್ವಾ ಚ ಪಿತರಂ ವಿಪ್ರಂ ತದಾ ಮೃತ್ಯುವಶಂ ಗತಂ ।
ಅನಾಗಸಂ ಮಹಾತ್ಮಾನಂ ವಿಲಲಾಪ ಸುದುಃಖಿತಃ ॥ ೧೩ ॥
ಕೇನೇದಂ ಕುತ್ಸಿತಂ ಕರ್ಮ ಕೃತಂ ಪಾಪೇನ ಮೇ ಪಿತಾ ।
ಅಯುಧ್ಯಮಾನೋ ವೃದ್ಧಃ ಸನ್ಹತಃ ಶರಶತೈಃ ಶಿತೈಃ ॥ ೧೪ ॥
ವಿಲಪ್ಯೈವಂ ಸಕರುಣಂ ಬಹು ನಾನಾವಿಧಂ ತಥಾ ।
ಪ್ರೇತಕಾರ್ಯಾಣಿ ಸರ್ವಾಣಿ ಪಿತುಶ್ಚಕ್ರೇ ವಿಧಾನತಃ ॥ ೧೫ ॥
ದದಾಹ ಪಿತರಂ ಚಾಽಗ್ನೌ ತೋಯಮಾದಾಯ ಸತ್ವರಂ ।
ತಸ್ಯ ಲುಂಪಾಧಿಪಸ್ಯಾಽಪಿ ದದೌ ಶಾಪಂ ಸುದಾರುಣಂ ॥ ೧೬ ॥
ಸ್ವಧರ್ಮನಿರತೋ ವಿದ್ವಾನ್ಯೇನ ಮೇ ನಿಹತಃ ಪಿತಾ ।
ಸ ಪಾಪಾತ್ಮಾ ದುರಾಚಾರಃ ಕುಷ್ಠರೋಗಮವಾಪ್ನುಯಾತ್ ॥ ೧೭ ॥

---

೧೨. ಅನಾಥನಂತೆ "ಹಾ! ಪುತ್ರನೆ!" ಎಂದು ಬಹುವಿಧವಾಗಿ ಪ್ರಲಾಪಿಸುತ್ತಿರುವ ಸಾಮಗನೆಂಬ ಆ ವಿಪ್ರಶ್ರೇಷ್ಠನನ್ನು ಕೊಂದು ಲುಂಪನು ತನ್ನ ರಾಜಧಾನಿಗೆ ಹಿಂದಿರುಗಿದನು.

೧೩. ಇಷ್ಟೊ ನಡೆದಮೇಲೆ ಸಮಿತ್ತುಗಳಿಗಾಗಿ ಹೋಗಿದ್ದ ಆ ಮುನಿ ಕುಮಾರನು ಆಶ್ರಮಕ್ಕೆ ಬಂದನು. ಬ್ರಾಹ್ಮಣಶ್ರೇಷ್ಠನೂ, ನಿಷ್ಪಾಪನೂ, ಮಹಾತ್ಮನೂ ಆದ ತನ್ನ ತಂದೆಯು ಮೃತನಾಗಿರುವುದನ್ನು ಕಂಡು ಬಹಳ ದುಃಖಿತನಾಗಿ ಪ್ರಲಪಿಸಿದನು.

೧೪. "ಹೀಚವಾದ ಈ ಕಾರ್ಯವು ಯಾರಿಂದ ನಡೆಯಿತು? ಯುದ್ಧ ಪರಾಙ್ಮುಖನೂ, ವೃದ್ಧನೂ ಆದ ನನ್ನ ತಂದೆಯು ಯಾವನ ತೀಕ್ಷ್ಣಬಾಣ ಗಳಿಂದ ಹತನಾದನು?"

೧೫. ಇಂತು ಬಹಳಕಾಲ ವಿಧವಿಧವಾಗಿ ದುಃಖಪಡುತ್ತ ತಂದೆಗೆ ಶಾಸ್ತ್ರೋಕ್ತವಾಗಿ ಸಮಸ್ತ ಔರ್ಧ್ವದೇಹಿಕ ಕಾರ್ಯಗಳನ್ನೂ ನಡೆಸಿದನು.

೧೬. ತಂದೆಯ ದೇಹವನ್ನು ಅಗ್ನಿಗೆ ಆಹುತಿಯಾಗಿ ಕೊಟ್ಟು ಕೋಪದಿಂದ ಕೈಯಲ್ಲಿ ನೀರನ್ನು ಹಿಡಿದು ಆ ಲುಂಪಮಹಾರಾಜನಿಗೆ ಭಯಂಕರವಾದ ಶಾಪ ವನ್ನಿತ್ತನು.

೧೭. "ಸ್ವಧರ್ಮನಿರತನೂ, ಸಕಲಶಾಸ್ತ್ರಜ್ಞನೂ ಆದ ನನ್ನ ತಂದೆಯು ಯಾವನಿಂದ ಹತನಾದನೊ, ಆ ದುರಾಚಾರಿಯಾದ ಪಾತಕಿಯು ಕುಷ್ಠರೋಗ ಪೀಡಿತನಾಗಲಿ."

ಏತಸ್ಮಿನ್ನಂತರೇ ರಾಜಾ ಕುಷ್ಠರೋಗೇಣ ಪೀಡಿತಃ ।
ಅಚಂಕ್ರಮಣತಾಂ ಪ್ರಾಪ್ತೋ ಲುಂಪಾಽಧೀಶೋ ವರಾನನೇ ॥ ೧೮ ॥
ಔಷಧೈರಧಿಕೋಽಭ್ಯೇತಿ ಬ್ರಹ್ಮಶಾಪಪ್ರಭಾವತಃ ।
ವೈರಾಗ್ಯಾನ್ಮರ್ತುಕಾಮೋಽಸೌ ಕಾಷ್ಠಾನ್ಯಾದಾಯ ದುಃಖಿತಃ ॥ ೧೯ ॥
ಚಿತಾಂ ಕರ್ತುಂ ಸಮಾರೇಭೇ ಸಮಾಯಾತೋಽಥ ನಾರದಃ ।
ಪೂಜಿತೋ ವಿಧಿನಾ ಯೇನ ದುಃಖಿತೇನ ನೃಪೇಣ ಹಿ ॥ ೨೦ ॥
ಅಥ ಪಪ್ರಚ್ಛ ಲುಂಪೋಽಸೌ ನಾರದಂ ಮುನಿಸತ್ತಮಂ ।
ಅಕಸ್ಮಾನ್ಮಮ ದೇವರ್ಷೇ ಕುಷ್ಠರೋಗೋ ಬಭೂವ ಹ ।
ತೇನಾಽಹಂ ಪೀಡಿತೋಽತೀವ ನ ಚ ಶಾಂತಿಂ ವ್ರಜತ್ಯಸೌ ॥ ೨೧ ॥
ಔಷಧೈರ್ವರ್ಧತೇ ಕಸ್ಮಾದೇತದಾಖ್ಯಾತುಮರ್ಹಸಿ ।
ನ ತೇಽಸ್ತ್ಯವಿದಿತಂ ಕಿಂಚಿದಿಹಲೋಕೇ ಪರತ್ರ ಚ ॥ ೨೨ ॥
ತಸ್ಯ ತದ್ವಚನಂ ಶ್ರುತ್ವಾ ಲುಂಪಾಧೀಶಸ್ಯ ನಾರದಃ ।
ಕಥಯಾಮಾಸ ತತ್ಸರ್ವಂ ಬ್ರಹ್ಮಶಾಪಂ ಸುದುಸ್ತರಂ ॥ ೨೩ ॥

---

೧೮. ಸುಂದರಮುಖಿಯೆ! ಆ ಲುಂಪಾಧಿಪತಿಯು ಆ ಕ್ಷಣದಿಂದಲೇ ಕುಷ್ಠರೋಗಾಭಿಭೂತನಾಗಿ ಓಡಾಡುವುದಕ್ಕೂ ಸಹ ಶಕ್ತಿಯಿಲ್ಲದವನಾದನು.

೧೯. ಆ ಬ್ರಾಹ್ಮಣಪುತ್ರನ ಶಾಪಬಲದಿಂದ ಔಷಧಗಳನ್ನುಪಯೋಗಿಸಿದಂತೆಲ್ಲ ರೋಗವು ಬಲವಾಗುತ್ತಲೇ ಇದ್ದಿತು. ಇದರಿಂದ ಆ ರಾಜನಿಗೆ ವೈರಾಗ್ಯವುಂಟಾಗಿ ದೇಹವನ್ನು ತೊರೆಯಲೆಳಸಿ ದುಃಖದಿಂದ ಕಟ್ಟಿಗೆಗಳನ್ನು ತಂದು ಚಿತೆಯನ್ನು ಮಾಡುತ್ತಿರಲು, ನಾರದಮುನಿಯು ಆತನಿದ್ದ ಸ್ಥಳಕ್ಕೆ ಬಂದನು.

೨೦. ಆತನಿಗೆ ವಿಧ್ಯುಕ್ತಪೂಜೆಯನ್ನು ಮಾಡಿ ಮುನಿಪುಂಗವನಾದ ಆತನನ್ನು ಲುಂಪೇಶ್ವರನು ದುಃಖಾನ್ವಿತನಾಗಿಯೇ ಪ್ರಶ್ನೆಮಾಡಿದನು.

೨೧. "ದೇವರ್ಷಿವರ್ಯನೆ! ನಿಷ್ಕಾರಣವಾಗಿಯೇ ನನಗೆ ಈ ಕುಷ್ಠರೋಗವು ಪ್ರಾಪ್ತವಾಯಿತು. ಅದರಿಂದ ನಾನು ಬಹಳ ಸಂಕಟಗೊಳ್ಳುತ್ತಿರುವೆನು. ಇದು ಯಾವುದರಿಂದಲೂ ಶಮನವಾಗಲಿಲ್ಲ.

೨೨. ಔಷಧಪ್ರಯೋಗದಿಂದ ರೋಗವು ಹೆಚ್ಚಾಗುತ್ತಿರುವುದಕ್ಕೆ ಕಾರಣವನ್ನು ನನಗೆ ತಿಳಿಸಲು ನೀನೇ ಅರ್ಹನಾಗಿರುವೆ. ಈ ಲೋಕದಲ್ಲಾಗಲಿ, ಲೋಕಾಂತರಗಳಲ್ಲಾಗಲಿ ನಿನಗೆ ತಿಳಿಯದ ವಿಷಯವೇ ಇಲ್ಲವಷ್ಟೆ?"

೨೩. ಲುಂಪಾಧಿನಾಥನ ಆ ಮಾತುಗಳನ್ನು ಕೇಳಿ ನಾರದಮುನಿಯು ಆತನಿಗೆ ದುಸ್ತರವಾದ ಬ್ರಾಹ್ಮಣಶಾಪವು ಪ್ರಾಪ್ತವಾದ ಚರಿತ್ರೆಯನ್ನೆಲ್ಲ ವಿಸ್ತರಿಸಿ ಹೇಳಿದನು.

ತತಃ ಸಭಾರ್ಯೋ ನೃಪತಿಃ ಪ್ರಾರ್ಥಯಾಮಾಸ ನಾರದಂ ।
ಕಥಂ ಮೇ ಭಗವಂಛಾಪೋ ದುಸ್ತರೋ ಯಾಸ್ಯತಿ ಕ್ಷಯಂ ॥ ೨೪ ॥
ಏವಮುಕ್ತಸ್ತು ಲುಂಪೇನ ನಾರದೋ ಭಗವಾನ್ನೃಷಿಃ ।
ಕಾರುಣ್ಯಾತ್ಕಥಯಾಮಾಸ ಸಭಾರ್ಯಸ್ಯ ಯಶಸ್ವಿನಿ ॥ ೨೫ ॥
ಮಹಾಕಾಲವನೇ ರಾಜನ್ಲಿಂಗಂ ಕುಷ್ಠಹರಂ ಪರಂ ।
ಸರ್ವಸಂಪತ್ಕರಂ ತತ್ರ ವಿದ್ಯತೇ ಪಾಪನಾಶನಂ ॥ ೨೬ ॥
ಶಿಪ್ರಾಯಾಶ್ಚ ತಟೇ ರಮ್ಯೇ ಕೇಶವಾರ್ಕಸ್ಯ ಪೂರ್ವತಃ ।
ತತ್ರ ತ್ವಂ ಗಚ್ಛ ರಾಜೇಂದ್ರ ಕಾಂತ್ಯಾ ಯುಕ್ತೋ ಭವಿಷ್ಯಸಿ ॥ ೨೭ ॥
ಏವಮುಕ್ತಸ್ತು ಲುಂಪೋಽಸೌ ಹ್ಯಾಜಗಾಮ ತ್ವರಾನ್ವಿತಃ ।
ಮಹಾಕಾಲವನಂ ರಮ್ಯಂ ಮಹರ್ಷಿಗಣಸೇವಿತಂ ॥ ೨೮ ॥
ಪ್ರಾಪ್ತಃ ಸ್ವರ್ಗೋಪಮಂ ಭೂಪಃ ಶಿಪ್ರಯಾ ಪರಿಶೋಭಿತಂ ।
ವಿವೇಶ ಚ ಮುದಾಯುಕ್ತೋ ದೃಷ್ಟ್ವಾ ಲಿಂಗಮನುತ್ತಮಂ ॥ ೨೯ ॥

---

೨೪. ಆಗ ಭಾರ್ಯಾಸಮೇತನಾದ ಆ ಮಹಾರಾಜನು ನಾರದನನ್ನು ಕುರಿತು, "ಮಹಾತ್ಮನೆ! ದುರ್ಭರವಾದ ಈ ಶಾಪವು ಹೇಗೆ ನಾಶವನ್ನು ಹೊಂದುವುದು?" ಎಂದು ಪ್ರಾರ್ಥಿಸಿಕೊಂಡನು.

೨೫. ಯಶಸ್ವಿನಿಯೆ! ಇಂತು ಹೇಳಿದ ಸಭಾರ್ಯನಾದ ಲುಂಪರಾಜನ ವಿಷಯದಲ್ಲಿ ಕಾರುಣ್ಯಬುದ್ಧಿಯುಳ್ಳವನಾಗಿ ನಾರದಮುನಿಯು ಉಪಾಯವನ್ನು ಹೇಳತೊಡಗಿದನು.

೨೬. "ರಾಜೇಂದ್ರ! ಮಹಾಕಾಲವನಕ್ಷೇತ್ರದಲ್ಲಿ ಕುಷ್ಠಪರಿಹಾರಕವೂ, ಉತ್ತಮೋತ್ತಮವೂ, ಸರ್ವಸಂಪತ್ಪ್ರದಾಯಕವೂ, ಸರ್ವಪಾಪನಾಶಕವೂ ಆದ ಮಹಾಲಿಂಗವೊಂದಿರುವುದು.

೨೭. ಅದು ಶಿಪ್ರಾನದಿಯ ತೀರದಲ್ಲಿ ಕೇಶವಾರ್ಕನಿಗೆ ಪೂರ್ವದಿಕ್ಕಿನಲ್ಲಿ ನೆಲಸಿರುವುದು. ನೀನು ಅಲ್ಲಿಗೆ ಹೋಗಲು ದೇಹಕಾಂತಿಯಿಂದ ಕೂಡಿದವನಾಗುವೆ."

೨೮. ಇಂತು ನಾರದನೆಂದ ಮಾತನ್ನು ಕೇಳಿ ಲುಂಪಮಹಾರಾಜನು ಅತಿವೇಗದಿಂದ ರಮ್ಯವೂ, ಮಹರ್ಷಿಸಮೂಹಗಳಿಂದ ಸಂಸೇವ್ಯವೂ ಆದ ಮಹಾಕಾಲವನಕ್ಕೆ ಬಂದನು.

೨೯ ಶಿಪ್ರಾನದಿಯಿಂದ ಶೋಭಿಸುತ್ತಾ ಸ್ವರ್ಗಸಮಾನವಾಗಿರುವ ಆ ಪ್ರದೇಶಕ್ಕೆ ಬಂದು ಸಂತೋಷದಿಂದ ಒಳಹೊಕ್ಕು ಆ ಉತ್ತಮಲಿಂಗವನ್ನು ನೋಡಿದನು.

ಸ್ನಾತ್ವಾ ಶಿಪ್ರಾಜಲೇ ಪುಣ್ಯೇ ಮಹಾಪಾತಕನಾಶನೇ ।
ದರ್ಶನಾತ್ತಸ್ಯ ಲಿಂಗಸ್ಯ ದಿವ್ಯರೂಪೋ ಬಭೂವ ಹ ॥ ೩೦ ॥
ಕುಷ್ಠರೋಗೇಣ ಮುಕ್ತಸ್ತು ಮುಕ್ತೋ ವೈ ಬ್ರಹ್ಮಹತ್ಯಯಾ ।
ಕೃತಕೃತ್ಯೋ ನೃಪೋ ಜಾತೋ ದರ್ಶನಾದೇವ ಪಾರ್ವತಿ ॥ ೩೧ ॥
ಸ ತತ್ರ ತಾಮುಷಿತ್ವೈಕಾಂ ರಜನೀಂ ಪೃಥಿವೀಪತಿಃ ।
ತಾಪಸಾನಾಂ ಪರಂ ಚಕ್ರೇ ಸತ್ಕಾರಂ ಭಾರ್ಯಯಾ ಸಹ ॥ ೩೨ ॥
ತತಃ ಕೃತಸ್ವಸ್ತ್ಯಯನಸ್ತಾಪಸೈಸ್ತೈರ್ಮಹಾತ್ಮಭಿಃ ।
ದಿವ್ಯಜ್ಞಾನಾನ್ವಿತೈರ್ದಿವ್ಯೈಃ ಸೂರ್ಯವೈಶ್ವಾನರಪ್ರಭೈಃ ॥ ೩೩ ॥
ಕೃತಂ ನಾಮ ತದಾ ತಸ್ಯ ಲಿಂಗಸ್ಯ ಕಮಲಾನನೇ ।
ಲುಂಪೇನಾರಾಧಿತೋ ಯಸ್ಮಾದ್ದೇವೋಽಯಂ ಕುಷ್ಠನಾಶನಃ ।
ಲುಂಪೇಶ್ವರ ಇತಿ ಖ್ಯಾತೋ ಭವಿಷ್ಯತಿ ಮಹೀತಲೇ ॥ ೩೪ ॥
ಪೂಜಯಿಷ್ಯಂತಿ ಯೇ ಭಕ್ತ್ಯಾ ಲಿಂಗಂ ಲುಂಪೇಶ್ವರಂ ಪರಂ ।
ಸ್ನಾತ್ವಾ ಶಿಪ್ರಾಜಲೇ ಪುಣ್ಯೇ ತೇ ಯಾಸ್ಯಂತಿ ಪರಂ ಪದಂ ॥ ೩೫ ॥

---

೩೦. ಪುಣ್ಯಪ್ರದವೂ, ಮಹಾಪಾತಕಗಳನ್ನು ನಾಶಗೊಳಿಸುವುದೂ ಆದ ಆ ಶಿಪ್ರಾನದಿಯಲ್ಲಿ ಮಿಂದು ಮಹಾಲಿಂಗವನ್ನು ನೋಡಿದ ಮಾತ್ರದಿಂದಲೇ ಆ ಮಹಾರಾಜನು ದಿವ್ಯದೇಹವುಳ್ಳವನಾದನು.

೩೧. ಆತನ ಕುಷ್ಠರೋಗವೂ ಕಳೆದುಹೋಯಿತಲ್ಲದೆ ಬ್ರಹ್ಮಹತ್ಯೆಯ ಪಾತಕದಿಂದಲೂ ಆತನು ಮುಕ್ತನಾದನು. ಪಾರ್ವತಿಯೆ! ಆ ರಾಜೇಂದ್ರನು ಆ ಶಿವಲಿಂಗದ ದರ್ಶನದಿಂದಲೇ ಕೃತಕೃತ್ಯನಾದನು.

೩೨. ಆ ಮಹಾರಾಜನು ಪತ್ನೀಸಮೇತನಾಗಿ ಅಲ್ಲಿಯೇ ಒಂದು ರಾತ್ರಿ ತಂಗಿದ್ದು ಅಲ್ಲಿದ್ದ ತಾಪಸೋತ್ತಮರಿಗೆಲ್ಲ ಉತ್ತಮರೀತಿಯಿಂದ ಸತ್ಕಾರವನ್ನೆಸಗಿದನು.

೩೩. ಬಳಿಕ ಮಹಾತ್ಮರೂ, ದಿವ್ಯಜ್ಞಾನಸಂಪನ್ನರೂ, ಸೂರ್ಯಾಗ್ನಿಸದೃಶರೂ ಆದ ಮಹರ್ಷಿಗಳೆಲ್ಲರೂ ಆತನಿಗೆ ಬಹುವಿಧಗಳಾದ ಸ್ವಸ್ತಿವಾಚನಗಳನ್ನು ಹೇಳಿದರು.

೩೪. ಕಮಲಮುಖಿಯೆ! ಅವರೇ ಆಗ ಆ ಲಿಂಗಕ್ಕೆ ಹೆಸರನ್ನೂ ಇಡುವವರಾದರು. ಕುಷ್ಠರೋಗವನ್ನು ನಾಶಮಾಡುವ ಈ ಮಹಾದೇವನು ಲುಂಪ ಮಹಾರಾಜನಿಂದ ಪೂಜಿತನಾಗಿರುವುದರಿಂದ ಇನ್ನುಮೇಲೆ ಭೂಮಂಡಲದಲ್ಲಿ ಲುಂಪೇಶ್ವರನೆಂದೇ ಪ್ರಖ್ಯಾತನಾಗಿರುವನು.

೩೫. ಪುಣ್ಯಪ್ರದವಾದ ಶಿಪ್ರಾಜಲದಲ್ಲಿ ವಿಧ್ಯುಕ್ತರೀತಿಯಿಂದ ಸ್ನಾನವನ್ನು

ಪ್ರಾರ್ಥಯಿಷ್ಯಂತಿ ಯಾನ್ಕಾಮಾನ್ಮನಸಾ ಚೇಪ್ಸಿತಾನ್ಪ್ರಿಯಾನ್ ।
ತಾನಾಪ್ಸ್ಯಂತಿ ನ ಸಂದೇಹೋ ಲುಂಪೇಶಸ್ಯ ಚ ದರ್ಶನಾತ್ ॥ ೩೬ ॥
ಮಹಾಪಾಪಸಮಾಯುಕ್ತೋ ಯಃ ಪಶ್ಯತಿ ಸಮಾಹಿತಃ ।
ಲಿಂಗಂ ಲುಂಪೇಶ್ವರಂ ಸೋಽಪಿ ದೇವತುಲ್ಯೋ ಭವಿಷ್ಯತಿ ॥ ೩೭ ॥
ಗೋಘ್ನಶ್ಚೈವ ಕೃತಘ್ನಶ್ಚ ಮಾತೃಹಾ ಗುರುತಲ್ಪಗಃ ।
ದುಷ್ಟಕರ್ಮಸಮಾಚಾರೋ ಭ್ರಾತೃಹಾ ಪಿತೃಹಾ ತಥಾ ॥ ೩೮ ॥
ಲುಂಪೇಶ್ವರಂ ಸಕೃತ್ಪಶ್ಯನ್ಮುಚ್ಯತೇ ಸರ್ವಕಿಲ್ಬಿಷೈಃ ।
ಪೂಜಿತೋಽಪಿ ದಹೇತ್ಪಾಪಂ ಸಪ್ತಜನ್ಮಾರ್ಜಿತಂ ಚ ಯತ್ ॥ ೩೯ ॥
ಇತ್ಯುಕ್ತ್ವಾ ಮುನಯಃ ಸರ್ವೇ ಪೂಜಯಾಮಾಸುರನ್ವಿತಾಃ ।
ಕುಷ್ಠರೋಗವಿನಿರ್ಮುಕ್ತೋ ರಾಜಾ ಸ್ವವಿಷಯಂ ಗತಃ ॥ ೪೦ ॥

---

ಮಾಡಿಕೊಂಡು ಯಾರು ಭಕ್ತಿಸಮನ್ವಿತರಾಗಿ ಉತ್ತಮೋತ್ತಮವಾದ ಲುಂಪೇಶ್ವರ ಲಿಂಗವನ್ನು ಪೂಜಿಸುವರೊ, ಅವರು ಪುನರಾವೃತ್ತಿರಹಿತವಾದ ಮೋಕ್ಷವನ್ನು ಪಡೆಯುವರು.

೩೬. ಇಷ್ಟು ಮಾತ್ರವಲ್ಲದೆ, ಮನಸ್ಸಿನಲ್ಲಿ ಯಾವ ಯಾವ ಅಭೀಷ್ಟಗಳನ್ನು ಅಪೇಕ್ಷಿಸುತ್ತ ಪ್ರಾರ್ಥಿಸಿಕೊಳ್ಳುವರೊ, ಅವುಗಳನ್ನೆಲ್ಲ ಲುಂಪೇಶ್ವರನ ದರ್ಶನದಿಂದಲೇ ಪಡೆಯುವುದರಲ್ಲಿ ಸಂದೇಹವಿಲ್ಲ.

೩೭. ಮಹಾಪಾತಕಗಳನ್ನು ಮಾಡಿದವನಾದರೂ ಯಾವನು ಶಾಂತಚಿತ್ತದಿಂದ ಲುಂಪೇಶ್ವರಮಹಾಲಿಂಗವನ್ನು ನೋಡುವನೊ, ಅವನೂ ದೇವತೆಗಳಿಗೆ ಸಮಾನನಾಗುವನು.

೩೮–೩೯. ಗೋವಧೆಯನ್ನು ಮಾಡಿದವನಾಗಲಿ, ಮಾಡಿದ ಉಪಕೃತಿಯನ್ನು ಸ್ಮರಿಸದ ಕೃತಘ್ನನಾಗಲಿ, ಮಾತೃವಧೆಯನ್ನು ಮಾಡಿದವನಾಗಲಿ, ಗುರುತಲ್ಪಗಾಮಿಯಾಗಲಿ, ದುಷ್ಟರ ಸಹವಾಸದಲ್ಲಿದ್ದವನಾಗಲಿ, ಸಹೋದರರನ್ನೂ ತಂದೆಯನ್ನೂ ಕೊಂದವರಾಗಲಿ ಲುಂಪೇಶ್ವರನನ್ನು ಒಮ್ಮೆ ನೋಡುವುದರಿಂದಲೇ ಸಕಲಪಾತಕಗಳಿಂದಲೂ ಮುಕ್ತರಾಗುವರು. ಆ ಲಿಂಗವನ್ನು ಒಂದು ಬಾರಿ ಪೂಜೆಯನ್ನು ಮಾಡುವುದರಿಂದಲೇ ಪೂಜೆಮಾಡಿದವನ ಏಳು ಜನ್ಮಗಳ ಪಾಪರಾಶಿಯನ್ನು ಸುಡುತ್ತದೆ.''

೪೦. ಎಲೌ ಪಾರ್ವತಿಯೆ! ಈ ಪ್ರಕಾರವಾಗಿ ನುಡಿದು, ಆ ತರುವಾಯ ಅಲ್ಲಿದ್ದ ಸಮಸ್ತಮುನಿಗಳೂ ಗುಂಪುಗೂಡಿ ಆ ಲಿಂಗಕ್ಕೆ ಪೂಜೆಯನ್ನು ಮಾಡಿದರು. ಕುಷ್ಠರೋಗವನ್ನು ಕಳೆದುಕೊಂಡ ಆ ರಾಜೇಂದ್ರನೂ ತನ್ನ ದೇಶಕ್ಕೆ ಹೊರಟು ಹೋದನು.

**ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।**
**ಲುಂಪೇಶ್ವರಸ್ಯ ದೇವಸ್ಯ ಶೃಣು ಗಂಗೇಶ್ವರಂ ಪರಂ ॥ ೪೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪಂಚಮೇ ಅವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ "ಲುಂಪೇಶ್ವರಮಾಹಾತ್ಮ್ಯವರ್ಣನಂ" ನಾಮ್ನೈಕಚತ್ವಾರಿಂಶೋಽಧ್ಯಾಯಃ**

---

೪೧. ದೇವಿಯೆ! ಇಂತು ನಿನಗೆ ಪಾಪಪರಿಹಾರಕವಾದ ಲುಂಪೇಶ್ವರನ ಮಹಿಮೆಯನ್ನು ಹೇಳಿರುವೆನು. ಇನ್ನುಮುಂದೆ ಗಂಗೇಶ್ವರನ ಮಾಹಾತ್ಮ್ಯೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಐದನೆಯ ಅವಂತ್ಯಖಂಡದ ಎರಡನೆಯ ಚತುರಶೀತಿಲಿಂಗ ಮಾಹಾತ್ಮ್ಯದಲ್ಲಿ "ಲುಂಪೇಶ್ವರಮಾಹಾತ್ಮ್ಯವರ್ಣನ"ವೆಂಬ ನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಚತ್ವಾರಿಂಶೋಽಧ್ಯಾಯಃ

### ಗಂಗೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ :—

ದ್ವಿಚತ್ವಾರಿಂಶತ್ತಮಂ ದೇವಂ ಗಂಗೇಶ್ವರಮಥೋ ಶೃಣು ।
ಯಸ್ಯ ದರ್ಶನಮಾತ್ರೇಣ ಸರ್ವತೀರ್ಥಫಲಂ ಲಭೇತ್ ।
ಧ್ರುವಾಧಾರಂ ಜಗದ್ಯೋನೇಃ ಪದಂ ನಾರಾಯಣಸ್ಯ ತು ॥ ೧ ॥
ಪದಾತ್ಪ್ರವೃತ್ತಾ ಯಾ ದೇವೀ ಗಂಗಾ ತ್ರಿಪಥಗಾ ನದೀ ।
ಸಾ ಪ್ರವಿಶ್ಯ ಸುಧಾಯೋನಿಂ ಸೋಮಮಾಧಾರಮಂಭಸಾಂ ॥ ೨ ॥
ತತಃ ಸಂವರ್ಧಮಾನಾಽರ್ಕರಶ್ಮಿಸಂಗತಿಪಾವನೀ ।
ಪಪಾತ ಮೇರುಪೃಷ್ಠೇ ಚ ಸಾ ಚತುರ್ಧಾ ತತೋ ಯಯೌ ॥ ೩ ॥
ಮೇರುಕೂಟತಟಾಂತೇಭ್ಯೋ ನಿಪತಂತೀ ಯಶಸ್ವಿನೀ ।
ವಿಕೀರ್ಯಮಾಣಸಲಿಲಾ ನಿರಾಲಂಬಾ ಪಪಾತ ಸಾ ॥ ೪ ॥
ಮಂದರಾದಿಷು ಶೈಲೇಷು ಪ್ರವಿಭಕ್ತೋದಕಾ ಸಮಂ ।
ತತ್ರ ಸೀತೇತಿ ವಿಖ್ಯಾತಾ ಯಯೌ ಚೈತ್ರರಥಂ ವನಂ ॥ ೫ ॥

---

## ಕನ್ನಡದ ಅನುವಾದ

### ಗಂಗೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಇನ್ನು ನಲವತ್ತೆರಡನೆಯ ಗಂಗೇಶ್ವರ ಲಿಂಗದ ಚರಿತ್ರೆಯನ್ನು ಕೇಳು. ಅದನ್ನು ನೋಡುವುದರಿಂದಲೇ ಸಮಸ್ತ ತೀರ್ಥಗಳನ್ನು ಸೇವಿಸಿದ ಫಲವು ಲಭಿಸುವುದು. ಶ್ರೀಮನ್ನಾರಾಯಣನ ಪಾದ ಕಮಲವೇ ಜಗತ್ಕಾರಣವಾದ ಪ್ರಕೃತಿಗೆ ಶಾಶ್ವತ ನಿವಾಸವಾಗಿರುವುದು.

೨. ಆ ಪಾದದಿಂದ ಹೊರಟ ನದಿಯಾದ ತ್ರಿಪಥಗಾಮಿನಿಯೆನಿಸಿದ ಗಂಗಾದೇವಿಯು ಅಮೃತಮಯನೂ, ಜಲಗಳಿಗೆ ಆಧಾರನೂ ಆದ ಚಂದ್ರನನ್ನು ಸೇರಿತು.

೩. ಬಳಿಕ ಉದಯಿಸುತ್ತಿರುವ ಸೂರ್ಯನ ಕಿರಣಪ್ರವಾಹದಿಂದ ಪವಿತ್ರಳಾಗಿ ಆ ಗಂಗೆಯು ಮೇರುಪರ್ವತದಲ್ಲಿ ಬಿದ್ದು ಅಲ್ಲಿಂದ ನಾಲ್ಕುಭಾಗವಾಗಿ ಹರಿಯಿತು.

೪. ಮಹಾ ಪ್ರಸಿದ್ಧಳಾದ ಗಂಗೆಯು ಮೇರುಪರ್ವತದ ತಪ್ಪಲುಗಳಿಂದ ಹರಿಯುತ್ತ ನೀರನ್ನು ಸುತ್ತಲೂ ಚೆಲ್ಲುತ್ತ ಸ್ವೇಚ್ಛೆಯಿಂದ ಪ್ರವಹಿಸುತ್ತಿದ್ದಳು.

೫. ಮಂದರವೇ ಮೊದಲಾದ ಪರ್ವತಗಳಲ್ಲಿ ಸಮವಾಗಿ ತನ್ನ ನೀರನ್ನು ಹಂಚಿಕೊಟ್ಟು ನದಿಯು ಸೀತೆಯೆಂಬ ಹೆಸರಿನಿಂದ ಖ್ಯಾತವಾಗಿ ಚೈತ್ರರಥವೆಂಬ ವನವನ್ನು ಹೊಕ್ಕಿತು.

॥ ಶ್ರೀಃ ॥

## ಅಥ ದ್ವಿಚತ್ವಾರಿಂಶೋಽಧ್ಯಾಯಃ

### ಗಂಗೇಶ್ವರಮಾಹಾತ್ಮ್ಯವರ್ಣನಂ

ಶ್ರೀ ಹರ ಉವಾಚ:—

ದ್ವಿಚತ್ವಾರಿಂಶತ್ತಮಂ ದೇವಂ ಗಂಗೇಶ್ವರಮಥೋ ಶೃಣು ।
ಯಸ್ಯ ದರ್ಶನಮಾತ್ರೇಣ ಸರ್ವತೀರ್ಥಫಲಂ ಲಭೇತ್ ।
ಧ್ರುವಾಧಾರಂ ಜಗದ್ಯೋನೇಃ ಪದಂ ನಾರಾಯಣಸ್ಯ ತು ॥ ೧ ॥
ಪದಾತ್ಪ್ರವೃತ್ತಾ ಯಾ ದೇವೀ ಗಂಗಾ ತ್ರಿಪಥಗಾ ನದೀ ।
ಸಾ ಪ್ರವಿಶ್ಯ ಸುಧಾಯೋನಿಂ ಸೋಮಮಾಧಾರಮಂಭಸಾಂ ॥ ೨ ॥
ತತಃ ಸಂವರ್ಧಮಾನಾಽರ್ಕರಶ್ಮಿಸಂಗತಿಪಾವನೀ ।
ಪಪಾತ ಮೇರುಪೃಷ್ಠೇ ಚ ಸಾ ಚತುರ್ಧಾ ತತೋ ಯಯೌ ॥ ೩ ॥
ಮೇರುಕೂಟತಟಾಂತೇಭ್ಯೋ ನಿಪತಂತೀ ಯಶಸ್ವಿನೀ ।
ವಿಕೀರ್ಯಮಾಣಸಲಿಲಾ ನಿರಾಲಂಬಾ ಪಪಾತ ಸಾ ॥ ೪ ॥
ಮಂದರಾದಿಷು ಶೈಲೇಷು ಪ್ರವಿಭಕ್ತೋದಕಾ ಸಮಂ ।
ತತ್ರ ಸೀತೇತಿ ವಿಖ್ಯಾತಾ ಯಯೌ ಚೈತ್ರರಥಂ ವನಂ ॥ ೫ ॥

---

## ಕನ್ನಡದ ಅನುವಾದ

### ಗಂಗೇಶ್ವರಮಾಹಾತ್ಮ್ಯವರ್ಣನ

೧. ಮಹಾದೇವನು ಹೇಳುತ್ತಾನೆ:—ಇನ್ನು ನಲವತ್ತೆರಡನೆಯ ಗಂಗೇಶ್ವರ ಲಿಂಗದ ಚರಿತ್ರೆಯನ್ನು ಕೇಳು. ಅದನ್ನು ನೋಡುವುದರಿಂದಲೇ ಸಮಸ್ತ ತೀರ್ಥಗಳನ್ನು ಸೇವಿಸಿದ ಫಲವು ಲಭಿಸುವುದು. ಶ್ರೀಮನ್ನಾರಾಯಣನ ಪಾದ ಕಮಲವೇ ಜಗತ್ಕಾರಣವಾದ ಪ್ರಕೃತಿಗೆ ಶಾಶ್ವತ ನಿವಾಸವಾಗಿರುವುದು.

೨. ಆ ಪಾದದಿಂದ ಹೊರಟ ನದಿಯಾವ ತ್ರಿಪಥಗಾಮಿನಿಯೆನಿಸಿದ ಗಂಗಾದೇವಿಯು ಅಮೃತಮಯನೂ, ಜಲಗಳಿಗೆ ಅಧಾರನೂ ಆದ ಚಂದ್ರನನ್ನು ಸೇರಿತು.

೩. ಬಳಿಕ ಉದಯಿಸುತ್ತಿರುವ ಸೂರ್ಯನ ಕಿರಣಪ್ರವಾಹದಿಂದ ಪವಿತ್ರಳಾಗಿ ಆ ಗಂಗೆಯು ಮೇರುಪರ್ವತದಲ್ಲಿ ಬಿದ್ದು ಅಲ್ಲಿಂದ ನಾಲ್ಕುಭಾಗವಾಗಿ ಹರಿಯಿತು.

೪. ಮಹಾಪ್ರಸಿದ್ಧಳಾದ ಗಂಗೆಯು ಮೇರುಪರ್ವತದ ತಪ್ಪಲುಗಳಿಂದ ಹರಿಯುತ್ತ ನೀರನ್ನು ಸುತ್ತಲೂ ಚೆಲ್ಲುತ್ತ ಸ್ವೇಚ್ಛೆಯಿಂದ ಪ್ರವಹಿಸುತ್ತಿದ್ದಳು.

೫. ಮಂದರವೇ ಮೊದಲಾದ ಪರ್ವತಗಳಲ್ಲಿ ಸಮವಾಗಿ ತನ್ನ ನೀರನ್ನು ಹಂಚಿಕೊಟ್ಟು ನದಿಯು ಸೀತೆಯೆಂಬ ಹೆಸರಿನಿಂದ ಖ್ಯಾತವಾಗಿ ಚೈತ್ರರಥವೆಂಬ ವನವನ್ನು ಹೊಕ್ಕಿತು.

ತದಾ ಮುಕ್ತಾ ಮಯಾ ದೇವಿ ಗಂಗಾ ತ್ರಿಪಥಗಾಮಿನೀ ।
ಮಹಾಕಾಲವನುಪ್ರಾಪ್ತಾ ಪ್ಲಾವಯಿತ್ವೋತ್ತರಾನ್ಕುರೂನ್ ॥ ೧೩ ॥
ಸಮುದ್ರಮಹಿಷೀ ಜಾತಾ ಪ್ರಾಣೇಭ್ಯೋಽಪಿ ಗರೀಯಸೀ ।
ನದೀನಾಮುತ್ತಮಾ ಗಂಗಾ ಸಮುದ್ರೇಣ ಕೃತಾ ತದಾ ।
ಸ ತಯಾ ಸಹಿತೋ ರೇಮೇ ಸಮುದ್ರಃ ಸರಿತಾಂಪತಿಃ ॥ ೧೪ ॥
ತತಃ ಕದಾಚಿದ್ಬ್ರಹ್ಮಾಣಮುಪಾಸಾಂಚಕ್ರಿರೇ ಸುರಾಃ ।
ತಥಾಽರ್ಣವೋ ಜಗಾಮಾಽಥ ಬ್ರಹ್ಮಲೋಕಂ ಸನಾತನಂ ।
ಗಂಗಯಾ ಸಹಿತೋ ದೇವಿ ದರ್ಶನಾರ್ಥಂ ಮಹೋತ್ಸವೇ ॥ ೧೫ ॥
ಅಥ ಗಂಗಾ ಸರಿಚ್ಛ್ರೇಷ್ಠಾ ಸಮುಪಾಯಾತ್ಪಿತಾಮಹಂ ।
ತಸ್ಯಾ ವಾಸಃ ಸಮುದ್ಧೂತಂ ಮಾರುತೇನ ಶಶಿಪ್ರಭಂ ॥ ೧೬ ॥
ತತೋಽಭವನ್ ಸುರಗಣಾಃ ಸಹಸಾಽವಾಙ್ಮುಖಾಸ್ತದಾ ।
ಮಹಾಭಿಷಸ್ತು ರಾಜರ್ಷಿರ್ನಿಃಶಂಕೋ ದೃಷ್ಟವಾನ್ನದೀಂ ॥ ೧೭ ॥

---

ಗಳಿಂದಲೂ ನಾನು ಪೂಜಿತನಾಗಿ ತ್ರಿಪಥಗಾಮಿನಿಯಾದ ಆ ನದಿಯನ್ನು ಹೊರಕ್ಕೆ ಬಿಟ್ಟೆನು.

೧೩. ಆಗ ನದಿಯು ಉತ್ತರಕುರುದೇಶಗಳನ್ನೆಲ್ಲ ಜಲಭರಿತವನ್ನಾಗಿ ಮಾಡಿ ಮಹಾಕಾಲವನಕ್ಷೇತ್ರಕ್ಕೆ ಬಂದಿತು. ಮತ್ತು ಸಮುದ್ರರಾಜನಿಗೆ ಪ್ರಾಣಗಳಿಗಿಂತಲೂ ಪ್ರಿಯತಮಳಾದ ಮಹಿಷಿಯೆನಿಸಿತು.

೧೪. ಸಮುದ್ರರಾಜನು ಅದನ್ನೇ ನದಿಗಳಲ್ಲೆಲ್ಲ ಉತ್ತಮವೆಂಬುದನ್ನಾಗಿ ನಿಶ್ಚಯಿಸಿ ಸಮಸ್ತ ನದನದೀಪತಿಯಾದ ಆತನು ಆ ಗಂಗೆಯೊಡನೆಯೇ ಸುಖದಿಂದಿದ್ದನು.

೧೫. ದೇವಿಯೆ ! ಒಮ್ಮೆ ದೇವತೆಗಳೆಲ್ಲರೂ ಒಂದಾಗಿ ಚತುರ್ಮುಖನನ್ನು ಉಪಾಸನೆಮಾಡಿದರು. ಆ ಮಹೋತ್ಸವವನ್ನು ನೋಡುವುದಕ್ಕಾಗಿ ಸಮುದ್ರರಾಜನೂ ಗಂಗಾಸಮೇತನಾಗಿ ಅನಾದಿನಿಧನವಾದ ಬ್ರಹ್ಮಲೋಕಕ್ಕೆ ಹೊರಟನು.

೧೬. ಆಗ ಮಹಾನದಿಯಾದ ಗಂಗೆಯು ಬ್ರಹ್ಮದೇವನ ಬಳಿಗೆ ಹೋಗುತ್ತಿರಲು ಆಕೆಯು ಧರಿಸಿದ್ದ ಚಂದ್ರಮಂಡಲವರ್ಣದ ವಸ್ತ್ರವು ಗಾಳಿಯ ದೆಸೆಯಿಂದ ವ್ಯತ್ಯಸ್ತವಾಯಿತು.

೧೭. ತತ್ಕ್ಷಣದಲ್ಲಿಯೇ ದೇವತೆಗಳೆಲ್ಲರೂ ತಲೆಗಳನ್ನು ತಗ್ಗಿಸುವವರಾದರು. ಮಹಾಭಿಷನೆಂಬ ರಾಜರ್ಷಿಯೊಬ್ಬನು ಮಾತ್ರ ನಿಶ್ಚಿಂತೆಯಿಂದ ಆ ಗಂಗೆಯನ್ನೇ ನೋಡುತ್ತಿದ್ದನು.

ತಸ್ಯ ಭಾವಂ ವಿದಿತ್ವಾಽಥ ಬ್ರಹ್ಮಣಾ ಸ ತಿರಸ್ಕೃತಃ ।
ಉಕ್ತಸ್ತು ಜಾತೋ ಮರ್ತ್ಯೇಷು ಪುನರ್ಲೋಕಾನವಾಪ್ಸ್ಯಸಿ ॥ ೧೮ ॥
ಗಂಗಾ ಶಪ್ತಾಽಥ ಕ್ರುದ್ಧೇನ ಸಮುದ್ರೇಣ ಯಶಸ್ವಿನಿ ।
ಮಾಂ ವಿಹಾಯಾಽನ್ಯಸಕ್ತಾಽಸಿ ತಸ್ಮಾದ್ಯಾಸ್ಯಸಿ ಮಾನುಷಂ ॥ ೧೯ ॥
ಲೋಕಮಲ್ಪಾಯುಷಂ ದೀನಾ ತತ್ರ ದುಃಖಮವಾಪ್ಸ್ಯಸಿ ।
ತಂ ಶಾಪಂ ದಾರುಣಂ ಶ್ರುತ್ವಾ ಗಂಗಾ ವಚನಮಬ್ರವೀತ್ ॥ ೨೦ ॥
ವಿನಾಽಪರಾಧಾಚ್ಛಪ್ತಾಽಹಂ ಕಸ್ಮಾದ್ವೈ ದೇವಸಂಸದಿ ।
ಪತಿವ್ರತಾ ಪತಿಪ್ರಾಣಾ ಪತಿನಾ ಪರಮಾರ್ಥತಃ ॥ ೨೧ ॥
ಪ್ರಮಾದಾದ್ವಸ್ತ್ರಮುದ್ಧೂತಂ ವಾಯುನಾ ವ್ಯಾಪಕೇನ ತು ।
ಪ್ರತ್ಯುವಾಚ ತತೋ ಬ್ರಹ್ಮಾ ತಾಂ ನದೀಂ ಲೋಕಪಾವನೀಂ ॥ ೨೨ ॥
ವಸೂನಾಂ ಕಾರಣಾದ್ದೇವಿ ಶಪ್ತಾ ಯಸ್ಮಾನ್ಮಹಾನದಿ ।
ಭಾವ್ಯರ್ಥೇ ತೋಯನಿಧಿನಾ ತಸ್ಮಾಚ್ಛೀಘ್ರಂ ವ್ರಜಾಽಧುನಾ ॥ ೨೩ ॥

---

೧೮. ಆತನ ಮನಸ್ಸನ್ನು ಕಂಡು ಬ್ರಹ್ಮನು ಮಹರ್ಷಿಯನ್ನು ಧಿಕ್ಕರಿಸಿದನು. ಮತ್ತು "ನೀನು ಭೂಲೋಕದಲ್ಲಿ ಒಂದು ನಲ ಹುಟ್ಟಿ ಪುನಃ ಈ ಲೋಕಗಳನ್ನು ಪಡೆಯುವೆ" ಎಂದು ಹೇಳಿದನು.

೧೯. ಸರ್ವಮಂಗಳೆಯೆ! ಕೋಪಾನ್ವಿತನಾದ ಸಮುದ್ರನೂ ಸಹ ಗಂಗೆಯನ್ನು ಶಪಿಸಿದನು. "ನೀನು ನನ್ನನ್ನು ಬಿಟ್ಟು ಮತ್ತೊಬ್ಬನಲ್ಲಿ ಅನುರಕ್ತಳಾಗಿರುವುದರಿಂದ ನೀನು ಮನುಷ್ಯಲೋಕಕ್ಕೇ ಹೊರಡು.

೨೦. ಸ್ವಲ್ಪಕಾಲವಾದರೂ ಅಲ್ಲಿ ನೀನು ದೈನ್ಯದ ದುಃಖವನ್ನನುಭವಿಸಬೇಕು." ಇಂತೆಂಬ ಉಗ್ರವಾದ ಶಾಪವನ್ನು ಕೇಳಿ ಗಂಗೆಯು ಹೇಳಿದಳು.

೨೧. "ಪತಿವ್ರತೆಯೂ, ನಿಶ್ಚಯವಾಗಿಯೂ ಪತಿಯಲ್ಲಿಯೇ ಪ್ರಾಣವುಳ್ಳವಳೂ ಆದ ನಾನು ಯಾವ ಅಪರಾಧವನ್ನೂ ಮಾಡದಿದ್ದರೂ ಈ ದೇವಸಭೆಯಲ್ಲಿ ಪತಿಯಾದ ನೀನೇ ಹೀಗೇಕೆ ಶಪಿಸಿದೆ?

೨೨. ಸರ್ವವ್ಯಾಪಕನಾದ ವಾಯುವಿನಿಂದ ಆಕಸ್ಮಿಕವಾಗಿ ನನ್ನ ವಸ್ತ್ರವು ಹಾರಿಹೋಯಿತಲ್ಲವೆ." ಆಗ ಬ್ರಹ್ಮದೇವನು ಲೋಕಪಾವನೆಯಾದ ಆ ನದಿಗೆ ಪ್ರತ್ಯುತ್ತರವನ್ನು ಹೇಳಿದನು.

೨೩. "ಮಹಾನದ್ಯಭಿಮಾನಿಯಾದ ಓ ದೇವಿಯೆ! ಅಷ್ಟವಸುಗಳಿಗೆ ಮುಂದಾಗಬೇಕಾದ ಕಾರ್ಯಗೌರವವಿರುವುದರಿಂದ ಸಮುದ್ರರಾಜನು ನಿನ್ನನ್ನು ಶಪಿಸಿರುವನು. ಆದುದರಿಂದ ಶೀಘ್ರವಾಗಿ ಹೊರಡು.

ಮಹಾಕಾಲವನೇ ರಮ್ಯೇ ಸಿದ್ಧಗಂಧರ್ವಸೇವಿತೇ ।
ಶಿಪ್ರಾಯಾ ದಕ್ಷಿಣೇ ಭಾಗೇ ವಿದ್ಯತೇ ಲಿಂಗಮುತ್ತಮಂ ॥ ೨೪ ॥
ಸರ್ವಸಿದ್ಧಿಕರಂ ಪುಣ್ಯಂ ಸರ್ವಪಾತಕನಾಶನಂ ।
ತಮಾರಾಧಯ ಯತ್ನೇನ ಸ ತೇ ದಾಸ್ಯತಿ ವಾಂಛಿತಂ ॥ ೨೫ ॥
ಪಿತಾಮಹವಚಃ ಶ್ರುತ್ವಾ ತುಷ್ಟಾ ತ್ರಿಪಥಗಾಮಿನೀ ।
ಗಮನಂ ತತ್ರ ಮೇಽಭೀಷ್ಟಂ ವಿದ್ಯತೇ ಯತ್ಸಖೀ ಮಮ ।
ಶಿಪ್ರಾಽಪಿ ಮೇ ಪ್ರಿಯಾ ಪುಣ್ಯಾ ಮಹಾಪಾತಕನಾಶಿನೀ ॥ ೨೬ ॥
ಇತಿ ಸಂಚಿಂತ್ಯ ಮನಸಾ ದಿವ್ಯಾ ದೇವನದೀ ತದಾ ।
ಆಜಗಾಮ ಮಹಾಕಾಲೇ ಹ್ಯಪಶ್ಯಲ್ಲಿಂಗಮುತ್ತಮಂ ॥ ೨೭ ॥
ಪೂಜಯಾಮಾಸ ಪಯಸಾ ದಿವ್ಯೇನ ವಿಧಿನಾ ತದಾ ।
ದೃಷ್ಟ್ವಾ ಶಿಪ್ರಾಂ ಸಖೀಂ ತತ್ರ ಸಂಶ್ಲೇಷಂ ಚಾಽಭವತ್ತಯೋಃ ॥ ೨೮ ॥
ತತಃ ಪ್ರಭೃತಿ ಸಂಜಾತಾ ಸಾ ಶಿಪ್ರಾ ಪೂರ್ವವಾಹಿನೀ ।
ತ್ರಿಷು ಲೋಕೇಷು ವಿಖ್ಯಾತೋ ದೇವೋ ಗಂಗೇಶ್ವರಃ ಸ್ವಯಂ ।
ಗಂಗಯಾರಾಧಿತೋ ಯಸ್ಮಾತ್ಸಮೀಹಿತಫಲಪ್ರದಃ ॥ ೨೯ ॥

---

೨೪. ಸಿದ್ಧಗಂಧರ್ವಾದಿಗಳಿಂದ ಸಂಸೇವಿತವೂ, ಮನೋರಂಜಕವೂ ಆದ ಮಹಾಕಾಲವನಕ್ಷೇತ್ರದಲ್ಲಿ ಶಿಪ್ರಾನದಿಗೆ ದಕ್ಷಿಣಭಾಗದಲ್ಲಿ ಒಂದು ಉತ್ತಮ ಲಿಂಗವಿರುವುದು.

೨೫. ಅದು ಸರ್ವಸಿದ್ಧಿಗಳನ್ನು ಕೈಗೂಡಿಸುವುದೂ, ಪುಣ್ಯಪ್ರದವೂ, ಸಕಲ ಪಾತಕಗಳನ್ನೂ ನಾಶಗೊಳಿಸುವುದೂ ಆಗಿರುವುದು. ಅದನ್ನು ಪ್ರಯತ್ನದಿಂದ ಪೂಜಿಸಲು ನಿನ್ನ ವಾಂಛಿತಗಳನ್ನೆಲ್ಲ ಕೊಡುವುದು.''

೨೬. ಪಿತಾಮಹನ ಮಾತನ್ನು ಕೇಳಿ ಗಂಗಾದೇವಿಯು ಸಂತುಷ್ಟಳಾದಳು. ''ಅಲ್ಲಿಗೆ ಹೋಗಲು ನನಗೂ ಅಭಿಲಾಷೆಯಿರುವುದು. ಅಲ್ಲಿಯೇ ನನ್ನ ಪ್ರಿಯ ಸಖಿಯೂ, ಪುಣ್ಯಪ್ರದೆಯೂ, ಮಹಾಪಾತಕಗಳನ್ನೂ ನಾಶಗೊಳಿಸುವವಳೂ ಆದ ಶಿಪ್ರಾದೇವಿಯಿರುವಳಲ್ಲವೆ.''

೨೭. ಇಂತೆಂದು ದಿವ್ಯವಾದ ಆ ದೇವನದಿಯು ಮನಸ್ಸಿನಲ್ಲಿಯೇ ಯೋಚಿಸುತ್ತ ಮಹಾಕಾಲವನಕ್ಕೆ ಬಂದು ಅಲ್ಲಿದ್ದ ಉತ್ತಮವಾದ ಲಿಂಗವನ್ನು ಕಂಡಳು.

೨೮. ಮತ್ತು ದಿವ್ಯವಾದ ಹಾಲಿನಿಂದ ಆ ಲಿಂಗಕ್ಕೆ ವಿಧ್ಯುಕ್ತವಾದ ಪೂಜೆಯನ್ನು ಮಾಡಿದಳು. ಮತ್ತು ತನ್ನ ಸಖಿಯಾದ ಶಿಪ್ರಾದೇವಿಯ ದರ್ಶನಕ್ಕೆ ಬರಲು ಅಲ್ಲಿ ಅವರಿಬ್ಬರ ಸಮಾಗಮವಾಯಿತು.

೨೯. ಅಂದಿನಿಂದ ಶಿಪ್ರಾನದಿಯು ಪೂರ್ವವಾಹಿನಿಯಾದಳು. ಗಂಗಾ

ಸಂಸ್ತುತಾ ದೇವಗಂಧರ್ವೈರ್ಗಂಗಾ ದೇವನದೀ ತದಾ ।
ಋಷಿಭಿರ್ವಾಲಖಿಲ್ಯಾದ್ಯೈಸ್ತಥಾಽನ್ಯೈರ್ಮುನಿಭಿರ್ಮುದಾ ॥ ೩೦ ॥
ಸಮುದ್ರಸ್ತತ್ರ ಸಂಪ್ರಾಪ್ತೋ ಮಾನಿತಾ ಸಾ ಮಹಾನದೀ ।
ಲಿಂಗೇನೋಕ್ತಾ ತದಾ ಗಂಗಾ ಕಲಯಾ ಸ್ಥೀಯತಾಮಿತಿ ॥ ೩೧ ॥
ತತ್ಸಮೀಪೇ ಮಹಾಪುಣ್ಯೇ ಯಾವತ್ತಿಷ್ಠತಿ ಮೇದಿನೀ ।
ಅಂಗೀಕೃತಂ ಸಮುದ್ರೇಣ ಯಥೋಕ್ತಂ ಚ ತಥಾಽಸ್ತ್ವಿತಿ ॥ ೩೨ ॥
ಏವಮುಕ್ತ್ವಾ ಗತಾ ಗಂಗಾ ಕಲಯಾ ತತ್ರ ಸಂಸ್ಥಿತಾ ।
ಗಂಗೇಶ್ವರಂ ತು ಯಃ ಪಶ್ಯೇತ್ಸ್ನಾತ್ವಾ ಶಿಪ್ರಾಂಭಸಿ ಪ್ರಿಯೇ ॥ ೩೩ ॥
ಗೋಸಹಸ್ರಫಲಂ ತಸ್ಯ ಜಾಯತೇ ನಾಽತ್ರಸಂಶಯಃ ।
ಸರ್ವತೀರ್ಥಫಲಂ ತಸ್ಯ ಸರ್ವಧರ್ಮಫಲಂ ತಥಾ ।
ಸರ್ವಯಜ್ಞಫಲಂ ಸಮ್ಯಕ್ಸರ್ವದಾನಫಲಂ ತಥಾ ॥ ೩೪ ॥

---

ದೇವಿಯಿಂದ ಪೂಜಿತನಾದ ಆ ಮಹಾದೇವನು ಮೂರು ಲೋಕಗಳಲ್ಲಿಯೂ ಗಂಗೇಶ್ವರನೆಂದೇ ಪ್ರಖ್ಯಾತನಾಗಿ ಸರ್ವಾಭೀಷ್ಟಗಳನ್ನು ಭಕ್ತರಿಗೆ ಕೊಡುತ್ತಿರುವನು.

೩೦. ಬಳಿಕ ದೇವನದಿಯಾದ ಗಂಗೆಯನ್ನು ದೇವತೆಗಳೂ, ಗಂಧರ್ವರೂ, ಮಹರ್ಷಿಗಳೂ, ವಾಲಖಿಲ್ಯರೂ, ಇತರ ಮಹಾಮುನಿಗಳೂ ಪರಮ ಸಂತೋಷದಿಂದ ಸ್ತೋತ್ರಮಾಡಿದರು.

೩೧. ಸಮುದ್ರರಾಜನೂ ಅಲ್ಲಿಗೆ ಪ್ರಾಪ್ತನಾಗಲು ಆತನಿಂದಲೂ ಆ ಮಹಾನದಿಯು ಸಂಭಾವಿತಳಾದಳು. ಮತ್ತು ಆ ಲಿಂಗವು ಗಂಗೆಗೆ "ನೀನಿಲ್ಲಿಯೇ ಒಂದಂಶದಿಂದ ನಿಂತಿರು" ಎಂದು ಹೇಳಿತು.

೩೨. ಈ ಭೂಮಿಯಿರುವವರೆಗೂ ಮಹಾಪುಣ್ಯಪ್ರದೇಶವಾದ ಈ ವನದ ಸಮೀಪದಲ್ಲಿಯೇ ನಿಂತಿರು. ಸಮುದ್ರರಾಜನೂ ಸಹ ನೀನೆಂದಂತೆಯೇ ಆಗಲೆಂದು ಅಂಗೀಕರಿಸುವನು.

೩೩. ಇಂತೆಂದುದನ್ನು ಅಂಗೀಕರಿಸಿ ಗಂಗೆಯು ಒಂದಂಶದಿಂದ ಅಲ್ಲಿ ನಿಂತು ಹೊರಟುಹೋದಳು. ಪ್ರಿಯಳೆ! ಯಾವನು ಶಿಪ್ರಾನದಿಯ ನೀರಿನಲ್ಲಿ ಸ್ನಾನವನ್ನು ಮಾಡಿ ಗಂಗೇಶ್ವರನನ್ನು ನೋಡುವನೊ, ಅವನಿಗೆ ಒಂದುಸಾವಿರ ಗೋವುಗಳನ್ನು ದಾನಮಾಡಿದ ಫಲವು ಲಭಿಸುವುದರಲ್ಲಿ ಸಂದೇಹವಿಲ್ಲ.

೩೪. ಅವನಿಗೆ ಸಕಲ ತೀರ್ಥಗಳಲ್ಲಿ ಮಿಂದ ಫಲವೂ, ಸರ್ವಧರ್ಮಗಳನ್ನಾಚರಿಸಿದ ಪುಣ್ಯವೂ, ಸರ್ವಯಜ್ಞಗಳನ್ನು ಮಾಡಿದ ಫಲವೂ, ವಿಧಿಯನ್ನನುಸರಿಸಿ ಸಕಲ ದಾನಗಳನ್ನು ಮಾಡಿದ ಫಲವೂ ಲಭಿಸುವುವು.

ಸರ್ವಯೋಗಫಲಂ ದೇವಿ ಪ್ರಾಪ್ನೋತ್ಯೇವ ನಿರಂತರಂ ।
ತತ್ರ ತೀರ್ಥಾನಿ ಸುಭಗೇ ಪೃಥಿವ್ಯಾಂ ಯಾನಿ ಕಾನಿಚಿತ್ ॥ ೩೫ ॥
ಧರ್ಮಾರಣ್ಯಂ ಫಲ್ಗುತೀರ್ಥಂ ಪುಷ್ಕರಂ ನೈಮಿಷಂ ಗಯಾ ।
ಪ್ರಯಾಗಂ ಚ ಕುರುಕ್ಷೇತ್ರಂ ಕೇದಾರಮಮರೇಶ್ವರಂ ॥ ೩೬ ॥
ಚಂದ್ರಭಾಗಾ ವಿಪಾಶಾ ಚ ಸರಯೂರ್ದೇವಿಕಾ ಕುಹೂಃ ।
ಗೋದಾವರೀ ಶತದ್ರುಶ್ಚ ಬಾಹುದಾ ವೇತ್ರವತ್ಯಪಿ ॥ ೩೭ ॥
ಸರ್ವಾ ಏವಾತ್ರ ಸರಿತಃ ಸಂಗತಾಃ ಸಂತಿ ಗಂಗಯಾ ।
ಗುಪ್ತಾನಿ ಪುಣ್ಯತೀರ್ಥಾನಿ ಸಿದ್ಧಕ್ಷೇತ್ರಾಣಿ ಚೈವ ಹಿ ॥ ೩೮ ॥
ತತ್ರ ಸರ್ವಾಣಿ ತಿಷ್ಠಂತಿ ಕಲಾಮಾತ್ರೇಣ ಪಾರ್ವತಿ ।
ಏತೇಷಾಂ ಫಲಮಾಪ್ನೋತಿ ಯಃ ಪಶ್ಯತಿ ಸಮಾಹಿತಃ ॥ ೩೯ ॥
ಸ್ನಾತ್ವಾ ಗಂಗೇಶ್ವರಂ ದೇವಂ ಸತ್ಯಮೇತನ್ಮಯೋದಿತಂ ।
ಅತಃ ಪುಣ್ಯತಮಂ ಸ್ಥಾನಂ ಗೀಯತೇ ಗಣವಂದಿತೇ ॥ ೪೦ ॥

---

೩೫. ದೇವಿಯೆ! ಸಕಲಯೋಗಾಭ್ಯಾಸಗಳ ಫಲವನ್ನು ನಿರಂತರವಾಗಿ ಆ ಮನುಜನು ಪಡೆಯುವನು. ಭೂಲೋಕದಲ್ಲಿ ಯಾವ ತೀರ್ಥಗಳಿರುವುವೊ, ಅವುಗಳೆಲ್ಲವೂ ಅಲ್ಲಿಯೆ ಇರುವುವು.

೩೬. ಧರ್ಮಾರಣ್ಯ, ಫಲ್ಗುತೀರ್ಥ, ಪುಷ್ಕರಕ್ಷೇತ್ರ, ನೈಮಿಷ, ಪ್ರಯಾಗ, ಕುರುಕ್ಷೇತ್ರ, ಕೇದಾರ, ಅಮರೇಶ್ವರ ಕ್ಷೇತ್ರಗಳೂ ಅಲ್ಲಿಯೆ ಇರುವುವು.

೩೭–೩೮. ಚಂದ್ರಭಾಗಾ, ವಿಪಾಶಾ, ಸರಯೂ, ದೇವಿಕಾ, ಕುಹೂ, ಗೋದಾವರಿ, ಶತದ್ರು, ಬಾಹುದಾ, ವೇತ್ರವತಿ, ಮೊದಲಾದ ನದಿಗಳೆಲ್ಲವೂ ಅಲ್ಲಿ ಗಂಗೆಯೊಡನೆ ಕೂಡಿಕೊಂಡಿರುವುವು.

೩೯. ಅದರೆ ಈ ಸಮಸ್ತ ಪುಣ್ಯತೀರ್ಥಗಳೂ, ಸಿದ್ಧಕ್ಷೇತ್ರಗಳೂ ಗುಪ್ತಗಳಾಗಿ ಒಂದೊಂದಂಶಮಾತ್ರದಿಂದ ಮಹಾಕಾಲವನಕ್ಷೇತ್ರದಲ್ಲಿ ನೆಲಸಿರುವುವು.

೪೦. ಯಾವನು ಶಿಪ್ರಾನದಿಯಲ್ಲಿ ಮಿಂದು ದೇವದೇವನಾದ ಗಂಗೇಶ್ವರ ದೇವನನ್ನು ಸಮಾಹಿತಚಿತ್ತದಿಂದ ನೋಡುವನೊ, ಅವನು ಈ ತೀರ್ಥಕ್ಷೇತ್ರಗಳನ್ನೆಲ್ಲ ಸೇವಿಸಿದ ಫಲವನ್ನು ಪಡೆಯುವನು. ನಾನು ಹೇಳಿರುವ ಈ ಮಾತು ಎಂದೆಂದಿಗೂ ಸತ್ಯವೆಂದು ತಿಳಿ. ಗಣಪೂಜಿತೆಯೆ! ಅದುದರಿಂದಲೇ ಇದು ಪರಮಪುಣ್ಯತಮಪ್ರದೇಶವೆಂದು ಹೊಗಳಲ್ಪಟ್ಟಿರುವುದು.

ಏಷ ತೇ ಕಥಿತೋ ದೇವಿ ಪ್ರಭಾವಃ ಪಾಪನಾಶನಃ ।
ಗಂಗೇಶ್ವರಸ್ಯ ದೇವಸ್ಯ ಶೃಣ್ವಂಗಾರೇಶ್ವರಂ ಪರಂ ॥ ೪೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪಂಚಮೇ ಆವಂತ್ಯಖಂಡೇ ದ್ವಿತೀಯೇ ಚತುರಶೀತಿಲಿಂಗಮಾಹಾತ್ಮ್ಯೇ
"ಗಂಗೇಶ್ವರಮಾಹಾತ್ಮ್ಯವರ್ಣನಂ" ನಾಮ ದ್ವಿಚತ್ವಾರಿಂಶತ್ತಮೋಽಧ್ಯಾಯಃ

---

೪೧. ಪಾರ್ವತಿಯೆ! ಇಂತು ನಿನಗೆ ಗಂಗೇಶ್ವರಮಹಾದೇವನ ಪಾಪ ಪರಿಹಾರಕವಾದ ಚರಿತ್ರೆಯು ಹೇಳಲ್ಪಟ್ಟಿತು. ಇನ್ನು ಅಂಗಾರೇಶ್ವರನ ಕಥೆಯನ್ನು ಕೇಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಐದನೆಯ ಆವಂತ್ಯಖಂಡದ ಎರಡನೆಯ ಚತುರಶೀತಿಲಿಂಗ
ಮಾಹಾತ್ಮ್ಯದಲ್ಲಿ "ಗಂಗೇಶ್ವರಮಾಹಾತ್ಮ್ಯವರ್ಣನ" ವೆಂಬ
ನಲವತ್ತೆರಡನೆಯ ಅಧ್ಯಾಯವು ಮುಗಿದುದು

